

ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

ಶ್ರೀ ರಂಭಾಪುರೀ ಆದಿ ಜಗದ್ಗುರು ಶ್ರೀ ರೇವಣಸಿದ್ಧ ಮಹಾಶಿವಯೋಗಿ
ಶಿವಾಚಾರ್ಯರಿಂದ, ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ
ದತ್ತವಾದ

# ಶ್ರೀ ರತ್ನಗರ್ಭ ಗಣಪತಿ

ಮತ್ತು

# ಶ್ರೀ ಚಂದ್ರಮೌಳೀಶ್ವರ ಲಿಂಗ

ವೆಂಬ ಅಮೃತಮಯ ವಿಷಯದಿಂದ ಗರ್ಭಿತವಾದ ಸತ್ಯ ಸುಂದರ ಕೃತಿರತ್ನ


ಅಧ್ಯಾತ್ಮಿಕ ಶಿರೋರತ್ನ

ಟಿ. ಬಿ. ಬಸವರಾಜಯ್ಯ


ವಿರಚಿತ


ಬೆಂಗಳೂರು-53.

1985




...ರು ಪೂಜೈವ ಪೂಜಸ್ಯ ಚ್ಛಿವಸ್ಯ ಪರಮಾತ್ಮನಃ ॥

॥ ಶ್ರೀ ಚಂದ್ರಮೌಳೀಶ್ವರ ಲಿಂಗಮಸ್ಮೈ ।
ಸದ್ರತ್ನಗರ್ಭಂ ಗಣನಾಯಕಂಚ ॥
ಸ ವಿಶ್ವರೂಪಾಯ ಸುಸಿದ್ಧ ದತ್ತಂ ।
ದತ್ವಾ ನ್ಯಗಾದೀಚ್ಚಿರ ಮರ್ಚಯೇತ್ ॥

(ಗುರುವಂಶ ಕಾವ್ಯ ಅ. 3, ... 33)

॥ ಓಂ ಊರ್ಧ್ವ ಲಿಂಗಾಯ ನಮಃ ॥

॥ ಓಂ ಇಷ್ಟ ಲಿಂಗಾಯ ನಮಃ ॥

**********



ಓಂ



ಶ್ರೀಮತ್ ಕೈಲಾಸನಾಥಾಧಿಪನ ಪರಂ ಪರಾವತಾರಿ ಶ್ರೀ ಜ॥ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು ಶ್ರೀ ಶೃಂಗೇರಿ ಆದಿ ಶ್ರೀ ಶಂಕರಾಚಾರ್ಯರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಪ್ರಸನ್ನ ಭಾವದಿಂದ ಅನುಗ್ರಹಿಸುತ್ತಲಿರುವ ಜಗನ್ಮಂಗಳ ದಿವ್ಯ ದೃಶ್ಯ.

...ಸ-
...ಂಗಳ
...ದ್ಧ

...। ಧರ್ಮದಿ ... ಶಾಂತಿ ॥

...n Righteo...
...and last ... ntment are well
...Bosom of ... ernal Dharma i.e.
...ible potential Divine Power ”.

... 1 ರಿಂದ 72ರ ವರವಿಗೆ ಉಪೋದ್ಘಾತಕ್ಕೆ
...ರ ಪರಿಪ್ಲುತವಾದ ವಿಷಯ ತರಂಗಗಳನ್ನೊಳ

...ರ ಪುಟಗಳಲ್ಲಿ, “ ಶ್ರೀ ಚಂದ್ರಮೌಳಿ ಲಿಂಗ
...ಳ ವಿಷಯವನ್ನು ಆಧಾರಯುತ ಪ್ರತಿಪಾದನೆ
...ಕ್ತಿಯಿಂದ ನಿರೂಪಿಸಲಾಗಿದೆ.

ಓಂ



ಶ್ರೀ ಶೃಂಗೇರಿ ಶ್ರೀ ಆದಿಶಂಕರಾಚಾರ್ಯರಿಗೆ ಶ್ರೀ ರಂಭಾಪುರೀ ವೀರ ಸಿಂಹಾಸನಾಧೀಶ್ವರ ಶಿವಲಿಂಗೋದ್ಭವ ಮಂಗಳಮೂರ್ತಿ ಶ್ರೀ ಆದಿ ರೇವಣಸಿದ್ಧ ಶಿವಾಚಾರ್ಯ ಮಹಾಶಿವಯೋಗೀಶ್ವರರು ಶ್ರೀ ಚಂದ್ರ ಮೌಳೀಶ್ವರ ಲಿಂಗವನ್ನು ಅನುಗ್ರಹಿಸುತ್ತಲಿರುವರು.

ಓಂ

ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು



"ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ"

॥ ಶಂಭೋ ಮೂರ್ತಿಶ್ಚರತಿ ತ್ರಿಭುವನೇ । ಶ್ರೀ ಜಗದ್ಗುರು ರೇಣುಕಾಚಾರ್ಯ ರೂಪಾ ॥

ಶ್ರೀಮದ್ರಂಭಾಪುರೀ ವೀರಸಿಂಹಸನಾಧೀಶ್ವರ
ಶಿವಲಿಂಗೋದ್ಭವ ಮಂಗಳ ಮೂರ್ತಿ
ಶ್ರೀ ಆದಿ ಜಗದ್ಗುರು ರೇವಣಸಿದ್ಧ ಶಿವಾಚಾರ್ಯ
ಮಹಾಶಿವಯೋಗೀಶ್ವರರ ಅಮೃತ ಹಸ್ತದಿಂದ

ಶ್ರೀ ಶೃಂಗೇರಿ ಆದಿಶಂಕರಾಚಾರ್ಯವರೇಣ್ಯರಿಗೆ ದತ್ತವಾದ
ಶ್ರೀ ಚಂದ್ರಮೌಳೀಶ್ವರ ಲಿಂಗ
ಎಂಬ ವಿಷಯವನ್ನೊಳಗೊಂಡ
ವಿಶ್ವಧರ್ಮ ಪ್ರತಿಪಾದಕ ಗ್ರಂಥ ಬಲ,
ಆಧ್ಯಾತ್ಮಿಕ ಶಿರೋರತ್ನ

ಟಿ. ಬಿ. ಬಸವರಾಜಯ್ಯ
ವಿರಚಿತ
ಬೆಂಗಳೂರು-53

1985



ಬೆಲೆ ರೂ. 25-00

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

## ಶ್ರೀ ಶಂಕರರಿಗೆ ದತ್ತವಾದ ಶ್ರೀ ಚಂದ್ರಮೌಳಿಲಿಂಗ

॥ ಮೂಕಂ ಕರೋತಿ ವಾಚಾಲಂ ।
ಪಂಗುಂ ಲಂಘಯತೇ ಗಿರೀಂ ॥
ಯತ್ಕೃಪಾ ತಮಹಂ ವಂದೇ ।
ಪರಮಾನಂದಂ ಶ್ರೀ ರೇಣುಕಂ ॥

—: ವಿ ಷ ಯಾ ನು ಕ್ರ ಮ ಣಿ ಕೆ :—

" ಉಪೋದ್ಘಾತದಲ್ಲಿನ ಚತುರ್ದಶ ದಿವ್ಯ ವಿಚಾರ
ಪರಿಪ್ಲುತವಾದ ತರಂಗಗಳು "

## ವಿಷಯಾನುಕ್ರಮಣಿಕೆ

ವಿಷಯಾನುಕ್ರಮಣಿಕೆ

ವಿಷಯಾನುಕ್ರಮಣಿಕೆ

ವಿಷಯಾನುಕ್ರಮಣಿಕೆ

ವಿಷಯಾನುಕ್ರಮಣಿಕೆ

ವಿಷಯಾನುಕ್ರಮಣಿಕೆ



ಓಂ ಅಂಬಿಕಾಪತೆಯೇ ಉಮಾಪತೆಯೇ ಪಶುಪತೆಯೇ
ನಮೋ ನಮಃ

ಭದ್ರಂ ಮಂಗಳಂ ಶುಭಂ

ತಾ॥ 22-3-1985
"ಕ್ರೋಧನ" ನಾಮ ಸಂವತ್ಸರದ
ಚಾಂದ್ರಮಾನ ಯುಗಾದಿಯ ದಿನದಂದು
ಪೂರ್ಣಗೊಂಡ ಸತ್ಯ ಸುಂದರ ಕೃತಿ

ಟಿ. ಬಿ. ಬಸವರಾಜಯ್ಯ
ಗ್ರಂಥಕರ್ತರು.
38, ನೇತಾಜಿ ರೋಡ್
ಫ್ರೇಜರ್ ಟೌನ್, ಬೆಂಗಳೂರು-560005

## —: ಸ್ತೋತ್ರ :—

॥ ಅಮೃತಾರ್ಥಂ ಪ್ರಪನ್ನಾನಾಂ । ಯಾ ಸುವಿದ್ಯಾ ಪ್ರದಾಯಿನೀ ।
ಅಹರ್ನಿಶ ಮಹಂ ವಂದೇ । ತಾ ಮೀಶಾನ ಮನೋರಮಾಂ ॥ ॥ ೧ ॥

॥ ಯಸ್ಯ ಸ್ಮರಣ ಮಾತ್ರೇಣ । ನೃಣಾಂ ಮುಕ್ತಿಃ ಕರಸ್ಥಿತಂ ।
ತಂ ವಂದೇ ಜಗದಾಧಾರಂ । ಶ್ರೀ ರೇಣುಕಾರ್ಯಂ ಜಗದ್ಗುರುಂ ॥ ॥ ೨ ॥

॥ ಶಂಕರಂ ಶಂಕರಾಚಾರ್ಯಂ । ಕೇಶವಂ ಬಾದರಾಯಣಂ ।
ಸೂತ್ರ ಭಾಷ್ಯ ಕೃತೌ ವಂದೇ । ಭಗವಂತೌ ಪುನಃ ಪುನಃ ॥ ॥ ೩ ॥

॥ ಶೃತಿ ಸ್ಮೃತಿ ಪುರಾಣಾನಾಂ । ಆಲಯಂ ಕರುಣಾಲಯಂ ।
ನಮಾಮಿ ಭಗವತ್ಪಾದಂ । ಶಂಕರಂ ಲೋಕ ಶಂಕರಂ ॥ ॥ ೪ ॥

॥ ತತಃ ಸ ರೇವಣಾಸಿದ್ಧ । ಸಂಪ್ರದಾಯ ಪ್ರವರ್ತಿನಾಂ ।
ಶಂಕರಾಚಾರ್ಯವರ್ಯಾಣಾಂ । ಪಾರಂಪರ್ಯ ಕ್ರಮಾಗತಂ ॥
ಶ್ರೀ ರೇವಣಾಸಿದ್ಧ ಸಂಪ್ರಾಪ್ತಂ । ಚಂದ್ರಮೌಲೀಶ ಮಪ್ಯದಾತ್ ।
ಆಖ್ಯಚ್ಛಾನೇನ ಲಿಂಗೇನ । ತವಾಭೀಷ್ಟಾಪ್ತಿ ರಿತ್ಯಪಿ ॥ ॥ ೫ ॥

॥ ಸಮಸ್ತ ಜಗದಾತ್ಮಾಪಿ । ಶಂಕರಃ ಪರಮೇಶ್ವರಃ ।
ಭಕ್ತಾನಾಂ ಹೃದಯಾಂ ಭೋಜೇ । ವಿಶೇಷೇಣ ವಿರಾಜತೇ ॥ ॥ ೬ ॥

**॥ ಮನುಷ್ಯಾಣಾಂ ಹಿತಂ ಧರ್ಮಂ । ವರ್ತಮಾನೇ ಕಲೌಯುಗೇ ॥**






ಡಾ|| ಶ್ರೀ ಜ. ಚ. ನಿ. ಸನ್ನಿಧಿಯು

ಶಿವಾಚಾರ್ಯ ತತ್ತ್ವ ತುಂಗೋತ್ರ ಚೈತನ್ಯಪಥ ! ಶಾಖಾ ನಿಡುಮಾಮಿಡಿ

[illegible] ಶ್ರೀಶೈಲ ಸೂರ್ಯಸಿಂಹಾಸನ [illegible]

ಮಠಾಧೀಶರು, ಹೆಚ್.ಬಿ. ಸಮಾಜಂ ರೋಡು,

ಬಸವನಗುಡಿ, ಬೆಂಗಳೂರು-4.

ತಾ|| 21-10-1985


# ಮುನ್ನುಡಿ

ಬೆಳೆದುಬಂದ ಸಮಾಜ ಸಂಸ್ಕೃತಿಗಳ ಭದ್ರತೆಗೆ ಮತ್ತು ಮೂಲ ಪ್ರಜ್ಞೆಗೆ ಪರಂಪರೆಯೆ ಮೂಲ ಮತ್ತು ಆಧಾರ ಸ್ತಂಭ. ಹುಲುಸಾಗಿ ಬೆಳೆದುನಿಂತ ಹೆಮ್ಮರದ ಬಲಿ ಬೇರು ಭವ್ಯವಾದ ಭವನದ ಭದ್ರತೆಗೆ ಆಧಾರ ಅಡಿಗಲ್ಲು ಮತ್ತು ಸ್ತಂಭ ! ಅಲ್ಲದೆ ಭವನದ ಭವ್ಯತೆಗೆ ಭದ್ರತೆಗೆ ಕಾರಣರು ವಾಸ್ತುಶಿಲ್ಪಿಗಳು ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅಂತೆಯೆ ಅನಾದಿ ವೀರಶೈವ ಸಮಾಜಸೌಧ ಸುಂದರವಾಗಿ ನಿರ್ಮಾಣಗೊಂಡಿದೆ. ವೀರಶೈವ ಸೈದ್ಧಾಂತಿಕ ಸುರತರು ಸುಳಿದೆಗೆದು ಬೆಳೆದುನಿಂತಿದೆ. ಈ ಸೌಧದ ಭಿತ್ತಿಸ್ತಂಭಗಳು ಕಲ್ಲು ಮಣ್ಣಿನವಲ್ಲ, ರತ್ನ ವಜ್ರದವು; ಈ ಸೈದ್ಧಾಂತಿಕ ಸುರತರುವಿಗೆ ಎರೆದುದು ಬರೀ ನೀರನ್ನಲ್ಲ–ಹಾಲು ತುಪ್ಪಗಳು. ರತ್ನ–ವಜ್ರಗಳೆಂದರೆ ಅಷ್ಟಾವರಣ ಷಟ್‌ಸ್ಥಲಗಳು, ಹಾಲು–ತುಪ್ಪಗಳೆಂದರೆ ಪಂಚಾಚಾರಗಳು. ಇಂತಿರುವಾಗ ಈ ಸೌಧವನ್ನು ನಿರ್ಮಾಣಮಾಡಿದ ವಾಸ್ತುಶಿಲ್ಪಿಗಳು ಯಾರು ? ಈ ಸುರತರುವೆಂಬ ಹೆಮ್ಮರವನ್ನು ಈ ರೀತಿ ಬೆಳೆಸಿದವರು ಯಾರು ? ಎಂದು ಅರಿವ ಆಕಾಂಕ್ಷೆ ಅರಳುವುದು (ಹುಟ್ಟುವುದು) ಸಹಜ. ಅಂತಹವರ ಹೆಸರುಗಳಿವೆ–ಪ್ರಚಲಿತವಾಗಿ! ಚಾರಿತ್ರೇತಿಹಾಸಗಳೂ ಇವೆ. ಆದರಿವುಗಳಲ್ಲಿ ಹಲಕೆಲವು ಕಾಲಗರ್ಭದಲ್ಲಿ ಮತ್ತು ಅಲಭ್ಯ ಪ್ರಾಚೀನ ಗ್ರಂಥಗಳಲ್ಲಿ ಹಾಗೂ ಆ ಆ ಮಠಮಾನ್ಯಗಳ ಪರಂಪರೆಯಲ್ಲಿ ಹುದುಗಿ ಹೋಗಿವೆ. ಅವನ್ನೆಲ್ಲ ಪರಿಶ್ರಮವಹಿಸಿ ಪರಿಶೋಧಿಸಿ ಹೊರಹಾಕುವ ಹೊರಗೆಲಸ ಅದೆಷ್ಟಾದರೂ ಇದೆ. ಇದು ಹೊಂಗೆಲಸವಾದರೂ ಹೊರೆಯಾದ ಕೆಲಸ ಹೊಣೆಯುಳ್ಳ ಕೆಲಸ, ಕಹಿಸಿಹಿಗಳು ಬೆರೆದ ಕೆಲಸ. ಅದರಲ್ಲಿಯೂ ಇಂದಿನ ವೈಜ್ಞಾನಿಕ ಹಾಗೂ ವಿಶಾಲ ಮನೋಭಾವಿಕ ಕಾಲದಲ್ಲಿ ಅದೆಷ್ಟು ಎಚ್ಚರಿಕೆಯಿದ್ದರೂ ಸಾಲದಾಗಿದೆ. ಮಿಗಿಲಾಗಿ ವ್ಯಕ್ತಿ ವ್ಯಕ್ತಿಗಳ, ಮಠ ಮಠಾಂತರಗಳ ಬಗೆಗೆ

ಮಾತೆತ್ತುವ ಪ್ರಸಂಗ ಪ್ರಾಪ್ತಿಸಿದಾಗ (ಪ್ರಾಪ್ತಿಸದೆ ಇರಲು ಬಹುಶಃ ಸಾಧ್ಯವಿಲ್ಲ ವೇನೋ ಎನಿಸುತ್ತದೆ) ತುಂಬಾ ಎಚ್ಚರಿಕೆ ಇದ್ದಾಗಬೇಕಾಗಿದೆ, ಏಕೆಂದರೆ ಇಂದು ನಮಗೆ ಸಾಮಾಜಿಕ ಧಾರ್ಮಿಕ ಹೊಂದಾಣಿಕೆ ಬೇಕಾಗಿದೆಯಲ್ಲದೆ ಬಿರುಕನ್ನುಂಟು ಮಾಡುವ ಸಂಘರ್ಷವಲ್ಲ. ವ್ಯಕ್ತಿ ವ್ಯಕ್ತಿಗಳಲ್ಲಿರುವ ಪುರಾತನ ಚಾರಿತ್ರಿಕ ಘಟನೆಗಳ ಪರಿಶೋಧನಕಾರ್ಯವೋ ಮೊನಚಾದ ಅಲಗಿನ ಮೇಲೆ ನಡೆವಂತಿರುತ್ತದೆ. ಇಂತಹ ಒಂದು ಕಠಿಣ ಕಾರ್ಯಕ್ಕೆ ಕೈಹಾಕಿದ್ದಾರೆ ಈ ಕೃತಿಕರ್ತರಾದ ಆಧ್ಯಾತ್ಮಿಕ ಶಿರೋರತ್ನ ಶ್ರೀ ಟಿ.ಬಿ. ಬಸವರಾಜಯ್ಯನವರು. ಸನಾತನ ಶ್ರದ್ಧೆ ಪರಿಶೋಧನೆಗಳ ಸಂಗಮಕೃತಿ ಯನ್ನಾಗಿ ಇವನ್ನು ಹೊರತಂದಿದ್ದಾರೆ.

ಶ್ರೀ ರತ್ನಗರ್ಭ ಗಣಪತಿ ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗಗಳನ್ನು ಶ್ರೀ ರೇವಣಸಿದ್ಧ ಶಿವಾಚಾರ್ಯರು ಶೃಂಗೇರಿ ಆದಿ ಶ್ರೀ ಶಂಕರಾಚಾರ್ಯರಿಗೆ ಕೊಟ್ಟರೆಂಬ ವಿವಾದ ವಿಷಯ ಮುಖ್ಯವಲ್ಲ. ಇವರಿಬ್ಬರೂ ಕ್ರಿ. ಶ. ಪೂ. ೪೭೬ ರ ಸರಹದ್ದಿನಲ್ಲಿದ್ದರೆಂಬುದು ಕುತೂಹಲಕಾರಿಯಾದ ವಿಷಯ. ಇದನ್ನು ಉಪೋದ್ಘಾ ತಕ್ಕೆ ಸಂಬಂಧಿಸಿದ ಪುಟ-50–51 ರಲ್ಲಿ ಗ್ರಂಥಕರ್ತರು ಪ್ರಸ್ತಾಪಿಸಿದ್ದಾರೆ. ಈ ವಿಷಯ ಅದೇ ಕಾಲದ ಬೃಹದ್ ಶಂಕರ ವಿಜಯ ಎಂಬ ಗ್ರಂಥದಲ್ಲಿದೆಯಂತೆ! ಇದನ್ನು ರಚಿಸಿದವರು ಶ್ರೀ ಆದಿ ಶಂಕರಾಚಾರ್ಯರ ಸ್ನೇಹಿತರಾದ ಶ್ರೀ ಚಿತ್ಸುಖಾಚಾರ್ಯ ರೆಂದು ಹೇಳಿದ್ದಾರೆ. ಈ ಕೃತಿ, ಈ ಕೃತಿಕರ್ತರು ಕ್ರಿ. ಪೂ. ೪೭೬ರ ಕಾಲಕ್ಕೆ ಸೇರಿದ ಬಗೆಗೆ ಸರಿಯಾದ ಆಧಾರವನ್ನೀಯಬೇಕಾಗಿತ್ತೆಂದೆನಿಸುತ್ತದೆ. ಅವರೂ ಪಾಶ್ಚಾ ವಾಗಿದೆ. ಆರೇಳು ಬೇರೆ ಬೇರೆ ಗ್ರಂಥಗಳನ್ನು ಎತ್ತಿ ಉದ್ಧರಿಸಿದ್ದಾರೆ. ಪುಟ ೫೮– ೫೯ ರಲ್ಲಿ ಶ್ರೀ ಬೃಹತ್ ಶಂಕರ ವಿಜಯವಾಗಿ ಬರೆಯುತ್ತಾ ಆದಿ ರೇಣುಕ–ಅಗಸ್ತ್ಯ ರನ್ನು ಕ್ರಿ.ಪೂ. ಐದನೆಯ ಶತಕಕ್ಕೆ ಕರೆತಂದಿದ್ದಾರೆ. ಇದು ವಿಸ್ಮಯಕಾರಿಯಾಗಿದೆ ವಿಚಾರದ ಒರೆಗಲ್ಲಿಗೆ ನಿಲ್ಲುವಂತಹವಲ್ಲ.

"ಪರಮ ರಹಸ್ಯ" ಗ್ರಂಥ ಪರಿಚಯ ಇವರದೆ ಆದ ಪ್ರಥಮ ಪ್ರಯತ್ನ, ಪರಿ ಶೀಲನಾತ್ಮಕ ಪ್ರಯತ್ನ. ಅದರಲ್ಲಿ ಹತ್ತು ಕೋಟಿ ಶ್ಲೋಕಗಳಿರುವುದು ನಿಜಕ್ಕೂ ವಿಸ್ಮಯ ವಿಷಯ. ಇದ್ದಲ್ಲಿ ಅದು ಅದ್ಭುತ ಗ್ರಂಥವೇ ಸರಿ. ಅದರಲ್ಲಿಯೂ ಅದು ಜ. ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯ (ಕ್ರಿ ಪೂ. ೪೭೬) ವಿರಚಿತ ವೆಂಬುದು, ಶಿವಾದ್ವೈತ ಸಿದ್ಧಾಂತ ಪ್ರತಿಪಾದಕವೆಂಬುದು ಇನ್ನೂ ವಿಶೇಷ ವಿಷಯ. ಕೇವಲ ೨೬ ಸಾವಿರ ಶ್ಲೋಕಗಳುಳ್ಳ ಅರೆಕೊರೆ ಕೃತಿ ಮೈಸೂರಿನ ಓರಿಯಂಟಲ್ ಲೈಬ್ರರಿಯಲ್ಲಿರುವುದಾಗಿ ರಾಯಚೂರಿನ ವೇ|| ಶ್ರೀ ಚಂದ್ರಶೇಖರಶಾಸ್ತ್ರಿಗಳಿಂದ ತಿಳಿದು ಬರುತ್ತಿದೆಯೆಂದು ತಿಳಿಸಿದ್ದಾರೆ. (ಪುಟ ೬೧ ರಿಂದ ೬೮) ಈ ಕೃತಿಯ

ಕಾಲ ನಿರ್ಣಯವನ್ನು ಶ್ರೀ ಟಿ. ಬಿ. ಬಸವರಾಜಯ್ಯನವರು ಮಾಡ ಹೊರಟಿರುವುದು ಸರಿಯಲ್ಲ. ಹಿಂದು–ಮುಂದು ಯೋಚಿಸಿ ಮಾಡಿದಂತಿಲ್ಲ. ಕಾಲ ನಿರ್ಣಯದ ಮಾತನ್ನು ಬಿಟ್ಟರೆ (ಇದು ಒಮ್ಮೆಗೆ ಒಬ್ಬರಿಂದ ಆಗುವ ಮಾತು ಅಲ್ಲ.) ಉಳಿದ ವಿಚಾರ ತುಂಬಾ ಗಂಭೀರವಾಗಿದೆ. ಗಮನೀಯವಾಗಿದೆ. ಅದರಲ್ಲಿಯೂ ಒಬ್ಬ ಶಿವಾಚಾರ್ಯರಿಂದ ರಚಿತವಾಗಿರುವುದು ನಿಜವಿದ್ದಲ್ಲಿ ಶಿವಾಚಾರ್ಯರ ಪ್ರಾಚೀನ ಸಾಹಿತ್ಯ ಸಂಸ್ಕೃತಿಗಳಿಗೆ ಇದು ಹಿಡಿದ ನಿಲುಗನ್ನಡಿಯಾಗಬಲ್ಲುದಲ್ಲವೆ ? ಇದರ ಪರಿಶೋಧನೆ ಪ್ರಕಟನೆ ಅಗತ್ಯ ಆಗಬೇಕಾದ ಮಹತ್ಕಾರ್ಯ ! ೭೨ ಪುಟದ ಉಪೋದ್ಘಾತ ಇಲ್ಲಿಗೆ ಮುಗಿಯುತ್ತದೆ.

ಗ್ರಂಥಾರಂಭದ 3ನೇ ಪುಟದಲ್ಲಿ ಶ್ರೀ ಆದಿ ಶಂಕರಾಚಾರ್ಯರ ಜಾತಕದಿಂದ ಅವರ ಜನ್ಮ ವೃತ್ತಾಂತವನ್ನು ಹೇಳುವ ಬೃಹತ್ ಶಂಕರವಿಜಯದ ಅಧಿಕೃತ ಜನನ ಕುಂಡಲಿಯಂತೆ ಕ್ರಿ. ಪೂ. ೫೦೯ ರಲ್ಲಿ ಜನನ ಎಂದಿದ್ದಾರೆ. ಜನ್ಮಸ್ಥಳ "ಕಾಲಟಿ" ಎಂದಿದ್ದಾರೆ. ೨ನೆಯದಾಗಿ "ಜಿನವಿಜಯ" ಎಂಬ ಗ್ರಂಥದ ಅಧಾರದ ಮೇರೆಗೆ ಶ್ರೀ ಕುಮಾರಿಲ ಭಟ್ಟನನ್ನು ಕಂಡು ಆತನ ಕರ್ಮವಾದವನ್ನು ಖಂಡಿಸಿದ್ದು ಕ್ರಿ. ಪೂ. ೫೫೭ ಎಂದು ಹೇಳಿದ್ದಾರೆ. ೮ನೆಯ ಶತಮಾನದ ಶ್ರೀ ಶಂಕರರು ಅಭಿನವ ಶಂಕರಾಚಾರ್ಯರಲ್ಲದೆ ಆದಿ ಶಂಕರಾಚಾರ್ಯರಲ್ಲೆಂದು ಅಧ್ಯಾಯ ೧ ರಲ್ಲಿ ತೀರ್ಮಾನಿಸಿದ್ದಾರೆ.

ಅಧ್ಯಾಯ ೨, ಪುಟ ೬ ರಲ್ಲಿ ಜಗದಾದಿ ಜಗದ್ಗುರು ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು ಕ್ರಿ. ಪೂ. ೧೮೮೫ ರಲ್ಲಿ ಅವತರಿಸಿ ೧೪೦೦ ವರುಷಗಳ ಕಾಲ ಜೀವಿಸಿದ್ದರೆಂದು, ಇವರು ಶ್ರೀ ರಂಭಾಪುರಿ ವೀರ ಸಿಂಹಾಸನದ ಪೀಠಾಧಿಪತಿಗಳಾಗಿದ್ದುದು ಕ್ರಿ. ಪೂ. ೪೭೭–೭೬ ಎಂದು ಹೇಳಿದ್ದಾರೆ.

ಅಧ್ಯಾಯ ೩ ಪುಟ ೧೧ ರಲ್ಲಿ ಕಂಚಿ ಕಾಮಕೋಟಿ ಮಠ ಕ್ರಿ. ಪೂ. ೪೮೩ ರಲ್ಲಿ ಆದಿ ಶಂಕರರಿಂದ ಸ್ಥಾಪಿತವಾದ ವಿಷಯ, ಮತ್ತು ಆಗ ಆದಿ ಶ್ರೀ ಜಗದ್ಗುರು ರೇವಣಸಿದ್ಧರಲ್ಲಿದ್ದು ಅಲ್ಲಿನ ಏಕಾಂಬರೇಶ್ವರ ಸ್ಥಾನವಲ್ಲಿ ಧ್ಯಾನಾರೂಢರಾಗಿದ್ದು ಬಳಿಕ ಅಲ್ಲಿನ ಭೂಸ್ಪರ್ಶವನ್ನು ತಮ್ಮ ಅಮೃತ ಅಸ್ತದಿಂದ ಮಾಡಿ ಶ್ರೀ ರುದ್ರಮುನಿ ಶಿವಾಚಾರ್ಯರನ್ನು ಭೂಮಿಯಿಂದ ಉದ್ಭವಿಸುವಂತೆ ಮಾಡಿದ ವಿಷಯ ಬರುತ್ತದೆ. ೧೧ನೇ ಶತಮಾನದ ರುದ್ರಮುನಿ ಶಿವಾಚಾರ್ಯರು ಬಹುಶಃ ಇವರ ಅಭಿಪ್ರಾಯದಲ್ಲಿ ಅಭಿನವ ಶಿವಾಚಾರ್ಯರಾಗಬಹುದೇನೋ ?

ಅಧ್ಯಾಯ ೪ ರಲ್ಲಿ ರೇಣುಕಾಗಸ್ತ್ಯರ ಪ್ರಸ್ತಾಪವಿದೆ. ಆಗಸ್ತ್ಯರು ಶಂಕರರನ್ನು ಎಚ್ಚರಿಸಿದುದು, ರೇಣುಕರಿಂದ ಶಂಕರರ ಆಯುಷ್ಯ ವೃದ್ಧಿಸುವಂತಾದುದು ಲಿಖಿತ

ವಾಗಿದೆ. ಇಲ್ಲಿ ಬಳಸಿದ ಪದ್ಯಗಳು ಎಲ್ಲಿಯವೆಂಬುದು ತಿಳಿಯದಂತಿದೆ. ಇದಕ್ಕೆಲ್ಲ ಕೊಟ್ಟ ಪ್ರಮಾಣಗಳು ಏತಕ್ಕೂ ಸಾಲವು. ಅಗಸ್ತ್ಯರಿಂದ ವೀರಶೈವದೀಕ್ಷೆ ಶ್ರೀ ಶಂಕರರಿಗೆ ಆದುದೂ ಹೊಸ ವಿಷಯ ಇದಕ್ಕೆ ಪ್ರಮಾಣವೇನೋ ತಿಳಿಯದು.

ಅಧ್ಯಾಯ ೫ ರಿಂದ ೧೫ರ ವರೆಗೆ ಶ್ರೀ ಶಂಕರರ ಚರಿತ್ರೆ, ಸಾಧಿಸಿದ ಸಾಧನೆ ಮೊದಲಾದವುಗಳನ್ನು ಕಾಣಿಸಿದ್ದಾರೆ. ೧೬-೧೭ ಅಧ್ಯಾಯಗಳಲ್ಲಿ ಆದಿಶಂಕರರು ಆದಿ ರೇಣುಕರು ಶ್ರೀಶೈಲದಲ್ಲಿ ತಂಗಿ, ಆದಿರೇಣುಕರು ಆದಿಶಂಕರರಿಗೆ ಪಂಚಪೀಠಗಳ ಪರಿಚಯವನ್ನು ಸಾಂಪ್ರದಾಯಿಕವಾಗಿ ಮಾಡಿಕೊಡುತ್ತಾರೆ. ೧೮-೧೯ ಅಧ್ಯಾಯ ಗಳಲ್ಲಿ ವೀರಾಗಮ-ಪಾರಮೇಶ್ವರಾಗಮಗಳನ್ನು ಪ್ರಸ್ತಾಪಿಸಿದ್ದಾರೆ ಅಧ್ಯಾಯ ೨೦ ರಲ್ಲಿ "ಸ್ಥಿರೈರಂಗೈಃ" ಎಂಬ ಮಂತ್ರಾರ್ಥ ವಿವರಣೆಯನ್ನು ಮಾಡಿದ್ದಾರೆ. ಅಧ್ಯಾಯ ೨೧ ರಲ್ಲಿ ಶಿವಕಂಚಿಕಾಮಕೋಟಿ ಮಠದ ಪೀಠಾಧಿಪತಿಗಳ ಮತ್ತು ಶ್ರೀ ಶೃಂಗೇರಿ ದಕ್ಷಿಣಾಮ್ನಾಯ ಮಠದ ಶ್ರೀ ಗುರು ಪರಂಪರೆಯ ಪಟ್ಟಿಗೆ ಕೊಡಲಾಗಿದೆ. ೨೨ರಲ್ಲಿ ಕಾಲ ನಿರ್ಣಯದ ಬಗೆಗೆ ಕೃತಿಕರ್ತರ ಅಭಿಪ್ರಾಯಗಳನ್ನು ಅವಲೋಕಿಸಬಹುದು.

೨೩-೨೪ ಅಧ್ಯಾಯಗಳೆರಡರಲ್ಲಿ ಶಿರೋವ್ರತರು ವೈದಿಕ ಪಾಶುಪತರು ವೀರ ಶೈವರು ಮತ್ತು ಇಷ್ಟಲಿಂಗಧಾರಣ ಮಹಿಮೆ ಇವೆರಡು ವಿಚಾರಗಳನ್ನು ಪ್ರಾಚೀನ ಪ್ರಮಾಣಗಳಿಂದ ಚನ್ನಾಗಿ ಪ್ರತಿಪಾದಿಸಿದ್ದಾರೆ. ಪರಿಶ್ರಮಿಸಿ ಪ್ರಮಾಣಗಳನ್ನು ಎತ್ತಿ ಉಲ್ಲೇಖಿಸಿ ಉತ್ತಮ ರೀತಿಯಲ್ಲಿ ವಿವರಿಸಿದ್ದಾರೆ. ಇಷ್ಟಲಿಂಗ ಈಚಿನದೆಂದು ಹೇಳುವವರು ಕಣ್ಣು ತೆರೆಯುವಂತಾಗಿದೆ. ಕೂಪಮಂಡೂಕ ವಾದವನ್ನು ಕೈಬಿಡು ವಂತಾಗಿದೆ. ೨೫ನೆಯ ಅಧ್ಯಾಯದಲ್ಲಿ ಮತ್ತೆ 'ಪರಮ ರಹಸ್ಯ' ಕೃತಿಯ ಬಗೆಗೆ ರತ್ನಗರ್ಭ ಗಣಪತಿ ಮತ್ತು ಚಂದ್ರಮೌಳೀಶ್ವರ ಲಿಂಗದ ಬಗೆಗೆ ಪ್ರಸ್ತಾಪಿಸಿರುವರು. ಮುಂದಿನ ಐದು ಅಧ್ಯಾಯಗಳಲ್ಲಿ ಪಂಚಪೀಠಗಳ ಗುರುವಂಶಕಾವ್ಯದ ಬಗೆಗೆ ವಿವರಿ ಸಿರುವರು.

ಒಟ್ಟಾರೆ ಇದೊಂದು ಮುನ್ನೂರು ಪುಟದ ಹೆಬ್ಬೊತ್ತಗೆ ! ಇವರು ಮನಸ್ಸು ಮಾಡಿದ್ದರೆ ಇದರ ಗಾತ್ರವನ್ನು ಗಮನಾರ್ಹವಾಗಿ ತಗ್ಗಿಸಬಹುದಿತ್ತು. ಕೃತಿಕರ್ತರು ತುಂಬಾ ಶ್ರಮಿಸಿದ್ದಾರೆ. ಜಿನವಿಜಯದ ಜನ್ಮಕುಂಡಲಿಯೇ ಇದಕ್ಕೆ ಮೂಲಾಧಾರ ವೆಂದು ಕಾಣುತ್ತದೆ. ಅದನ್ನು ಪರಿಶೋಧಿಸಿರುವುದು ಇವರ ಸಾಹಸವಾಗಿದೆ. ಶ್ರದ್ಧಾವಂತರು ಅಧ್ಯಯನಿಸಬೇಕಾದ ಗ್ರಂಥವಿದು. ಓದಿ ಇವರ ಶ್ರಮವನ್ನು ಸಾರ್ಥಕ ಪಡಿಸುವಂತಾಗಲೆಂದು ಹರಸೋಣವಾಗಿದೆ.

ಶ್ರೀ ಜ. ಚ. ನಿ. ಅಧ್ಯಯನ ಪೀಠ
ಮತ್ತು ಸಂಶೋಧನ ಸಂಸ್ಥೆ
ಬೆಂಗಳೂರು-4

॥ ಸದ್ಧರ್ಮಃ ಶರಣಂ ॥

॥ ಶ್ರೀ ಜಗದಾದಿ ಪರಮ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

ಮಾನವ ಧರ್ಮಕ್ಕೆ ಜಯವಾಗಲಿ । ಧರ್ಮದಿಂದಲೇ ವಿಶ್ವಕ್ಕೆ ಶಾಂತಿ

॥ ವಂದೇ ರೇಣುಕಂ ॥

ಪ್ರಸನ್ನ ರೇಣುಕೋಯತ್ರ । ಗಂಗಾಧರ ಜಗದ್ಗುರುಃ ।
ಸಂತೋಷಸ್ತತ್ರ ಸೌಭಾಗ್ಯಂ । ಸದ್ಭಕ್ತಿ ಜ್ಞಾನ ಸತ್ಕ್ರಿಯಾಃ ॥

ಶ್ರೀ ಷ. ಬ್ರ. ಪಟ್ಟಾಧ್ಯಕ್ಷರಾದ ವಿಮಲ ರೇಣುಕ ವೀರ ಮುಕ್ತಿಮುನಿ
ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀ ಮುಕ್ತಿಮಂದಿರ ಧರ್ಮಕ್ಷೇತ್ರ
ಅಂಚೆ : ಹರ್ಲಾಪುರ – ತಾ : ಕುಂದಗೋಳ – ಜಿ : ಧಾರವಾಡ

ತಾ॥ 29-5-1985

ಶ್ರೀಮಾನ್ ಧರ್ಮಪ್ರಿಯ ಟಿ. ಬಿ. ಬಸವರಾಜಯ್ಯ ಮಹಂತರ ಮಠ ಚಿಕ್ಕಪೇಟೆ, ಬೆಂಗಳೂರು-53 ಇವರಿಗೆ, ಶ್ರೀಗಳವರು ಹೃತ್ಪೂರ್ವಕ ಮಾಡುವ ಶುಭಾಶೀರ್ವಾದಗಳು. ನಿಮ್ಮ ಆರೋಗ್ಯಕ್ಕೆ ಭಿನ್ನಹಿಸುತ್ತಿರುವುದು. ನಿಮ್ಮ ಎರಡು ಪತ್ರಗಳು ಬಂದು ತಲುಪಿವೆ. ನಿಮ್ಮಿಂದ ಈಗ ಹೊರಬರುತ್ತಿರುವ ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿದ ಬಗ್ಗೆ ಮಹತ್ತರ ವಿಷಯಗಳನ್ನೊಳಗೊಂಡ ಪುಸ್ತಕವು ಈಗಾಗಲೆ ಮುಕ್ಕಾಲು ಭಾಗ ಪ್ರಿಂಟ್ ಆಗಿರಬಹುದು. ಗುರುಗಳ ಆಶೀರ್ವಾದದಿಂದ ನೀವು ಕೈಕೊಂಡ ಕಾರ್ಯವು ಯಶಸ್ವಿಯಾಗಿ ವೀರಶೈವರಿಗೆ ಬ್ರಾಹ್ಮಣರಿಗೆ ದಾರಿದೀಪವಾಗಲಿ.

ವೀರ ಮುಕ್ತಿ ಮುನಿ

॥ ಸಮಸ್ತ ಸನ್ಮಂಗಳಾನಿ ಭವಂತು ॥



ಆಸ್ಥಾನವಿದ್ವಾನ್ ವೇ|| ಪಂ|| ಎಂ. ಜಿ. ನಂಜುಂಡಾರಾಧ್ಯ
ಸಂಸ್ಕೃತ ಪ್ರೊಫೆಸರ್. ನಿವೃತ್ತ " ಶಕ್ತಿವಿಶಿಷ್ಟಾದ್ವೈತ " ಬೋಧಕರು
ಪ್ರಬೋಧ ಪುಸ್ತಕಮಾಲ ಸಂಪಾದಕರು, ಸಂಸ್ಥಾಪಕರು
ಫೋನ್ : 24354, ನಂ. 881, ಬಸವೇಶ್ವರ ರಸ್ತೆ,
ಮೈಸೂರು-570 004. ತಾ|| 12-3-1986

## ಮುನ್ನುಡಿ

ಶ್ರೀ ಟಿ.ಬಿ. ಬಸವರಾಜಯ್ಯನವರು ಶ್ರದ್ಧಾಳುಗಳಾದ ವಿದ್ವಾಂಸರು, ಸಾಂಪ್ರದಾಯಪ್ರಿಯರು, ವಯೋವೃದ್ಧರೂ ಜ್ಞಾನವೃದ್ಧರೂ ಆಗಿ ಲೇಖನ ವ್ಯವಸಾಯದಲ್ಲಿ ಹಣ್ಣಾದವರು. ಸರ್ಕಾರ ಇವರಿಗೆ ಗೌರವಧನವನ್ನು ನೀಡಿ ಪೋಷಿಸುತ್ತಿರುವುದು ಸಮಾಜಕ್ಕೆ ಭೂಷಣಪ್ರದವೂ ಆಗಿದೆ.

"ಶ್ರೀ ರತ್ನಗರ್ಭ ಗಣಪತಿ ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗ" ಇವೆರಡನ್ನು ರಂಭಾಪುರೀ ಪೀಠಾಧ್ಯಕ್ಷರಾಗಿದ್ದ ಶ್ರೀರೇವಣಸಿದ್ಧ ಶಿವಾಚಾರ್ಯರು ಶೃಂಗೇರಿಯ ಶ್ರೀ ಆದಿ ಶಂಕರಾಚಾರ್ಯರಿಗೆ ನೀಡಿದವರು ಎಂಬುದು ಇವರ ಕೃತಿಯ ಕೇಂದ್ರಬಿಂದು. ಅದನ್ನು ಬಳಸಿ ಶ್ರೀ ಬಸವರಾಜಯ್ಯನವರು ಅನೇಕ ವಿಷಯಗಳನ್ನು ಈ ಗ್ರಂಥದಲ್ಲಿ ಸಂಗ್ರಹಿಸಿ ಕೊಟ್ಟಿದ್ದಾರೆ. ಸಮಾಜದ ಗಣ್ಯ ದಾನಿಗಳನೇಕರು ಉದಾರವಾಗಿ ಹಣವಿತ್ತು ಇದನ್ನು ಬೆಳಕಿಗೆ ತಂದಿದ್ದಾರೆ.

ಶ್ರೀ ಬಸವರಾಜಯ್ಯನವರು ಗ್ರಂಥದ ಮುಖಪುಟದಲ್ಲಿಯೇ

ಶ್ರೀ ಚಂದ್ರಮೌಳೀಶ್ವರ ಲಿಂಗಮಸ್ಮೈ
ಸದ್ರತ್ನಗರ್ಭಂ ಗಣನಾಯಕಂಚ ।
ಸ ವಿಶ್ವರೂಪಾಯ ಸು ಸಿದ್ಧದತ್ತಂ
ದತ್ವಾನ್ಯಗಾದೀತ್ ಚಿರಮರ್ಚಯೇತಿ ॥

(ಗುರುವಂಶ ಕಾವ್ಯ ಸರ್ಗ ೩ ಶ್ಲೋಕ ೩೩)

ಎಂಬ ತಮ್ಮ ಗ್ರಂಥದ ಮುಖ್ಯ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ.

ಆಚಾರ್ಯ ಶಂಕರರು ಭರತಖಂಡವನ್ನೆಲ್ಲ ಸಂಚರಿಸಿ ಕಾಶ್ಮೀರದಲ್ಲಿ ಶ್ರೀ ಶಾರದಾದೇವಿಯ ಕೃಪೆಗೆ ಪಾತ್ರರಾಗಿ ಶೃಂಗೇರಿಗೆ ಹಿಂದಿರುಗಿ, ಅಲ್ಲಿ ಶ್ರೀ ಶಾರದೆಯನ್ನು ಪ್ರತಿಷ್ಠಿಸಿ, ಮುಂದೆ ಅವರು ಕಾಂಚೀನಗರಕ್ಕೆ ತೆರಳುವ ಮುನ್ನ ಸುರೇಶ್ವರಾ

ಚಾರ್ಯರೆಂಬ ತಮ್ಮ ಪ್ರಥಮ ಶಿಷ್ಯರನ್ನು ಶೃಂಗೇರಿ ಪೀಠದ ಅಧಿಪತಿಗಳನ್ನಾಗಿ ಮಾಡಿ, " ಎಲೈ ಸುರೇಶ್ವರಾಚಾರ್ಯನೆ, ಪೂರ್ವದಲ್ಲಿ ಪೂಜ್ಯರಾದ ಶ್ರೀ ರೇವಣ ಸಿದ್ಧ ಮಹಾಶಿವಯೋಗಿಗಳಿಂದ ನನಗೆ ಕೊಡಲ್ಪಟ್ಟ ಶ್ರೀ ಚಂದ್ರಮೌಳೀಶ್ವರ ಲಿಂಗ ಮತ್ತು ಮಾಣಿಕ್ಯ ರತ್ನಗರ್ಭ ಗಣಪತಿಯನ್ನು ನಿನಗೆ ಅನುಗ್ರಹಿಸಿದ್ದೇನೆ. ಇವನ್ನು ನೀನು ಮತ್ತು ಮುಂದಿನ ಈ ಪೀಠ ಪರಂಪರೆಯವರು ಭಕ್ತಿಯಿಂದ ಪೂಜಿಸಿರಿ " ಎಂದು ಹೇಳಿದ ಸಂದರ್ಭದಲ್ಲಿ ಈ ಪದ್ಯವು ಬಂದಿದೆ.

"ಗುರುವಂಶಕಾವ್ಯ" ಎಂಬ ಕೃತಿಯ ಹಸ್ತಪ್ರತಿಯೊಂದು ಮೊದಲು ದೊರೆತದ್ದು ಶೃಂಗೇರಿ ಮಠದ ಪುಸ್ತಕ ಭಂಡಾರದಲ್ಲಿ, ಅದನ್ನು ಬರೆಯಿಸಿದವರು ಅಂದಿನ ಶೃಂಗೇರಿ ಮಠಧ ಅಧಿಪತಿಗಳಾಗಿದ್ದ ಶ್ರೀ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳು (ಕ್ರಿ. ಶ. 1706–41) ಇವರು ಕೆಳದಿಯ ಎರಡನೆಯ ಸೋಮಶೇಖರ ನಾಯಕ (1714–39) ನ ಸಮಕಾಲೀನರು. ಆಗ್ಗೆ ಶ್ರೀ ಶೃಂಗೇರಿ ಮಠದ ಆಸ್ಥಾನ ವಿದ್ವಾಂಸರಾಗಿದ್ದ ಕಾಶೀ ಲಕ್ಷ್ಮಣಶಾಸ್ತ್ರಿಗಳು ಗುರುಗಳ ಆದೇಶದಂತೆ ಶ್ರೀ ಪೀಠದ ಗುರುವಂಶದ ಪರಂಪರೆಯಲ್ಲಿ ಬಂದ ಅನೇಕ ಸ್ವಾಮಿಗಳ ಚರಿತ್ರೆಗಳನ್ನು ತಮಗೆ ದೊರೆತ ಆಧಾರಗಳ ಮೇಲೆ ಈ ಕಾವ್ಯವನ್ನು ಬರೆದಿದ್ದಾರೆ.

ಇದಕ್ಕೆ ಗ್ರಂಥಕರ್ತರಾದ ಶ್ರೀ ಲಕ್ಷ್ಮಣಶಾಸ್ತ್ರಿಗಳೇ ಸಂಸ್ಕೃತದಲ್ಲಿ " ಭಾವ ಬೋಧಿನೀ " ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಆದರೆ ಅದರ ಕೇವಲ ೧ ರಿಂದ ೭ ಸರ್ಗಗಳು ಮಾತ್ರ ಹಿಂದೆ ಶ್ರೀರಂಗದ ವಾಣಿವಿಲಾಸ ಮುದ್ರಣಾಲಯದ ಸಂಸ್ಕೃತ ಗ್ರಂಥಮಾಲೆಯಲ್ಲಿ ೧೨ನೆಯ ಕುಸುಮವಾಗಿ ಅಚ್ಚಾಗಿವೆ ಅದರಲ್ಲಿ ಮುದ್ರಣವಾದ ಇಸವಿ ನಮೂದಾಗಿಲ್ಲ !

ಶ್ರೀ ಕಾಶೀ ಲಕ್ಷ್ಮಣ ಶಾಸ್ತ್ರಿಗಳ ವ್ಯಾಖ್ಯಾನದಲ್ಲಿನ ಆ ಭಾಗ ಹೀಗಿದೆ "ಸು ಸಿದ್ದೇನ ರೇವಣಸಿದ್ಧ ಮಹಾಯೋಗಿಪ್ರಸಾದತ್ತಂ ಶ್ರೀ ಚಂದ್ರಮೌಳೀಶ್ವರ ಲಿಂಗಂ ಸದ್ರತ್ನಗರ್ಭಂ, ಸದ್ರತ್ನಂ ಮಾಣಿಕ್ಯಂ ಗರ್ಭೇ ಯಸ್ಯಸಃ ತಥೋಕ್ತಸ್ತಂ ಗಣನಾಯಕಂಚ" ಮುಂತಾಗಿ ಹೇಳಲಾಗಿದೆ ಇದಕ್ಕೆ ದಿ॥ ಟಿ. ಕೆ. ಬಾಲಸುಬ್ರಹ್ಮಣ್ಯ ಅಯ್ಯರ್ ಅವರ ಇಂಗ್ಲಿಷಿನ ಪ್ರಸ್ತಾವನೆ ಇದೆ.

ತರುವಾಯ 1966ರಲ್ಲಿ ಇದೇ ಗ್ರಂಥವು ಸಂಪೂರ್ಣ (೧–೧೯ ಸರ್ಗಗಳು) ವಾಗಿ ಅದೇ ಶ್ರೀರಂಗದ ವಾಣಿವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮತ್ತೆ ಅಚ್ಚಾಗಿದೆ. ಆದರೆ ಇದರಲ್ಲಿ ಕಾಶೀ ಲಕ್ಷ್ಮಣ ಶಾಸ್ತ್ರಿಗಳ ಸಂಸ್ಕೃತ ವ್ಯಾಖ್ಯಾನಕ್ಕೆ ಬದಲಾಗಿ ಸಂಸ್ಕೃತ ಮತ್ತು ಇಂಗ್ಲೀಷುಗಳಲ್ಲಿ ಬರೆದ ವಿಶೇಷ ಸೂಚನಾತ್ಮಕ ಟಿಪ್ಪಣಿಗಳಿವೆ.

ಪ್ರಕೃತ ಮೇಲೆ ಹೇಳಿದ "ಶ್ರೀ ಚಂದ್ರಮೌಳೀಶ್ವರ ಲಿಂಗಮಸ್ಮೈ" ಎಂಬ (ಸ. 3. ಶ್ಲೊ 33) ಪದ್ಯಕ್ಕೆ ಕೊಟ್ಟಿರುವ ಸಂಸ್ಕೃತದ ಟಿಪ್ಪಣಿಯ ಕನ್ನಡ ಸಾರಾಂಶ ಇದು. "ಈ ಪದ್ಯದಲ್ಲಿ ಬಂದಿರುವ "ಸುಸಿದ್ಧನು" ಗೋವಿಂದ ಭಗವತ್ಪಾದಾ ಚಾರ್ಯನೆ ಹೊರತು ಕ್ರಿ. ಶ. 12 ನೆಯ ಶತಮಾನದ ವೀರಶೈವಾಚಾರ್ಯ ರೇವಣಸಿದ್ಧನಲ್ಲ. ಅದಕ್ಕಾಗಿ ಆ ಪದ್ಯಭಾಗವು ಹೀಗಿರಬೇಕು.

"ಶಿವಾತ್ ಕ್ರಮಾತ್ ಸಮಾಯಾತಂ
ಚಂದ್ರಮೌಳೀಶ್ವರಂ ಪರಂ ।
ರತ್ನಗರ್ಭಂ ಗಣಪತಿಂ
ಪೂಜಯೇದಿತಿ ದದೌಮುದಾ ॥

ಗುರು ಪರಂಪರೆಯ ಕ್ರಮದಂತೆ ತಮ್ಮ ಹಸ್ತಕ್ಕೆ ಬಂದ ಶ್ರೀ ಚಂದ್ರ ಮೌಳೀಶ್ವರ ಲಿಂಗವನ್ನು ಶ್ರೀ ಶಂಕರಾಚಾರ್ಯರು ಶ್ರೀ ಸುರೇಶ್ವರಾಚಾರ್ಯರಿಗೆ ಕೊಟ್ಟರು ಎಂದು ಸ್ಪಷ್ಟವಾಗಿ ಹೇಳಿದೆ. ರೇವಾನದೀ ತೀರದಲ್ಲಿ ವಾಸಮಾಡಿದ್ದ ರಿಂದ ಶ್ರೀ ಗೋವಿಂದ ಭಗವತ್ಪಾದಾಚಾರ್ಯರಿಗೆ "ರೇವಣ" ಎಂಬ ಹೆಸರು ಬಂದಿದೆ ಎಂಬ ವ್ಯಾಖ್ಯಾನವೂ ಸಂಗತವಾಗುತ್ತದೆ. ನರ್ಮದಾನದಿಗೆ ಪರ್ಯಾಯನಾಮ ವಾಗಿರುವ "ರೇವಾ" ಶಬ್ದಕ್ಕೆ "ಲೋಮಾದಿ ....." ಎಂಬ ವ್ಯಾಕರಣ ಸೂತ್ರದಿಂದ ನ ಪ್ರತ್ಯಯವೂ ಅದಕ್ಕೆ ಣತ್ವವೂ ಬಂದು "ರೇವಣ" ಎಂಬ ಪದವು ಸಿದ್ಧವಾಗಿದೆ. ಒಟ್ಟಿನಲ್ಲಿ ರೇವಣ ಪದವು ಗೋವಿಂದ ಭಗವತ್ಪಾದ ವಾಚಕವೇ ಹೊರತು ವೀರಶೈವಾ ಚಾರ್ಯರಾದ ರೇಣುಕಾಚಾರ್ಯ ವಾಚಕವಲ್ಲ. ಏಕೆಂದರೆ ೧೨ ನೇ ಶತಮಾನದ ರೇವಣಸಿದ್ಧರು ಶ್ರೀ ಶಂಕರರ ಸಮಕಾಲೀನರಲ್ಲ ವೀರಶೈವರಿಂದ ಪೂಜೆಗೊಳ್ಳುವ ರೇವಣಸಿದ್ಧರ ಪ್ರಸ್ತಾಪವು ಈ ಗ್ರಂಥದ ಐದು ಮತ್ತು ಆರನೇ ಸರ್ಗಗಳಲ್ಲಿ ಬಂದಿದೆ."

ಗುರುವಂಶಕಾವ್ಯದ ಮೂಲಕ್ಕೆ ೧೫ ಸರ್ಗಗಳವರೆಗೂ ಶ್ರೀ ಕಾಶೀ ಲಕ್ಷ್ಮಣ ಶಾಸ್ತ್ರಿಗಳ ಸಂಸ್ಕೃತ ವ್ಯಾಖ್ಯಾನವಿದ್ದರೂ ಎರಡನೇ ಮುದ್ರಣದಲ್ಲಿ ಆ ಸಂಸ್ಕೃತ ವ್ಯಾಖ್ಯಾನವನ್ನು ಕೈಬಿಟ್ಟು ೧೯ ಸರ್ಗಗಳ ಮೂಲಕ್ಕೆ ಅಲ್ಲಲ್ಲಿ ವಿಶೇಷ ಸೂಚನೆಗಳನ್ನು (ಟಿಪ್ಪಣಿ) ಇಂಗ್ಲೀಷಿನಲ್ಲಿ ಕೊಟ್ಟ ಗುರುಭಕ್ತರತ್ನ ಶ್ರೀ ಕೆ. ಆರ್. ವೆಂಕಟರಾಮನ್ ಅವರಾಗಲಿ, ಆ ಇಂಗ್ಲೀಷ್ ಟಿಪ್ಪಣಿಗಳನ್ನು ಸಂಸ್ಕೃತಕ್ಕೆ ಪರಿವರ್ತಿಸಿದ ವ್ಯಾಕರಣ ಮತ್ತು ವೇದಾಂತ ವಿದ್ವಾಂಸರಾದ ಅದೇ ಪ್ರೆಸ್ಸಿನಲ್ಲಿದ್ದ ಶ್ರೀ ಕೆ. ಎಸ್. ವೆಂಕಟ

ರಾಮಶಾಸ್ತ್ರಿಗಳಾಗಲಿ "ರೇವಣ" ಪದಕ್ಕೆ ಮಾಡಿರುವ ವ್ಯಾಖ್ಯಾನವು ಅತಿವಿಚಿತ್ರ !. ಇವನ್ನೇ ಶ್ರೀ ಟಿ. ಬಿ. ಬಸವರಾಜಯ್ಯನವರು ಈ ಗ್ರಂಥದಲ್ಲಿ ಪ್ರತಿಭಟಿಸ ಬೇಕಾಯಿತು.

ಇಲ್ಲಿ ಈ ಟಿಪ್ಪಣಿಕಾರರು "ರೇವಣ" ಪದವು ನರ್ಮದಾನದಿಗೆ ಪರ್ಯಾಯ ವಾಚಕವಾದ "ರೇವಾ" ಶಬ್ದದಿಂದ ವ್ಯಾಕರಣ ಸೂತ್ರಗಳನ್ನಿತ್ತು "ರೇವಣ" ಪದ ವನ್ನು ಸಿದ್ಧ ಮಾಡಿರುವುದು ಮತ್ತು ಗೋವಿಂದ ಭಗವತ್ಪಾದರು ರೇವಾನದೀ ತೀರ ದಲ್ಲಿ ವಾಸಮಾಡಿದ್ದರಿಂದ ಅವರಿಗೆ "ರೇವಣ" ಎಂದು ಹೆಸರಾಯಿತೆಂದು ಸಾಧಿಸಿರು ವುದು ವ್ಯರ್ಥ ಪ್ರಯಾಸ !. ಏಕೆಂದರೆ ಹಾಗೆ ಗೋವಿಂದ ಭಗವತ್ಪಾದರೇ ಆದಿ ಶಂಕರರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟಿದ್ದ ಪಕ್ಷದಲ್ಲಿ ಕಾಶೀ ಲಕ್ಷ್ಮಣ ಶಾಸ್ತ್ರಿಗಳಿಗೆ ಅದನ್ನು ಕಾವ್ಯದಲ್ಲಿಯೇ ಸೂಚಿಸಲು ಕಷ್ಟವಾಗಿರಲಿಲ್ಲ ; ಅಥವಾ ಆ ವಿಷಯವನ್ನು ಅನಂತರ ತಮ್ಮ ವ್ಯಾಖ್ಯಾನದಲ್ಲಾದರೂ ಹೇಳದೇ ಇರಲು ಕಾರಣವೂ ಇಲ್ಲ. ಇನ್ನು ರೇವಣಸಿದ್ದರು ೧೨ನೇ ಶತಮಾನದವರಾದ್ದರಿಂದ ಅವರು ಶ್ರೀ ಶಂಕರರ ಸಮಕಾಲೀನರಾಗಲಾರರು ಎಂಬ ವಾದವೂ ಕೂಡ ದುರ್ಬಲವಾದದ್ದು, ಏಕೆಂದರೆ ಆಚಾರ್ಯ ಶಂಕರರ ಕಾಲವೇ ಕ್ರಿ.ಪೂ. ೫ನೇ ಶತಮಾನದಿಂದ ಕ್ರಿ.ಶ. ೮ನೇ ಶತಮಾನವ ವರೆಗೆ ತೂಗಾಡುತ್ತಿದೆ! ಅದು ಅಲ್ಲದೆ ಶ್ರೀ ಶಂಕರರ ಪೀಠದಲ್ಲಿಯೇ ಅವರ ಹೆಸರಿನ ಅನೇಕರನ್ನು ಕಾಣುತ್ತಿದ್ದೇವೆ ಎಂದಮೇಲೆ, ಯುಗ ಪ್ರವರ್ತಕರೂ ಆಗಮೋಕ್ತರೂ ಆದ ರೇಣುಕಾದಿ ಆಚಾರ್ಯರ ಪೀಠಗಳಲ್ಲಿಯೂ ಸಹ ಅದೇ ಹೆಸರಿನ ಅನೇಕ ಆಚಾರ್ಯರು ಇದ್ದಿರಬಾರದೇಕೆ ? ನಾನು ಶ್ರೀಕರ ಭಾಷ್ಯಕ್ಕೆ ಬರೆದ ಸಂಸ್ಕೃತ ಪೀಠಿಕೆಯಲ್ಲಿ ನಾಲ್ವರು ರೇಣುಕರನ್ನು ಗುರ್ತಿಸಲಾಗಿದೆ. ಶ್ರೀಕರ ಭಾಷ್ಯ ಪೀಠಿಕೆ (ಮೈಸೂರು ವಿಶ್ವವಿದ್ಯಾಲಯದ ಪ್ರಕಟನೆ ೧೯೭೭) ಭಾಗ–1 (ಪುಟ 145-147). ಎರಡನೆಯದಾಗಿ ಗುರುವಂಶಕಾವ್ಯದ ಐದು ಮತ್ತು ಆರನೆ ಸರ್ಗಗಳಲ್ಲಿ ಮತ್ತೆ ಎರಡು ಕಡೆ ಬಂದಿರುವ ರೇವಣರು ಮತ್ತು ಚಂದ್ರಮೌಳೀಶ್ವರಲಿಂಗಪ್ರಧಾನದ ವಿಚಾರವು ವಿದ್ಯಾರಣ್ಯ (೧೪೦೦) ರ ಕಾಲಕ್ಕೆ ಸಂಬಂಧಿಸಿದ್ದು ಅಲ್ಲಿ ಮತ್ತೆ ಮತ್ತೆ ಈ ವಿಚಾರವು ಬರಬೇಕಾದರೆ ರೇವಣರಿಗೂ ಶೃಂಗೇರಿ ಮಠಕ್ಕೂ ಇರುವ ಸಂಬಂಧವನ್ನು ಸೂಚಿಸದೆ ಇದ್ದೀತೆ ?

ಕಡೆಯದಾಗಿ ರೇವಣಸಿದ್ಧರು ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗ ವನ್ನು ನೀಡಿದ ವಿಷಯವನ್ನು ಕೇವಲ ಗುರುವಂಶಕಾವ್ಯ ಒಂದೇ ಹೇಳುತ್ತಿಲ್ಲ, ಬದ ಲಾಗಿ ಮದರಾಸಿನ ಓರಿಯಂಟಲ್ ಲೈಬ್ರರಿಯಲ್ಲಿ ಡಾ॥ ಬಿ. ರಾಮರಾವ್ ಅವರಿಂದ ಸಂಪಾದಿಸಲ್ಪಟ್ಟಿರುವ "ಶಿವತತ್ತ್ವರತ್ನಾಕರ" (ಕಲ್ಲೋಲ ೪ ತರಂಗ ೧೨-ಶ್ಲೋ

೯-೧೧) ದಲ್ಲಿ ॥ ರೇವಣಾಸಿದ್ಧ ಸಂಪ್ರಾಪ್ತಂ ಚಂದ್ರಮೌಲೀಶಮುಷ್ಯದಾತ್ । ಅಖ್ಯಾಚ್ಛಾನೇನ ಲಿಂಗೇನ ತವಾಭೀಷ್ಟಾಪ್ತಿರಿತ್ಯಪಿ ॥ ಎಂದು ಉಲ್ಲೇಖಿಸಲಾಗಿದೆ. ಮಾತ್ರವಲ್ಲದೆ ಈ ಶಿವತತ್ತ್ವ ರತ್ನಾಕರಕ್ಕೆ ಇಂಗ್ಲೀಷಿನಲ್ಲಿ ಪ್ರಸ್ತಾವನೆ ಬರೆದಿರುವ ರಾ॥ ಬ॥ ಎಚ್ ಕೃಷ್ಣಶಾಸ್ತ್ರಿಯರ್ ಎಂಬುವರು "ಶೃಂಗೇರಿಯ ಶಂಕರಾಚಾರ್ಯರ ಮಠಕ್ಕೆ "ಶ್ರೀ ರೇವಣಸಿದ್ಧ ಸಂಪ್ರದಾಯ" ಎಂದು ಕರೆದಿಲ್ಲವೆ ? ಮೈಸೂರು ಸರ್ಕಾರವು ಪ್ರಕಟಿಸಿರುವ ಲಿಂಗಣ್ಣಕವಿ ವಿರಚಿತ "ಕೆಳದಿನೃಪವಿಜಯ" (ಪುಟ ೧೬) ದಲ್ಲಿ ಚಂದ್ರಮೌಲೀಶ್ವರಲಿಂಗವನ್ನು ವಿದ್ಯಾರಣ್ಯರಿಗೆ "ರೇವಣಸಿದ್ಧನೆಂಬ ಜಂಗಮ ಸ್ವರೂಪ ಗಣಾದೀಶ್ವರನು" ನೀಡಿ ಅದೃಶ್ಯನಾದನೆಂದು ಹೇಳುವುದಲ್ಲದೆ, ಸೋಸಲೆ ರೇವಣಾರಾಧ್ಯರ (16 23) ''ಶಿವಾಧಿಕ್ಯ ಶಿಖಾಮಣಿ'' ಗ್ರಂಥದಲ್ಲಿಯೂ ಈ ವಿಷಯವು ಉಕ್ತವಾಗಿದೆ. ವಿದ್ಯಾರಣ್ಯರು ಬರೆದಿರುವ ಪಿತಾಮಹ ಸಂಹಿತೆ ಮತ್ತು ಭಾರತಿಕೃಷ್ಣಯತಿಯು ಬರೆದಿರುವ "ವಿದ್ಯಾರಣ್ಯಕೃತಿ" ಯಲ್ಲಿಯೂ ಸಹ ಈ ವಿಷಯವು ಬಂದಿರುವುದನ್ನು ಈ ಗ್ರಂಥಕರ್ತರು ನೆನಪಿಸಿಯೇ ಇದ್ದಾರೆ.

ವಿಷಯವು ಹೀಗಿರುವಾಗ ಗುರುವಂಶಕಾವ್ಯ ಎರಡನೇ ಮುದ್ರಣದ ಟಿಪ್ಪಣಿ ಕಾರರಾದ ಹಿಂದೆ ಹೇಳಿದ ಇಬ್ಬರು ವಿದ್ವಾಂಸರು ದುರ್ಬಲ ಪ್ರಮಾಣಗಳನ್ನು ತೋರಿಸಿ, ಪರಂಪರಾಗತವಾದ ಸತ್ಯವಿಷಯವನ್ನು ಮರೆಮಾಚಲೆತ್ನಿಸಿರುವುದು ತುಂಬಾ ವಿಷಾದಕರ ! ಮೇಲಾಗಿ ನಾಡಿಗೆ ಸ್ವಾತಂತ್ರ್ಯ ಬಂದು 37 ವರ್ಷಗಳಾದ ಮೇಲೆಯೂ ಕೂಡ ಮತ ಮತಗಳಲ್ಲಿ, ವರ್ಗ-ಪಂಗಡಗಳಲ್ಲಿ ರಾಷ್ಟ್ರೀಯತೆಯು ಮೊಳೆದೋರುತ್ತಿರುವ ಈ ಸುವರ್ಣಯುಗದಲ್ಲಿಯೂ ಸಹ ಆಧುನಿಕ ವಾತಾವರಣ ವನ್ನು ಅಳವಡಿಸಿಕೊಂಡು ರಾಷ್ಟ್ರೀಯತೆಯನ್ನು ಬೆಳೆಸುವ ಆಧುನಿಕ ಪಂಡಿತ ವರ್ಯರು, ಮರೆತುಹೋದ ಮತ, ಅಥವಾ ಮತ ಕಲಹಗಳಿಗೆ ಕಾರಣವಾದ ಈ ವಿಷಯವನ್ನು ಪ್ರಸ್ಥಾಪಿಸಿರುವುದಂತೂ ಚಿಂತಾಜನಕವಾದದ್ದು.

ಒಟ್ಟಿನಲ್ಲಿ ಶ್ರೀ ಟಿ.ಬಿ. ಬಸವರಾಜಯ್ಯನವರು ಈ ದಿಸೆಯಲ್ಲಿ ತಮ್ಮ ಉತ್ತರ ವಯಸ್ಸಿನಲ್ಲಿಯೂ ಸಹ ಶ್ರಮವಹಿಸಿ ಈ ಗ್ರಂಥವನ್ನು ಹೊರತಂದಿರು ವುದು ಸ್ತುತ್ಯ. ಅವರಿಗೆ ಪರಶಿವನು ಆಯುರಾರೋಗ್ಯ ಭಾಗ್ಯಗಳನ್ನು ನೀಡಲಿ ಎಂದು ಹಾರೈಸುತ್ತೇನೆ.

೧೧-೩-೧೯೮೬ — ಎಂ. ಜಿ. ನಂಜುಂಡಾರಾಧ್ಯ

ಮೈಸೂರು-4

ಡಾ. ಟಿ. ಜಿ. ಸಿದ್ದಪ್ಪಾರಾಧ್ಯ, M.A.Ph.D.,
ವಿದ್ವಾನ್, ನಿವೃತ್ತ ಸಂಸ್ಕೃತ ಅಧ್ಯಾಪಕರು,
ನಂ. 606; ಶಂಕರಮಠದ ರಸ್ತೆ,
ಚಾಮರಾಜೇಂದ್ರ ಡಬ್ಬಲ್ ರೋಡ್, ಮೈಸೂರು-4.

ಮಾನಸ ಗಂಗೋತ್ರಿ
ವಿಶ್ವವಿದ್ಯಾಲಯ
ಮೈಸೂರು- 2
ತಾ. 18-3-1986

# ಮುನ್ನುಡಿ

ಶ್ರೀ ರಂಭಾಪುರೀ ಆದಿ ಜಗದ್ಗುರು ರೇವಣಸಿದ್ಧ ಶಿವಾಚಾರ್ಯರು ಶೃಂಗೇರಿ ಆದಿ ಶಂಕರಾಚಾರ್ಯರಿಗೆ ರತ್ನಗರ್ಭ ಗಣಪತಿ, ಚಂದ್ರಮೌಳೀಶ್ವರ ಲಿಂಗ ಇವನ್ನು ಅನುಗ್ರಹಿಸಿದ ಬಗ್ಗೆ ಸೂಕ್ಷ್ಮವಾದ ಸಂಶೋಧನೆಗಳನ್ನು ನಡೆಸಿ ಶಿವಾನುಭವಿ ಟಿ. ಬಿ. ಬಸವರಾಜಯ್ಯನವರು ಸಪ್ರಮಾಣವಾಗಿ ಬರೆದಿರುವ ಸತ್ಯಸುಂದರ ಕೃತಿಯನ್ನು ಓದಿ ತುಂಬಾ ಸಂತೋಷವಾಯಿತು. ಈ ವಿಷಯವು ಸರ್ವರಿಂದ ಅಂಗೀಕೃತವಾದ ಐತಿಹಾಸಿಕ ವಿಷಯವಾಗಿದೆ. ಶೃಂಗೇರಿ ಪೀಠದ ಸ್ವಾಮಿಗಳ ಪರಂಪರೆಯನ್ನು ಸಪ್ರಮಾಣವಾಗಿ ಪ್ರತಿಪಾದಿಸುವ **ಗುರುವಂಶಕಾವ್ಯ** ದಲ್ಲಿಯೇ ಈ ವಿಷಯವು ಬಂದಿರುವುದರಿಂದ ಈ ಬಗ್ಗೆ ಯಾರಿಗೂ ಯಾವ ಸಂದೇಹಕ್ಕೂ ಅವಕಾಶವೇ ಇಲ್ಲ. ಆದಿ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಆದಿ ರೇವಣಸಿದ್ಧ ಶಿವಾಚಾರ್ಯರು ಅನುಗ್ರಹಿಸಿದರೆಂದು ಗ್ರಂಥಕರ್ತರಾದ ಶ್ರೀ ಲಕ್ಷ್ಮಣಶಾಸ್ತ್ರಿಗಳು ಕಾವ್ಯದಲ್ಲೂ, ಅದಕ್ಕೆ ತಾವೇ ಬರೆದಿರುವ ವ್ಯಾಖ್ಯಾನದಲ್ಲೂ ಸ್ಪಷ್ಟಪಡಿಸಿರುವುದರಿಂದ ಇದು ಪ್ರಬಲ ಪ್ರಮಾಣವೆನಿಸಿದೆ. ಇದೂ ಅಲ್ಲದೆ, ಈ ಗುರುವಂಶ ಕಾವ್ಯವು ಆ ಪೀಠದ ಮುಖ್ಯ ಗುರುಗಳಾದ ಶ್ರೀ ಸಚ್ಚಿದಾನಂದ ಭಾರತಿ ಸ್ವಾಮಿಗಳ ಅನುಮತಿಯಿಂದಲೇ ರಚಿತವಾಗಿದೆ. ಆದ್ದರಿಂದಲೇ ಇದು ಅದ್ವೈತಿಗಳಾದ ಸ್ಮಾರ್ತರಿಗೂ, ಶಕ್ತಿ ವಿಶಿಷ್ಟಾದ್ವೈತಿಗಳಾದ ವೀರಶೈವರಿಗೂ ಇರುವ ಪರಸ್ಪರ ಸಹಕಾರ ಮನೋಭಾವವನ್ನು ವ್ಯಕ್ತಪಡಿಸುತ್ತದೆ. ವೀರಶೈವರಂತೆ ಸ್ಮಾರ್ತರೂ ಲಿಂಗಪೂಜಕರೆಂಬ ಭಾವನೆಯನ್ನು ಇದು ತಿಳಿಸುತ್ತದೆ.

ಶ್ರೀ ರೇವಣಸಿದ್ಧ ಶಿವಾಚಾರ್ಯರು ಯಾವ ಸದುದ್ದೇಶದಿಂದ ಆದಿ ಶಂಕರಾಚಾರ್ಯರಿಗೆ ಲಿಂಗವನ್ನು ಅನುಗ್ರಹಿಸಿದರೋ ಅದು ಇಂದಿಗೂ ಶೃಂಗೇರಿಯಲ್ಲಿ

ಸಫಲವಾಗುತ್ತಿದೆ. ಜ್ಞಾನಿ ಶಂಕರಾಚಾರ್ಯರಿಗೆ ಕ್ರಿಯೆಯ ಅವಶ್ಯಕತೆಯನ್ನೂ ಜ್ಞಾನದೊಡನೆ ಅದರ ಸಮ ಪ್ರಾಧಾನ್ಯವನ್ನೂ ಪರಿಣಾಮಕಾರಿಯಾಗುವಂತೆ ಶ್ರೀ, ರೇವಣಸಿದ್ಧ ಶಿವಾಚಾರ್ಯರು ಶಂಕರಾಚಾರ್ಯರಿಗೆ ಲಿಂಗವನ್ನು ಅನುಗ್ರಹಿಸಿದ್ದು ಅವರ ಔದಾರ್ಯ ಪ್ರಸನ್ನತೆಗಳನ್ನು ಹೊರಪಡಿಸುತ್ತದೆ. ಕೇವಲ ವಾಗಾದ್ವೈತ ದಿಂದಲೇ ಶಿವಾನುಭವ ಸುಖ ದೊರಕಲಾರದು ; ಹಾಗೆಯೇ ಕೇವಲ ಕ್ರಿಯಾದ್ವೈತ ವನ್ನು ಆಚರಿಸಲಿಕ್ಕೆ ಯಾರಿಗೂ ಶಕ್ಯವಿಲ್ಲ. ಆದ್ದರಿಂದಲೇ ಭಾವಾದ್ವೈತವನ್ನು ದೃಢ ಪಡಿಸಿಕೊಂಡು ಸಮರಸ ಭಾವನೆಯಿಂದ ನಿತ್ಯ ಯಜ್ಞರೂಪವಾದ ಲಿಂಗಾರ್ಚನೆಯಲ್ಲಿ ತೊಡಗುವುದರಿಂದಲೇ ಸಾಧಕನು ಶಿವಾನುಭವ ಸುಖವನ್ನು ಪಡೆಯಬಲ್ಲನು. ಇಷ್ಟು ಸದಾಶಯದಿಂದ ರೇವಣಸಿದ್ಧರು ಅದ್ವೈತಿಗಳಾದ ಶಂಕರಾಚಾರ್ಯರಿಗೆ ನಿತ್ಯಾರ್ಚನೆಗಾಗಿ ಲಿಂಗವನ್ನು ಅನುಗ್ರಹಿಸಿದ್ದು ಯುಕ್ತವೆನಿಸಿದೆ. ಇದು ಅವರ ಅಸಾಧಾರಣವಾದ ಲೋಕಾನುಗ್ರಹಲೀಲಾ ವೈಭವವನ್ನು ತಿಳಿಸುತ್ತದೆ. ಆ ಲಿಂಗವು ಅಂದಿನಿಂದ ಇಂದಿನವರೆಗೂ ಶೃಂಗೇರಿ ಮಠದಲ್ಲಿ ಸ್ವಾಮಿಗಳಿಂದ ನಿತ್ಯಾರ್ಚನೆಯನ್ನು ಸ್ವೀಕರಿಸುತ್ತ ಲೋಕ ಕಲ್ಯಾಣವನ್ನು ಸಾಧಿಸುತ್ತಲಿದೆ.

ಆದಿ ಶಂಕರಾಚಾರ್ಯರು ಕ್ರಿ. ಪೂ. ೬ ನೇ ಶತಮಾನದಲ್ಲಿದ್ದರೆಂದು ಅವರಿಂದ 38ನೆ ಯವರೇ ಭಾಷ್ಯಕರ್ತ ಶಂಕರಾಚಾರ್ಯರೆಂದೂ ಮದ್ರಾಸಿನ ಇತಿಹಾಸಜ್ಞರಾದ ಶ್ರೀ ಟಿ. ಎಸ್. ನಾರಾಯಣಶಾಸ್ತ್ರಿಗಳು ೧೯೧೫ ನೇ ಮೇ ತಿಂಗಳಿನ "ಇಂಡಿಯನ್ ರೆವ್ಯೂ" ಎಂಬ ಮಾಸಪತ್ರಿಕೆಯಲ್ಲಿ "ದಿ ಸೈವ ಗ್ರೇಟ್ ಸ್ಕೂಲ್ಸ್ ಆಫ್ ವೇದಾಂತ ಫಿಲಾಸಫಿ" ಎಂಬ ಲೇಖನದಲ್ಲಿ ತಿಳಿಸಿದ್ದಾರೆ. ಕಲಿಯುಗದಲ್ಲಿ ಧರ್ಮ ಬೋಧೆಗಾಗಿ ಅವತರಿಸಿದ್ದ ರೇವಣಸಿದ್ಧರು 700 ವರ್ಷ ಗುಪ್ತ ತಪಶ್ಚರ್ಯೆಯಿಂದಲೂ, 700 ವರ್ಷ ತತ್ತ್ವೋಪದೇಶದಿಂದಲೂ ಭಕ್ತಾನುಗ್ರಹ ಲೀಲೆಯನ್ನು ನಡೆಸಿದರು. ಅವ ತಾರ ಸಮಾಪ್ತಿ ಕಾಲದಲ್ಲಿ ಆದಿ ಶಂಕರರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಅವರು ಅನುಗ್ರಹಿಸಿದರೆಂಬಲ್ಲಿ ಯಾವ ಅನೌಚಿತ್ಯಕ್ಕೂ ಅವಕಾಶವಿಲ್ಲ. ಆದಿಶಂಕರರು ಕ್ರಿ.ಪೂ. ೬ನೇ ಶತಮಾನದಲ್ಲಿದ್ದರೆಂಬುದು ಸ್ಪಷ್ಟವಾದ್ದರಿಂದ, ಅವರಿಗೂ ಕಲಿಯುಗದ ಶ್ರೀ ಆದಿ ರೇವಣಸಿದ್ಧರಿಗೂ ಸಮಾವೇಶಕ್ಕೆ ಪೂರ್ಣ ಅವಕಾಶವಿತ್ತು. ಈ ಬಗ್ಗೆ ಸಂಶಯವಿಲ್ಲ.

ಈ ವಿಷಯವನ್ನು ಶ್ರೀ ಬಸವರಾಜಯ್ಯನವರು ಐತಿಹಾಸಿಕವಾಗಿ ರೂಪಿಸಲು ಕೃತಿರತ್ನವನ್ನು ರಚಿಸಿ ಜಗತ್ತಿಗೆ ಸತ್ಯದರ್ಶನ ಮಾಡಿಸಿದ್ದಾರೆ. ಸಾಮಾನ್ಯ ಜನರಿಗೆ ಲಿಂಗವನ್ನು ಅನುಗ್ರಹಿಸುವುದಕ್ಕಿಂತಲೂ ಅದ್ಭುತ ಶಕ್ತಿವಂತರಾದವರಿಗೆ

ಅನುಗ್ರಹಿಸಿ ಅವರ ಮನಬುದ್ಧಿಗಳನ್ನು ಲಿಂಗದಲ್ಲಿ ದೃಢವಾಗಿ ಅಂಟಿಸಿದರೆ, ಇದರಿಂದ ಮಾನವ ಸಮಾಜವು ಉದ್ಧಾರವಾಗುವುದೆಂದು ರೇ ವ ಣ ಸಿ ದ್ಧ ರು ಭಾವಿಸಿದ್ದು ಸಮಂಜಸವೆನಿಸಿದೆ. ಎಂತಹ ಜ್ಞಾನಿಗಳಾದರೂ ತಾವಾಗಿಯೇ ಲಿಂಗವನ್ನು ತಂದು ಅರ್ಚಿಸುವ ಪದ್ಧತಿ ಎಲ್ಲೂ ನಡೆದುಬಂದಿಲ್ಲ. ಶಿವಯೋಗಸಿದ್ಧರಾದ ಮಹಾತ್ಮರಿಂದ ಅನುಗ್ರಹೀತವಾದಾಗಲೇ ಆ ಲಿಂಗವು ಪರಮಪೂಜ್ಯವೆನಿಸಿ, ಮಾನವ ಕಲ್ಯಾಣವನ್ನು ಸಾಧಿಸಬಲ್ಲದು. ಇಂತಹ ಲಿಂಗದ ದರ್ಶನದಿಂದಲೂ, ಆ ಲಿಂಗವನ್ನು ಪೂಜಿಸುವ ಮಹಾತ್ಮರ ಆಶೀರ್ವಾದದಿಂದಲೂ, ಶೃಂಗೇರಿ ಮಠವು ಇಂದಿಗೂ ಸಮಾಜಕಲ್ಯಾಣ ವನ್ನು ಅದ್ಭುತವಾಗಿ ಸಾಧಿಸುತ್ತಲಿದೆ. ಇರುವ ವಿಷಯವನ್ನು ಬಾಯಿಂದ ಹೇಳ ಲಿಕ್ಕೂ ಮನದಿಂದ ಒಪ್ಪಿಕೊಳ್ಳಲಿಕ್ಕೂ ಜಾತಿ ಗೌರವವು ಅವಕಾಶ ಕೊಡುತ್ತಿಲ್ಲ. ಆದರೆ ಸ್ಮಾರ್ತರು ವೀರಶೈವರು ಲಿಂಗಪೂಜಕರೇ ಆಗಿ ಇವರಿಬ್ಬರಿಂದಲೂ ಲೋಕ ಕಲ್ಯಾಣವು ಆಗಬೇಕಾಗಿರುವ ಪ್ರಯುಕ್ತ ಇವರಿಬ್ಬರಲ್ಲಿ ಜಾತಿ ವೈಷಮ್ಯವು ಹುಟ್ಟ ಲಿಕ್ಕೂ ಬೆಳೆಯಲಿಕ್ಕೂ ಅವಕಾಶವಿಲ್ಲ. ಇವರಿಬ್ಬರೂ ಬೆಳಕನ್ನು ಕಂಡವರೇ ಆಗಿ ಲೋಕಕ್ಕೆ ಬೆಳಕನ್ನು ಕೊಡುವವರಾದ್ದರಿಂದ, ಶ್ರೀ ಆದಿ ರೇ ವ ಣ ಸಿ ದ್ಧ ಶಿ ವಾ ಚಾ ರ್ಯ ರು, ಆದಿ ಶಂಕರಾಚಾರ್ಯರಿಗೆ ಲೋಕ ಕಲ್ಯಾಣಕ್ಕಾಗಿ ಲಿಂಗವನ್ನು ಅನು ಗ್ರಹಿಸಿದ್ದು ಯುಕ್ತವೆಂಬುದನ್ನು ಗ್ರಂಥಕರ್ತರು ಸರ್ವರಿಗೂ ಮನಮುಟ್ಟುವಂತೆ ನಿರಭಿಮಾನದಿಂದ ತಿಳಿಸಿರುತ್ತಾರೆ.

ಲಿಂಗಸ್ವರೂಪರಾದ ಶ್ರೀ ಆದಿ ರೇವಣಸಿದ್ಧರು ಆತ್ಮಜ್ಞಾನಿಗಳಾದ ಶಂಕರಾ ಚಾರ್ಯರಿಗೆ ಜ್ಞಾನ ಕ್ರಿಯಾ ಸಮನ್ವಯ ದೃಷ್ಟಿಯ ಆಚರಣೆಗಾಗಿ ಚಂದ್ರ ಮೌಳೀಶ್ವರಲಿಂಗವನ್ನು ಅನುಗ್ರಹಿಸಿದ್ದು ಯುಕ್ತವೇ ಆಗಿದೆ. ಕತ್ತಲೆಯಲ್ಲಿ ಪರದಾಡುವ ಇಂದಿನ ಜನತೆಗೆ ಬೆಳಕನ್ನು ಕಾಣಲು ಇದು ಮಹೋಪಕಾರವೆನಿಸಿದೆ. ರುದ್ರನಾಗಿ ರುದ್ರನನ್ನು ಪೂಜಿಸಬೇಕೆಂದು ಶೃತಿಯು ತಿಳಿಸಿದೆ. ರುದ್ರಸ್ವರೂಪರಾದ ಶಂಕರಾಚಾರ್ಯರು ಲಿಂಗವನ್ನು ಪೂಜಿಸುವುದರಿಂದ ಅವರ ದರ್ಶನವೇ ನಮ್ಮ ಪಾಪ ಸಂಶಯಗಳನ್ನು ದೂರ ಮಾಡಬಲ್ಲದು. ಈ ವಿಷಯದಲ್ಲಿ ಯಾರಿಗೂ ಸಂಶಯ ಹುಟ್ಟದಂತೆ, ಆತ್ಮನಿಶ್ಚಯಹುಟ್ಟಿ ಮಾನವ ಜೀವನ ಪಾವನವಾಗಲಿಕ್ಕೆ ಸದವಕಾಶ ದೊರೆತಿದೆ. ವೀರಶೈವ ಸ್ವಾಮಿಗಳು ಸ್ಮಾರ್ತ ಸ್ವಾಮಿಗಳಿಗೆ ಹೀಗೆ ಲಿಂಗವನ್ನು ಅನುಗ್ರಹಿಸಿದ್ದು ಲೋಕ ಕಲ್ಯಾಣ ದೃಷ್ಟಿಯಿಂದ ಎಷ್ಟು ಸಮಂಜಸವೆಂಬುದನ್ನು ಗ್ರಂಥಕರ್ತರು ಸ್ಪಷ್ಟಪಡಿಸಿದ್ದಾರೆ. ಸ್ಮಾರ್ತರು ವೀರಶೈವರು ಸೋದರ ವಾತ್ಸಲ್ಯ ದಿಂದ ಸಹಕರಿಸುತ್ತ ವಿಶ್ವದ ಹಿತವನ್ನು ಸಾಧಿಸಬೇಕಾದ್ದು ಅವಶ್ಯಕವೆಂಬುದನ್ನು ಗ್ರಂಥವು ಎಲ್ಲರಿಗೂ ಮನವರಿಕೆ ಮಾಡುತ್ತಲಿದೆ. "ಈ ಮಹಾ ವಿಷಯವನ್ನು

ನಿರ್ಮಲ ಭಾವದಿಂದ ಪ್ರತಿಪಾದಿಸಿರುವ ಶ್ರೀ ಟಿ. ಬಿ. ಬಸವರಾಜಯ್ಯನವರು ಧಾರ್ಮಿಕ ಇತಿಹಾಸದಲ್ಲಿ ಧ್ರುವ ತಾರೆಯಾಗಿ ಶೋಭಿಸಲಿರುವರು. ಇವರ ಧಾರ್ಮಿಕ ಸೇವೆ ಧರ್ಮಕ್ಷೇತ್ರದಲ್ಲಿ ಸುವರ್ಣಾಕ್ಷರಗಳಲ್ಲಿ ಕಂಗೊಳಿಸುತ್ತಿರುವುದು. ಇವರ ಪವಿತ್ರ ಗ್ರಂಥವನ್ನು ಎಲ್ಲರೂ ಓದಿ ವಿಶ್ವ ಬಾಂಧವ್ಯವನ್ನು ಸ್ಥಿರಗೊಳಿಸಿಕೊಂಡು, ಪರಸ್ಪರ ಪ್ರೇಮಸೌಹಾರ್ದ ಸಹಕಾರಗಳಿಂದ ಬಾಳಲೆಂದು ಮನಸಾ ಬಯಸುತ್ತೇನೆ.

ಡಾ. ಟಿ. ಜಿ. ಸಿದ್ದಪ್ಪಾರಾಧ್ಯ.

—o—o—o—

॥ ಯಸ್ಯ ಜ್ಞಾನ ದಯಾಸಿಂಧೋ । ಅಗಾಧಸ್ಯಾನಘಾಗುಣಾಃ ।
ಸೇವ್ಯತಾಮಕ್ಷಯೋಧೀರಾ । ಸ್ಸ ಶ್ರಿಯೈಚಾಮೃತಾಯಚ ॥

## ಸ್ವ ಸ್ವರೂಪದ ನಿಜದರ್ಪಣ

॥ ಅಮೃತಸ್ಯ ದೇವ ಧಾರಣೋ ಭೂಯಾಸಂ ॥ (ಇತಿ ಶೃತಿಃ)

ಪ್ರಣವ ಸ್ವರೂಪಿಗಳಾದ ಆತ್ಮ ಬಂಧುಗಳೇ !

ಓಂಕಾರ ಸ್ವಸ್ವರೂಪವಾದ ನಮ್ಮ ನಿಜತತ್ವವರಿಯಲು, ಶ್ರೀ ಗುರುವಿನ ಅಮೃತ ಹಸ್ತದಿಂದ ವಿಧಿವತ್ತಾಗಿ ಅನುಗ್ರಹಿಸಿದ ಇಷ್ಟಲಿಂಗದ, ಧಾರಣೆ ಈಕ್ಷಣೆ ನಿತ್ಯಾರಾಧನೆಗಳಿಂದ ಕ್ರಿಯಾವಂತರಾಗಬೇಕು. ಈ ಸಾಧನೆಯಿಂದ ಜೀವಂತಕಾಲದಲ್ಲೇ ಸ್ವಾನುಭೂತಿಯಿಂದ ಅಮೃತತ್ವವನ್ನು ಸವಿಯುತ್ತಾ ಅಮರರಾಗಲು ಶ್ರೀ ಮಹಾಗುರು ಕರುಣೆ ನೆರವಾಗುವುದು. ಈ ವಿಷಯ ಸಿದ್ಧಾಂತ ಶಿಖೋಪನಿಷತ್ತಿನಲ್ಲಿ ಪ್ರೋಕ್ತವಾಗಿದೆ.

1008 ಉಪನಿಷತ್ತುಗಳಲ್ಲಿ ಈ ಉಪನಿಷತ್ತು "ಸು ಸಿದ್ಧಾಂತ ಶಿಖಾ ಮುಖ್ಯಾಃ" ಪ್ರಮುಖವೆನಿಸಿದೆ. ಸುಪ್ರಸಿದ್ಧಂ । ಖಲು ಸಿದ್ಧಾಂತ ಶಿಖಾನಾಮಿಕೋಪನಿಷತ್ತು । ಸಕಲೋಪನಿಷತ್ಸು । ವರೀ ವರ್ತಿತೀ ॥ ಇಂತಪ್ಪ ಉಪನಿಷತ್ತಿನಲ್ಲಿ ॥ ವಿಷ್ಣು ಬ್ರಹ್ಮಾ

ದಯೋ ದೇವಾಃ । ಮುನಯೋ ಗೌತಮಾದಯಃ ॥ ಇವರುಗಳು ಶ್ರೀ ಗುರುವಿನಿಂದ ಅನುಗ್ರಹಿಸಿದ ಲಿಂಗದ ಆರಾಧಕರಾಗಿದ್ದರೆಂದು ತಿಳಿಸುತ್ತಾ ; ॥ ಪುರಾ ದೇವಾಃ ಪಶು ಪಾಶಾದ್ವಿಮುಕ್ತಾಃ ಶಿವಂ ಸಂಪೂಜ್ಯೈವಾ । ಹರಿ ಬ್ರಹ್ಮಾದಿಯೋಪಿ ॥ ವಿಷ್ಣುಬ್ರಹ್ಮಾದಿ ಗಳು ಗುಣತ್ರಯ ಮಲತ್ರಯಾದಿ ಪಾಶಗಳಿಂದ ಮುಕ್ತರಾಗಲು, ಯಾವ ಯಾವ ಲಿಂಗಗಳನ್ನು ಭಕ್ತ್ಯಾ ಪೂಜಿಸಿದರೆಂಬ, ಬಗೆಗೆ ವಿಷ್ಣ್ವಾದಿ ದೇವೈಃ । ಕಿಂ ಕಿಂ ಲಿಂಗಂ ಪೂಜಿತ ಮಿತ್ಯರ್ಥಃ ॥ ಎಂಬುವ ಕಡೆ, ಚತುರ್ಮುಖ ಬ್ರಹ್ಮನು । ವಿಧಿನಾ ಚತು ರ್ಮುಖೇನ । ವೈಢೂರ್ಯರೂಪಂ ಲಿಂಗಂ । ಪೂಜಿತ ಮಾಸಿತ್ ॥ ಇದರಂತೆಯೇ ॥ ಅಥ ಸರಸ್ವತಿ ಭಾರತಿ । ರತ್ನಮಯಂ ಲಿಂಗಂ । ಪೂಜಯಾ ಮಾಸ ಭಕ್ತ್ಯಾ ॥ ಅಂದರೆ ಅಧ್ಯಾತ್ಮ ವಿದ್ಯಾಮಯಳಾದ ಶಾರದಾಂಬೆಗೆ, ಶ್ರೀ ಜಗದಾಚಾರ್ಯ ರೇಣುಕರು ರತ್ನ ಮಯ ಲಿಂಗವನ್ನು ಅನುಗ್ರಹಿಸಿ, ಶಿವಶಕ್ತಿ ಸಂಪುಟದಿಂದ ವಿರಾಜಿಸುವ ಲಿಂಗತತ್ವ ವನ್ನು ಬೋಧಿಸಿ ಆಶೀರ್ವದಿಸಿರುವರೆಂದು ವಿವರಿಸಲಾಗಿದೆ.

ನಿತ್ಯ ಲಿಂಗಾರ್ಚನೆಯ ಫಲವಾಗಿ ಅಖಿಲ ದೇವ, ದಾನವ, ಮಾನವಾದಿಗಳು ಶ್ರೀ ಮಹಾ ಗುರುವಿನ ಅನುಗ್ರಹದಿಂದ ತಂ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಾ ಯಶಸ್ವಿಗಳಾಗುತ್ತಲಿರುವರೆಂದು ಈ ಉಪನಿಷತ್ತಿನಲ್ಲಿ ಅಧಿಕೃತವಾಗಿ ಪ್ರೋಕ್ತವಾಗಿದೆ.

॥ ಷಟ್ಸ್ಥಲ ಬ್ರಹ್ಮಜ್ಞಾನವಾನೇವ । ಪರಮೋತ್ಕೃಷ್ಟಃ ।
ಉಕ್ತಂಚ । ಶಂಕರ ಸಂಹಿತಾಯಾಂ ॥ (ಶ್ರೀ ವ್ಯಾಸೋಕ್ತ ಮಹಾಸ್ಕಾಂದ)

ಸ್ವ ಸ್ವರೂಪದರ್ಶನ : ರನ್ನ ಕನ್ನಡಿಗಳಿಂದ ಸುಸಜ್ಜಿತವಾದ ಒಂದು ರೂಂ (ಕೋಣೆಯಲ್ಲಿ) ನಲ್ಲಿ, ನೆಲವೆಲ್ಲಾ ಹಾಸುಗನ್ನಡಿ, ಮೇಲ್ಛಾವಣಿಯೆಲ್ಲಾ ಹೊಳೆ ಯುವ ಕನ್ನಡಿ, ನಾಲ್ಕು ದಿಕ್ಕಿನ ಗೋಡೆಗಳೆಲ್ಲಾ ಶುದ್ಧ ಸ್ಫಟಿಕದಂಥಾ ಕನ್ನಡಿಗಳಿಂದ ಅಲಂಕೃತವಾಗಿರಲು, ಈ ಕೋಣೆಯೊಳಗೆ ಪ್ರವೇಶಿಸಿದ ವ್ಯಕ್ತಿ, ತನ್ನ ಸ್ವರೂಪವನ್ನು ನಾನಾತ್ಮಕವಾಗಿ ಸುತ್ತಲೂ ಕಂಡು ಚಕಿತನಾಗುವನು. ಎತ್ತೆತ್ತ ನೋಡಿದರತ್ತತ್ತ ತಾನೇ ತಾನಾಗಿ ಕಾಣುವ ತನ್ನ ಮನಮೋಹಕವಾದ ಬಿಂಭವೇ ! ಈ ಉತ್ಸುಕತೆಯ ಪರಾಕಾಷ್ಠೆಯಲ್ಲಿ ಕನ್ನಡಿಯನ್ನೇ ಪೂರ್ಣ ಮರೆತು ತನ್ನನ್ನು ತಾನೇ ಅನಂತಮುಖ ವಾಗಿ ಕಂಡು ನಲಿದು, ಸಖೇದಾಶ್ಚರ್ಯದಿಂದ ಆನಂದಾಮೃತ ಸಾಗರದಲ್ಲಿ ಮುಳುಗಿ, ತದೇಕ ಧ್ಯಾನಪರವಶತೆಯಿಂದ ॥ ನಿಶ್ಶಬ್ದಂ ಬ್ರಹ್ಮ ಮುಚ್ಯತೆ ॥ ಎಂಬಂತೆ ಸ್ವಸ್ವರೂಪ ದರ್ಶನದಲ್ಲಿ ಮುಳುಗಿರ್ಪನು. ಇದರಂತೆ ॥ ಸರ್ವಂ ಖಲ್ವಿದಂ ಬ್ರಹ್ಮ ॥ ಈಶಾವಾಸ್ಯ ಮಿದಂ ಸರ್ವಂ ॥ ಎಂಬ ಉಪನಿಷದ್ವಾಣಿಯಂತೆ ಎಲ್ಲವೂ ಶಿವನೇ ಆಗಿ ವಿರಾಡ್ರೂಪಿ ಎಂದು ಸ್ತುತ್ಯನಿರುವನು. ॥ ಸ್ವಸ್ವರೂಪೈಕ ಚಿಚ್ಛಕ್ತಿಯಿಂ ಸ್ಫುರಿಸುತಿರ್ದುದದ್ವೈತ ಪರ

ಮಾತ್ಮತತ್ವಂ ॥ ಸತ್ಯಲೋಕದಿಂದ ಭಗವತ್ಪಾದ ಆದಿ ಶ್ರೀ ೧೦೦೦೮ ಜಗದ್ಗುರು ರೇವಣಸಿದ್ಧ ಶಿವಾಚಾರ್ಯರು ಶಿವನಾದೇಶದಂತೆ ಭುವಿಗಿಳಿದರು.

॥ ಚತುರ್ವರ್ಣಾನಾಂ ಲಿಂಗಂ ಮನುತೇ । ಸ ಪಾತಕೇಭ್ಯಃ ಪೂತೋ ಭವತಿ ॥ ( ಯಜುರ್ವೇದ ವೀರಲೈಂಗ್ಯೋಪನಿಷತ್ತು )

ಅಂದರೆ ಭಕ್ತಿ, ಆಚಾರಾದಿ ಅರ್ಹತೆಯುಳ್ಳ ಚತುರ್ವರ್ಣದವರೂ ವಿಧಿವತ್ತಾಗಿ ಲಿಂಗದೀಕ್ಷೆಗೆ ಅಧಿಕಾರಿಗಳೆನಿಸುವರು. ಲಿಂಗಧಾರಣೆಯಿಂದ ಪಾಪಾದಿ ಅನಂತ ಪಾಪಗಳು ನಶಿಸಿ, ಪವಿತ್ರಾತ್ಮರಾಗಿ,

॥ ಕ್ಷಿಪ್ರಂಭವತಿ ಧರ್ಮಾತ್ಮಾ ॥ ನೀತಿವಂತರಾಗುವರು.

ಶುದ್ಧಾಂತಃಕರಣವೆಂಬ, ದರ್ಪಣದಲ್ಲಿ ಆತ್ಮಬಿಂಬ ಪ್ರತಿಫಲಿಸುವುದು.

॥ ಯದ್ವತ್ ರಾಗದ್ವೇಶಾದಿ ಮಲದೂಷಿತ ಚಿತ್ತೆ ಆತ್ಮ ನ
ಪ್ರತಿಫಲತಿ । ಕಿಂತು ನಿರ್ಮಲೇ ಮುಕುರೇ । ತದ್ವತ್‌ರಾಗದ್ವೇಶಾದಿ
ಮಲ ರಹಿತೇ ಶುದ್ಧೇಚಿತ್ತೇ । ಆತ್ಮ ಪ್ರತಿಫಲತೀ ॥

ಧೂಳಿನ ಕನ್ನಡಿಯಲ್ಲಿ ಮುಖ ಕಾಣುವುದಿಲ್ಲ. ನಿರ್ಮಲವಾದ ಕನ್ನಡಿಯಲ್ಲಿ ಮುಖ ಕಾಣುವಹಾಗೆ, ರಾಗದ್ವೇಶಾದಿಗಳಿಲ್ಲದ ಶುದ್ಧಚಿತ್ತದಲ್ಲಿ ಆತ್ಮ ಸ್ಪಷ್ಟವಾಗಿ ಕಾಣುತ್ತೆಂದು ಶ್ರೀ ಜ॥ ರೇಣುಕ ಮಹಾಚಾರ್ಯರು ಅಪ್ಪಣೆ ಕೊಡಿಸಿರುವರು.

॥ ಮೋಕ್ಷಸಾಧನ ಸಾಮಗ್ರ್ಯಾಂ ಭಕ್ತಿರೇವ ಗರೀಯಸಿ ।
ಸ್ವ ಸ್ವರೂಪಾನು ಸಂಧಾನಂ । ಭಕ್ತಿರಿತ್ಯಭಿಧೀಯತೇ ॥

(ಶ್ರೀ ಶಂಕರಾಚಾರ್ಯರು)

ಅಕ್ಷಯನಾಮ ಸಂವತ್ಸರ ಚೈತ್ರ ಪ್ರತಿಪದ
ಯುಗಾದಿ ಹಬ್ಬದಂದು ದಿನಾಂಕ 10-4-1986
ರಂದು ಈ ಗ್ರಂಥ ಬಿಲ್ವ ಪೂರ್ಣಗೊಂಡಿತು.

ಟಿ. ಬಿ. ಬಸವರಾಜಯ್ಯ

॥ ಶಿವಂ ಭೂಯಾತ್ ಶಿವಂ ಭೂಯಾತ್ ॥

ಡಾ. ಎಂ. ಶಿವಕುಮಾರಸ್ವಾಮಿ, M.A.Ph.D,
Prof. Head of Sanscrit Department
Residence ;
"Sri RENUKA"
No. 88, III Cross, 9th Main,
R.P.C. Lay-out,
Bangalore-560 040

Jnana Bharathi
Univercity
Bangalore-56
31-3-1986

# ಮುನ್ನುಡಿ

" ಶ್ರೀ ಶಂಕರರಿಗೆ ದತ್ತವಾದ ಶ್ರೀ ಚಂದ್ರಮೌಳೀಶ್ವರ ಲಿಂಗ " ಎಂಬ ಗ್ರಂಥದ ಮುದ್ರಿತ ಪ್ರತಿಯನ್ನು ಅದರ ಕರ್ತೃಗಳಾದ ಶ್ರೀ ಟಿ. ಬಿ. ಬಸವರಾಜಯ್ಯ ನವರು ಕಳಿಸಿ ಅದಕ್ಕೊಂದು ಮುನ್ನುಡಿಯನ್ನು ಬರೆಯಬೇಕೆಂದು ನನ್ನನ್ನು ಕೇಳಿದ್ದರು. ಅದು ಅವರು ನನ್ನ ಬಗ್ಗೆ ಇಟ್ಟುಕೊಂಡ ಅಭಿಮಾನವನ್ನು ವ್ಯಕ್ತ ಗೊಳಿಸುತ್ತದೆ. ಅದಕ್ಕೆ ನಾನು ಅವರಿಗೆ ಕೃತಜ್ಞನಾಗಿದ್ದೇನೆ. ತಮ್ಮ ಎಂಬತ್ತನೆ ವಯಸ್ಸಿನ ಇಳಿಗಾಲದಲ್ಲಿಯೂ ಕೂಡ ವಿಚಾರದಲ್ಲಿ ಪಟುತ್ವವನ್ನು ಕಾಪಾಡಿಕೊಂಡು, ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರಿಂದ ಸ್ಥಾಪಿತವಾದ ವೀರಶೈವ ಪರಂಪರೆಗೆ ತಮ್ಮ ಧಾರ್ಮಿಕ ಅಧ್ಯಯನದ ಕೊಡುಗೆಯನ್ನು ನೀಡುತ್ತಿರುವುದು ಅವರ ಧರ್ಮ ಶ್ರದ್ಧೆಯನ್ನೂ ಅನನ್ಯ ಸದೃಶವಾದ ತ್ಯಾಗವನ್ನೂ ತೋರಿಸುತ್ತದೆ. ಈ ಕಾರ್ಯಕ್ಕೆ ತಮ್ಮ ಜೀವನವನ್ನೇ ಮುಡುಪಾಗಿ ಇಟ್ಟಿರುವುದಲ್ಲದೆ ಗ್ರಂಥ ಪ್ರಕಟನೆಗೆ ಸಹಸ್ರಾರು ರೂಪಾಯಿಗಳನ್ನು ಖರ್ಚು ಮಾಡಿದ್ದಾರೆ. ಇದಕ್ಕೆ ನನ್ನ ಹಾರ್ದಿಕ ಮೆಚ್ಚುಗೆಯನ್ನು ಈ ಮೂಲಕ ಸೂಚಿಸುತ್ತಿದ್ದೇನೆ. ಅವರಿಗೆ ನನ್ನ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇನೆ.

ಶ್ರೀ ಟಿ. ಬಿ. ಬಸವರಾಜಯ್ಯನವರ ಸಂಶೋಧನೆಯ ಉದ್ದೇಶ ಮತ್ತು ವ್ಯಾಪ್ತಿಗಳು ಅವರ ಗ್ರಂಥದಿಂದಲೇ ವ್ಯಕ್ತವಾಗುತ್ತವೆ. ಗ್ರಂಥವು ಸಮಗ್ರವಾಗಿ ವಿದ್ವಾಂಸರ ಮುಂದಿದೆ. ಅದರ ವಿಷಯದಲ್ಲಿ ವಿದ್ವಾಂಸರ ಮುಕ್ತ ಅಭಿಪ್ರಾಯ ಗಳಿಗೆ ಅವಕಾಶವಿದೆ. ಇನ್ನೂರ ನಲವತ್ತೆರಡು ಪುಟಗಳೊಂದಿಗೆ ಎಪ್ಪತ್ತೆರಡು ಪುಟ ಗಳ ಭೂಮಿಕೆಯುಳ್ಳ ಮೂವತ್ತು ಅಧ್ಯಾಯಗಳನ್ನೊಳಗೊಂಡ ಈ ಗ್ರಂಥದಲ್ಲಿ

ಭಾವುಕ ಭಕ್ತರಿಗೆ, ವಿದ್ವಾಂಸರಿಗೆ, ಸಂಶೋಧಕರಿಗೆ, ಎಲ್ಲರಿಗೂ ಪರಿಶೀಲನ ಯೋಗ್ಯವಾಪಸ ಸಾಮಗ್ರಿಯಿದೆ. ಮುಖ್ಯವಾಗಿ ಶ್ರೀ ಜಗದ್ಗುರು ರೇವಣ ಸಿದ್ಧರು ಶ್ರೀ ಶಂಕರಾಚಾರ್ಯರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಮತ್ತು ಶ್ರೀ ರತ್ನಗರ್ಭ ಗಣಪತಿಯನ್ನು ಅನುಗ್ರಹಿಸಿದರು ಎಂಬ ವಿಷಯದಲ್ಲಿ ಉಪಲಬ್ಧ ವಾದ ಆಧಾರಗಳನ್ನು ಕೊಟ್ಟು ಪ್ರತಿಪಾದನೆ ಮಾಡಿರುವುದು ವಿದ್ವಾಂಸರಿಗೆ ಮತ್ತು ಸಂಶೋಧಕರಿಗೆ ಗಮನಾರ್ಹವಾದ ವಿಷಯ. ವೀರಶೈವ ಪರಂಪರೆಯಲ್ಲಿ ಶ್ರೀ ರೇಣುಕವಿಜಯ ಮಹಾಪುರಾಣ, ಶಿವತತ್ತ್ವರತ್ನಾಕರ, ಮುಂತಾದ ಗ್ರಂಥಗಳ ಆಧಾರಗಳಿಂದ ಶ್ರೀ ಜಗದ್ಗುರು ರೇಣುಕಾಚಾರ್ಯರು ಶ್ರೀ ಶಂಕರಾ ಚಾರ್ಯರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿದರು ಎಂಬ ಐತಿಹ್ಯವು ಪ್ರಚಾರದಲ್ಲಿತ್ತು. ಆ ಐತಿಹ್ಯಕ್ಕೆ ಶ್ರೀ ಟಿ.ಬಿ. ಬಸವರಾಜಯ್ಯನವರು ಶ್ರೀ ಶಂಕರಾ ಚಾರ್ಯ ಪರಂಪರೆಗೆ ಸೇರಿದ ಗ್ರಂಥಗಳಿಂದ ಆಧಾರಗಳನ್ನು ಸಂಗ್ರಹಿಸಿಕೊಟ್ಟು ಸಂಶೋಧನೆಯ ಹೊಸ ಆಯಾಮವನ್ನು ತೆರೆದಿದ್ದಾರೆ. ಶ್ರೀ ಶೃಂಗೇರಿ ಶಾರದಾ ಪೀಠದ ಅಧ್ಯಕ್ಷರಾಗಿದ್ದ ಶ್ರೀ ಸಚ್ಚಿದಾನಂದ ಭಾರತಿ ಸ್ವಾಮಿಗಳ (ಕ್ರಿ. ಶ. 1706-1741) ಆಜ್ಞೆಯಂತೆ ಶ್ರೀ ಕಾಶಿ ಲಕ್ಷ್ಮಣಶಾಸ್ತ್ರಿಗಳು ಕ್ರಿ.ಶ. 1730 ರಲ್ಲಿ ರಚಿಸಿದ " ಶ್ರೀ ಗುರುವಂಶಕಾವ್ಯ " ದಲ್ಲಿ ಇದರ ಬಗ್ಗೆ ಸ್ಪಷ್ಟವಾದ ಉಲ್ಲೇಖವಿದೆ. ಪ್ರಸ್ತುತ ಗ್ರಂಥದ 171 ಮತ್ತು 177 ನೇ ಪುಟಗಳಲ್ಲಿ ಶ್ರೀ ಗುರುವಂಶ ಕಾವ್ಯದ ಮೂರನೇ ಸರ್ಗದ 33 ಮತ್ತು 34 ನೇ ಶ್ಲೋಕಗಳನ್ನು ಯಥಾವತ್ತಾಗಿ ಉದಾ ಹರಿಸಿದ್ದಾರೆ. "ಶ್ರೀ ಚಂದ್ರಮೌಳೀಶ್ವರ ಲಿಂಗ ಮತ್ತು ರತ್ನಗರ್ಭ ಗಣಪತಿ" ಗಳು ಶ್ರೀ ಶಂಕರಾಚಾರ್ಯರಿಗೆ " ಸುಸಿದ್ಧದತ್ತ " ವಾಗಿದ್ದವು. ಅವುಗಳನ್ನು ಶ್ರೀ ಶಂಕರರು ತಮ್ಮ ಶಿಷ್ಯರಾದ ಶ್ರೀ ಸುರೇಶ್ವರಾಚಾರ್ಯರಿಗೆ ಕೊಟ್ಟು ಪೂಜಿಸಲು ಆಜ್ಞಾಪಿಸಿ ಕಾಂಚೀನಗರಕ್ಕೆ ತೆರಳಿದರು"– ಇದು ಆ ಶ್ಲೋಕಗಳಲ್ಲಿ ಬರುವ ವಿಷಯ. "ಸುಸಿದ್ಧದತ್ತಂ" ಎಂಬ ಪದಕ್ಕೆ ಶ್ರೀ ಲಕ್ಷ್ಮಣ ಶಾಸ್ತ್ರಿಗಳೇ ಸ್ವೋಪಜ್ಞ ವ್ಯಾಖ್ಯಾನ ದಲ್ಲಿ " ಸುಸಿದ್ಧೇನ ರೇವಣಸಿದ್ಧ ಮಹಾಯೋಗಿನಾ ದತ್ತಂ ಶ್ರೀ ಚಂದ್ರಮೌಳೀಶ್ವರ ಲಿಂಗಂ ಸದ್ರತ್ನ ಮಾಣಿಕ್ಯಂ ಗರ್ಭೇ ಯಸ್ಯ ಸಃ ತಥೋಕ್ತಸ್ತಂ ಗಣನಾಯಕಂ, ವಿಘ್ನೇಶ್ವರಂ ಚ ।"– ಹೀಗೆ ಸ್ಪಷ್ಟವಾಗಿ ಶ್ರೀ ರೇವಣಸಿದ್ಧರ ಹೆಸರನ್ನು ಉಲ್ಲೇಖಿಸಿ, ಅವರೇ ಶ್ರೀ ಶಂಕರರಿಗೆ ಅವುಗಳನ್ನು ಅನುಗ್ರಹಿಸಿದರು ಎಂದು ಹೇಳಿದ್ದಾರೆ. ಶ್ರೀ ಚಿತ್ಸುಖಾಚಾರ್ಯರ ಶ್ರೀ ಬೃಹತ್ ಶಂಕರವಿಜಯ, ಶ್ರೀ ವಿದ್ಯಾರಣ್ಯರ ಪಿತಾ ಮಹ ಸಂಹಿತೆ ಮತ್ತು ಶ್ರೀ ಭಾರತಿ ಕೃಷ್ಣಯತಿಗಳ "ವಿದ್ಯಾರಣ್ಯಕೃತಿ" ಎಂಬ ಗ್ರಂಥಗಳಲ್ಲಿ ಶ್ರೀ ರೇಣುಕರಿಂದ ಶ್ರೀ ಶಂಕರರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗ ಪ್ರಧಾನದ ವಿಷಯವು ಬಂದಿದೆಯೆಂದು ಶ್ರೀ ಶಿವತತ್ತ್ವ ರತ್ನಾಕರದಲ್ಲಿ ಹೇಳಿರು ವುದೂ ಮುಖ್ಯವಾದ ಆಧಾರವಾಗಿದೆ. ಇತ್ತೀಚಿನ ಶ್ರೀ ಗುರುವಂಶಕಾವ್ಯದ

ಆವೃತ್ತಿಯಲ್ಲಿ ಸ್ವೋಪಜ್ಞ ವ್ಯಾಖ್ಯಾನದ ಭಾಗವನ್ನು ಬಿಟ್ಟಿದ್ದರೂ 'ಸು ಸಿದ್ಧವರ್ತ್ಮ' ಎಂಬ ಮೂಲದ ಪಾಠ ಹಾಗೆಯೇ ಇದೆ. ಅದಕ್ಕೆ ಶ್ರೀ ಗೋವಿಂದ ಭಗವತ್ಪಾದರ ಪರವಾದ ಅರ್ಥವನ್ನು ಕೊಡುವ ಪ್ರಯತ್ನವೂ ನಡೆದಿದೆ. ರೇವಣಸಿದ್ಧ ಎಂಬು ದಕ್ಕೂ ಅದೇ ಅರ್ಥವನ್ನು ಕೊಡುವ ಯತ್ನವೂ ನಡೆದಿದೆ. ಶ್ರೀ ಕೆ. ಆರ್. ವೆಂಕಟರಾಮನ್ ಅವರು ಹೇಗೆ ಈಪ್ರಯತ್ನ ಮಾಡಿದ್ದಾರೆಂಬುದನ್ನು ಶ್ರೀ ಟಿ. ಬಿ. ಬಸವರಾಜಯ್ಯನವರು ತಮ್ಮ ಗ್ರಂಥದಲ್ಲಿ ತೋರಿಸಿದ್ದಾರೆ. (ಗ್ರಂಥದ 166 ನೇ ಪುಟವನ್ನು ನೋಡಿರಿ). ಈ ಪ್ರಯತ್ನವಂತೂ ಸ್ಪಷ್ಟವಾಗಿ ಶ್ರೀ ಕಾಶಿ ಲಕ್ಷ್ಮಣಶಾಸ್ತ್ರಿ ಗಳ ಆಶಯಕ್ಕೆ ವಿರುದ್ಧವಾಗಿದೆ. ಶ್ರೀ ಶಾ ಸ್ತ್ರಿ ಗ ಳು ಐತಿಹ್ಯವನ್ನು ಯಾವ ಅಸ್ಪಷ್ಟತೆಗೂ ಎಡೆಯಿಲ್ಲದಂತೆ ನಿರೂಪಿಸಿದ್ದಾರೆ. ಅವರು ಹೆಸರಿಸಿದ "ಸು ಸಿದ್ಧ"ರು ರೇವಣಸಿದ್ಧರೇ ಹೊರತು ಗೋವಿಂದ ಭಗವತ್ಪಾದರಾಗುವುದು ಸಾಧ್ಯವೇ ಇಲ್ಲ. ಈ ವಿಷಯಕ್ಕೆ ಉಪೋದ್ಬಲಕವಾಗಿ ಬಸವ ಭೂಪಾಲನ ಶಿವತತ್ತ್ವ ರತ್ನಾಕರದಲ್ಲಿನ 12ನೇ ತರಂಗದಲ್ಲಿ ಬರುವ ವಿದ್ಯಾರಣ್ಯರ ಕಥೆಯಲ್ಲಿ 9 ಮತ್ತು 10 ನೇ ಶ್ಲೋಕ ಗಳಲ್ಲಿ ಶ್ರೀ ಶಂಕರಾಚಾರ್ಯರು ಶ್ರೀ ರೇವಣಸಿದ್ಧ ಸಂಪ್ರದಾಯ ಪ್ರವೃತ್ತರಾಗಿದ್ದ ರೆಂಬುದು ಸ್ಪಷ್ಟವಾಗಿ ನಿರೂಪಿತವಾಗಿದೆ. ಈ ವಿಷಯುವನ್ನು ಶಿವತತ್ತ್ವರತ್ನಾಕರದ ಮದ್ರಾಸ್ ಗೌರ್ನಮೆಂಟ್ ಓರಿಯೆಂಟಲ್ ಲೈಬ್ರರಿಯಿಂದ ಪ್ರಕಟಿತವಾದ ಆವೃತ್ತಿಗೆ ಆಂಗ್ಲ ಭಾಷೆಯಲ್ಲಿ ಪ್ರಸ್ತಾವನೆಯನ್ನು ಬರೆದ ಶ್ರೀ ಎಚ್. ಕೃಷ್ಣಶಾಸ್ತ್ರಿಯರ್ ಅವರು ವಿದ್ವಾಂಸರ ಗಮನಕ್ಕೆ ತಂದಿದ್ದಾರೆ. ಪ್ರಸ್ತುತ ಗ್ರಂಥದ 179 ನೇ ಪುಟದಲ್ಲಿ ಉಲ್ಲಿ ಖಿತವಾದ ಅವರ ಅಭಿಪ್ರಾಯವನ್ನು ನೋಡಬಹುದು.

ಈ ಎಲ್ಲಾ ವಿಷಯಗಳು ಮುಂದಿರುವಾಗ ವಿದ್ವಾಂಸರ ಸಂಶೋಧನೆ "ಸುಸಿದ್ಧ", "ರೇವಣಸಿದ್ಧ" ಎಂಬ ಶಬ್ದಗಳನ್ನು ಶ್ರೀ ಗೋವಿಂದ ಭಗವತ್ಪಾದರ ಪರವಾಗಿ ಜಗ್ಗಾಡಿ ಅರ್ಥಮಾಡುವ ದಿಸೆಯಲ್ಲಿ ಸಾಗಿದ್ದು ದುರದೃಷ್ಟಕರ. ಆ ಸಂಶೋಧನೆಯು ಶ್ರೀ ಕಾಶಿ ಲಕ್ಷ್ಮಣಶಾಸ್ತ್ರಿಗಳಿಗೆ ಆ ಐತಿಹ್ಯವು ಯಾವ ಮೂಲದಿಂದ ದೊರೆಯಿತು ಎಂಬ ಕಡೆಗೆ ಸಾಗಬೇಕಾಗಿತ್ತು. ಆ ದಿಶೆಯಲ್ಲಿ ಕೂಡ ಶಿವತತ್ತ್ವ ರತ್ನಾಕರವೆಂಬ ವೀರಶೈವ ಭೂಪಾಲನ ಕೃತಿಯ ಕಡೆಗೆ ಬೊಟ್ಟುಮಾಡಿ ತೋರಿಸಿ ಸುಮ್ಮನಾಗುವುದು ಸರಿಯಾಗಲಾರದು. ಏಕೆಂದರೆ ಶೃಂಗೇರಿ ಪೀಠದ ಪರಂಪರೆಯ ಗ್ರಂಥಗಳಲ್ಲಿ, ಬೃಹಚ್ಛಂಕರ ವಿಜಯ, ಪಿತಾಮಹ ಸಂಹಿತೆ ಮುಂತಾದುವುಗಳಲ್ಲಿ ಇಲ್ಲದ ಐತಿಹ್ಯವನ್ನು ಕೇವಲ ಶಿವತತ್ತ್ವರತ್ನಾಕರದ ಆಧಾರದ ಮೇಲೆ ಶ್ರೀ ಕಾಶಿ ಲಕ್ಷ್ಮಣಶಾಸ್ತ್ರಿಗಳು ನಿರೂಪಿಸಿರಲಾರರು. ಸಂಶೋಧನೆಯು ಈ ದಿಶೆಯಲ್ಲಿ ಸಾಗಿದರೆ ಈ ಐತಿಹ್ಯದ ಮೂಲವನ್ನು ಕಂಡುಕೊಳ್ಳಲು ಸಾಧ್ಯವಾಗಬಹುದು. ಹೀಗೆ ಶ್ರೀ ಟಿ. ಬಿ. ಬಸವರಾಜಯ್ಯನವರು ಸಂಶೋಧನೆಗೆ ಸಾಕಷ್ಟು ಪ್ರಚೋದನೆಯನ್ನು ಕೊಟ್ಟಿದ್ದಾರೆ ; ಸಾಮಗ್ರಿಯನ್ನೂ ಇತ್ತಿದ್ದಾರೆ.

ಅಲ್ಲದೆ ಶ್ರೀ ಅಗಸ್ತ್ಯರು ಶ್ರೀ ಶಂಕರರಿಗೆ ಆಶೀರ್ವದಿಸಿದ್ದು, ಶ್ರೀ ಶಂಕರರು ವ್ಯಾಸರನ್ನು ಕಾಶಿಯಲ್ಲಿ ಕಂಡದ್ದು, ಇವೇ ಮುಂತಾದ ಐತಿಹಾಸಿಕ ವಿಷಯಗಳಲ್ಲಿ ಪೌರಾಣಿಕ ಅಂಶಗಳು ಸೇರಿಕೊಂಡ ಪರಂಪರೆಯ ಕಥೆಗಳೂ ಈ ಗ್ರಂಥದಲ್ಲಿ ಬಂದಿವೆ. ಶ್ರೀ ಆದಿಶಂಕರರು ಕ್ರಿ. ಪೂ. ದವರು, ಕ್ರಿ. ಶ. ಎಂಟನೆಯ ಶತಮಾನದ ಶಂಕರರು ಅಭಿನವಶಂಕರರು, ಮುಂತಾದ ಕಾಲವಿಷಯಕವಾದ ನಿರ್ಣಯಗಳು, ಹಾಗೂ ಶ್ರೀ ರಂಭಾಪುರಿ, ಶ್ರೀ ಶೃಂಗೇರಿ, ಶ್ರೀಕಂಚಿ ಕಾಮಕೋಟಿ ಪೀಠಗಳ ಗುರುಪರಂಪರೆಗಳು, ಮುಂತಾದವು ವಿದ್ವಾಂಸರಿಗೆ ವಿಮರ್ಶಿಸಲು ಪ್ರಚೋದನೆ ನೀಡುತ್ತವೆ. ಇತಿಹಾಸ ಮತ್ತು ಪುರಾಣಗಳಿಗೆ ಭೇದವನ್ನು ಮಾಡದೆ ಸಮ್ಮಿಳಿತಗೊಳಿಸುವ ಭಾರತೀಯ ಧಾರ್ಮಿಕ ಪರಂಪರೆಗಳಲ್ಲಿ ಮಹಾನುಭಾವರ ಜೀವನದ ಘಟನೆಗಳ ಬಗ್ಗೆ, ಕಾಲದ ಬಗ್ಗೆ ನಿರ್ಣಯಿಸುವುದು ಅತ್ಯಂತ ಕ್ಲಿಷ್ಟವಾದ ಸಮಸ್ಯೆ.

ಇಷ್ಟು ವಿಚಾರಗಳನ್ನು ಮುಂದಿಡಲು ಅವಕಾಶ ಮಾಡಿಕೊಟ್ಟ ಶ್ರೀ ಟಿ. ಬಿ. ಬಸವರಾಜಯ್ಯ ಅವರಿಗೆ ಮತ್ತೊಮ್ಮೆ ಕೃತಜ್ಞತೆಗಳನ್ನು ಸಲ್ಲಿಸಿ ನನ್ನ ಮುನ್ನುಡಿಯನ್ನು ಮುಗಿಸುತ್ತೇನೆ.

ಬೆಂಗಳೂರು
31–3–1986

ಡಾ. ಎಂ. ಶಿವಕುಮಾರಸ್ವಾಮಿ
ಪ್ರಾಧ್ಯಾಪಕ ಮತ್ತು ವಿಭಾಗಾಧ್ಯಕ್ಷರು
ಸ್ನಾತಕೋತ್ತರ ಸಂಸ್ಕೃತ ವಿಭಾಗ
ಬೆಂಗಳೂರು ವಿಶ್ವ ವಿದ್ಯಾಲಯ
ಬೆಂಗಳೂರು–560 056

—o—o—o—

॥ ಆವ ಜನ್ಮದ ಪುಣ್ಯ ಫಲವೋ । ಲಿಂಗ ಪೂಜಾನುಭವ ॥
( ಶ್ರೀ ನಿಜಗುಣ ಶಿವಯೋಗಿಗಳು )




# All India Veerasaiva Mahasabha

No. 18, Jayadeva Hostel, Seshadri Road, Bangalore-560 009

Sri J. B. Mallaradhya, M.A., I.A.S. (Retd.)


No. AIVM/4912/76-77 Date 8-9-1976

Dear Sri Basavarajayya,

I was extremely happy to meet you and spend more than two hours of useful discussion. I must admire your Scholarship and deep knowledge of Veerasaiva Philosophy against the background of other systems in India. It Is such a pity that the Heads of Mutts and the prosperous sections of the Community have not utilized your intellectual attainments of a higher order for a good purpose. It is my desire that the great value of **Siddhanta Sikhamani, Shrikara Bhashya** and similar works that throw light on the antiquity of Veerasaivism and the Acharyas should reach the common man and false ideas of the Veerasaivism dispelled at the earliest opportunity. We should stop false propoganda regarding the Origin of Veerasaiva and the Acharyas who are stated to have founded it. Many people would not read books nor have the patience to go through learned treatises on Religion and philosophy. It is restricted only. to a few persons who are interested.

I propose to write to all the Heads of Acharya Peethas to make available to you the full amount of Rs. 30,000/- requested by you for completing the work on hand. It is their work you are doing and it is obligatory on their part to recognize your devoted service in this connection. It is the greatness of Acharyas that you are trying to establish, and reveal

the truth of the Origin of the Veerasaivas and their philosophy. In this sacred task, assistance from every source is necessary. But this unfortunate Community does not think of the future and the need for establishing the sacredness of Veera-saivism. Any single merchant by himself could help you complete the work. But the urge to support a sacred cause like this, is not in evidence. I propose that a meeting of the devotees ofthe Acharyas be convened early and at that mee-ting I wish to impress on the leaders of the Community, the urgency of publishing your valuable books to the best advantage of the Community. The meeting may be held in Mahanthina mutt, Bangalore.

I shall meet you on some Sunday and let you know in advance. I was supremely happy to spend those two hours in my office during which you kept me spellbound with your devotion to a Cause, your scholarly erudition, your manner of presentation of any Dharmic Concept and your spirit of service. May the Almighty bless you with continued health, happiness and peace of mind. I have honestly felt that you are a valuable asset, and the Community should be proud of your contribution and help you achieve your Supreme Mission in life-viz., prove beyond doubt the supremacy of Shivadaitha Siddhanta.

With all good wishes and kindest regards,

Yours sincerely.
J.B. Mallaradhya,
President,
A. I. V. Mahasabha,
Bangalore-9

Sri T.B. Basavarajayya,
38, Netaji Road,
Frezer Town,
Bangalore-5

Sri Mahanthana matt, Room No. 19,
Chickpet, Bangalore-53



॥ ಶಂಭೋ ಮೂರ್ತಿಶ್ಚರತಿ ತ್ರಿ ಭುವನೇ
ಶ್ರೀ ಜ॥ ರೇಣುಕಾಚಾರ್ಯ ರೂಪಾ ॥

ಸತ್ಯಂ ವದ – ಧರ್ಮಂ ಚರ

॥ ಮಾತೃ ದೇವೋ ಭವ ॥
॥ ಸತ್ಯಮೇವೋದ್ಧರಾಮ್ಯ ಹಂ ॥

ಶ್ರೀ ಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ
ಶ್ರೀ ೧೦೦೮ ಜಗದಾದಿ ಪರಮ ಜಗದ್ಗುರು
ಶ್ರೀ ಶ್ರೀ ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯ
ದೇಶಿಕೇಂದ್ರರಿಂದ– —

ಶ್ರೀ ಶೃಂಗೇರಿ ಶ್ರೀ ಶಾರದಾ ಪೀಠಾಧ್ಯಕ್ಷರೂ ಹಾಗೂ
ಅದ್ವೈತ ಮತಸಿದ್ಧಾಂತ ಸಂಸ್ಥಾಪನಾ ಚಾರ್ಯ ವರ್ಯರಾದ
ಆದಿ ಶ್ರೀ ಶಂಕರಾಚಾರ್ಯರಿಗೆ ದತ್ತವಾದ
ಶ್ರೀ ರತ್ನಗರ್ಭ ಗಣಪತಿ ಮತ್ತು ಶ್ರೀ ಚಂದ್ರಮೌಳೀಶ್ವರ
ಲಿಂಗದ ಸಂಪತ್ಭರಿತವಾದ ಸತ್ಯ ಸುಂದರ
ನಿತ್ಯ ನೂತನ ದಿವ್ಯ ಕೃತಿ ರತ್ನ


ಆಧ್ಯಾತ್ಮಿಕ ಶಿರೋರತ್ನ–ಮಹಾಚಾರ್ಯ ತತ್ವ ಪ್ರಸಾರಕ
ಟಿ. ಬಿ. ಬಸವರಾಜಯ್ಯ
ವಿರಚಿತ.
ಶ್ರೀ ಮಹಂತಿನ ಮಠ, ಚಿಕ್ಕಪೇಟೆ, ಬೆಂಗಳೂರು-53



1985

(1000 ಪ್ರತಿಗಳು)


॥ ಯತ್ಸಾರ ಭೂತಂ ತದುಪಾಸಿತವ್ಯಂ ॥
"ಓಂ ತ್ವಂ ತದಸಿ"


ಬೆಲೆ : ರೂ. 25-00

"ಸತ್ಯಂ ಜ್ಞಾನ ಮನಂತಂ ಬ್ರಹ್ಮ"

ಸತ್ಯಂ ವದ ಇತಿವೇದಃ ಸತ್ಯವನ್ನೇ ನುಡಿ

ಅಥಾತೋ ಬ್ರಹ್ಮ ಜಿಜ್ಞಾಸ

God is Truth. Truth Supreme is God Almighty

ಸತ್ಯಮೇಕ ಪದಂ ಬ್ರಹ್ಮ ।
ಸತ್ಯೇ ಧರ್ಮ ಪ್ರತಿಷ್ಠಿತಃ ॥
ಸತ್ಯ ಮೂಲಾನಿ ಸರ್ವಾಣಿ ।
ಸತ್ಯಾನ್ನಾಸ್ತಿ ಪರಂಪದಂ

ಸತ್ಯದ ಹೃದಯದಲ್ಲಿ ಧರ್ಮವು ಪ್ರತಿಷ್ಠಿತವಾಗಿದೆ,
ಸತ್ಯ ಧರ್ಮಗಳು ಒಂದು ನಾಣ್ಯದ ಎರಡು ಮುಖಗಳು,
ಈ ನಾಣ್ಯ ಎಲ್ಲ ಕಾಲಕ್ಕೂ ಎಲ್ಲಾ ಲೋಕಗಳಲ್ಲೂ ಮಾನ್ಯತೆ ಉಳ್ಳದ್ದು.

ಸತ್ಯಂ ಮಾತಾ ಪಿತಾ ಜ್ಞಾನಂ ।
ಧರ್ಮೋ ಭ್ರಾತಾ ದಯಾ ಸಖಾ ।
ಶಾನ್ತಿ: ಪತ್ನೀ ಕ್ಷಮಾ ಪುತ್ರಃ ।
ಷಡ್ಯೈತೇ ಮಮ ಬಾಂಧವಾಃ ॥

(ಧರ್ಮರಾಜನ ಉಕ್ತಿ. ಮಹಾ ಭಾರತ ವನಪರ್ವ)

॥ ಸತ್ಯಂ ಭ್ರೂಯಾತ್ ಹಿತಂ ಭ್ರೂಯಾತ್
ನ ಭ್ರೂಯಾತ್ ಸತ್ಯಮಪ್ರಿಯಂ ॥

॥ ನುಡಿಗೆ ತಕ್ಕ ನಡೆಯ ಕಂಡರೆ । ಕೂಡಲ ಸಂಗಮ ದೇವ
ತನ್ನೊಳಗಿಪ್ಪನಯ್ಯಾ ॥

(ಬಸವಣ್ಣ)

॥ ಸತ್ಯವೇ ತಾಯಿ–ತಂದೆಯು ।
ಸತ್ಯವೇ ಬಂಧು ಬಳಗವು ॥
ಸತ್ಯವಾಕ್ಯಕೆ ತಪ್ಪಿ ನಡೆದರೆ ।
ಮೆಚ್ಚನಾ ಜಗದೀಶನು ॥

(ಪುಣ್ಯಕೋಟಿ ಎಂಬ ಗೋಮಾತೆ)

ಸತ್ಯಕ್ಕೆ ಇರುವುಹು ರಾಜ ಮಾರ್ಗ ವಂದೇ.
ವಂದೇ ಮಾತು, ಒಂದೇ ಮುಖ, ವಂದೇ ನಾಲಿಗೆ

ಸತ್ಯವೆಂಬುದು "ಸತ್ಯಂ ಜ್ಞಾನ ಮನಂತಂ ಬ್ರಹ್ಮ" ಎಂಬ ಉಪನಿಷದ್ವಾಣಿಯಂತೆ, ಭಗವಂತನ ನೈಜ ಸ್ವರೂಪ. ಈ ಧರಣಿಯಲ್ಲಿ ಯಶಸ್ವಿಯಾಗಿ ಉಜ್ಜೀವಿಸಲು ಸತ್ಯವೇ ಜೀವನದ ಅಖಂಡ ಜೀವಾಳ. ಸತ್ಯಕ್ಕೆ ಚ್ಯುತಿಯಿಲ್ಲ, ವಿಕಾರವೂಇಲ್ಲ. ಸತ್ಯ ತ್ರಿಕಾಲಾಬಾಧ್ಯವಾಪುದು.

ನುಡಿದಂತೆ ನಡೆ, ನಡೆದಂತೆ ನುಡಿ ; "ನುಡಿದಂತೆ ನಡೆ ಇದೇ ಜನ್ಮ ಕಡೆ"

ನುಡಿ ನಡೆ ಮನ ಈ ಮೂರೂ ಬಾಹ್ಯಾಭ್ಯಂತರಂಗಗಳಲ್ಲಿ ವಂದಾದಾಗ, ಮಾತೇ ಮಾಣಿಕ್ಯವೆನಿಸುವುದು. ಅಲ್ಲಿಂದ ಮುಂದೆ ಬಂಗಾರಕ್ಕೆ ಪುಟವಿಟ್ಟಂತೆ ಮಾತೇ ಜ್ಯೋತಿರ್ಲಿಂಗವಾಗಿ ಪ್ರಜ್ವಲಿಸುವುದು:

ನುಡಿ ನಡೆ ಇವೆರಡೂ ಶ್ರೀ ಮಹಾ ಗುರುವಿನ ಶ್ರೀಪಾದದ್ವಯಂಗಳು. ಮಹಾ ಗುರುವಿನ ಶ್ರೀಪಾದ ಕಮಲಗಳ ಹೆಬ್ಬೆರಳುಗಳ ಅಡಿಯಲ್ಲಿ 86 (ಎಂಭತ್ತಾರು) ಪುಣ್ಯ ನದಿಗಳ ಸಂಗಮ ತೀರ್ಥ ಪ್ರಸನ್ನ ಭಾವದಿಂದ, ಸುಪ್ರಸನ್ನವಿರುವುವೆಂದು ಸಚ್ಛಿಷ್ಯನು ಅರಿಯಬೇಕು. ಮತ್ತು ಶ್ರೀಗುರುವೇ ಜಂಗಮರೂಪದಲ್ಲಿ ವಿಜೃಂಭಿತನಾದಾಗ, ಆತನ ಶ್ರೀಪಾದ ಕಮಲಗಳಡಿಯಲ್ಲಿ ಸಪ್ತಸಾಗರಗಳು ಅದೃಶ್ಯಭಾವದಿಂದ ನೆಲೆಸಿರುವುವೆಂದು ವೇದಾಗಮಗಳು ಸಾರುತ್ತಲಿವೆ. ಇದರಿಂದಾಗಿ

॥ ಶ್ರೀ ಗುರು ಪಾದದ್ವಯಮೇ ದೈವಂ ॥
"ದಿಟವೇ ಪುಣ್ಯದ ಪುಂಜ–ಸಟೆಯೇ ಪಾಪದ ಬೀಜ"

ಮಾತಿನಂತೆ ಮನವಿಲ್ಲದ । ಜಾತಿಡೊಂಬರ ನೋಡಿ ।
ನಗುವ ನಮ್ಮ ಕೂಡಲ ಸಂಗಮದೇವ ॥ (ಬಸವಣ್ಣ)

ಸತ್ಯಂ ಶಿವಂ ಸುಂದರಂ

ಓಂ

ಧರ್ಮಂಚರ (ಇತಿವೇದಃ) ಧರ್ಮವನ್ನಾಚರಿಸಃ

॥ ಅಥಾತೋ ಧರ್ಮ ಜಿಜ್ಞಾಸ ॥

॥ ಧರ್ಮೋ ರಕ್ಷತಿ ರಕ್ಷಿತಃ ॥ ಧರ್ಮೇಣ ಲಭತೇ ಸರ್ವಂ ॥

ಭಗವಂತ "ಧರ್ಮ ಧೃವುನೆನಿಸಿರುವನು" ಈ ವೃಕ್ಷ ಸದೃಢವಾದ ಅಶ್ವತ್ಥ ಮಹಾವೃಕ್ಷ ಆದ್ದರಿಂದ ಇದು ಧೃವ ವೆನಿಸಿರುವುದು.

"ಊರ್ಧ್ವಮೂಲ ಮಧಃ ಶಾಖಂ । ಅಶ್ವತ್ಥಂ ಪ್ರಾಹುರವ್ಯಯಂ"
(ಕಠೋಪನಿಷತ್)

ಅಂದರೆ ಭಗವಂತನು ಅಕ್ಷರವೆನಿಸಿದ ಸದ್ಧರ್ಮರೂಪ ಅಶ್ವತ್ಥ ಮಹಾ ವೃಕ್ಷವಾಗಿ ಊರ್ಧ್ವದಲ್ಲಿ ತನ್ನ ಮೂಲ ಬೇರುಗಳುಳ್ಳವನಾಗಿ ವಿರಾಜಿತ ನಾಗಿಹನು.

"ಸ್ಥಾಪಕಾಯಚ ಧರ್ಮಸ್ಯ । ಸರ್ವ ಧರ್ಮ ಸ್ವರೂಪಿಣೇ ।
ಅವತಾರ ವರಿಷ್ಠಾಯ ಶ್ರೀ ಜಗದ್ಗುರು ರೇಣುಕಾಚಾರ್ಯಾಯ ನಮಃ ॥

॥ ಧರ್ಮಮೇವ ಸಮಸ್ತಾನಾಂ ದುಃಖಾನಾಂ ಶಮನೌಷಧಂ ॥
ತಸ್ಮಾದ್ಧರ್ಮಾಮೃತಂ ಪೀತ್ವಾ । ಸುಖಿನಃ ಸಂತು ಮಾನವಾಃ ॥

ಧರ್ಮ ಎಂದರೆ ॥ ಧಾರಣಾತ್ ಧರ್ಮ ಇತ್ಯಾಹುಃ ॥
॥ ಧರ್ಮೋ ಧಾರಯತಿ ಜಗತಃ ಪ್ರತಿಷ್ಠಾ ॥

ಎಲ್ಲವನ್ನೂ ಸಂಕಲ್ಪ ಮಾತ್ರೇಣ, ಕ್ಷಣಾರ್ಧದಲ್ಲಿ ಸೃಷ್ಠಿಸಿ ॥ ತತ್ಸೃಷ್ಟ್ವಾ ತದೇವಾನು ಪ್ರಾವಿಶತ್ ॥ ಎಂಬಂತೆ ಧರಿಸಿರುವ, "ಸ್ಥಲ" ವಾಚ್ಯ ಪರಶಿವ ಬ್ರಹ್ಮವು ಆದಿಗಾದಿ ಎಂದೆನಿಸಿ ಸದ್ಧರ್ಮ ಸೂತ್ರವೆಂದು ಪ್ರಸಿದ್ಧವಿರುವುದು. ॥ ಸೂತ್ರೇಮಣಿಗಣಾಯಿವ ॥ "ಮಣಿಗಳ ಸೂತ್ರದಂತೆ, ತ್ರಿಣಯನೇ ನೀ ನಿಪ್ಪೆಯಯ್ಯಾ" ಎಂಬ ಉಕ್ತಿಯಂತೆ, ಅಖಿಲ ಲೋಕಂಗಳೂ, ಸುಸೂಕ್ಷ್ಮವಾದ ಧರ್ಮಸೂತ್ರದ ಆಧಾರದ ಮೇಲೆ ಸುಭದ್ರವಾಗಿ ನಿಂತಿವೆ. ಸರ್ವೇಶ್ವರನಾದ ಭಗವಂತನು ಸರ್ವವ್ಯಾಪಿ ಸರ್ವಾಂತರ್ಯಾಮಿಯಲ್ಲವಾ. ?

ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ, ಚತುರ್ವಿಧ ಫಲಪುರುಷಾರ್ಥಗಳನ್ನು ಈ ಜನ್ಮದಲ್ಲೇ ಮಾನವ ಅತ್ಯಾವಶ್ಯಕವಾಗಿ ಸಾಧಿಸಬೇಕು. ಈ ಮಹಾ ಸೂತ್ರದ ಮೊದಲ ತುದಿ ॥ ಧರ್ಮ ಅಂತ್ಯದ ತುದಿ ಮೋಕ್ಷ ॥ ಧರ್ಮ ಮೋಕ್ಷಗಳೆಂಬೀ, ತುದಿ ದ್ವಯಗಳನ್ನು ಒಂದುಗೂಡಿಸಿದಾಗ ಏರ್ಪಡುವ, ವರ್ತುಲಾಕಾರವಾದ ಸುರುಳಿಯಲ್ಲಿ "ಅರ್ಥ ಕಾಮ" ಗಳು ಸ್ವಯಮೇ ಅಂತರ್ಗತವಾಗಿರುವುದರಿಂದ, ಇವು ಸಹ ಮೋಕ್ಷಕ್ಕೆ ಸಾಧನೀಭೂತ ಪರವಸ್ತುಗಳಾಗುವುವು. ಧರ್ಮದ ಉತ್ಕರ್ಶೆಗಾಗಿ ಅರ್ಥ ಕಾಮುಗಳು ವಿಜೃಂಭಣಗೊಳ್ಳುವುವು. ॥ ಧರ್ಮೇಣ ಲಭತೇ ಸರ್ವಂ ॥ ಎಂಬುದು ಸ್ಮರಣೀಯ. ಇಂತಹ ಸದ್ಧರ್ಮಾಚರಣೆಯಿಂದ ಮಾನವ ಮಹಾ ಗುರುವಿನ ಅನುಗ್ರಹ ಬಲದಿಂದ, ॥ ಕ್ಷಿಪ್ರಂ ಭವತಿ ಧರ್ಮಾತ್ಮಾ । ಶಶ್ವ

ಚ್ಛಾಂತಿಂ ನಿಗಚ್ಛತಿ ॥ ಬಹು ಶೀಘ್ರದಲ್ಲಿ ದೇವ ಮಾನವನಾಗುವನು ॥ ಸೂತ್ರಂ ಪುಷ್ಪ ಮಾಲಾನು ಸಂಘೇಣ, ಶಿರಸಾ ಧಾರಯೇತ್ ಸದಾ ॥ ಒಂದು ತುಂಡು ದಾರಕ್ಕೆ ಮಾನ್ಯತೆಯಿಲ್ಲ. ಅದೇ ದಾರದಲ್ಲಿ ಹಲವು ಪುಷ್ಪಗಳನ್ನು ಪೋಣಿಸಿದಾಗ, ಆ ಹಾರ ದೊಂದಿಗೆ ದಾರ ಶಿವನ ಮಸ್ತಕವನ್ನೇರುವುದು. ಅದರಂತೆ ಸತ್ಸಂಘದಿಂದ ಮುಮುಕ್ಷುತ್ವ ಮೋಕ್ಷಾಪೇಕ್ಷೆ ಯೇರ್ಪಡುವುದು.

## —ಧರ್ಮಾಂಚರ ಧರ್ಮವನ್ನು ಆಚರಿಸು—

ಅದರಂತೆ ಸೂತ್ರದಂತಿರುವ ಕೇವಲ "ಅರ್ಥ ಕಾಮ" ಗಳು ಧರ್ಮ ಮೋಕ್ಷ ಗಳೆಂಬ ಪುಷ್ಪಗಳೊಂದಿಗೆ ಬೆರೆತಾಗ, ಅವೂ ಮೋಕ್ಷಕ್ಕೆ ಅಂಗ ಭೂತಗಳೆನಿಸುವುವು. ಸತ್ಯದ ಹೃದಯದಲ್ಲಿ ಧರ್ಮವು ಅಂತರ್ಗತವಾಗಿರುವುದು.

॥ ಸುಖಮಿಚ್ಛಂತಿ ಸರ್ವೇಹಿ । ತಚ್ಚದ್ಧರ್ಮ ಸಮುದ್ಭವಂ ॥

ಆದ್ದರಿಂದ ನಿತ್ಯ ಧರ್ಮಾಚರಣೆಯನ್ನು ಶ್ರದ್ಧಾ ಭಕ್ತಿಗಳಿಂದ ಮುಂದುವರಿಸಿಕೊಂಡು ಹೋದರೆ, ಸುಖ ಶಾಂತಿಗಳನ್ನು ಪಡೆಯಬಹುದು. ಶ್ರೀ ಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ ಮೇಲ್ಕಂಡ ಅಂಶವನ್ನು ಪ್ರತಿಪಾದಿಸುತ್ತಾ, ॥ ಸ್ವಲ್ಪ ಮಪ್ಯಸ್ಯ ಧರ್ಮಸ್ಯ । ತ್ರಾಯತೇ ಮಹತೋ ಭಯಾತ್ ॥ ಎಂದು ಅರುಹಿರುವನು. ಅಂದರೆ ಯಾರು ಸ್ವಧರ್ಮವನ್ನು ಆಚಾರವಂತರಾಗಿ ನಿತ್ಯ ಬಿಡದೆ ಸ್ವಲ್ಪವನ್ನಾದರೂ ಯಥಾ ಶಕ್ತಿ ಆಚರಿಸುವರೋ, ಅಂಥವರು ಭಯಂಕರವಾದ ಜನನ ಮರಣ ರೂಪ ॥ ಪುನರಪಿ ಜನನಂ ಪುನರಪಿ ಮರಣಂ । ಪುನರಪಿ ಜನನೀ ಜಠರೇ ಶಯನಂ ॥ ಎಂಬಂತೆ ಚಕ್ರಾಕಾರವಾಗಿ ಹುಟ್ಟಿಸಾಯುವ ಘೋರ ಸ್ಥಿತಿಯಿಂದ ಉದ್ಧರಿಸಲ್ಪಡುವರೆಂದು ಎಚ್ಚರಿಸಿರುವನು. ಧರ್ಮದಿಂದ ಬಾಳು ಹಸನಾಗುವುದು. ಪೂರ್ವದಲ್ಲಿ ದುರಾ ಚಾರಿಯಾಗಿದ್ದರೂ ಸದ್ಧರ್ಮದ ನೆರಳಿನಲ್ಲಿ ಬಾಳುತ್ತಾ, ಯಥಾಶಕ್ತಿ ಸ್ವಧರ್ಮಾನು ಷ್ಠಾನ ಪರನಾದರೆ—ಕ್ಷಿಪ್ರಂ ಭವತಿ ಧರ್ಮಾತ್ಮಾ । ಶಶ್ವಚ್ಛಾಂತಿಂ ನಿಗಚ್ಛತಿ । ಕೌಂತೇಯ ಪ್ರತಿಜಾನೀಹಿ । ನಮೇ ಭಕ್ತಃ ಪ್ರಣಶ್ಯತಿ ॥ (ಗೀ.ಅ. 9 ಶ್ಲೋ. 31)

ಆತ ಬಹು ಶೀಘ್ರವಾಗಿ ಭಗವಂತನ ಕೃಪೆಗೆ ಪಾತ್ರನಾಗಿ ಧರ್ಮಾತ್ಮನೆನಿಸುವನೆಂದು ಸ್ವಾಮಿ ಸ್ಪಷ್ಟಪಡಿಸಿರುವನು. ಸತ್ಯ ತಂದೆಯಂತೆ ಸನ್ಮಾರ್ಗವನ್ನು ತೋರಿಸಿ ಕೊಟ್ಟರೆ, ಧರ್ಮ ತಾಯಿ ಯಂತೆ ಸದ್ಭಕ್ತನನ್ನು ಸದಾ ರಕ್ಷಿಸುವುದು.

ವಿಶ್ವ ಧರ್ಮದನೆಲೆ ಬಹು ವಿಸ್ತಾರವಾದುದು. ಧರ್ಮವೆಂಬುದು ಭಗವಂತನ ಸಾಕ್ಷಾತ್ ಸ್ವರೂಪವೆಂದರಿಯಬೇಕು. ಸತ್ಯವು ಭಗವಂತನ ಹೊರವೈಯಾದರೆ ಧರ್ಮ ಪರಶಿವನ ಅಂತರಂಗದ ದಿವ್ಯತೇಜಃ ಪುಂಜವೆಂದು ಅರಿಯಬೇಕು. ಭಗವತ್ಪಾದ ಶ್ರೀ ಆದಿ ಜಗದ್ಗುರು ರೇಣುಕಾಚಾರ್ಯರು, ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಆದಿ ಶ್ರೀ ಅಗಸ್ತ್ಯಮುನಿ ಪುಂಗವನನ್ನು ಉದ್ದೇಶಿಸಿ ಧರ್ಮದ ಬಗೆಗೆ ಬೋಧಿಸುತ್ತಾ–

॥ ಅಹಿಂಸಾ ಸತ್ಯ ಮಸ್ತ್ರೈಯಂ ।
ಬ್ರಹ್ಮಚರ್ಯಂ ದಯಾ ಕ್ಷಮಾ ॥
॥ ದಾನಂ, ಪೂಜಾ, ಜಪೋ ಧ್ಯಾನಂ ।
ಇತಿ ಧರ್ಮಸ್ಯ ಸಂಗ್ರಃ ॥

(ಸಿ. ಶಿ. ಅ. 16 ಶ್ಲೋ. 59)

ಎಂದರೆ, ಧರ್ಮ, ಪರಶಿವ ತತ್ವದ, ದಶ ಮುಖಗಳಿಂದ ವಿರಾಜಿಸುವ ವಿರಾಡ್ ರೂಪವೆನಿಸಿದೆ. ಅಹಿಂಸಾ, ಸತ್ಯ, ಕಳವು ಮಾಡದೆ ಇರುವುದು, ಬ್ರಹ್ಮಚರ್ಯವ್ರತ ದಯೆ, ಕ್ಷಮಾ, ದಾನ, ಪೂಜಾ, ಜಪೋ ಧ್ಯಾನ ಈ ಹತ್ತು ಗುಣಗಳು ದೈವೀ ಸಂಪದ್ಭರಿತವಾದ ಕಲ್ಯಾಣ ಗುಣಗಳು. ಯಾವ ಶರಣನು ಈ ದಶದಿವ್ಯ ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಸ್ವಾನುಭೂತಿಯಿಂದ ವಿರಾಜಿಸುವನೋ ಅಂಥವನು "ಬ್ರಹ್ಮವಿತ್, ಬ್ರಹ್ಮೈವ ಭವತಿ" ಪರಶಿವ ಬ್ರಹ್ಮದಲ್ಲಿ ಸಮರಸವನ್ನು ಹೊಂದುವನೆಂದು ಬೋಧಿಸಿರುವರು.

॥ ಧರ್ಮ ವೃದ್ಧಿಸುವುದು ॥ ಓಂ ॥ ಸಂವರ್ಧಿಸುವುದು ॥

ಶ್ರೀ ಗುರುಸ್ತುತಿ

॥ ಓಂ ಕೈಲಾಸಾಧಿಪ ವಕ್ತ್ರ ಸಂಚಕ ।
ಸಮುದ್ಭೂತಾ ಧರಾಭೂತಯೇ ।
ಲಿಂಗೇಭ್ಯೋ ಭುವನಂಗ ತಾಃ ।
ಪರಶಿವಾದ್ವೈತ ಪ್ರತಿಷ್ಠಾಪಕಾಃ ॥ ॥ ೧ ॥
ಪಂಚಾಚಾರ್ಯ ಸುನಾಮಧೇಯು ।
ಮಹಿತಾ ಶ್ರೀಮಜ್ಜಗದ್ದೇಶಿಕಾಃ ॥
ಜೀಯಾಸುಃ ಸ್ಥಲಷಟ್ಕ ವಿಶ್ರುತ ।
ಶಿವಾ ಚಾರೈಕ ಜೀವಾ ತವಃ ॥ ॥ ೨ ॥

॥ ಆವಿರ್ಭೂತಃ ಪ್ರಥಿತ ಮಹಿಮಾ ।
ಕೊಲ್ಲೀಃ ಪಾಕೀಶ ಲಿಂಗಾತ್ ।
ಸೋಮೇಶಾಖ್ಯೆ ಜಗತಿ ವಿದಿತೋ ।
ಶ್ರೀ ರೇಣುಕಾಚಾರ್ಯ ನಾಮ್ನಾ ॥
ರಂಭಾಪುರ್ಯಾಂ ವರಗುರುಮತೇ ।
ವೀರ ಸಿಂಹಾಸನಾಖ್ಯಾಂ ಚಕ್ರೇ ಪೀಠಂ ।
ಜಯತಿ ಗುರು ರಾಡ್ಧರ್ಮ ಸಂರಕ್ಷಣಾಯ ॥ ॥ ೩ ॥

॥ ಶ್ರೀ ಶಂಭುಪಾಲ ನಯನಾನಲ ಸಂಭವಾಯ ।
ದುರ್ದಾಂತ ದಕ್ಷ ಮಖ ವೈಭವ ಸಂಹರಾಯ ।
ಭದ್ರಾತ್ಮನೇ ಭಯಭಿದೇ ಭುಜಸಾರಶಾಲಿ ॥
ಶ್ರೀ ವೀರಭದ್ರ ಗಣಪಾಯ ನಮೋಸ್ತು ತುಭ್ಯಂ ॥ ೪ ॥

॥ ಪ್ರಾತರ್ನಮಾಮಿ ಸತತಂ ಶಿವ ತತ್ವರೂಪಂ ।
ಶ್ರೀಮಜ್ಜಗದ್ಗುರು ದಯಾನಿಧಿ ರೇಣುಕಾರ್ಯಂ ।
ಶ್ರೀ ವೀರಶೈವ ಮತ ಮೂಲ ಮನೇಕಲೀಲಂ ।
ಸೋಮೇಶಲಿಂಗಭವ ಮಾಶ್ರಿತ ಲೋಕಪಾಲಂ ॥ ॥ ೫ ॥

॥ ಪ್ರಾತರ್ವದಾಮಿ ಶುಭನಾಮ, ಜಗದ್ಗುರೂಣಾಂ ।
ಸಾನಂದ ಮುಖ್ಯ ಮುನಿ ಪುಂಗವ ಗೇಯ ಮಾನಂ ।
ಯತ್ಪಾದತೋ ದಿವಿಜ ಮಾನವ ದಾನವಾನಾಂ ।
ಸರ್ವಾಪದಾವಲಿ ರಲಂ, ಪ್ರಶಮಂ ಪ್ರಯಾತಿ ॥ ॥ ೬ ॥

॥ ಯೇ ಪಾರ್ವತೀರಮಣ । ಪಂಚಮುಖಾಬ್ಜಜಾತಾ ।
ಯೈಃ ಸ್ಥಾಪಿತಾ ಭುವಿಮತಂ । ವರವೀರಶೈವಂ ।
ತೇಷಾಮನುಗ್ರಹವಶಾತ್ ಸಕಲೇಷ್ಟಸಿದ್ಧಿ । ರ್ಭೂಯಾದಿತಿ ಪ್ರಥಿತ ।
ಮೇವ ಜಗದ್ಗುರೂಣಾಂ ॥ ॥ ೭ ॥

॥ ಜಯತು ಜಯತು ಲೋಕೆ । ಪಂಚಭಿ ರ್ದೇಶಿಕೇಂದ್ರೈಃ ।
ಪರಮಶಿವ ಮುಖಾಂ ಭೋಜಾತ । ಜಾತೈಃ ಪ್ರವೃತ್ತಂ । ಸಕಲ ವಿಹಿತ ಪಂಚಾಚಾರ
ಸನ್ಮಾರ್ಗನಿಷ್ಠಂ । ಭುವನ ಮಹಿತ ಮೇ ತಚ್ಛಾಂಭವಾದ್ವೈತ ತತ್ವಂ ॥
( ಶ್ರೀ ರಂಭಾಪುರಿ ಲಿಂ॥ ವೀರ ಗಂಗಾಧರ ಮಹಾ ಸನ್ನಿಧಿಯವರಿಂದ ವಿರಚಿತ
ಶ್ರೀ ಗುರುಸ್ತೋತ್ರ )

ಓಂ

ಈಗಿನ ಘಳಿಗೆಗೆ " ಪ್ರಣವೋಪಾಸನೆ " ಅತ್ಯಾವಶ್ಯಕ ವೆನಿಸಿರುವುದು.

" Om Pranavopasana " is the Need of the hour

ಓಂ ಓಂ ಓಂಕಾರಾಯ ನಮೋ ನಮಃ

॥ ಓಂ ಇತ್ಯೇಕಾಕ್ಷರಂ ಬ್ರಹ್ಮ । ನಮಃ ಶಿವಾಯೇತ್ಯಜಾಯತ ॥
(ಯಜುರ್ವೇದ)

**ಓಂ ಪ್ರಣವಾಕಾರ** ನಿಷ್ಕಲ ಪರಶಿವಬ್ರಹ್ಮದಲ್ಲಿ **ನಮಃ ಶಿವಾಯ** ವೆಂಬ ಪಂಚ ಮಹಾ ಬೀಜಾಕ್ಷರಗಳು ಅವ್ಯಕ್ತವಾಗಿ ಅಂತರ್ಗತವಾಗಿರುವುವು. ಪಂಚಾಕ್ಷರ ಮಹಾಮಂತ್ರಕ್ಕೆ ಮೂಲಭೂತವಾದ **ಓಂಕಾರ ಪ್ರಣವ** ದಿಂದ ಸಚ್ಚಿದಾನಂದ ಸ್ವರೂಪನಾದ ಪರಶಿವನು ಪ್ರಕಾಶಿತನಾಗಿಹನು. **ಓಂಕಾರ ಪ್ರಣವ**ದಲ್ಲಿ – ಪಂಚಾಕ್ಷರೀ ಮಹಾಮಂತ್ರದ ಬೀಜಾಕ್ಷರಗಳ ಸ್ವರೂಪ ಮಯೂರಾಂಡರಸ ನ್ಯಾಯದಂತೆ–

॥ ನಕಾರಸ್ತಾರಕಾಕಾರೋ । ಮಕಾರೋ ದಂಡ ಉಚ್ಯತೇ ।
ಶಿಕಾರಃ ಕುಂಡಲಾಕಾರೋ । ವಕಾರಶ್ಚಾರ್ಧಚಂದ್ರಿಕಃ ॥
ಯಕಾರೋ ದರ್ಪಣಾಕಾರೇ । ಓಂಕಾರಃ ಪಂಚವರ್ಣರಾಟ್ ॥

ಎಂಬ ಶಿವಾಗಮೋಕ್ತ ಮಂತ್ರಾನುಸಾರ, **ಓಂಕಾರವು**, ಶಿವ ಪಂಚಾಕ್ಷರೀ ಮಹಾ ಕಲ್ಪವೃಕ್ಷಕ್ಕೆ ಬೀಜ ಭೂತವಾಗಿರುವುದು. ಪ್ರಣವಸಹಿತ ಶಿವ ಪಂಚಾಕ್ಷರೀ ಮಹಾಮಂತ್ರವನ್ನು, ಧ್ಯಾನಯೋಗದಲ್ಲಿ ಮಂಡಿಸಿ, ವಾಚಕ ಉಪಾಂಶು ಮತ್ತು ಮಾನಸಿಕ ವಿಧಾನಗಳಿಂದ ನಿತ್ಯ ಭಕ್ತಿಯಿಂದ ಜಪಿಸಬೇಕು. ಹೀಗೆ ಮಾಡುವುದರಿಂದ ॥ **ಜಪತೋ ನಾಸ್ತಿ ಪಾತಕಾಃ** ॥ ಅಂದರೆ ಬಹುಜನ್ಮ ಪೂರ್ವಕೃತ ಘೋರ ಪಾಪಾದಿ ಪಾಪಗಳ ರಾಶಿ, ಶಿವ ಜ್ಞಾನಾಗ್ನಿಯಿಂದ ದಗ್ಧವಾಗುವುವು. ಆಗ ಭಕ್ತನು ಶುದ್ಧಾಂತಃಕರಣವುಳ್ಳವನಾಗಿ, ತನ್ನ ಹೃನ್ಮಂದಿರದಲ್ಲಿ ಸದಾ ಬೆಳಗುತ್ತಿರುವ ಜ್ಯೋತಿರ್ಮಯ ಪ್ರಾಣಲಿಂಗದ ಸಂದರ್ಶನವನ್ನು ಕಾಣಬಹುದು. ತ್ರಿವಿಧವಾದ ಜಪಗಳಲ್ಲಿ ಮೇಲುಕ್ತವಾದ, ಮಾನಸಿಕವಾಗಿ ನಿತ್ಯವೂ ಶಿವ ಪೂಜಾ ವೇಳೆಯಲ್ಲಿ ಶ್ರದ್ಧಾ ಭಕ್ತಿಗಳಿಂದ 108 ಸಾರಿ ಜಪಿಸುವುದು ಅತ್ಯಂತ ಫಲಪ್ರದವೆನಿಸಿರುವುದು.

**ಪ್ರಣವಮಯ ಓಂಕಾರದಿಂದ,**– ಅನಾದಿ ವೀರಶೈವ ಕಾಲದಲ್ಲಿ ಪ್ರಥಮತ :–

"ಓಂ ರುದ್ರಾಯ ನಮಃ" ಎಂಬ, ರುದ್ರ ಪಂಚಾಕ್ಷರೀ ಮಹಾ ಮಂತ್ರ ಆವಿರ್ಭವಿಸಿತು. ಅನೇಕ ಯುಗಗಳ, ಮನ್ವಂತರಗಳವರವಿಗೂ, ಶ್ರೀ ರುದ್ರ, ಪಂಚಾಕ್ಷರೀ ಮಹಾ ಮಂತ್ರವನ್ನು ಜಪಿಸುವ ರೂಢಿಯಲ್ಲಿತ್ತು. ಅದು ಮಹಾ ರುದ್ರನ ಆಧಿಕ್ಯದ ಕಾಲ. ಕ್ರಮೇಣ ಶ್ರೀ ರುದ್ರನ ಸಂಕಲ್ಪವೋ ಏನೋ ಎಂಬಂತೆ, ಒಮ್ಮೆ ಮಹಾ ರುದ್ರನ ಸಹಸ್ರ ಅಂಶಗಳಲ್ಲಿ ಒಂದು ಮಹತ್ವಪೂರ್ಣವಾದ ಚಿತ್ಕಳಾಂಶ ತೇಜಸ್ವಿಯಾಗಿ ಹೊರಹೊಮ್ಮಿ, ಪಾರ್ವತೀಪತಿ ರೂಪ ಶಿವಾಂಶದಿಂದ ಮೈದೋರಿ–ದನು. ಅಂದಿನಿಂದ ರುದ್ರಾಂಶ ಶಿವಾಂಶದಲ್ಲಿ ತಲ್ಲೀನವಾಗಿ ಕೈಲಾಸಪತಿಯಾದ ಶ್ರೀ ಗೌರೀ ರಮಣನು ಅತ್ಯಧಿಕನೆನಿಸಿದನು. ಇಂತಹ ಪರಮೇಶ್ವರನ ಕಾಲದಲ್ಲಿ ಶ್ರೀ ರುದ್ರಪಂಚಾಕ್ಷರೀ, ಶಿವಪಂಚಾಕ್ಷರೀ ಮಹಾ:ಮಂತ್ರ ರೂಪದಲ್ಲಿ ಶಿವನಿಚ್ಛೆಯಂತೆ ಪರಿವರ್ತನೆಗೊಂಡಿತು. ಆದ್ದರಿಂದ ಜಗದಾದಿಯಿಂದ ಓಂ ನಮಃ ಶಿವಾಯ ವೆಂಬ ಶಿವ ಪಂಚಾಕ್ಷರೀ ಮಹಾ ಮಂತ್ರ ಜಪಾನುಷ್ಠಾನ ರೂಢಿಗೆ ಬಂದಿರುತ್ತೆ. ಓಂ ಹರಃ.

॥ ಓಂಕಾರ ಬಿಂದು ಸಂಯುಕ್ತಂ । ನಿತ್ಯಂ ಧ್ಯಾಯಂತಿ ಯೋಗಿನಃ ।
ಕಾಮದಂ ಮೋಕ್ಷದಂ ತಸ್ಮೈ ಓಂಕಾರಾಯ ನಮೋ ನಮಃ ॥

ಶೈವರೂ ವೀರಶೈವರೂ ಶಿವ ಪಂಚಾಕ್ಷರೀ ಮಹಾ ಮಂತ್ರವನ್ನೇ ನಿಷ್ಠೆಯಿಂದ ಯಾವ ಜೀವವೂ ಜಪಿಸಬೇಕು.

ಓಂಕಾರ ಪಂಜರ ಶುಕೀಂ । ಉಪನಿಷದು ದ್ಯಾನ ಕೇಳಿ ಕಲಕಂಠೀಂ ॥
ಆಗಮ ವಿಪಿನ ಮಯೂರೀಂ । ಆರ್ಯಾಂ ಅಂತರ್ಭಾವಯೇ ಗೌರೀಂ ॥

॥ ಓಂ ಪೂರ್ಣಮದಃ ಪೂರ್ಣಮಿದಂ । ಪೂರ್ಣಾತ್ಪೂರ್ಣ ಮುದಚ್ಯತೇ ।
ಪೂರ್ಣಸ್ಯ ಪೂರ್ಣ ಮಾದಾಯ । ಪೂರ್ಣಮೇವಾ ವಶಿಷ್ಯತೇ ॥

ಓಂ ಶಾಂತಿಃ ಶ್ಯಾಂತಿಃ ಶ್ಯಾಂತಿಃ

ಓಂಕಾರ ಪ್ರಣವವು ವಂದು ಸ್ವಯಂ ಪರಿಪೂರ್ಣವಾದ ಮಹಾ ತತ್ವ. ಇದನ್ನು "ತತ್ವಾನಾಂ ಮಹದಾದೀನಾಂ" ಎಂದು ಶೃತಿ ಮಾತೆಯು ಘೋಷಿಸು-ತ್ತಿರುವಳು. "ಪ್ರಣವ" ಎಂಬ ಶಬ್ದ, ಅರ್ಥಪೂರ್ಣವೆನಿಸಿದೆ. ಪ್ರ+ನವ= ಪ್ರಣವ. ನವ ಯೆಂದರೆ ನೂತನ ಅಥವಾ ಹೊಸದು ಯೆಂದರ್ಥ. ಪ್ರ=ಎಂದರೆ ಅತ್ಯಂತ ನೂತನವಾದುದು. ಅಂದ ಬಳಿಕ, ಓಂಕಾರ ಪ್ರಣವವು ಸತತ ಕ್ಷಣೆ ಕ್ಷಣೇ

ಅತ್ಯಂತ ನೂತನವಾಗಿಯೇ ಉಳಿದು ಬೆಳಗುವ ಅದ್ವಿತೀಯ ಪರಾತ್ಪರ ತತ್ವವೆಂದು ವೇದ ಮಾತೆ ಸ್ಪಷ್ಟಪಡಿಸಿರುವಳು.

॥ ಪೂರ್ಣಮದಃ ಪೂರ್ಣಮಿದಂ । ಪೂರ್ಣಾತ್ಪೂರ್ಣ ಮುದಚ್ಯತೇ ಎಂಬ ಉಪನಿಷತ್ ಮಂತ್ರಾರ್ಥ, ನಿಗೂಢವೆನಿಸಿದೆ. ಇದನ್ನು ಉದಹರಿಸುವ ಕಾರ್ಯ ಸಣ್ಣದೇನಲ್ಲ. ಈ ತತ್ವದ ನಿಲುವನ್ನು ಕೆಳಕಂಡಂತೆ ಗಮನಿಸಬಹುದು.

ಪೂಜ್ಯ $0+0=0$ ಪೂಜ್ಯದೊಂದಿಗೆ ಪೂಜ್ಯವನ್ನು ಕೂಡಿಸಿದರೆ ಪೂಜ್ಯವೇ ಉಳಿದ ಭಾಗಲಬ್ಧ $0-0=0$ ; $0\times0=0$ ; $0\div0=0$. ಗಣಿತ ಶಾಸ್ತ್ರ ಪ್ರಕಾರ ಪೂಜ್ಯವನ್ನು 0 ಹೇಗೆಲ್ಲಾ ಕೂಡಿಸಿ, ಕಳೆದು, ಗುಣಿಸಿ, ಭಾಗಿಸಿದರೂ, ಪೂಜ್ಯದ 0 ಸ್ಥಿರತೆಗೆ ಕಿಂಚಿತ್ತೂ ಲೋಪವಿಲ್ಲ. ಇದರಂತೆಯೇ **ಒಡಲಿಲ್ಲದ ವೊಡಲುಳ್ಳ, ಓಂಕಾರ ಪ್ರಣವದ ಮಹಾ ಗರ್ಭದಿಂದ** ಸೃಷ್ಟಿ, ಸ್ಥಿತಿ, ಲಯ, ತಿರೋಧಾನ ಮತ್ತು ಅನುಗ್ರಹವೆಂಬ ಪಂಚ ಕೃತ್ಯಗಳು ಸತತ ಜರುಗುತ್ತಲಿದ್ದರೂ. ಮೂಲ ಪ್ರಣವಕ್ಕೆ ಯಾವ ಚ್ಯುತಿಯೂ ವಿಕಾರವೂ ಕಿಂಚಿತ್ತೂ ಇರುವುದಿಲ್ಲ. ಓಂಕಾರ ನಿಷ್ಕಲಬ್ರಹ್ಮ ಆಕಾಶವತ್ ನಿರ್ಲಿಪ್ತವಾಗಿ ಉಳಿದು ಬೆಳಗುವುದು. ಭೂತಾಕಾಶಕ್ಕೆ ಪರಾಕಾಶವೇ ತಾಯ್ಮನೆ. ಪರಾಕಾಶವೇ ಓಂ ಎನಿಸಿದೆ. ನಮಃ ಶಿವಾಯ ಪಂಚಾಕ್ಷರೀ ಬೀಜಾಕ್ಷರಗಳನ್ನು ಪ್ರತಿನಿಧಿಸಿ, ಶಿವನ ಸದ್ಯೋಜಾತಾದಿ ಪಂಚ ಮುಖಗಳು ಆವಿರ್ಭವಿಸಿದವು. ಈ ಸದ್ಯೋಜಾತಾದಿ ಮುಖ ಸಂಭವರಾದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು, ಶಿವ ಪಂಚಾಕ್ಷರೀ ಮೂಲ ಬೀಜಾಕ್ಷರ ಸದೃಶ ರಿರುವರೆಂಬುದು ಗಮನಾರ್ಹ. ಪೃಥ್ವಿ ತತ್ವವು, **"ನಕಾರ"** ಬೀಜಾಕ್ಷರ ಮಂತ್ರ ಸ್ವರೂಪವಾದ **ಪೃಥ್ವಿಲಿಂಗದ** ಆಧಾರದ ಮೇಲೆ ಸುಭದ್ರವಾಗಿ ನಿಂತಿದೆ. ಭುವಿಯಲ್ಲಿ ಜಗದಾದಿ ಜಗದ್ಗುರು ಶ್ರೀ ರೇಣುಕಾಚಾರ್ಯರು ಕೊಲ್ಲೀಪಾಕಿ ಶ್ರೀ ಸೋಮನಾಥ ಪೃಥ್ವಿ ಲಿಂಗದಿಂದ, ಶಿವನಪ್ಪಣೆಯಂತೆ ಆವಿರ್ಭವಿಸಿ, ಮಂತ್ರಮಯ ದಿವ್ಯ ದೇಹಧಾರಿಗಳಾದ್ದರಿಂದ, ಇವರು ತ್ರಿಭುವನಾಚಾರ್ಯ ವರೇಣ್ಯರೆಂದು ಆಗಮಾಮ್ನಾಯಾದಿಗಳಲ್ಲಿ ಸ್ತುತ್ಯರಿರುವರು.

ತೈತ್ತಿರಿಯೋಪನಿಷತ್ತಿನಲ್ಲಿ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರ ಬಗೆಗೆ ಉದ್ಘೋಷಿಸಿರುವುದೇನೆಂದರೆ.

॥ ಸ ವಾ ಏಷ ಪುರುಷಃ ಪಂಚಧಾ ।
ಅರ್ಧನಾರೀಶ್ವರತ್ವಾದಿ । ಲೀಲಾವಿಭವ
ಸಂಜ್ಞಕಾಃ । ಸದ್ಯೋಜಾತಾದಯಃ ।
ಪಂಚವ್ಯೂಹಾಃ ಪ್ರೋಕ್ತಾಃ ಸನಾತನಾಃ ॥

ಅಂದರೆ ಸದಾಶಿವನ ಸದ್ಯೋಜಾತಾದಿ ಪಂಚಮುಖ ಸಂಭವರಾದ ಶ್ರೀ ಆದಿ ಜಗದ್ಗುರು ರೇಣುಕಾದಿ ಪಂಚಾಚಾರ್ಯರು, ಪರಮೇಶ್ವರನ ಆದಿಗಾದಿಯಾದ ಪಂಚವ್ಯೂಹ ಮೂರ್ತಿಗಳು ಎಂದು ಪ್ರತಿಪಾದಿತವಾಗಿದೆ. ಇದೇ ವಿಷಯ "ಸದ್ಯೋತ್ಯಾದಿ" ವೇದಾಗಮಾದಿ ಶೃತಿಗಳಲ್ಲೂ ಸ್ವಚ್ಛಂದವಾಗಿ ಪ್ರೋಕ್ತವಿರುತ್ತೆ.

॥ ಸದ್ಯೋತ್ಯಾದಿ ಶ್ರುತಿಪ್ರೋಕ್ತಾಃ । ಪುರುಷಾಸ್ಸಂತಿ ಪಂಚಧಾ ॥
ತಾನೇವ ಶ್ರೀ ಗುರೂನ್ನೌಮಿ । ಶಿವವ್ಯೂಹಾನ್ ಸನಾತನಾನ್ ॥
॥ ಲೋಕಮೇತಂ ಸಮುದ್ಧರ್ತುಂ । ಲಿಂಗ ಪಂಚಕನಿರ್ಗತಾನ್ ॥
ಸರ್ವ ಶಕ್ತಿಯುತಾನ್ ವಂದೇ । ಪಂಚಾಚಾರ್ಯಾನ್ ಜಗದ್ಗುರೂನ್ ॥

ಮೇಲುಕ್ತವಾದ ಶಿವ ಪಂಚಾಕ್ಷರೀ ಬೀಜಾಕ್ಷರ ಮೂಲ ಮಂತ್ರ ಸದೃಶರು ಶ್ರೀ ಜ॥ ರೇಣುಕಾದಿ ಪಂಚಾಚಾರ್ಯರು. ಓಂಕಾರ ಪ್ರಣವ ಸ್ವರೂಪಿ ಪರಶಿವ ಬ್ರಹ್ಮದ ಚಿಚ್ಛಕ್ತಿ ಚಿತ್ಕಳಾ ಸ್ವರೂಪಿಗಳು. ಶ್ರೀ ಪಂಚ ಮಹಾಚಾರ್ಯರ ಸ್ಮರಣೆ, ಪೂಜೆ ಧ್ಯಾನಾದಿಗಳು ನಿಜಕ್ಕೂ ಪ್ರಣವೋಪಾಸನೆಯೆನಿಸಿದೆ.

ಇಂತಪ್ಪ ಅಮೋಘವಾದ ಹಾಗೂ ಗೂಢಾತಿಗೂಢವಾದ ಮೋಕ್ಷ ಪ್ರದವಾದ ಪ್ರಣವೋಪಾಸನೆಯ ದಿವ್ಯ ವಿಷಯ ॥ ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ॥ ಶ್ರವಣ ಮಾಡಲೂ ಸಹ ಅನೇಕರಿಗೆ ಭಾಗ್ಯವಿರುವುದಿಲ್ಲ.

ಓಂಕಾರವು ಅಕಾರ ಉಕಾರ ಮಕಾರಗಳಿಂದ ಕೂಡಿದೆ. ಇದನ್ನೇ ಸತ್ ಚಿತ್ ಆನಂದ ವೆಂದೂ ಸ್ತುತಿಸಲಾಗಿದೆ. ಓಂಕಾರವನ್ನು ॥ ಏಕಾಕ್ಷರಂ ಪರಂಬ್ರಹ್ಮ ॥ ಅಂದರೆ ॥ ಅಕ್ಷರಂ ಪರಮಂ ಬ್ರಹ್ಮ ॥ ಪರಶಿವ ಬ್ರಹ್ಮವೆಂದು ಶೃತಿವಾಣಿ ಸಾರುತ್ತಲಿದೆ.

ಓಂ ಓಂ ಓಂಕಾರಾಯ ನಮೋ ನಮಃ

## OM

## Om and its Significance

OMKAR is the Alfa and Omega. The same is beginningless and endless. Omkar is the Omnipotent Omniscient and Omnipresent. In the beginning there existed a Word. That Word came from God. And

that Word is itself God. *Omkar is the living God Supreme.* So proclaim the four Vedas from time immemmorial.

OM is a sacred and an everlasting symbol. A symbol is the manifestation of the thing signified. There Is a close relation in between the *Symbol* and the thing *Signified.* The Symbol expresses the thing spontaneously signified. There is a natural or rather an innate intimacy in between these two. When that symbol is pronounced, it recalls the thing signified. "AUM" is such a spiritually thrilling sound that it is the vital basis of all sounds. *"Naada Brahma".* It is an eternal and self existing sound. The first letter "A" "ಅ" is the root sound. It is the main key, pronounced without touching any part of the tongue or palate. "M=ಮ" represents the last sound in the series being produced by the closed lips and that "U ಉ" rolls from the very root of the end of the sounding board of the mouth.

Thus OM represents the whole phenomena of sound producing an harmonious *"Naada".* "OM" is an eternal self existing unique symbol. The good company will call out good impressions and impulses that are laid hidden in us. So, constantly chant and meditate on "OM". There is nothing holier in this world than to keep good company. Because the good impressions will tend to come to the surface of the chaste mind. The impressions live in the mind. The same gradually become more and more latent but remain in the mind. As soon as they get the right

stimulus, they come out. Molecular Vibrations never cease when this universe is destroyed. All the massive vibrations disappear. The Sun, Moon and Stars and the Earth melt down, but the vibrations remain in the Athma. So, even when the vibrations of *Chitta* subsides, its molecular vibrations go on and when they get the impulses naturally come out afresh again vigorously—

" Om Om Omkaraaya Namo Namaha "

॥ ಓಂ ನಮೋ ಲಿಂಗರೂಪಾಯ ।
ಜಗಜ್ಜನ್ಮಾದಿ ಹೇತವೇ ॥
ನಿಗಮೂಗಮ ವೇದ್ಯಾಯ ।
ಭಕ್ತಸಿದ್ಧಿ ಪ್ರದಾಯಿನೇ ॥

॥ ಓಂ ಓಂ ಓಂ ಕಾರಾಯ ನಮೋ ನಮಃ ॥

"ಓಂ ಇತ್ಯೇಕಾಕ್ಷರಂ ಬ್ರಹ್ಮ । ನಮಃ ಶಿವಾಯೇ ತ್ಯಜಾಯತ"
(ಯಜುರ್ವೇದ)

---

ಪೀಠಿಕಾ ಪ್ರಕರಣ

॥ ಏ ಧಾರಯಂತಿ ಹೃದಯೇ ಲಿಂಗಂ । ಚಿದ್ರೂಪ ಮೈಶ್ವರಂ ।
ನ ತೇಷಾಂ ಪುನರಾವೃತ್ತಿ । ಘೋರ ಸಂಸಾರ ಮಂಡಲೇ ॥
॥ ಏಕೋವಶೀ ಸರ್ವ, ಭೂತಾಂತರಾತ್ಮಾ ।
ಏಕಂ ರೂಪಂ ಬಹುಧಾಯಃ ಕರೋತಿ ॥
ತಮಾತ್ಮಸ್ಥಂ ಯೇಸು ಪಶ್ಯಂತಿ ಧೀರಾಃ ।
ಸ್ತೇಷಾಂ ಶಾನ್ತಿಃ ಶಾಶ್ವತೀ ನೇ ತರೇಷಾಂ ॥

॥ ಸ್ಥಿರೈ ರಂಗೈಃ ॥

॥ ಧೃತ ಶ್ರೀ ವಿಭೂತಿ ರುದ್ರಾಕ್ಷಃ । ಪ್ರಯತೋ ಲಿಂಗದಾರಕಃ ॥
ಜಪೇ ತ್ಪಂಚಾಕ್ಷರೀ ವಿದ್ಯಾಂ । ಶಿವ ತತ್ವ ಪ್ರಬೋಧಿನೀಂ ॥
(ಸಿ.ಶಿ.ಅ. ೪ ಶೋ ೧)

ಪರಶಿವ ಬ್ರಹ್ಮವು ನಿಷ್ಕಲ ಸಕಲನಿಷ್ಕಲ ಮತ್ತು ಸಕಲ ರೂಪಂಗಳಿಂದ ವಿರಾಜಿಸುವ ಸ್ಥಿರಾಂಗಗಳಿಂದ ರಾರಾಜಿತವಾಗಿದೆ.

" ಅಜಾಯಮಾನೋ ಬಹುಧಾ ವಿಜಾಯತೇ " ಎಂಬ ಶೃತಿ ಪ್ರಮಾಣಾನುಸಾರ ವಿರಾಜಿತವಾಗಿದೆ.

ಪರಶಿವಬ್ರಹ್ಮವು ನಿರಂತರ " ಜ್ಯೋತಿಷಾಂ ಜ್ಯೋತಿಃ" ಎನಿಸಿ, ಪ್ರಜ್ವಾಲಿತೋಃ ಜ್ಞಾನಮಯಃ ಪ್ರದೀಪಃ ಹಾಗೂ " **ದೀಪೋದೀಪಃ ಪ್ರದೀಪಸ್ನಃ** " ಎಂಬ ಪರಂಜ್ಯೋತಿರ್ಮಯ ದಿವ್ಯಾಂಗಗಳಿಂದ ವಿರಾಜಿತವಾಗಿರುವುದರಿಂದ, " **ಸ್ಥಿರೈ ರಂಗೈಃ** " ಸ್ಥಿರವಾದ ಅಂಗಗಳಿಂದ ಕೂಡಿರುವನೆಂದು ಶೃತಿ ಮಾತೆ ನಮಗೆ ಅರುಹುತ್ತಿರುವಳು. ಪ್ರಣವಮಯ ಲಿಂಗ ರೂಪಿ ಪರಶಿವನು ನಿರವಯವ, ನಿರ್ದ್ವಂದ್ವ, ನಿರವಧ್ಯ ಹಾಗೂ ನಿರ್ಲಿಪ್ತಕರವೆನಿಸಿದ ಸ್ಥಿರಾಂಗಗಳಿಂದ ಬೆಳಗುವ ಆ ದಿವ್ಯಾಂಗ-ಗಳಾವುವೆಂದರೆ, " **ಸಚ್ಚಿದಾನಂದ ನಿತ್ಯ ಪರಿಪೂರ್ಣಾದ್ವಿತೀಯೊ ಖಂಡಾ, ಬ್ರಹ್ಮಾಂಡಾದ್ವಯ ವಿರಾಡ್ರೂಪ** " ವೆಂದು ತಿಳಿದು ಬರುತ್ತೆ. ಇವು ಪರಮಾತ್ಮನ "ಸ್ಥಿರೈ ರಂಗೈಃ" ಎಂದೆನಿಸಿವೆ. ಶರಣನು ಇಂತಪ್ಪ ದಿವ್ಯಾಂಗಗಳನ್ನು ನಿರಂತರ ಆಶ್ರಯಿಸಿ, ಆರಾಧಿಸಿ ಅನುಸಂಧಾನ ಮಾಡುವುದರಿಂದ, ಅವನ ಅನಂತ ಕೋಟಿ ಜನ್ಮಗಳಲ್ಲಿ ಮಾಡಿದ ಬಹು ಘೋರ ಪಾತಕರಾಶಿಗಳು ಪೂರ್ಣ ; ಜ್ಞಾನಾಗ್ನಿಯಿಂದ ದಗ್ಧವಾಗಿ, "**ಶುದ್ಧಸ್ಫಟಿಕ ಸಂಕಾಶಾ**" ಎಂಬಂತೆ ಹಾಗು ಶ್ರೀ ಸಿದ್ಧಾಂತ ಶಿಖಾಮಣಿ ಪ್ರೋಕ್ತ ॥ **ಬಹುಜನ್ಮ ಕೃತೈಃ । ಪುಣ್ಯೈಃ । ಪ್ರಕ್ಷೀಣೇಪಾಪಪಂಜರೇ। ಶುದ್ಧಾಂತಃ ಕರುಣೋಪೇತಾ । ಪಿಂಡ ಶಬ್ಧೇನಗೀಯತೇ** ॥ ಎಂದೆನಿಸುವ, ಪವಿತ್ರಾತ್ಮನ ಅಂಗವು, " **ವಿಚಿತ್ರಾದೇಹಸಂಪತ್ತಿ ರೀಶ್ವರಾಯನಿವೇದಿತಂ** " ಎಂಬ ದೈವೀಯೋಗದ ಅರ್ಥಾತ್ ಮಹಾ ಶಿವಯೋಗದ ಸ್ವಾನುಭೂತಿಯಿಂದ, ತಾನು ತನ್ನ ಶುದ್ಧಾಂತರಂಗದಲ್ಲಿ ಕಾಣುವ, ಶಿವನ ದಿವ್ಯಾಂಗಗಳಿಂದಲೇ ಶ್ರೀ **ವಿಭೂತಿ ಶ್ರೀ ರುದ್ರಾಕ್ಷಿ** ಮತ್ತು ಓಂಕಾರ ಪ್ರಣವಸಹಿತ ಶಿವ ಪಂಚಾಕ್ಷರೀ ಮಹಾ ಮೂಲಮಂತ್ರಗಳೆನಿಸಿವೆ. ಇವು ಸಹ, ಪರಶಿವನ ದಿವ್ಯಜ್ಯೋತಿರ್ಮಲಯದಲ್ಲಿ ಸದಾ **ಪ್ರಜ್ವಲಿಸುವ ಸ್ಥಿರೈರಂಗೈಃ** ಎಂದು ಸ್ತುತ್ಯವಿರುವುವು.



## ಪರಶಿವಬ್ರಹ್ಮದ " ಸ್ಥಿರೈ ರಂಗೈಃ "

ಪುರುಷ ಸೂಕ್ತದಲ್ಲಿ ಪರಮಾತ್ಮನ ಚತುಷ್ಪಾದಗಳ ವಿವರಣೆ, ಮೇಲ್ಕಂಡ ಸ್ಥಿರಾಂಗಗಳ ಬಗೆಗೆ ಬೆಳಕನ್ನು ಚೆಲ್ಲಿದೆ.

a) ॥ ಪಾದೋಸ್ಯ ವಿಶ್ವಭೂತಾನಿ । ತ್ರಿಪಾದಸ್ಯಾಮೃತಂ ದಿವಿ ॥

b) ॥ ತ್ರಿಪಾದೂರ್ಧ್ವ ಉದೈತ್ಪುರುಷಃ । ಪಾದೋಸ್ಯೇಹಾ ಭವತ್ಪುನಃ ॥
ತತೋ ವಿಶ್ವ ಙ್ವ್ಯಕ್ರಾಮತ್ । ಸಾಶನಾ ನಶನೇ ಅಭಿ ॥

ಇದರ ವಿವರಣೆ । ಬ್ರಹ್ಮಾಂಡ ದಿಂದತ್ತತ್ತ ನಿಮ್ಮ ಶ್ರೀ ಮುಕುಟ । ಪಾತಾಳ ದಿಂದತ್ತತ್ತ । ನಿಮ್ಮ ಶ್ರೀಪಾದ ॥ ಎಂಬ ವಚನೋಪನಿಷತ್ತು, ಪರಶಿವನ ಸ್ಥಿರಾಂಗ ವನ್ನು ಮುಗ್ಧ ಭಕ್ತಿ ಭಾವದಿಂದ ಅರುಹಲು ಯತ್ನಿಸಿದೆ.

i) ॥ ಇದು ಯೆಲ್ಲ ಭೂತಮುಂ। ಪರಮನ ಚತುರ್ಥಾಂಶ ।
ಸಪಮುಳಮೃತಂ । ದಿವಿಯೊಳುಳಿದ, ಮುಪ್ಪಾಗಂಶ ॥

ii) । ಪುರುಷನೋಳ್ ಮುಪ್ಪಾಗ । ಊರ್ಧ್ವಲೋಕದೊಳಿಹುದು ।
ತಿರುತಿರುಗಿ ಕಾಲಂಶ । ಇಹದೊಳಗೆ ಬರುತಿಹುದು ॥
ಧರಿಸುತ್ತೆ ಭೋಕ್ತೃ ಭೋಗ್ಯಾದಿ ರೂಪದಿಂದದು ।
ತರತರದ ರೂಪದಲಿ ಜಗವ । ನಾಕ್ರಮಿಸಿಹುದು ॥

ವಿಚಿತ್ರಾಯಮಾನ ಕರವಾಗಿರುವ, ಅವಾಙಮಾನಸ ಅಗೋಚರವಾಗಿರುವ, ಪರಮನ ಸ್ಥಿರಾಂಗಗಳ ಘನವ್ಯಾಪ್ತಿಯನ್ನು, ಸಹಸ್ರ ನಾಲಿಗೆಯುಳ್ಳ ಆದಿಶೇಷನಿಂದಲೂ ಪೂರ್ಣ ವರ್ಣಿಸಲು ಅಸದಳವು,॥ ಮಹಿಮ್ನಃಪಾರಂತೇ । ಪರಮ ವಿದುಶೋ ಯದ್ಯ ಸದೃಶೀ ॥ ಸ್ತುತಿ ಬ್ರಹ್ಮಾದೀನಾಮಪಿ । ತದವಸನ್ನಾ ಸ್ತ್ವಯಿಗ್ರಿರಾ ॥ ಎಂಬ ಮಹಿಮ್ನ ಸ್ತೋತ್ರ ಕೊಂಡಾಡುತ್ತ ॥ **ಚಕಿತ ಮಭಿದ್ಧತ್ತೇ ಶೃತಿರಪಿ** ॥ ಎಂಬಂತೆ ಶೃತಿದೇವಿಗೂ ಚಕಿತಗೊಳಿಸುವ, ಹರಿ ಬ್ರಹ್ಮೇಂದ್ರಾದಿಗಳಿಗೂ ಪೂರ್ಣ ಅರಿಯಲು ಅಶಕ್ಯವೆನಿಸಿದ ಪರಶಿವ ಬ್ರಹ್ಮದ ॥ ಸ್ಥಿರೈರಂಗೈಃ ॥ ಸ್ಥಿರಾಂಗಗಳ, ರೂಪು ರೇಖೆ ಗಳನ್ನು, ಶ್ರೀ ಮಹಾಗುರುವಿನ ಕರುಣಾ ಕಟಾಕ್ಷದಿಂದ, ಕ್ವಚಿತ್ ಶಿವಶರಣನು ಸ್ವಾನು ಭೂತಿಯಲ್ಲಿ ನಿತ್ಯಾನು ಸಂಧಾನದಿಂದ ಅರಿಯಲು ಶಕ್ಯವಿದೆ. ॥ ಅಂ ಗಚ್ಛಯ

**ತೀತಿ ಅಂಗಃ ॥ ಅಕ್ಷರಂ ಬ್ರಹ್ಮ ಪರಮಂ ॥** ಅಕ್ಷರ ಸ್ವರೂಪ, ಪರಶಿವನ ಸ್ಥಿರಾಂ ವೆನಿಸಿದೆ.

ತೈತ್ತಿರೀಯೋಪನಿಷತ್ತಿನಲ್ಲಿ ಶಿವಮಯವೆನಿಸಿದ, ಪಂಚಕೋಶಗಳು, ಪರಶಿವ ಅವಿಕಾರ ಪರಿಣಾಮರೂಪ ಸ್ಥಿರಾಂಗಗಳೆಂದು ಪ್ರತಿಪಾದಿತವಾಗಿದೆ. ಮೊದಲನೆಯ **ಅನ್ನಮಯಕೋಶ " ಅನ್ನಂ ಬ್ರಹ್ಮೇತಿ ವಿಜಾನಾತ್ "** ನಿರಾಕಾರ ನಿಷ್ಕ ಬ್ರಹ್ಮ, ಅನ್ನಾಂಗ ರೂಪದಲ್ಲಿ ಜಗತ್ತನ್ನು ಉದ್ಧರಿಸುತ್ತಲಿದೆ. ಎರಡನೆ ದಿವ್ಯಾಂಗ **" ಪ್ರಾಣಮಯ ಕೋಶ "** ಪ್ರಾಣಕ್ಕೆ ಮಹಾಪ್ರಾಣ ರೂಪಾಂಗ **ಕೇನೋಪನಿಷತ್ತು** ಮಹಾಪ್ರಾಣವು ಪರಶಿವನ, **"ಸ ಊ ಪ್ರಾಣಸ್ಯ ಪ್ರಾಣ** ಅಂದರೆ ಈ ದಿವ್ಯಾಂಗ, ಪ್ರಾಣದೊಳಗಿನ ಪ್ರಾಣಃ – ಮಹಾ ಪ್ರಾಣವೆನಿಸಿದೆ. ಉ ನಿಷದ್ವಾಣಿ ಯಿದನ್ನರಿತು " ಅಥ ಏವ ಪ್ರಾಣಃ " ಎಂದು ಉದ್ಘೋಶಿಸಿದೆ. ಮು ಮನೋಮಯ ಕೋಶ. ಸೂಕ್ಷ್ಮವಾದೀಕೋಶವು, ಅನ್ನದ ಸೂಕ್ಷ್ಮಾಂಶ ರಸದಿ ಆಕೃತಿಗೊಂಡಿದೆ. ಸಂಕಲ್ಪ ವಿಕಲ್ಪ ಚಂಚಲಾತ್ಮಕ ಮನೋ ಮಂಡಲವು, ಅ ರಂಗವ ಮೂರನೇ ಸೂಕ್ಷ್ಮಾಂಗವಾಗಿದೆ. **" ಇಂದ್ರಿಯೇಭ್ಯಃ ಪರಂಮನಃ "** ಎಂದಿದೆ ಶ್ರೀ ಭಗವದ್ಗೀತೆ. ಕಾಮ ವಿವರ್ಜಿತವಾದ ಶುದ್ಧ ಸಂಕಲ್ಪವುಳ್ಳ ಮನವ ಮಹದೇವನ ಕೃಪಾ ಬಲದಿಂದ, ಮಹಾಲಿಂಗಾಕಾರ ದಿವ್ಯಾಂಗದಿಂದ ರಾ, ರಾಜಿ ಪರಶಿವನ ಸ್ಥಿರಾಂಗವೆನಿಸಿದೆ. ಮುಂದೆ ಕಾಣುವ ನಾಲ್ಕನೆ, ಪರಮನ ದಿವ್ಯಾಂಗವ ವಿಜ್ಞಾನಮಯ ಕೋಶವೆನಿಸಿದೆ. ಈ ಕೋಶದ ಹಿರಿಮೆ ವರ್ಣನಾತೀತವೆನಿಸಿ ಅಥ ರ್ವಣವೇದದ ಸಾರಭೂತ ದಿವ್ಯಾಂಗವೆನಿಸಿರುವುದು.

**" ತ್ರೈಲೋಕ್ಯ ಸಂಪದಾಲ್ಲೇಖ್ಯಾ । ಸಮುಲ್ಲೇಖನ ಭಿತ್ತಯೇ "** ಎಂಬ ಶ್ರೀ ಸಿದ್ಧಾಂತ ಶಿಖಾಮಣಿ ಪ್ರೋಕ್ತ, ರಸಾನುಭೂತಿಯಂತೆ, ಅಖಂಡ ವಿಶ್ವ ಸಂಪದ್ಭರಿತವಾದ ವಿಜ್ಞಾನದ ಭಂಡಾರ ವಿಜ್ಞಾನಮಯಕೋಶ. ಇದರ ಆ ರ್ಭಾವವು, **॥ ಹೃದಯಂ ತದ್ವಿಜಾನೀಯಾತ್ । ವಿಶ್ವಸ್ಯ ಆಯತ ಮುಚ್ಯತೇ ॥** ಎಂಬ ಉಪನಿಷದ್ವಾಣಿ ಮೇಲ್ಕಂಡ ಮಹದಂಶವನ್ನು ಪುಷ್ಟೀಕರಿಸ ವಂತಿದೆ. ಶಿವನ ಈ ದಿವ್ಯಾಂಗವು ಬಹು ವಿಸ್ತಾರವಾದ ವ್ಯಾಪ್ತಿ, ದೀಪ್ತಿಗಳಿ ಬೆಳಗಿ, " ವಿಚಿತ್ರಾ ದೇಹ ಸಂಪತ್ತಿ, ರೀಶ್ವರಾಯ ನಿವೇದಿತಂ " ಎಂಬಂತೆ ಬಹ್ವ ಗಳಿಂದ ಆಕರ್ಷಣೀಯವಾಗಿದೆ. ಅಯಿದನೇ ಆನಂದಮಯಕೋಶ, ॥ ಆನಂ ಬ್ರಹ್ಮೇತಿ ವಿಜಾನಾತ್ ॥ ಈ ಶಿವನ ದಿವ್ಯಾಂಗವು, ಪರಶಿವನಿಗೆ ಅಭಿನ್ನವೆನಿ ಅಮೃತಮಯವೆನಿಸಿರುವುದು. ನಿತ್ಯಾನಂದಮಯವಾದೀ ದಿವ್ಯಾಂಗವು ಶಿವಾನಂ ಘನೀಭೂತವಾದ ಶುದ್ಧಾಂತರಂಗದಲ್ಲಿ ನಿರಂತರ ಪ್ರಜ್ವಲಿಸುವ ಉಜ್ವಲ ಚಿದ್ಘನಾಂ ವಿದೆನಿಸಿ, ಪರಿಶೋಭಿತವೆನಿಸಿರುವುದು.

॥ ಆನಂದಾ ಧ್ಯೈವ ಖಲ್ವಿಮಾನಿ ಭೂತಾನಿ ॥ ಜಾಯಂತೇ ।
ಆನಂದೇನ ಜಾತಾನಿ ಜೀವಂತೀ ॥
ಆನಂದಂ ಪ್ರಯಂ ತ್ಯಭಿಸಂ ವಿಶಂತಿ ।
ತದ್ವಿಜಿಜ್ಞಾಸಸ್ವ । ತದ್ಬ್ರಂಹಾ ॥ ( ಇತಿ ಉಪನಿಷದಃ )

ಲಿಂಗರೂಪಿ ಪರಶಿವನ, ನಿತ್ಯ ಸತ್ಯ ಸುಂದರವೂ, ಪರಂಜ್ಯೋತಿ ಸ್ವರೂಪವೂ ಆಗಿ ವಿರಾಜಿಸುವ. ॥ ಸ್ಥಿರೈರಂಗೈಃ ॥ ಸ್ಥಿರವಾದ ದಿವ್ಯಾಂಗಗಳ, ನಿತ್ಯೈಶ್ವರ್ಯ ಸ್ವರೂಪವನ್ನು ಯಾರು ಶ್ರೀ ಗುರುಮುಖದಿಂದರಿತು, ಪರಿಶುದ್ಧಾಂತಃಕರಣಗಳ ಪ್ರಭಾವದಿಂದ, ಆಚರಿಸಿ, ನಿತ್ಯಾನುಸಂಧಾನದಿಂದ, ಸ್ವಾನುಭೂತಿಗೆ ಅಳವಡಿಸಿಕೊಳು ವರೋ, ಅಂಥವರು, ॥ ಏಕೇನ ಜನ್ಮನಾಮುಕ್ತಿ । ರ್ವೀರಾಣಾಂತು ಮಹೇಶ್ವರೀ ॥ ಎಂಬ ಶಿವಾಗಮೋಕ್ತಿಯಂತೆ ॥ ನಚ-ಪುನರಾವರ್ತತೇ । ನಚ ಪುನರಾವರ್ತತೇ ॥ ಎಂಬ, ಲಿಂಗಾಂಗ ಸಾಮರಸ್ಯ ಸಾಯುಜ್ಯ ಮೋಕ್ಷಾನಂದವಲ್ಲಿ ವಿರಾಜಿಸುವರು. ಅಸ್ತು

॥ ಯದ್ಯದ್ವಿಭೂತಿ ಮತ್ಸತ್ವಂ । ಶ್ರೀಮದೂರ್ಜಿತ ಮೇವವಾ ।
ತತ್ತದೇವಾವ ಗಚ್ಛತ್ವಂ । ಮಮ ತೇಜೋಂಶ ಸಂಭವಃ ॥
(ಗೀತಾ)

॥ ಯದ್ಯದ್ ಪಶ್ಯತಿ ಸರ್ವಸ್ವಂ । ತತ್‌ತತ್ ಬ್ರಹ್ಮೇತಿ ಭಾವಯೇತ್,
॥ ಯದ್ಯದ್ ಶೃಣೋತಿ ಸರ್ವಸ್ವಂ । ತತ್‌ತತ್ ಬ್ರಹ್ಮೇತಿ ಭಾವಯೇತ್ ॥

॥ ಪೀಠಿಕಾ ಪ್ರಥಮಭಾಗ ಸಮಾಪ್ತಿಃ ॥

## ॥ ಶ್ರೀ ಜಗದ್ಗುರು ಪಂಚಾಚಾರ್ಯಃ ಪ್ರಸೀದಂತು ॥

## ಪೀಠಿಕಾ ದ್ವಿತೀಯ ಭಾಗ

॥ ವಂದೇ ಸತ್ಪುರುಷಾರ್ ಲೋಕೇ ।
ಗುಣಗ್ರಹಣ ತತ್ಪರಾರ್ ॥
ರಾಜ ಹಂಸಾಮಿವ ಜಲಾತ್ ।
ಕ್ಷೀರಗ್ರಹಣ ಕೋವಿದಾರ್ ॥

॥ ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ ॥

"ಧರ್ಮದಿಂದಲೇ ವಿಶ್ವಕ್ಕೆ ಶಾಂತಿ"

ಧರ್ಮಕ್ಕಾಗಿ ಏಳಿರಿ, ಧರ್ಮಕ್ಕಾಗಿ ಬಾಳಿ

ಧರ್ಮಕ್ಕಾಗಿ ತಾಳಿರಿ. ಧರ್ಮಕ್ಕಾಗಿ ಆಳಿ

" ಮಾನವ ಧರ್ಮಕ್ಕೆ ಜಯವಾಗಲಿ "

॥ ವಂದೇ ರೇಣುಕಂ ॥

॥ ಧರ್ಮ ಮೇವ ಸಮಸ್ತಾನಾಂ ।
ದುಃಖಾನಾಂ ಶಮನೌಷಧಂ ॥
ತಸ್ಮಾತ್ ಧರ್ಮಾಮೃತಂ ಪೀತ್ವಾ ।
ಸುಖಿನಃ ಸಂತು ಮಾನವಾಃ ॥

॥ ವಂದೇ ರೇಣುಕಂ ॥

ಮಾನವ ಧರ್ಮದ ಏಳಿಗೆಗೆ ಮಾನವ ಉದ್ಧಾರಕ್ಕೆ, ವಿಶ್ವಧರ್ಮದ ಅ ಭೂತಗಳಾದ ಹಾಗೂ ಪಾವನಾತಿ ಪಾವನವೆನಿಸಿದ, ಭಸ್ಮ (ವಿಭೂತಿ), ರುದ್ರಾ ಮತ್ತು ಸಪ್ತ ಕೋಟಿ ಮಂತ್ರಗಳಿಗೆ ಮಕುಟ ಪ್ರಾಯವಾದ **ಶಿವ ಪಂಚಾಕ್ಷ ಮಹಾಮಂತ್ರ** ಈ ಮೂರು ಮುಕ್ಕಣ್ಣೇಶ್ವರನ ಕಾಣಲು ಸಾಧನೀಭೂತವಾ ಪ್ರಶಸ್ತ ಹಾಗೂ ದಿವ್ಯವಾದ ಅಷ್ಟಾವರಣದ ಅಂಶಗಳೆನಿಸಿವೆ.

i) " ಭಸ್ಮ " ॥ ಭಸ್ಮಜ್ಯೋತಿ ಸಮಾಮ್ನಾ ।
ತ್ವಮವಸ್ಯಂ ತಸ್ಯಧಾರಣಾತ್ ॥
ಸಂಸಾರ ಸಾಗರಂ ತೀರ್ತ್ವಾ ।
ಕೈವಲ್ಯ ಫಲಮಶ್ನುತೆ ॥

ಭಸ್ಮವು ಪರಮೇಶ್ವರನ ದಿವ್ಯ ದೇಹದಲ್ಲಿ ಥಳಥಳಿಸುವ ಸ್ವಯಂಜ್ಯೋತಿ ಮಾತ್ರದೇ ಪರಂಜ್ಯೋತಿ ಸ್ವರೂಪದ ಮಹಾರುದ್ರನ ಮೈವೆಳಗು. ಇದನ್ನು

ಗಾದಿಯೂವ ಮಹಾ ಶಿವಯೋಗಿಗಳೆನಿಸಿ, ಸರ್ವ ಲೋಕಂಗಳಲ್ಲಿ ವಿಶ್ರುತ ಜಗದ್ಗುರು ಪಂಚಾಚಾರ್ಯರು, ಭಸ್ಮವನ್ನು ಶಿವನ ರೂಪದ ಪರಂಜ್ಯೋತಿಯೆಂದು, ಸ್ವಾನು ಭೂತಿಯಿಂತ ಅರಿತು, ಭಕ್ತ್ಯಾಹಣೆಯಲ್ಲಿ ತ್ರಿರೇಖಾ ರೂಪದಲ್ಲಿ ಶಿವ ಸ್ಮರಣೆಯೊಂದಿಗೆ ಸತತ ಧರಿಸುತ್ತಿರುವರು. ವಿಭೂತಿ ಪರಶಿವ ಬ್ರಹ್ಮದ ಶಾಶ್ವತ ಹಾಗೂ ಅಕ್ಷಯ ವೆನಿಸಿದ ಅಖಂಡ ಸಂಪತ್ತೆಂದು ಶ್ರೀಮದಾಚಾರ್ಯ ಮಹಾಪುರುಷರು ತಮ್ಮ ಅಂತ ರಂಗವಲ್ಲಿ ಮೊವಲರಿತು, ಲೋಕದ ದೇವ, ದಾನವ, ಮಾನವಾದಿಗಳಿಗೆ ಮನಂಬುಗು ವಂತೆ ಸರ್ವತ್ರ ಉಪದೇಶಿಸುತ್ತಾ ಬಂದಿರುವರು.

ಶಿವಸ್ಮರಣೆಯೊಂದಿಗೆ ನಿತ್ಯ ತ್ರಿಕಾಲಂಗಳಲ್ಲೂ ತ್ರಿರೇಖಾಮಯ ದಿವ್ಯ ವಿಭೂತಿ ಭಸ್ಮ-ಭಸಿತ, ನಾಮಾಂಕಿತಗಳಿಂದ ಪ್ರಸಿದ್ಧವಿರುವ, ಈ ಶಿವತೇಜನ್ನನ್ನು ಧರಿಸುತ್ತಾ ಬಂದರೆ ಸರ್ವ ದುಃಖಗಳೂ ಕಣ್ಮರೆಯಾಗಿ, ಮಹಾ ಪಾಪಾದಿ ಪಾಪಗಳು ಕ್ರಮೇಣ ಪೂರ್ಣ ನಶಿಸುವುವೆಂದು ಆಚಾರ್ಯರು ಭೋಧಿಸಿರುವರು.

ಸದಾ ಲಲಾಟದಲ್ಲಿ ಮೂರು ರೇಖೆಗಳು ಥಳ ಥಳಿಸುವ ವಿಭೂತಿಯನ್ನು "**ಶಿವಶಿವಾ**" ಎಂದು ಭಕ್ತ್ಯಾ ಧರಿಸಿದರೆ, ನಾವು ಜನ್ಮಾಂತರಗಳಲ್ಲಿ ಮಾಡಿದ ಅಖಿಲ ಪಾಪಗಳು ನಶಿಸಿ ಹೋಗುವುವು. ಇದರಿಂದ ಚಿತ್ತ ಶುದ್ಧಿ ಏರ್ಪಡುವುದು. ತತ್ಫಲವಾಗಿ ಶಿವ ಜ್ಞಾನವು ನಮ್ಮಂತರಂಗದಲ್ಲಿ ನೆಲೆಸುವುದು. ಇದರಿಂದ ಮಂತ್ರ ಸಿದ್ಧಿಯುಂಟಾಗುವುದು. ಶ್ರೀ ವಿಭೂತಿ ಧ್ಧಾರಣೆಯಿಂದ ನಮಗೆ ಆರೋಗ್ಯ ಐಶ್ವ ರ್ಯಾದಿ ಶಿವಸಂಪತ್ತು ಕೈಗೂಡುವುದು.

ಶಿವಶಕ್ತಿಯರ ಸಾಕ್ಷಾತ್ ವೊಲುಮೆಗೆ-ನಾವು ಸದಾ ಸರ್ವಾಂಗಗಳಲ್ಲಿ ಶ್ರದ್ಧಾ, ಭಯ, ಭಕ್ತಿಪೂರ್ವಕ ವಿಭೂತಿಯನ್ನು "ಶಿವ ಶಿವ" ಎಂಬೆರಡಕ್ಷರಗಳನ್ನು ಉಚ್ಚರಿ ಸುತ್ತಾ ಧರಿಸಿದ್ದಲ್ಲಿ; "**ಕ್ಷಿಪ್ರಂಭವತಿ ಧರ್ಮಾತ್ಮಾ**" ಎಂಬಂತೆ ಅತಿ ಶೀಘ್ರದಲ್ಲಿ ಅವರ ದಿವ್ಯ ಕೃಪಾನುಗ್ರಹಕ್ಕೆ ಪಾತ್ರರಾಗುವೆವು, ವಿಭೂತಿ ಮನೆಯಲ್ಲಿದ್ದರೆ, ಸಾಕ್ಷಾತ್ ಶಿವನು ಪ್ರತ್ಯಕ್ಷವಾಗಿದ್ದಂತೆ ಅರಿತು. ಆ ಘಟ್ಟಿಯನ್ನು ಜೋಪಾನದಿಂದ ಭದ್ರಪಡಿಸ ಬೇಕು. ವಿಭೂತಿ ॥ **ಸರ್ವ ಹೃದಯ ಪ್ರಕಾಶಃ** ॥ ಶಾಂತ ರೀತಿಯಲ್ಲಿ ನಮ್ಮ ಹೃದ ಯದ ಅಜ್ಞಾನ ಗ್ರಂಥಿಗಳನ್ನು ಸುಟ್ಟು ಬೂದಿಗೊಳಿಸಿ, ಭಸ್ಮೀಭೂತಗೊಳಿಸಿ, ಹೃದಯ ಸ್ವಚ್ಛವಾಗಿ ಬೆಳಗುವಂತೆ ಮಾಡುವ ಶಕ್ತಿ ಅದರಲ್ಲಿದೆ. ಈ ಕಾರಣದಿಂದ ಶಿವಾಗಮಗಳು ಏಕ ಸ್ವರದಿಂದ "**ಸ ಏಷ ಭಸ್ಮ ಜ್ಯೋತಿಃ**" ಎಂದು ಘೋಷಿಸಿ ಅದುವೇ ಸರ್ವ ವಿಧದಿಂದಲೂ ನಮಗೆ ಅಭಯಪ್ರದವಾದ ರಕ್ಷಾ ಕವಚವೆಂದು ಸಾರುತ್ತಿವೆ.

ii) " ರುದ್ರಾಕ್ಷಿ " ॥ ರುದ್ರನೇತ್ರ ಸಮುತ್ಪನ್ನಾ । ರುದ್ರಾಕ್ಷಾ ಲೋಕ ಪಾವನಾಃ ॥

ಮಹಾರುದ್ರನ ಮುಕ್ಕಣ್ಣುಗಳಿಂದ ಸ್ಫುರಿಸಿದ ಬಿಂದುಗಳೇ ರುದ್ರಾಕ್ಷಿಗಳಾಗಿ ಪರಿಶೋಭಿತವಾದುವು. ಮಹಾರುದ್ರನ ಬಾಹ್ಯಾಭ್ಯಂತರವಾದ ದಿವ್ಯ ಚಕ್ಷುಗಳೇ ರುದ್ರಾಕ್ಷಿಗಳೆಂದರೆ ಸಮಂಜಸವೆನಿಸುವುವು. ಭಸ್ಮ ರುದ್ರಾಕ್ಷಿಗಳು ಮಹಾದೇವನ ॥ ಸ್ಥಿರೈ ರಂಗೈಃ ॥ ಎಂದು ಆಗಮಾಮ್ನಾಯಾದಿಗಳಲ್ಲಿ ಸ್ತುತ್ಯವಿರುವುವು. ಅಂಬಿಕಾಪತಿಯ, ಉಮಾಪತಿಯ, ಪಶುಪತಿಯ ಮಂಗಳಪ್ರದವಾದೀ ಎರಡು ದಿವ್ಯಾಭರಣಗಳನ್ನು ಯಾವ ಭಕ್ತನು ಅವಧಾನ ಭಕ್ತಿಯಿಂದ ಸರ್ವಕಾಲ ಸರ್ವಾವಸ್ಥೆಗಳಲ್ಲೂ, ತನ್ನ ಶರೀರದ ಮೇಲೆ, ಇಷ್ಟಲಿಂಗಧಾರಣೆಯೊಂದಿಗೆ ಪ್ರಕಾಶಮಾನವಾಗಿ ಧರಿಸಿರ್ಪನೋ, ಆತನು ನಿಜಕ್ಕೂ ಶಿವಸ್ವರೂಪನೆಂದೆನಿಸುವನು. ಇಂತಪ್ಪ ಶಿವಭಕ್ತನನ್ನು ಯಮನು ಕಂಡರೆ ನಡುಗುವನು. ಯಮನು ಧರ್ಮಾಧರ್ಮಗಳನ್ನು ಚೆನ್ನಾಗಿ ಅರಿತಿರುವನಾದ್ದರಿಂದ, ಶಿವಲಾಂಛನ ಧಾರಿಗಳನ್ನು ಮುಟ್ಟುವುದಿಲ್ಲ. " ತದೇತತ್ ಸತ್ಯಂ " ಇದು ಸತ್ಯವಿರುತ್ತೆ.

iii) ಮಂತ್ರ " ಜ್ಞಾತೇ ಪಂಚಾಕ್ಷರೀಮಂತ್ರೇ ।
ಕಿಂವಾ ಮಂತ್ರಾಂತರೈಃ ಫಲಂ ॥
ಜ್ಞಾತೇಶಿವೇ ಜಗನ್ಮೌಲೇ ಕಿಂ ।
ಫಲಂ ದೇವತಾಂತರೈಃ ॥

1) " ಶಿವನೇ ದೇವರೊಳುತ್ತಮಂ " 2) " ಇಡಬೇಕೀಶ್ವರನಲ್ಲಿ ಭಕ್ತಿರಸಮಂ " 3) " ವಿಶ್ವಾಧಿಕಂ ಶಂಕರಂ " ಎಂಬೀ ವೇದವಿಹಿತವಾದ ಅಮೃತವಾಣಿಗಳು, ಶಿವನಿಗಿಂತ ಅತ್ಯಧಿಕ ದೈವವಿಲ್ಲವೆಂದು, ಅನಾದಿ ಕಾಲದಿಂದ ಘೋಷಿಸುತ್ತಲಿವೆ. ಇಂತಪ್ಪ ಪಶುಪತಿಯಲ್ಲಿ ವೊಮ್ಮೆ ಶುದ್ಧಾಂತಃಕರಣ ಪೂರ್ವಕ, ನೆರೆನಂಬಿ ಶರಣಾಗತನಾದ ಶಿವಭಕ್ತನಿಗೆ, ಅನ್ಯ ದೈವಂಗಳ ಚಿಂತೆ ಏಕೆ. ಅದರಂತೆಯೇ ಸಪ್ತಕೋಟಿ ಮಂತ್ರಗಳಿಗೆ ಮಕುಟ ಪ್ರಾಯವಾದ ಓಂ ನಮಃ ಶಿವಾಯ ಎಂಬ ಶಿವ ಪಂಚಾಕ್ಷರೀ ಮಹಾಮಂತ್ರವನ್ನು ಶ್ರೀ ಗುರುಮುಖದಿಂದ ಉಪದೇಶವಾದ ಬಳಿಕ, ಪರಮೋತ್ಕೃಷ್ಟವಾದೀ ಮಹಾಮಂತ್ರವನ್ನು ೧೦೮ ಸಾರಿ ಜಪಿಸುವಾತನಿಗೆ, ಅನ್ಯ ಮಂತ್ರಗಳಿಂದ ಏನು ಫಲ.

ಇಂತಪ್ಪ ಪವಿತ್ರವಾದ ಹಾಗೂ ಪರಶಿವ ಬ್ರಹ್ಮದ ನಿತ್ಯೈಶ್ವರ್ಯವೆನಿಸಿ, ವೇದಾಗಮಗಳಲ್ಲಿ ಅನಾದಿಕಾಲದಿಂದ ಸ್ತುತ್ಯವಾದ ಶ್ರೀ ವಿಭೂತಿ, ರುದ್ರಾಕ್ಷಿ, ಮತ್ತು ಶಿವ ಪಂಚಾಕ್ಷರೀ ಮಹಾಮಂತ್ರ ಗಳನ್ನು ಬಿಡದೆ, ದಿನವಹಿ ತ್ರಿಕಾಲಂ ಗಳಲ್ಲೂ ಅವ್ಯಭಿಚಾರಿಣೀ ಭಕ್ತಿಭಾವದಿಂದ ಆಚರಣೆಯಲ್ಲಿ ಯಥಾಶಕ್ತಿ ಆಚರಿಸುತ್ತಾ ಬಂದರೆ, ನಾವು ಜನ್ಮ ಜನ್ಮಾಂತರ ಕೋಟಿ ಜನ್ಮಗಳಲ್ಲಿ ಮಾಡಿದ, ಅಖಿಲ ಘೋರ ಪಾತಕ ರಾಶಿಗಳು, ಕ್ರಮೇಣ ನಶಿಸಿ, ॥ **ಶುದ್ಧಾಂತಃ ಕರಣೋಪೇತೌ । ಪಿಂಡ ಶಬ್ದೇನ ಗೀಯತೇ** ॥ ಎಂಬ ಸಿದ್ಧಾಂತ ಶಿಖಾಮಣಿಯ ಭಕ್ತಸ್ಥಲದ 15 ಉಪಸ್ಥಲ ಗಳಲ್ಲಿ, ಮೊಟ್ಟ ಮೊದಲ ಸ್ಥಲ ಪರಮ ಪಿಂಡ ಸ್ಥಲದವರೆನಿಸಿಕೊಳ್ಳುವೆವು. ವೀರ ಶೈವ ಸಿದ್ಧಾಂತ ಪ್ರಕಾರ "ಪಿಂಡ " ಎಂದರೆ " ಭೂಮಾ " ಎಂದರ್ಥ. ಅರ್ಥಾತ್ ಶಿವಲಿಂಗ, ಅಥವಾ ಇಷ್ಟಲಿಂಗ ಸ್ವರೂಪಿ ಎಂದರ್ಥ. ಕೀಟ ಭ್ರಮರ ನ್ಯಾಯಾನು ಸಾರೇಣ ॥ **ಮಾನವಃ ಶಿವಯೋಗೇನ ಶಿವೋ ಭವತಿ, ಕೇವಲಂ** ॥ ಎಂದು ಶಾಸ್ತ್ರ ಪ್ರಮಾಣವಿದೆ.

ಇಂತಪ್ಪ ವಿಶ್ವ ಧರ್ಮವನ್ನು **ಶ್ರೀ ಗುರುಮುಖದಿಂದ** ಅರಿತು ನಿತ್ಯಾಚರಣೆ ಯಲ್ಲಿ ಯಥಾಶಕ್ತಿ ಅನುಷ್ಠಾನ ಪರನಾದಾತನೇ, ನಿಜಕ್ಕೂ ಮಾನವರಲ್ಲಿ ಶ್ರೇಷ್ಠ ಮಾನವನೆನಿಸಿರುವನು. ಇಂಥಾ " ಮಾನವ ಧರ್ಮಕ್ಕೆ ಜಯವಾಗಲಿ " ಎಂಬುದೇ ಮಹಾ ಗುರುವಿನ ನಿರಂತರವಾದ ಸಿಂಹವಾಣಿ. ಭಕ್ತನು ಶ್ರೀ ಗುರುಲಿಂಗ ಜಂಗಮರ ಮಹತ್ವವನ್ನರಿತು ಸೇವಿಸುವುದೇ ನಿತ್ಯದ ಇಷ್ಟಲಿಂಗಾರಾಧನೆಯ ಅನುಸಂಧಾನ ವೆನಿಸಿರುತ್ತೆ.

ಶಿವಾಂಶ ಸಂಭೂತರಾದ ಶ್ರೀ ಶೃಂಗೇರಿ ಆದಿ ಶ್ರೀ ಶಂಕರಾಚಾರ್ಯರಿಗೆ, ಶ್ರೀಶೈಲ ಭ್ರಮರಾಂಬಾ ಸಮೇತನಾದ ಶ್ರೀ ಗಿರಿ ಮಲ್ಲಿಕಾರ್ಜುನನು ಆದೇಶವಿತ್ತಂತೆ, ಶಿವಲಿಂಗೋದ್ಭವರಾದ ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ, ಸಾಕ್ಷಾತ್ ಶ್ರೀ ಶ್ರೀ ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರಿಂದ, **ಶ್ರೀರತ್ನ ಗರ್ಭ ಗಣಪತಿ ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗ ಅನುಗ್ರಹೀತವಾದ,** ಮಂಗಳಮಯ ವೃತ್ತಾಂತವನ್ನೊಳಗೊಂಡ, ಈ ಸದ್ಗ್ರಂಥದ ರಚನೆಗೆ, ಮೇಲ್ಕಂಡ ವಿಷಯವನ್ನು ಮಂಗಳ ಪೀಠಿಕೆಯಾಗಿ ಪರಿಗಣಿಸಿ. ಗ್ರಂಥಕರ್ತರು. ಭಕ್ತಿ ಭಾವದಿಂದ ಶ್ರೀ ಉಭಯಾಚಾರ್ಯರ ಶ್ರೀಪಾದಾರವಿಂದಗಳಲ್ಲಿ ಅನಂತ ಶಿರಸಾಷ್ಟಾಂಗ ಪ್ರಣಾಮಂ ಗಳನ್ನು ಪ್ರಥಮತಃ ಅರ್ಪಿಸಿ, ಈ ಗ್ರಂಥದಲ್ಲಿ ಮುಂದೆ ಕಾಣುವ ಮಹದಂಶಗಳನ್ನು ವಿಷಯಾನುಕ್ರಮಣಿಕೆಯಲ್ಲಿ ವಿವರಿಸಿರುತ್ತಾರೆ.

**ಪೀಠಿಕಾ ದ್ವಿತೀಯ ಭಾಗ ಸಮಾಪ್ತಿ**

## ಶ್ರೀ ಗುರುಣಾಂ ಗುರುವೇ ನಮಃ

## ಗ್ರಂಥಕರ್ತರ ನಲ್ನುಡಿ

॥ ಈಶನಿಂ ವ್ಯಾಪ್ತಂ ಚರಾಚರಜಗತ್ ; ಅದಂ ।
ಈಶಪ್ರಸಾದ ಮೆನ್ನುತುಣು । ತೊರೆ ಪರಧನಮಂ ॥ ॥ ೧ ॥

॥ ಕರ್ಮ ಲೇಪಿಸದಿಹುದೇ । ಜೀವಿಸು ಶತವರ್ಷಂ ।
ಕರ್ಮಮಂ ಗೈಯುತಿರೆ । ಪೆರತಿಲ್ಲ ಬಿಡಲಿದಂ ॥ ॥ ೨ ॥

( ಈಶೋಪನಿಷತ್ )

ಶ್ರೀ ಶೃಂಗೇರಿ ಆದಿ ಶ್ರೀ ಶಂಕರಾಚಾರ್ಯರಿಗೆ, ಶ್ರೀ ಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ಆದಿ ಶ್ರೀಮಜಗದ್ಗುರು ರೇವಣಸಿದ್ಧರು, ಕರುಣೆಯಿಂದ ಶ್ರೀ ರತ್ನಗರ್ಭ ಗಣಪತಿಯನ್ನು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ; ಶ್ರೀ ಶೈಲ ಭ್ರಮ ರಾಂಬಾ ಸಮೇತನಾದ, ಶ್ರೀ ಗಿರಿ ಮಲ್ಲಿಕಾರ್ಜುನನ ದಿವ್ಯ ಪ್ರೇರಣೆಯಂತೆ ಅನುಗ್ರಹಿ ಸಿದರು. ಆದಿ ಶ್ರೀ ಶಂಕರರು ಸಹಜವಾಗಿ ಚತುರ್ವೇದಗಳ ಮಹಾ ವಾಕ್ಯಗಳನ್ನು ಅಂದರೆ, " ಅಹಂ ಬ್ರಹ್ಮಾಸ್ಮಿ ; ಅಯಮಾತ್ಮಾ ಬ್ರಹ್ಮ ಪ್ರಜ್ಞಾನಂ ಬ್ರಹ್ಮ ಮತ್ತೂ ತತ್ವಮಸಿ " ಸದಾ ಪಠಿಸುತ್ತಾ ಅಂತರಂಗದಲ್ಲಿ ಧ್ಯಾನಿಸುತ್ತಲಿದ್ದರು, " ನ ಹಿ ಜ್ಞಾನೇನ ಸದೃಶಂ । ಪವಿತ್ರ ಮಿಹ ವಿದ್ಯತೇ ' ಎಂಬ ಗೀತೋಕ್ತಿ ಶ್ರೀ ಶಂಕರರಿಗೆ ಪ್ರೇರಕ ಶಕ್ತಿಯಾಗಿತ್ತು. ಅವರ ಅದ್ವೈತ ಮತ ಸಿದ್ಧಾಂತದಂತೆ ॥ ಬ್ರಹ್ಮ ಸತ್ಯಂ ಜಗನ್ಮಿಥ್ಯಾ । ಜೀವೋ ಬ್ರಹ್ಮೈವ ನ ಪರಃ ॥ ಎಂಬುದೇ ಆಗಿದೆ. ಸಾಯುಜ್ಯ ಮೋಕ್ಷಕ್ಕೆ ಶಿವ ಪರವಾದ ಜ್ಞಾನ ವಂದೇ ಕಾರಣ. ಕರ್ಮ ಜಡವಾದ್ದರಿಂದ ಅರಿವು, ಆನಂದಗಳಿಗೆ ಸಮಾನವೆನಿಸಲಾರದೆಂದು ಅವರ ನಂಬಿಕೆ. ಆದ್ದರಿಂದ ಕರ್ಮ, ಜ್ಞಾನವಾಗಲಾರದೆಂದು ಶ್ರೀಶಂಕರರ ಸ್ವಚ್ಛವಾದ ಅಭಿಮತ. ಕರ್ಮ ಇತ್ತೆರವಾಗಿದೆ ಒಂದು ಸಕಾಮ ಕರ್ಮಾಚರಣೆ, ಮತ್ತೊಂದು ನಿಷ್ಕಾಮ ಕರ್ಮಾಚರಣೆ. ಸಕಾಮ ಕರ್ಮ, ಆಶಾ ಪಾಶಾದಿ ಜಟಿಲವಾದ ಬಂಧನಕ್ಕೆ ಕಾರಣವಾಗಿದೆ. ಇದರಿಂದ ಮನಸ್ಸು ಅಶುದ್ಧವಾಗಿದ್ದು, ಅಸಂಖ್ಯಾತ ಕಾಮ ಸಂಕಲ್ಪಗಳಿಗೆ ಆಗರವೆನಿಸಿರುವುದು. ನಿಷ್ಕಾಮ ಕರ್ಮಾಚರಣೆಯಿಂದ, ಮನಸ್ಸು ' ಕಾಮ ವಿವರ್ಜಿತಂ ', ಅಂದರೆ ಶುದ್ಧಾಂತಃಕರಣವುಳ್ಳದಾಗುತ್ತೆ; ಇಲ್ಲಿಗೆ ಕರ್ಮದ ಕಾರ್ಯ ವಿರಮಿಸುತ್ತೆ. ಜ್ಞಾನ ದೊಂದಿಗೆ ಕರ್ಮ ಸರಿಸಾಟಿಯೆನಿಸಲಾರದೆಂಬುದೇ ಶ್ರೀ ಶಂಕರರ ಅಭಿಮತ ॥ ಜ್ಞಾನಂ ಕ್ರಿಯ ನ ಭವತಿ ॥ ಎಂಬುದು ಅದ್ವೈತದ ತಿರುಳು. ಉಪನಿಷದಾದಿಗಳಲ್ಲಿ ಕಾಣುವ ಅದ್ವೈತ ಪರವಾದ ಮಂತ್ರ ಭಾಗಗಳನ್ನು ಶ್ರೀ ಶಂಕರಾಚಾರ್ಯರು ಆರಿಸಿ ಕ್ರೋಢೀ-

ಕರಿಸಿ, ಏಕ ಪಕ್ಷೀಯವಾಗಿ ತಮ್ಮ ಅದ್ವೈತ ಸಿದ್ಧಾಂತವನ್ನು ರೂಪಿಸಿರುತ್ತಾರೆ. ಉಪನಿಷದ್ ಮಂತ್ರಗಳು ದ್ವೈತಪರವಾಗಿಯೂ, ವಿಶಿಷ್ಟಾದ್ವೈತ ಪರವಾಗಿಯೂ, ಅದ್ವೈತ ಪರವಾಗಿಯೂ, ಶಕ್ತಿ ವಿಶಿಷ್ಟಾದ್ವೈತ ಅಂದರೆ ಶಿವಾದ್ವೈತ ಪರವಾದ ಅರ್ಥ ಗಾಂಭೀರ್ಯದಿಂದ ಕೂಡಿ, ತುಂಬಿದ ತೊರೆಯಂತೆ ಇವೆ. ತ್ರಿಮತಾಚಾರ್ಯರು, ತಂತಮ್ಮ ಮತ ಧರ್ಮಕ್ಕೆ ಪುಷ್ಟಿ ಕೊಡುವ ಮಂತ್ರ ಭಾಗಗಳ ಕಡೆ ಏಕ ಪಕ್ಷೀಯ ವಾಗಿ ಲಕ್ಷ್ಯವಿರಿಸಿರುವರು. ವೀರಶೈವ ಮತ ಸ್ಥಾಪನಾಚಾರ್ಯರು, ಶ್ರೀ ವ್ಯಾಸಾ ಚಾರ್ಯರ ಉಕ್ತಿಯಂತೆ, ದ್ವಾಪರ ಯುಗದಾದಿ ಕಾಲದಲ್ಲೇ, ಸರ್ವ ಶೃತಿಗಳಿಗೆ, ಹಾಗೂ ಪ್ರಸ್ಥಾನತ್ರಯಗಳಿಗೆ, ವಿಶಾಲಾರ್ಥ ಗರ್ಭಿತವಾದ, ಸರ್ವಧರ್ಮ ಸಮನ್ವಯ ಹಾಗೂ ಸರ್ವ ಶೃತಿಸಮನ್ವಯಾರ್ಥ ಗರ್ಭಿತವಾದ ರೀತಿಯಲ್ಲಿ ಸಮಂಜಸವಾಗಿ ವ್ಯಾಖ್ಯೆಗಳನ್ನು ಅಧಿಕೃತವಾಗಿ ಅಂದೇ ಮನಗಂಡು ರಚಿಸಿ, ಜಗತ್ತಿಗೆ ಬೆಳಕನ್ನು ನೀಡಿ ಅಖಂಡವಾಗಿ ಬೋಧಿಸಿರುತ್ತಾರೆ.

ಪರಮ ವೀರಶೈವ ಧರ್ಮ ಶಕ್ತಿ ವಿಶಿಷ್ಟಾದ್ವೈತವೆಂದು, ಯುಗ ಯುಗಾಂತರ ಗಳಿಂದ ಶೃತ್ಯಾಧಾರಗಳನ್ನೊಳಗೊಂಡಂತೆ, ಸುಪ್ರಸಿದ್ಧವಿರುವುದು. ಈ ಮತ ಸಿದ್ಧಾಂತವನ್ನು ವಿಶೇಷತಃ, ಶಿವಾಗಮೋಕ್ತಿಗಳಂತೆ, ಭೇದಾಭೇದ ಅಥವಾ ದ್ವೈತಾ ದ್ವೈತ ಮತವೆಂದೂ, ವಿಶೇಷಾದ್ವೈತ ಮತ ಮತ್ತು ಶಿವಾದ್ವೈತ ಮತವೆಂದೂ, ಪ್ರತೀತಿಯಿದೆ. ಮತ್ತು ಈ ಮತವನ್ನು ಷಟ್ಸ್ಥಲಾತ್ಮಕ ಏಕೋತ್ತರ ಶತಸ್ಥಲದ ಮತವೆಂದು ಕರೆಯಲಾಗಿದೆ. ವೀರಶೈವ ಸಿದ್ಧಾಂತದಂತೆ, ಪರಶಿವ ಬ್ರಹ್ಮವು ಸಹಜ ವಾಗಿಯೇ ಶಿವಶಕ್ತಿ ಸಂಪುಟದಿಂದ ವಿರಾಜಿಸುತ್ತ ಅದ್ವಿತೀಯವೆನಿಸಿದೆ. ಈ ಮಹೋನ್ನತವಾದ ತತ್ವವನ್ನು " ಸಾಂಬ " ನೆಂದು ಉಚ್ಚರಿಸುವುದರಲ್ಲಿ ಅರ್ಥ ಪೂರ್ಣವಿದೆ. ಸಾಂಬನೆಂದರೆ ॥ **ಉಮೆಯೊಾ ಸಹವರ್ತತೆ ಸಾಂಬಃ** ॥ ಎಂದು ಶ್ರೀ ಜಗದ್ಗುರು ಪಂಚಾಚಾರ್ಯರು ಉಲ್ಲೇಖಿಸಿರುತ್ತಾರೆ. ಭಗವತ್ಪಾದ ಶ್ರೀ ರೇಣುಕಾಚಾರ್ಯರು ॥ ತದೀಯಾ ಪರಮಾಶಕ್ತಿಃ । ಸಚ್ಚಿದಾನಂದ ಲಕ್ಷಣಾ । ಸಮಸ್ತ ಲೋಕ ನಿರ್ಮಾಣ । ಸಮವಾಯ ಸ್ವರೂಪಿಣಿಃ ॥ ಃದಿ ಜ್ಞೆಯಾಭವತ್ ಸಾಕ್ಷಾತ್ತತ್ಸ್ವರೂಪಾನುಕಾರಿಣೀ । ಸ ಶಂಭು ರ್ಭಗರ್ವಾ ದೇವಃ । ಸರ್ವಜ್ಞಃ ಸರ್ವ ಶಕ್ತಿಕಃ ॥ ಎಂದಿರುವರು ( ಸಿ. ಶಿ. ಅ. ೨ ಶ್ಲೋ. 12–13 )

ಈ ಮಹದಂಶವನ್ನೇ ಮತ್ತಷ್ಟು ಉಜ್ವಲವಾಗಿ, ಶ್ರೀ ಭಗವತ್ಪಾದ ರೇಣುಕಾ ಚಾರ್ಯರು ವಿವರಿಸುತ್ತಾ, ಹೇ ಮುನಿಸತ್ತಮಾ ಸ್ವಲ್ಪ ಲಾಲಿಸು—

॥ ಭೋಕ್ತಾ ಭೋಜ್ಯಂ ಪ್ರೇರಯಿತಾ । ಸರ್ವಮೇತಚ್ಚರಾಚರಂ ॥

ಭಾವಯನ್ ಶಿವರೂಪೇಣ । ಶಿವೋ ಭವತಿ ವಸ್ತುತಃ ॥
( ಸಿ. ಶಿ, ಅ. 17 ಶ್ಲೋ. 50 )

ಅಹಹ ! ಇದು ಎಂಥಾ ಕಡು ಸತ್ಯ. ಸಕಲೋಪನಿಷತ್ತುಗಳ ಸಾರವಿದು. ಕಾಮಿಕಾದಿ, ವಾತುಲ ಪರ್ಯಂತವಿರುವ 28 ಶಿವಾಗಮಗಳ ಸಾರ ಸರ್ವಸ್ವವಿದು. ಮೃಣ್ಮಯವಾದೀ ದೇಹದಲ್ಲಿದ್ದು ಎಲ್ಲವನ್ನು ಅನವರತ ಉಪ ಭೋಗಿಸುತ್ತಿರುವ ಜೀವಾತ್ಮನು, ಅನುಭವಿಸಲು ಹಸ್ತಗತವಾದೀ ಸಮಸ್ತ ಧನಕನಕ, ಕಾಮಿನಿ, ವಸ್ತು ವಾಹನಾದಿ ಗಳನ್ನು ಆನಂದದಿಂದ ಉಪ ಭೋಗಿಸಲು, ಪ್ರಧಾನ ಪ್ರೇರಕ ಶಕ್ತಿಯಾಗಿ, ಸರ್ವಾಂತರ್ಯಾಮಿಯಾಗಿರುವ ಪರಶಿವನೂ ; ಹೀಗಾಗಿ ಸಕಲ ಚರಾ ಚರಾತ್ಮಕವಾದ ಅಖಂಡ ಜಗತ್ತೆಲ್ಲವನ್ನೂ ಶಿವ ಸ್ವರೂಪವೆಂದು ದೃಢವಾಗಿ ನಂಬಿ ರುವ ಪುಣ್ಯ ಪುರುಷನು ॥ ಮಾನವಃ ಶಿವಯೋಗೇನ । ಶಿವೋಭವತಿ ಕೇವಲಂ॥ ಎಂಬ ಶೃತಿ ವಾಣಿಯಂತೆ ಶಿವನೇ ಆಗುವನು. ಮಹಾಕವಿ ಕಾಳಿದಾಸನು ಶಿವನನ್ನು ಹೃದಯಾರ ಸ್ತುತಿಸುತ್ತಾ, ಪೃಥ್ವಿ, ಅಪ್, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಆತ್ಮ ಈ ಎಂಟು ರೂಪಗಳು ವಿರಾಡ್ ಪುರುಷನಾದ ಪರಶಿವನ ದೇಹಗಳೆಂದು ಭಕ್ತ್ಯಾಸ್ಮರಿಸಿ ವಂದಿಸಿರುವನು. ಷಟ್ಸ್ಥಲ ಸಿದ್ಧಾಂತದಲ್ಲಿ, ಶಿವ ಪಂಚಾಕ್ಷರೀ ಮಹಾಮಂತ್ರ ಬೀಜಾಕ್ಷರಗಳ ತತ್ವದ ಆಧಾರದ ಮೇಲೆ ಪಂಚಭೂತಗಳು ನೆಲಸಿವೆಯೆಂದು ಪ್ರೋಕ್ತವಿದೆ. ಪೃಥ್ವಿ ತತ್ವವು ನಕಾರ ಬೀಜಾಕ್ಷರ ಸ್ವರೂಪವಾದ ಪೃಥ್ವಿಲಿಂಗದ ಆಧಾರದ ಮೇಲೆ ಸುಭದ್ರತಾಗಿ ನಿಂತಿದೆ. ಮಕಾರ ಬೀಜಾಕ್ಷರ ಸ್ವರೂಪವಾದ ಅಪ್‌ಲಿಂಗದ ಆಧಾರದ ಮೇಲೆ ಅಖಂಡ ಅಪ್ ತತ್ವವೂ ; ಶಿಕಾರ ಮಹಾ ಬೀಜಾಕ್ಷರ ಸ್ವರೂಪವಾದ ಅಗ್ನಿಲಿಂಗದ ( ಪರಂಜ್ಯೋತಿರ್ಲಿಂಗದ ) ಆಧಾರದ ಮೇಲೆ ತೇಜಸ್ ತತ್ವವು ಸುಭದ್ರವಾಗಿ ನಿಂತಿದೆ. ; ವಕಾರ ಬೀಜಾಕ್ಷರ ಸ್ವರೂಪವಾದ ವಾಯುಲಿಂಗದ ಆಧಾರದ ಮೇಲೆ, ಮಹಾವಾಯು ತತ್ವವೂ ; ಮತ್ತು ಯಕಾರ ಬೀಜಾಕ್ಷರ ಸ್ವರೂಪವಾದ ಆಕಾಶಲಿಂಗ ತತ್ವದ ಮೇಲೆ, ಅಖಂಡಾ ಕಾರವೂ, ಸೂಕ್ಷ್ಮಾತಿ ಸೂಕ್ಷ್ಮವೂ ಆದ ಆಕಾಶತತ್ವವೂ, ಅನಾದಿ ಕಾಲದಿಂದ ದೃಢತರ ವಾಗಿ ನಿಂತಿವೆ ಎಂದು ಹೃದಯಂಗಮವಾಗಿ ಉಪದೇಶಿಸಿರುವರು. ॥ ಸದ್ಯೋಜಾತಾ ದಯಃ ॥ ಎಂಬ ಶೃತಿವಾಣಿಯಂತೆ ಪೃಥ್ವಿ ತತ್ವಕ್ಕೆ ಶ್ರೀ ಜಗದ್ಗುರು ರೇಣುಕಾ ಚಾರ್ಯರೂ ; ಅಪ್‌ತತ್ವಕ್ಕೆ ಶ್ರೀ ಜ॥ ದಾರುಕಾಚಾರ್ಯರೂ : ಅಗ್ನಿತತ್ವಕ್ಕೆ ಶ್ರೀ ಜ॥ ಏಕೋರಾಮಾರಾಧ್ಯರೂ, ವಾಯುತತ್ವಕ್ಕೆ ಶ್ರೀ ಜ॥ ಪಂಡಿತಾರಾಧ್ಯರೂ ಮತ್ತು ಆಕಾಶತತ್ವಕ್ಕೆ ಶ್ರೀ ಜ॥ ವಿಶ್ವಾರಾಧ್ಯ ಮಹಾ ಶಿವಾಚಾರ್ಯರುಗಳು ನಿರಂತರ ಅಧಿ ಪತಿಗಳಾಗಿರುವರು. ಈ ಕಾರಣದಿಂದ ಆ ಆ ಜ್ಯೋತಿರ್ಮಯ ಶಿವಲಿಂಗ ಮುಖ ಗಳಿಂದ ಭುವಿಯಲ್ಲಿ ಶಿವನಾಜ್ಞೆಯಂತೆ, ಶ್ರೀ ಪಂಚ ಆದಿ ಜಗದ್ಗುರುವರೇಣ್ಯರು,

॥ ಇಚ್ಛಾ ಮಾತ್ರ ಪ್ರ.ಭೋ ಸೃಷ್ಟಿಃ ॥ ಎಂಬಂತೆ, ಶಿವನ ಚಿತ್ಕಳಾರೂಪಿಗಳಾಗಿ ದಿವ್ಯ ಮಂತ್ರಮಯ ದೇಹಿಗಳಾಗಿ ಅವತರಿಸಿ, ಪಂದೊಂದು ಘನತತ್ವಕ್ಕೆ ಸಹಜ ವಾಗಿಯೇ ಆದಿ ಜಗದ್ಗುರುಗಳೆಂದು ಶಿವಾಗಮಗಳಲ್ಲಿ ಸ್ತುತ್ಯರೆನಿಸಿರುವರು. ಇವರು ಗಳಿಗೆ, ಪಾಂಚಭೌತಿಕ ತತ್ವಗಳೇ ಪಂಚ ಸಿಂಹಾಸನಗಳಾಗಿ ರೂಪಗೊಂಡಿರುವುವು.

ಪರಾಶಕ್ತಿ, ಪರಶಿವನೊಂದಿಗೆ ಅವಿನಾಭಾವ ಸಂಬಂಧದಿಂದ ಯಿರುವಕಾರಣ ಜಗಜ್ಜನ್ಮಾದಿಹೇತುವೆನಿಸಿರುವಳು. ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯ ಶಕ್ತಿ ಸ್ತುತಿಯಲ್ಲಿ ಇದೇ ಅಂಶವನ್ನು ಹೊರಸೂಸುವಂತೆ ॥ ಯಾ ಮಾ ಹುಃ ಸರ್ವಲೋಕಾನಾಂ । ಪ್ರಕೃತಿಂ ಶಾಸ್ತ್ರ ಪಾರಗಾಃ ॥ ತಾಂ ಧರ್ಮಚಾರಿಣೀಂ ಶಂಭೋಃ । ಪ್ರಣಮಾಮಿ ಪರಾಂ ಶಿವಾಂ ॥ ಎಂದು ಸ್ತುತಿಸಿರುವರು. ಅದ್ವಿತೀಯ ಪರಶಿವ ಬ್ರಹ್ಮದಲ್ಲಿ ಸಹಜವಾಗಿಯೇ ಉಪಕ್ರಮೋಪ ಸಂಹಾರಗಳ ಐಕ್ಯಶಕ್ತಿ ನೆಲೆಸಿರು ವುದು. ಇದರಿಂದ ಜಗಜನ್ಮಾದಿ ಕಾರಣತ್ವವು ಪರಬ್ರಹ್ಮದಲ್ಲಿ ಸಹಜ ಸಿದ್ಧವಿರುವುದು ಪ್ರಸಿದ್ಧವಿರುವ ಈಶ್ವರೀಯ ಪರಾಶಕ್ತಿಯು ಕಿಂಚಿದಂಶದಿಂದ ಅಖಿಲಾಂಡಕೋಟಿ ಬ್ರಹ್ಮಾಂಡಗಳ ನಿರ್ಮಾಣದಲ್ಲಿ ಸಮವಾಯ ಸ್ವರೂಪದಿಂದ ಪರಶಿವ ಲಿಂಗದಲ್ಲಿ " ಲಿಂಗಂ ಚಿದಾತ್ಮಕಂ ಬ್ರಹ್ಮ । ತಚ್ಛಕ್ತಿಃ ಪ್ರಾಣರೂಪಿಣಿ " ಎಂಬ ಶೃತಿವಾಕ್ಯದಂತೆ ಶಕ್ತಿಯು ಶಿವನಿಗೆ ಪ್ರಾಣರೂಪವೆನಿಸಿ, " ಉಮಯಾ ಸಹವರ್ತತೇ ಸಾಂಬಃ " ಎಂದು ಸ್ತುತ್ಯವಿರುವಳು. ಶಿವನೆಂತೋ ಅಂತೆಯೇ ಶಕ್ತಿಯು ಸಚ್ಚಿದಾನಂದ ನಿತ್ಯ ಪರಿಪೂರ್ಣ ಸ್ವರೂಪಳೆನಿಸಿರುವಳು. ಈ ಶಿವಶಕ್ತಿ ಸಂಪುಟವನ್ನೇ ಶೃತಿ ದೇವಿಯು ॥ ಅಥ ಏವ ಪ್ರಾಣಃ ॥ ಪರಶಿವ ಬ್ರಹ್ಮದ ಪ್ರಾಣವಂತೆ ಎಂದು ಸುಂದರ ವಾಗಿ ಉದಹರಿಸಿರುವಳು.

॥ ನ ಶಿವೇನ ವಿನಾ ಶಕ್ತಿಃ ನ ಶಕ್ತಿಃ ರಹಿತಃ ಶಿವಃ ॥
ಪುಷ್ಪ ಗಂಧವದನ್ಯೋನ್ಯಂ । ಮಾರುತಾಂಬರ ಯೋರಿವ ॥

ಎಂತು ಗಂಧವನ್ನು ಬಿಟ್ಟು ಪುಷ್ಪವಿಲ್ಲವೋ, ಆಕಾಶದೊಡಲನ್ನಗಲಿ ಗಾಳಿ (ವಾಯು) ಯಿರಲಿಕ್ಕಿಲ್ಲವೋ, ತದ್ವತ್ ಶಿವನನ್ನು ಬಿಟ್ಟು ಶಕ್ತಿಯಿಲ್ಲ. ಇದೇ ಅಂಶ ವನ್ನು ಮಹಾಕವಿ ಕಾಳಿದಾಸನು ರಘುವಂಶ ಮಹಾಗ್ರಂಥದ ಮಂಗಳ ಸ್ತುತಿಯಲ್ಲಿ ॥ ವಾಗರ್ಥಾ ವಿವಸಂಪೃಕ್ತೌ । ವಾಗರ್ಥಃ ಪ್ರತಿ ಪತ್ತಯೇ ॥ ಜಗತಃ ಪಿತರೌವಂದೇ। ಪಾರ್ವತೀ ಪರಮೇಶ್ವರೌ ॥ ಅಂದರೆ ಹೇಗೆ ಮಾತಾಡುವ ಪ್ರತಿ ಮಾತಿಗೂ ಆ ಶಬ್ದ ದಲ್ಲೇ ಅರ್ಥ ಅಡಗಿದೆಯೋ, ಶಬ್ದದಿಂದ ಆ ಶಬ್ದಾರ್ಥಭಿನ್ನವಿಲ್ಲವೋ ಇದರಂತೆ ಜಗ ತ್ತಿನ ತಾಯಿ ತಂದೆ, ತಾನೇ ಆದ ಶಿವ ಶಕ್ತಿ ಸಂಪುಟವನ್ನು ವಂದೇಯೆಂದು ಭಕ್ತ್ಯಾ ವಂದಿಸಿರುವನು. ಕಡಲೆಯ ಹಸಿ ಬೀಜವನ್ನು ಹದವಾದ ಭೂಮಿಯಲ್ಲಿ ಬಿತ್ತಿ

ನೀರೆರೆವರೆ, ಅದು ಎಂದೆರಡು ದಿನಗಳಲ್ಲಿ ವಿಜೃಂಭಣೆಯಿಂದ ಉಬ್ಬಿ, ನಂತರ ಕಷ ಲೊಡೆದು. ಕೋಮಲವಾದ ಎರಡೆಲೆಗಳು ಭೂಮಿಯ ಮೇಲೆದ್ದು ಚಿಗುರಿರುವು ದನ್ನು ನಾವು ಕಂಡಿದ್ದೇವೆ. ಇದರಂತೆ ನಿಷ್ಕಲ ಬ್ರಹ್ಮ ಸ್ವರೂಪಿಯಾದ ಪರಶಿವ ಬ್ರಹ್ಮವು, ತಾನೇ ತಾನಾಗಿ ಅದ್ವಿತೀಯವೆನಿಸಿ ನಿರಾಕಾರ ರೂಪದಿಂದ ಸಚ್ಚಿದಾನಂದ ನಿತ್ಯ ಪರಿಪೂರ್ಣ ಪರಾತ್ಪರ ವಸ್ತುವೆನಿಸಿರುವುದು. ಅದ್ವಿತೀಯವಾದೀ ಪರಶಿವ ತತ್ವ ದಲ್ಲಿ ಓಂಕಾರವು, ॥ ನಿಸ್ತರಂಗ ಸಮುದ್ರೇ । ತರಂಗೋತ್ಪತ್ತ್ಯೈಃ । ಪ್ರಾಕ್‌ಲಹ ರೀವ ಈಶಚ್ಚಲನ ಮುತ್ಪದ್ಯತೇ ॥ ಎಂಬಂತೆ, ಒಮ್ಮೆ ಪರಮ ಶಾಂತವಾಗಿರುವ ಸಾಗರದ ಮೇಲ್ಭಾಗದ ಮುಸುಕಿನಲ್ಲಿ, ಇದ್ದಕ್ಕಿದ್ದ ಹಾಗೆ ಸಣ್ಣಪುಟ್ಟ ಅಲೆಗಳೆದ್ದು ನಂತರ ಭೋರ್ಗರೆಯುವ ಕೋಟ್ಯಾನುಕೋಟಿ ತರಂಗಗಳು, ಧುಮ್ಮಿಕ್ಕುವುದನ್ನು ನಾವು ನೋಡುತ್ತೇವೆಯಷ್ಟೆ.

ಇದರಂತೆ; " **ಏಕಮೇವಾದ್ವಿತೀಯಂ ಬ್ರಹ್ಮ** " ಎಂಬ ಪರಶಿವನು " ಏಕಾಕಿ ನ ರಮತೆ " ಎಂಬ ಸಂಕಲ್ಪದಿಂದ ; ಜಗತ್ತನ್ನು ತನ್ನ ವಿನೋದಕ್ಕಾಗಿ ಸೃಷ್ಟಿಸಬೇಕೆಂಬ ಇಚ್ಛೆ ಪರಮಾತ್ಮನ ದಿವ್ಯ ಮನೋ ಮಂಡಲದಲ್ಲಿ ಭಾಸವಾ ದೊಡನೆ; ॥ **ತಪಸಾ ಚೀಯತೇ ಬ್ರಹ್ಮ** ॥ ಅಂದರೆ ತಪಸ್ಸಿನಿಂದ ಪರಬ್ರಹ್ಮವು ವಿಜೃಂಭಿಸಿ ಉಬ್ಬುತ್ತೆ. ॥ **ತಪಸಸ್ತನ್ಮಹಿನಾ ಜಾಯತೈಕಂ** ॥ ಜಗತ್ತನ್ನು ಸೃಷ್ಟಿ ಮಾಡಬೇಕೆಂಬ ಸಂಕಲ್ಪ, ಬ್ರಹ್ಮದ ತಪಸ್ಸಿನ ಫಲವಾಗಿ ಉಂಟಾಯಿತು. ಈ ಸಂಕಲ್ಪಕ್ಕೆ ತತ್ಪೂರ್ವ ಶಕ್ತಿ ಶಿವನಲ್ಲಿ " ನನೆಯೊಳಗಣ । ಪರಿಮಳದಂತೆ ಇದ್ದಿತ್ತು " ಕೂಡಲೇ —

॥ ಕಾಮಸ್ತದಗ್ರೇ ಸಮವರ್ತತಾಧಿ ।
ಮನಸೋ ರೇತಃ ಪ್ರಥಮಂ ಯದಾಸೀತ್ ॥
ಸತೋ ಬಂಧುಃ ಮಸತಿ, ನಿರವಿಂದನ್ ।
ಹೃದಿ ಪ್ರತೀಷ್ಯಾಃ ಕವಯೋ ಮನೀಷಾ ॥

( ಋಗ್ವೇದದ ನಾಸದೀಯ ಸೂಕ್ತ ಮಂತ್ರ 4 )

ಪರಮಾತ್ಮನ ಮನಸ್ಸಿನಲ್ಲಿ ಮೊಟ್ಟ ಮೊದಲು, ತಪಸ್ಸಿನ ಫಲವಾಗಿ ಜಗತ್ತನ್ನು ಸೃಷ್ಟಿಸಬೇಕೆಂಬ ಏಂದು ದೃಢ ಸಂಕಲ್ಪವು ಉಂಟಾಯಿತು. ಬೀಜರೂಪದಲ್ಲಡಗಿದ್ದ ವಿಶ್ವವನ್ನು ಸೃಜಿಸಬೇಕೆಂಬ ಇಚ್ಛೆಯೇ ಇಚ್ಛಾಶಕ್ತಿಯಾಗಿ ರೂಪಗೊಂಡಿತು. ಈ ಶಕ್ತಿಯಿಂದ ಜ್ಞಾನ ಶಕ್ತಿ ಮತ್ತೂ ಕ್ರಿಯ ಶಕ್ತಿಗಳು ಉದ್ಭವಿಸಿ, ಈ ಶಕ್ತಿತ್ರಯಗಳ ಕಾರ್ಯರೂಪವೇ ಚರಾಚರಾತ್ಮಕವಾದೀ ಜಗತ್ತು. ಇಂತು ಅಸತ್ತಿನಿಂದ ಸತ್‌ಯೆನಿ ಸುವ, ವ್ಯಕ್ತ ಜಗತ್ತು ಸೃಷ್ಟಿಯಾಗುವ ಸಂಬಂಧವು ಮೊದಲು ಆಯಿತು. ಈ

ಅಂಶವನ್ನೇ ॥ ಅಸದ್ವಾಯಿದ ಮಗ್ರಆಸೀತ್ ॥ ಅಸತ್ತಿನಿಂದ ಮೊದಲು " ಸತ್ " ಉದಯವಾಯಿತೆಂದು ತೈತ್ತಿರೀಯ ಉಪನಿಷತ್ತು ಸಹ ಘೋಷಿಸಿರುತ್ತೆ. ಮೇಲ್ಕಂಡ ಮಹದಂಶಗಳಿಂದ ಈ ಜಗತ್ತು ಪರಶಿವ ಬ್ರಹ್ಮದ ಸದಿಚ್ಛೆಯಿಂದ ಹೊರ ಹೊಮ್ಮಿದೆಯೆಂದಾಯಿತು. ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯ ಶಿವಸ್ತುತಿಯಲ್ಲಿ —

॥ ತ್ರೈಲೋಕ್ಯ ಸಂಪದಾಲೇಖ್ಯ ।
ಸಮುಲ್ಲೇಖನ ಭಿತ್ತಯೇ ॥
ಸಚ್ಚಿದಾನಂದರೂಪಾಯ । ಶಿವಾಯ ಬ್ರಹ್ಮಣೇ ನಮಃ ॥

ಅಪಾರ ಸಂಪತ್ಪೂರಿತವಾದ ಮೂರು ಲೋಕಂಗಳ ಸಮಸ್ತ ಸೃಷ್ಟಿಗೆ ಪರ ಶಿವನು ಭಿತ್ತಿಸ್ವರೂಪ ಅಂದರೆ ಬೀಜ ಸ್ವರೂಪದಲ್ಲಿದ್ದಾನೆಂದು ಸ್ಮರಿಸಿರುವರು. ಇತ್ಯಾದಿ ವೇದಾಗ ಮೋಪ ನಿಷದಾದಿಗಳ ಆಧಾರಗಳಿಂದ ಜಗತ್ತು ಸತ್ಯವೆಂದು ಶಕ್ತಿ ವಿಶಿಷ್ಟಾದ್ವೈತದಲ್ಲಿ ಪ್ರೋಕ್ತವಾಗಿದೆ. ನಾಮರೂಪಗಳು ಮಿಥ್ಯೆಯೇ ವಿನಃ ದ್ರವ್ಯ ಅಂದರೆ ಪಾಂಚ ಭೌತಿಕ ಪ್ರಪಂಚ ಸತ್ಯವಿರುತ್ತೆ. ಪರಶಿವನ ಘನ ಚೈತನ್ಯವು ಪಂಚ ಭೂತಗಳಲ್ಲೂ ॥ ಅತ್ಯಂತ ಗೂಢ ಚೈತನ್ಯಂ ॥ ಅತ್ಯಂತ ಸೂಕ್ಷ್ಮವಾಗಿ ಅಂತರ್ಗತ ವಾಗಿದೆ. **ಅಸತ್ ಯೆಂಬ ಶಬ್ಧಕ್ಕೆ ಅವ್ಯಕ್ತವೆಂದರ್ಥ.**

॥ ಅತ್ಯಂತ ಗೂಢ ಚೈತನ್ಯಂ । ಜಡಮವ್ಯಕ್ತ ಮುಚ್ಯತೇ ॥ ಸರ್ವಜ್ಞಃ ಪ್ರೇರಕಃ ಶಂಭೋಃ ಕಿಂಚಿದ್‌ಜ್ಞೋ । ಜೀವ ಉಚ್ಯತೇ ॥

( ಸಿ. ಶಿ. ಅ. 5 ಶ್ಲೋ. 40 )

ಅನಾದಿ ಸಂಸಿದ್ಧವಾದ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ ಶಿವೋಕ್ತ ವಿಶ್ವಧರ್ಮ ವೆನಿಸಿರುತ್ತೆ. ಇಷ್ಟ ಲಿಂಗಾರಾಧನೆ ಈ ಷಟ್‌ಸ್ಥಲ ಸಿದ್ಧಾಂತದಲ್ಲಿ ಪ್ರಮುಖ ಉಪಾ ಸನೆಯಾಗಿದೆ. ಇದರ ಅರಿವು ಅನುಭವ ಶ್ರೀ ಗುರುವಿನ ದಿವ್ಯಾನುಗ್ರಹದಿಂದ ಉಂಟಾಗಬೇಕು. ಇದಕ್ಕೆ ಮೊಳ್ಳೆ ಸಂಸ್ಕಾರ ಬೇಕು. ಮಣ್ಣಿಗೆ ಸಂಸ್ಕಾರ ಕೊಡು ವುದರಿಂದ, ಮಡಕೆ, ಕುಡಿಕೆಗಳಾಗುವಂತೆ, ಶಿಲೆಗೆ ಸಂಸ್ಕಾರ ಕೊಡುವುದರಿಂದ ಪೂಜ್ಯ ವಿಗ್ರಹಗಳಾಗುವಂತೆ, ಬಂಗಾರಕ್ಕೆ ಸಂಸ್ಕಾರ ಕೊಡುವುದರಿಂದ, ಆಭರಣಗಳಾಗು ವಂತೆ ಮಾನವನಿಗೆ ಶ್ರೀ ಗುರು ಶಾಸ್ತ್ರೀಯವಾದ ಲಿಂಗಧಾರಣ, ದೀಕ್ಷಾಸಂಸ್ಕಾರ ದಿಂದ, ದೇವ ಮಾನವನನ್ನಾಗಿಸಿ ಕೊನೆಗೆ ದೇವನೇ ಆಗುವನೆಂಬ ಬೋಧಾಮೃತ ವನ್ನು ಜಗತ್ತಿಗೆ ಶ್ರೀ ಮಹಾಚಾರ್ಯರು ಜಗದಾದಿಯಲ್ಲೇ ಬೋಧಿಸಿರುವರು. ಇಷ್ಟಲಿಂಗಾರಾಧನೆಯಿಂದ, ॥ ಏಕೇನ ಜನ್ಮನಾಮುಕ್ತಿ । ವೀರಾಣಾಂತು ಮಹೇ

ಶ್ವರೀ ॥ ಎಂದು ಶಿವಾಗಮಗಳಲ್ಲಿ ಪ್ರತಿಪಾದಿಸಲಾಗಿದೆ – ಮತ್ತೂ

॥ ಯಾವದಾಯುಷಂ । ಪಾಶುಪತ ವ್ರತಧಾರಿಣಾಂ ।

।। ಮುಕ್ತಿರೇವಫಲಂ ।।

ಅಂದರೆ ಯಾವಜ್ಜೀವವೂ ಪಶುಪತಿಯಾದ ಪಾರ್ವತೀಶ ನನ್ನೂ ಹಾಗೂ ತತ್ವ ರೂಪವಾದ ಇಷ್ಟಲಿಂಗಾರಾಧನೆಯನ್ನು ಮಾಡುವವರಿಗೆ ಮುಕ್ತಿ, ಅರ್ಥಾತ್ ಲಿಂಗಾಂಗೈಕ್ಯ ರೂಪಸಾಯುಜ್ಯ ಮುಕ್ತಿ ದೊರೆಯುವುದೆಂದರ್ಥ.

॥ ಕರಪೂಜಾ ನಿವೃತ್ತಾನಾಂ । ಸ್ವಭೋಜ್ಯಂತು ।

ನಿವೇದಯೇತ್ । ಪೂಜಾಕೃತ್ವಾಥ ತಲ್ಲಿಂಗಂ ।

ಶಿರಸಾ, ಧಾರಯೇತ್ ಸದಾ ॥ (ಶಿವಮಹಾಪುರಾಣ),

ಅಂಗದಲ್ಲಿನ ಇಷ್ಟಲಿಂಗದ ಪೂಜಾನಂತರ, ಸ್ವೀಕರಿಸುವ ಅನ್ನ ಪಾನಾದಿಗಳನ್ನು ಮೊದಲು, ಲಿಂಗಕ್ಕೆ ಅರ್ಪಿಸಿ, ನಂತರ ಲಿಂಗಪ್ರಸಾದವೆಂದು ಊಟವಾದ ಬಳಿಕ ಇಷ್ಟಲಿಂಗವನ್ನು ಶಿರಸ್ಸಿನಲ್ಲಿ ಸದಾ ಧರಿಸಿರಬೇಕೆಂದು ಶ್ರೀ ಗುರುವಿನಾಜ್ಞೆ. ಇ ರಿಂದ ॥ ಲಿಂಗಧಾರಿ ಸದಾಶುಚಿಃ ॥

॥ ಕರಾಬ್ಜ ಪೀಠೇ ವಿನ್ಯಸ್ಯ । ತಧ್ಯಾನಾಸಕ್ತಮಾನಸಃ ॥

ಲಿಂಗಾಂಗ ಸಂಗಿನೋವತ್ಸಾ । ಪುನರ್ಜನ್ಮ ನ ವಿದ್ಯತೇ ॥

॥ ಕಿಮನ್ಯೈ ಧರ್ಮಕಲಿಲೈಃ । ಕೀಕಸಾರ್ಥಪ್ರದಾಯಿಭಿಃ ॥

ಸಾಕ್ಷಾನ್ಮೋಕ್ಷಪ್ರದಃ । ಶಂಭೋ ಧರ್ಮೋ ಲಿಂಗಾರ್ಚನಾತ್ಮಕಃ ॥

ಪರಮ ಸನಾತನವೂ ತಾಂತ್ರಿಕ ವೈದಿಕವೂ ಆದ ಇಷ್ಟಲಿಂಗಾರಾಧನೆ, ಸಕ ವೇದಾಗ ಮೋಪನಿಷದಾದಿಗಳಲ್ಲಿ ವಿಸ್ತೃತವಾಗಿ ಪ್ರೋಕ್ತವಾಗಿದೆ. ಇಷ್ಟಲಿಂಗವನ್ನು ಮತ್ತು ಪೂಜ್ಯವಾದ ಶಿವಲಿಂಗವನ್ನು ಯೋಗ್ಯ ಶಿಷ್ಯರಿಗೆ, ಶ್ರೀಗುರುವು ವಿಧಿವತ್ತಾ ಅನುಗ್ರಹಿಸುವನು. ನದಿ ತೀರದಲ್ಲೋ ಹರಿಯುವ ಹೊಳೆಯಲ್ಲೋ ಅಕಸ್ಮಾತ್ತಾ ಸ್ಫಟಿಕಲಿಂಗವಂದು ದೊರಕಿತೆಂದು ಮನೆಗೆ ಅಥವಾ ಮಠಕ್ಕೆ ತಂದು ಪೂಜಿಸುವ

ರಿಂದ ಪುಣ್ಯವುಂಟೇ ವಿನಃ ಮೋಕ್ಷ ಪ್ರಾಪ್ತಿಯಾಗದು. ಮೋಕ್ಷವೀಯುವ ಕರ್ತ ಶ್ರೀ ಮಹಾಗುರುವೊಬ್ಬನೇ. ॥ **ಮೋಕ್ಷ ಮೂಲಂ ಗುರೋಃಕೃಪಾ** ॥ ಎಂದಿದೆ ಶ್ರುತಿ. ವೈಧಿಕ ಮಾರ್ಗಾನುವರ್ತಿಗಳಿಗೆ ಶ್ರುತಿ ಪ್ರಮಾಣವೇ ಸರ್ವಸಮ್ಮತವಾದ ಆಧಾರ. ॥ **ವೇದೋಕ್ತಃ ಪ್ರಥಮೋ ಧರ್ಮಃ** ॥ ಎಂದಿದೆ ವೇದ ಆದ್ದರಿಂದ ಲಿಂಗ ಶ್ರೀಗುರು ವಿನ ಹಸ್ತದಿಂದ ವಿಧ್ಯುಕ್ತವಾಗಿ ಶಿಷ್ಯನ ಕರ ಕಮಲಕ್ಕೆ ಅನುಗ್ರಹಿಸಬೇಕಾಗಿದೆ.

॥ ವೇದ ಶಾಸ್ತ್ರ ಪುರಾಣೇಷು । ಕಾಮಿಕಾದ್ಯಾಗ ಮೇಕ್ಷುಚ ।
ಲಿಂಗಧಾರಣ ಮಾಖ್ಯಾತಂ । ವೀರಶೈವಸ್ಯ ನಿಶ್ಚಯಾತ್ ॥

( ಸಿ. ಶಿ. )

ನಿಗಮಾಗಮಾದಿ ವೇದಗಳಲ್ಲಿಯೂ. ಈಶಾದ್ಯುಪನಿಷತ್ತುಗಳಲ್ಲಿಯೂ ಕಾಮಿ ಕಾದ್ಯಾಗಮಗಳಲ್ಲಿಯೂ ಮತ್ತು ಶ್ರೀ ವೇದವ್ಯಾಸೋಕ್ತ ಪುರಾಣಗಳಲ್ಲಿಯೂ ಸ್ತುತ್ಯ ವಿರುವ ಇಷ್ಟಲಿಂಗಧಾರಣ, ಪೂಜ, ಧ್ಯಾನಾದಿಗಳ ವಿಷಯದ ಬಗೆಗೆ, ಭಗವತ್ಪಾದ ಶ್ರೀ ಆದಿ ಜ॥ ರೇಣುಕಾಚಾರ್ಯರು, ಆದಿ ಅಗಸ್ತ್ಯ ಮಹರ್ಷಿಗಳಿಗೆ ಈ ಪಾವನ ಕೃತಿಯನ್ನು ಬೋಧಿಸುತ್ತಾ ಈ ತತ್ವ ॥ **ಯಜುಷಾ ಗೀಯತೇ** ॥ ಯಜುರ್ವೇದ ದಲ್ಲೂ ಪ್ರೋಕ್ತವಾಗಿರುತ್ತದೆಂದು ಅರುಹಿರುವರು.

ಈ ಪಾವನ ಕೃತಿಯನ್ನು ಲಿಂ. ಶ್ರೀ ಜಾಪ್ರಸನ್ನ ರೇಣುಕ ವೀರ ಗಂಗಾಧರ ದೇಶಿ ಕೇಂದ್ರ ಮಹಾಸ್ವಾಮಿಗಳ ಕೃಪಾಶೀರ್ವಾದ ಪ್ರಭಾವದಿಂದ, ಬೆಂಗಳೂರು ಚಿಕ್ಕಪೇಟೆ ಶ್ರೀ ಮಹಂತಿನ ಮಠದ ಶ್ರೀ ವಿರೂಪಾಕ್ಷೇಶ್ವರ ವಿಶ್ವೇಶ್ವರೀ ಜಗನ್ಮಾತೆಯರ ಮತ್ತು ಶಿವಲಿಂಗೋದ್ಭವಮೂರ್ತಿ ಶ್ರೀ ಜ॥ ರೇಣುಕಾಚಾರ್ಯರ ದಿವ್ಯ ಸನ್ನಿಧಾನಂಗಳ ಆಶ್ರಯದಲ್ಲಿ ಮಂಡಿಸಿ, ಶಿವಸ್ಮರಣೆಯೊಂದಿಗೆ ಹಾಗೂ ಶ್ರೀ ಉಭಯ ಜಗದ್ಗುರು ಗಳ ಕೃಪಾಶೀರ್ವಾದಗಳಿಂದ ಜನ್ಮ ಪಾವನಗೊಳಿಸಿಕೊಳ್ಳಲು ಶ್ರೀಗುರುಭಕ್ತಿಪೂರ್ವಕ ಗ್ರಂಥಕರ್ತರ ಸ್ವಾನುಭೂತಿಗೆ ವೇದ್ಯವಾದ ರೀತಿಯಲ್ಲಿ ನಮ್ರಭಾವದಿಂದ ರಚಿಸಿ ಶ್ರೀ ಗುರುಗಳ ಅಡಿದಾವರೆಗಳಲ್ಲಿ ಅರ್ಪಿಸಿರುತ್ತೇನೆ.

ಟಿ. ಬಿ. ಬಸವರಾಜಯ್ಯ

॥ ಶಿವಂ ಭೂ ಯಾತ್॥

ಈ ಮೇಲೆ ಉದಹರಿಸಿದ ಪುರುಷಸೂಕ್ತ ನಾಸದೀಯ ಸೂಕ್ತಗಳ, ಮತ್ತು ಪ್ರಮುಖ ಉಪನಿಷತ್ತುಗಳಾದ, ಶ್ವೇತಾಶ್ವತರ, ಸಿದ್ಧಾಂತ ಶಿಖೋಪನಿಷತ್ತು, ಕಠೋಪನಿಷತ್ತು, ಶ್ರೀ ವೇದವ್ಯಾಸಾಚಾರ್ಯರ ಬ್ರಹ್ಮ ಸೂತ್ರಗಳ, ಯಜುರ್ವೇದಾಂತಾರ್ಗತ ವೀರ ಲೈಂಗ್ಯೋಪನಿಷತ್ತುಗಳಲ್ಲೂ ಮತ್ತು ೨೮ ಶಿವಾಗಮಗಳಲ್ಲಿ ಪ್ರಮುಖವೆನಿಸಿರುವ ವೀರಾಗಮ, ಕಾಮಿಕ, ವಾತುಲ, ಸುಪ್ರಬೇದಾಗಮ, ಸ್ವಾಯಂಭುವಾಗಮ ಯಿತ್ಯಾದಿಗಳಲ್ಲೂ ಮತ್ತು ಶ್ರೀ ರೇಣುಕಗೀತ, ಭಗವದ್ಗೀತ ಹಾಗೂ ಶ್ರೀ ವೇದವ್ಯಾಸಾಚಾರ್ಯ ಪ್ರೋಕ್ತಾ ಕೆಲವು ಪುರಾಣಗಳಲ್ಲೂ, " ಜಗತ್ ಸತ್ಯವೆಂಬುದಕ್ಕೆ ಹಲವಾರು ಪ್ರಮುಖ ಆಧಾರಗಳಿವೆ. ಶ್ರೀಮದಾಚಾರ್ಯ ಶಂಕರರು " ಜಗನ್ಮಿಥ್ಯಾ " ಎಂದಿರುವ ದೃಷ್ಟಿಕೋನ ಯಾವುದೆಂಬುದನ್ನು ನಾವು ಮನಗಾಣಬೇಕು. ನಾಮರೂಪಗಳನ್ನು ಮಿಥ್ಯೆ ಎಂಬುದೇ ಶ್ರೀಶಂಕರರ ಅಭಿಮತ ವಿರಬೇಕು. ಶ್ರೀಮನ್ಮಧ್ವಾಚಾರ್ಯರೂ, ಶ್ರೀರಾಮಾನುಜರೂ ಸಹ " ಜಗತ್ ಸತ್ಯವೆಂದು ಸಾರಿರುವರು. ಶಿವಾದ್ವೈತ ಸಿದ್ಧಾಂತದಲ್ಲಿ ಅಂದರೆ ವೀರಶೈವ ಧರ್ಮದಲ್ಲಿ.

॥ ಬ್ರಹ್ಮ ಸತ್ಯಂ । ಜಗತ್ಸತ್ಯಂ । ಜೀವಸತ್ಯಂ । ಇತಿ ಸಿದ್ಧಾಂತ ಡಿಂಡಿಮಃ । ಎಂದು ಘಂಟಾ ಘೋಷವಾಗಿ ಘೋಷಿಸಲಾಗಿದೆ. ಅಸ್ತು–

## ಗ್ರಂಥಕರ್ತರ ನಲ್ನುಡಿ ಸಮಾಪ್ತಿ



ಓಂ

# ಶ್ರೀ ರತ್ನಗರ್ಭಗಣಪತಿಯೇ ನಮಃ



॥ ಉಚ್ಚ್ಛೃ ಬ್ರಹ್ಮಾಂಡಾ ಖಂಡ ದ್ವಿತೀಯ ಸಹಚರಂ ।
ಕುಂಭಯುಗ್ಮಂ ದಧಾನಃ । ಪ್ರೇ ಖನ್ನಾಗಾರಿ ಪಕ್ಷ ಪ್ರತಿಭಟ ।
ವಿಕಟಃ ಶ್ರೋತ್ರ ತಾಲಾಭಿರಾಮಃ । ದೇವಃ ಶಂಭೋ
ರಪತ್ಯಂ ಭುಜಗಪತಿತ ನುಸ್ಪರ್ಧಿವರ್ಧಿಷ್ಣು । ಹಸ್ತ
ಸ್ತ್ರೈಲೋಕ್ಯೈಶ್ಚರ್ಯ ಮೂರ್ತಿಃ । ಸ ಜಯತಿ ಜಯತಾ
ಮೀಶ್ವರಃ ಕುಂಜರಾಸ್ಯಃ ॥ ॥ ೧ ॥

॥ ಗಜಮುಖನೇ ಮೆರೆವೇಕದಂತನೆ ।
ನಿಜಗುಣಾನ್ವಿತ ಪರಶುಧಾರನೆ ।
ವಿದ್ಯೆ ವಾರಿಧಿಯೇ ॥ ಅಜನು, ಹರಿ ರುದ್ರಾದಿ ।
ದೇವತೆಗಳು, ಭಜಿಸುತಿಹ ರನವರತ ।
ನಿನ್ನನು ತ್ರಿಜಗ ವಂದಿತ, ಗಣಪ ಮಾಳ್ಪುದು ।
ಮತಿಗೆ ಮಂಗಳದಾಯಕವಾ ॥ ॥ ೨ ॥

॥ ವಿಘ್ನಧ್ವಾಂತ ನಿವಾರಣೈಕ ತರಣಿಃ ।
ವಿಘ್ನಾಟವೀ ಹವ್ಯವಾಟ್ । ವಿಘ್ನೌವ್ಯಾಳ ಕಲಾಪಮತ್ತಗರುಡೋ ।
ವಿಘ್ನೇಭ ಪಂಚಾನನ । ವಿಘ್ನೋತ್ತುಂಗ ಗಿರಿ ಪ್ರಭೇದನ ಪವಿಃ ॥
ವಿಘ್ನಾಬ್ಧಿ ಕುಂಭೋದ್ಭವೋ । ವಿಘ್ನಾಗೌಘ ಘನಪ್ರಚಂಡ
ಪವನೋ । ವಿಘ್ನೇಶ್ವರಃ ಪಾತವಃ ॥ ॥ ೩ ॥

ಶ್ರೀರಸ್ತು

## ವಿದ್ಯಾಂಬೆಯೊಡದ ಶ್ರೀ ಭಗವತೀ ಶಾರದಾಂಬಾಯೈ ನಮಃ



॥ ಸೂಕ್ಷ್ಮಾಯ ಶುಚಯೇ ತಸ್ಮೈ ।
ನಮೋ ವಾಕ್ ತತ್ವ ತಂತವೇ ॥
ವಿಚಿತ್ರೋ ಯಸ್ಯ ವಿನ್ಯಾಸೋ ।
ವಿದಧಾತಿ ಜಗತ್ಪಟಂ ॥

॥ ಕಲ್ಯಾಣಾಂಚಿತ ರೂಪೆಮಾತೆ ।
ಭವಧೀಯಾಂಘ್ರಿ ದ್ವಯಾಬ್ಜಂಗಳಂ ॥
ಯೆಲ್ಲಾ ಕಾಲದೊಳುಂ ಮದೀಯ ಮನದೊಳ್ ।
ಸಂತೋಷದಿಂದ ರ್ಚಿಪೆಂ ॥
ಸಲ್ಲಾಲಿತ್ಯ ಕಟಾಕ್ಷದಿಂದ ಪೊರೆಯೌ ।
ಸದ್ವಾಕ್ಯ ಸಂಪತ್ತಿಯಿಂ । ಫುಲ್ಲಾಬ್ಜಾಕ್ಷಿ ಸರಸ್ವತೀ ।
ಭಗವತೀ ಪೂರ್ಣೇಂದು ಬಿಂಬಾನನೇ ॥

॥ ಯಾ ಕುಂದೇಂದು ತುಷಾರ ಹಾರಧವಳಾ ।
ಯಾ ಶುಭ್ರ ವಸ್ತ್ರಾವೃತಾ । ಯಾ ವೀಣಾ
ವರದಂಡ ಮಂಡಿತಕರಾ । ಯಾ ಶ್ವೇತ ಪದ್ಮಾಸನಾ ॥
ಯಾ ಬ್ರಹ್ಮಾಚ್ಯುತ ಶಂಕರ । ಪ್ರಭೃತಿ ಭಿರ್ದೇವೈ ।
ಸದಾ ಪೂಜಿತಾ । ಸಾಮಾಂಪಾತು । ಸರಸ್ವತೀ ಭಗವತೀ
ನಿಶ್ಯೇಷ ಜಾಡ್ಯಾಪಃ ॥



ಓಂ ನಮೋ ಭಗವತೇ ಶ್ರೀ ಆದಿ ಜಗದ್ಗುರು ರೇವಣಸಿದ್ಧಾಯ



ಆಂದ್ರ ಪ್ರದೇಶದ ಸಿಕೆಂವರಾಬಾದಿಗೆ ಸುಮಾರು 55 ಕಿಲೋಮೀಟರ್‌ಗಳ ದೂರದಲ್ಲಿರುವ, ಕೊಲನುಪಾಕಿ ಸುಕ್ಷೇತ್ರ ಪ್ರವಿರಾಜಮಾನ, ಶ್ರೀ ಸೋಮನಾಥ ಪೃಥ್ವಿಲಿಂಗದ ಗರ್ಭಾವಿರ್ಭೂತ, ಪ್ರಣವ ಮಂತ್ರಮಯ ದಿವ್ಯ ದೇಹಧಾರಿಗಳಾದ ಆದಿ ಶ್ರೀ ಮಜ್ಜಗದ್ಗುರು ಶ್ರೀ ಶ್ರೀ ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾ ಚಾರ್ಯರು, ಶಿವಲಿಂಗ ಮುಖದಿಂದ ಈ ಶಾಜ್ಞೆಯಂತೆ ಭುವಿಯಲ್ಲಿ ಅವತರಿಸು ತ್ತಿರುವ ದಿವ್ಯದೃಶ್ಯ.

॥ ನ ಭೂತಸಂಘ ಸಂಸ್ಥಾನೋ । ದೇವಸ್ಯ ಪರಮಾತ್ಮನಃ ॥

॥ ಕೊಲ್ಲೀ ಪಾಕ್ಯಭಿದೇ ಪುರೇ ಸುವಿಮಲೇ ।
ಸೋಮೇಶ ಲಿಂಗಾಜ್ಜುಬಾತ್ ॥

ಆವಿರ್ಭೂಯ ತತೋ ಗತೋ ಗಗನತೋ ।
ಅಗಸ್ತ್ಯಾಶ್ರಮಂ ಪಾವಯನ್ ॥
ಯಸ್ತಸ್ಮೈ ವಿನತಾಯ ವೇದವಿಹಿತಂ ।
ಸಿದ್ಧಾಂತ ಮಾ ಬೋಧಯತ್ ।
ಸ ಶ್ರೀ ರೇಣುಕ ಯೋಗಿರಾಟ್ ।
ವಿತನುತಾಂ ಸಾನಂದ ಮುರ್ವೀತಲಂ ॥

॥ ಏತೇ ಯುಗಚತುಷ್ಕೇತು । ಪಂಚಾರಾಧ್ಯಾ ಯಥಾ ವಿಧಿಃ ।
ಮಮಲಿಂಗ ಮುಖೋದ್ಭೂತಃ । ಲೋಕ ವಿಶ್ರುತ ಕೀರ್ತಯಃ ॥
(ಶಿವಾಗಮ)

॥ ಅಥ ತ್ರಿಲಿಂಗ ವಿಷಯೇ । ಕುಲ್ಯ ಪಾಕಾಭಿದೇ ಸ್ಥಲೇ ।
ಸೋಮೇಶ್ವರ ಮಹಾಲಿಂಗಾತ್ । ಪ್ರಾದುರಾಸೀತ್ ಸ ರೇಣುಕಃ ॥

॥ ಪ್ರಾದುರ್ಭೂತಂ ತಮಾ ಲೋಕ್ಯ । ಶಿವಲಿಂಗಾ ತ್ರಿಲಿಂಗ ಜಾಃ ॥
ವಿಸ್ಮಿತಾಃ ಪ್ರಾಣಿನಃ ಸರ್ವೇ । ಬಭೂವುರತಿ ತೇಜಸಂ ॥
(ಸಿ. ಶಿ. ಅ. 4 ಶ್ಲೋ. 1 2)

॥ ಶ್ರೀಮಾ಼ ಸೋಮೇಶ ಲಿಂಗೋತ್ಥಿತ ।
ವಪುರಖಿಲ ಶ್ಲಾಘನೀಯಾನು ಭಾವಃ ॥
ಸಿದ್ಧಾನಾಂ ಸಾರ್ವಭೌಮಃ । ಪ್ರವಿತತ ।
ತಪಸಾಮಾಕರಃ ಸಾಧು ಭಾವಃ ॥
। ಶೈವಾದ್ವೈತ ಪ್ರತಿಷ್ಠಾ । ಚಣಮತಿರಮಲಃ ।
। ಜ್ಞಾನ ಭೂತಿರ್ನಿರೀತಿಃ । ದದ್ಯಾಚ್ಛ್ರೀಯೇ ।
ರೇಣುಕಾಖ್ಯೋ ಗುರುವರ ಚರಣಃ ।
ಸಮ್ಯಗಿಷ್ಟಾರ್ಥ ಸಿದ್ಧಿಂ ॥



ಓಂ

॥ ಓಂ ನಮೋ ಭಗವತೇ ಶ್ರೀ ರೇವಣಸಿದ್ಧಾಯ ॥



ಶ್ರೀ ಗುರುಣಾಂ ಗುರುವೇ ನಮಃ

ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ಆದಿ ಶ್ರೀ ಜಗದ್ಗುರು ರೇವಣಸಿದ್ಧರು, ಪ್ರಸನ್ನಭಾವದಿಂದ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸುತ್ತಲಿರುವರು. ಸಾಕ್ಷಾತ್ ಶ್ರೀ ಕೈಲಾಸನಾಥನೇ ಕೃಪೆದೋರಿ, ಶ್ರೀ ಮಹಾಗುರು ರೇವಣಸಿದ್ಧ ಮಹಾ ಶಿವ ಯೋಗಿ ಶಿವಾಚಾರ್ಯರ ದಿವ್ಯರೂಪದಲ್ಲಿ, ಪೃಥ್ವಿ ಲಿಂಗದಿಂದ ಉದ್ಭವಿಸಿ ಶಂಕರರ ಎದುರಿನಲ್ಲಿ ಮಂಡಿಸಿ, ಆತ್ಮಲಿಂಗ ಸ್ವರೂಪವಾದ ಶ್ರೀ ಚಂದ್ರಮೌಳಿ ಲಿಂಗ ವನ್ನು ಅನುಗ್ರಹಿಸಿರುವರು.

ಆವಿರ್ಭೂಯ ತತೋ ಗತೋ ಗಗನತೋ ।
ಅಗಸ್ತ್ಯಾಶ್ರಮಂ ಪಾವಯನ್ ॥
ಯಸ್ತಸ್ಮೈ ವಿನತಾಯ ವೇದವಿಹಿತಂ ।
ಸಿದ್ಧಾಂತ ಮಾ ಬೋಧಯತ್ ।
ಸ ಶ್ರೀ ರೇಣುಕ ಯೋಗಿರಾಟ್ ।
ವಿತನುತಾಂ ಸಾನಂದ ಮುರ್ವೀತಲಂ ॥

॥ ಏತೇ ಯುಗಚತುಷ್ಕೇತು । ಪಂಚಾರಾಧ್ಯಾ, ಯಥಾ ವಿಧಿಃ ।
ಮಮಲಿಂಗ ಮುಖೋದ್ಭೂತಃ । ಲೋಕ ವಿಶ್ರುತ ಕೀರ್ತಯಃ ॥
(ಶಿವಾಗಮ)

॥ ಅಥ ತ್ರಿಲಿಂಗ ವಿಷಯೇ । ಕುಲ್ಯ ಪಾಕಾಭಿದೇ ಸ್ಥಲೇ ।
ಸೋಮೇಶ್ವರ ಮಹಾಲಿಂಗಾತ್ । ಪ್ರಾದುರಾಸೀತ್ ಸ ರೇಣುಕಃ ॥

॥ ಪ್ರಾದುರ್ಭೂತಂ ತಮಾ ಲೋಕ್ಯ । ಶಿವಲಿಂಗಾ ತ್ರಿಲಿಂಗ ಜಾಃ ॥
ವಿಸ್ಮಿತಾಃ ಪ್ರಾಣಿನಃ ಸರ್ವೇ । ಬಭೂವುರತಿ ತೇಜಸಂ ॥
(ಸಿ. ಶಿ. ಅ. 4 ಶ್ಲೋ. 1 2)

॥ ಶ್ರೀಮಾ ಸೋಮೇಶ ಲಿಂಗೋತ್ಥಿತ ।
ವಪುರಖಿಲ ಶ್ಲಾಘನೀಯಾನು ಭಾವಃ ॥
ಸಿದ್ಧಾನಾಂ ಸಾರ್ವಭೌಮಃ । ಪ್ರವಿತತ ।
ತಪಸಾಮಾಕರಃ ಸಾಧು ಭಾವಃ ॥
। ಶೈವಾದ್ವೈತ ಪ್ರತಿಷ್ಠಾ । ಚಣಮತಿರಮಲಃ ।
। ಜ್ಞಾನ ಭೂತಿರ್ನಿರೀತಿಃ । ದದ್ಯಾಚ್ಛ್ರೀ ।
ರೇಣುಕಾಖ್ಯೋ ಗುರುವರ ಚರಣಃ ।
ಸಮ್ಯಗಿಷ್ಟಾರ್ಥ ಸಿದ್ಧಿಂ ॥



ಓಂ

॥ ಓಂ ನಮೋ ಭಗವತೇ ಶ್ರೀ ರೇವಣಸಿದ್ಧಾಯ ॥



ಶ್ರೀ ಗುರುಣಾಂ ಗುರುವೇ ನಮಃ

ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ಆದಿ ಶ್ರೀ ಜಗದ್ಗುರು ರೇವಣಸಿದ್ಧರು, ಪ್ರಸನ್ನಭಾವದಿಂದ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸುತ್ತಲಿರುವರು. ಸಾಕ್ಷಾತ್ ಶ್ರೀ ಕೈಲಾಸನಾಥನೇ ಕೃಪೆದೋರಿ, ಶ್ರೀ ಮಹಾಗುರು ರೇವಣಸಿದ್ಧ ಮಹಾ ಶಿವ ಯೋಗಿ ಶಿವಾಚಾರ್ಯರ ದಿವ್ಯರೂಪದಲ್ಲಿ; ಪೃಥ್ವಿ ಲಿಂಗದಿಂದ ಉದ್ಭವಿಸಿ ಶಂಕರರ ಎದುರಿನಲ್ಲಿ ಮಂಡಿಸಿ, ಆತ್ಮಲಿಂಗ ಸ್ವರೂಪವಾದ ಶ್ರೀ ಚಂದ್ರಮೌಳಿ ಲಿಂಗ ವನ್ನು ಅನುಗ್ರಹಿಸಿರುವರು.

## ಆದಿ ಶ್ರೀ ಜಗದ್ಗುರು ರೇವಣಸಿದ್ಧರ ಲಿಂಗಾವತಾರ

ಅಥ ತ್ರಿಲಿಂಗ ವಿಷಯೇ ಕುಲ್ಯಪಾಕಾಭಿಧೇಸ್ಥಲೇ ।
ಸೋಮೇಶ್ವರ ಮಹಾಲಿಂಗಾತ್ । ಪ್ರಾದುರಾಸೀತ್ ಸ ರೇಣುಕಃ ॥

॥ ಪ್ರಾದುರ್ಭೂತಂ ತಮಾಲೋಕ್ಯ । ಶಿವಲಿಂಗಾ ತ್ರಿಲಿಂಗಜಾಃ ।
ವಿಸ್ಮಿತಾಃ ಪ್ರಾಣಿನಃ ಸರ್ವೇ । ಬಭೂವರತಿ ತೇಜಸಂ ॥
॥ ಭಸ್ಮೋದ್ಧೂಳಿತ ಸರ್ವಾಂಗಂ । ಸಾರ ರುದ್ರಾಕ್ಷ ಭೂಷಣಂ ।
ಜಟಾಮುಕುಟ ಸಂಯುಕ್ತಂ । ತ್ರಿಪುಂಡ್ರಾಂಕಿತ ಮಸ್ತಕಂ ॥

( ಸಿ. ಶಿ. ಅ: 4 ಶ್ಲೋ. 1, 2, 3 )

॥ ಲಿಂಗಂ ಮಸ್ತಕದೋಳ್ । ಜಟಾಮುಕುಟ ಭೂಷಂ ಶೀರ್ಷದೋಳ್ । ಫಾಲದೋಳ್ ತುಂಗ ಶ್ರೀ ಭಸಿತ । ತ್ರಿಪುಂಡ್ರಮನಲಾಕ್ಷ ಸ್ವಾರ ಭ್ರೂಮಧ್ಯದೋಳ್ । ಮಾಂಗಲ್ಯಾಕ್ಷ ಸರಂ ಮಹಾಗಲದೋಳ್ ॥ ಇಂತೋರೋರ್ವರುಂ । ಸಾಂಬನೋಳ್ ಶೃಂಗಾರಾನ್ವಿತರಾಗಿ । ಭೂವಲಯಮಂ
ಶ್ರೀ ರೇ ಣು ಕಾ ಧೀ ಶ್ವ ರಾ ॥

॥ ಓಂ ಸಚ್ಚಿದಾನಂದ ರೂಪಸ್ಯ । ಶಿವಸ್ಯಾಸ್ಯ ಸಮುದ್ಭವಂ ।
ಭೂಲೋಕೇ ಶ್ರೀ ಸೋಮನಾಥಸ್ಯ । ಗರ್ಭಾವಿರ್ಭೂತಮೀಶ್ವರಂ ॥

ಶ್ರೀ ಶಂಕರಾಚಾರ್ಯ ಸನ್ನಾಮ । ಯೋಗೀಂದ್ರಾಯ ಮಹೋಜ್ವಲಂ ॥
ಶ್ರೀ ಚಂದ್ರಮೌಳೀಶ್ವರಂ ಲಿಂಗಂ । ಧತ್ತವಾನಿತಿ ವಿಶ್ರುತಃ ॥
ಶ್ರೀ ರೇಣುಕ ಗಣೇಶಾಖ್ಯಂ । ಶ್ರೀ ರೇವಣಾಸಿದ್ಧದೇಶಿಕಂ ।
ವೀರಶೈವ ಮತಾಚಾರ್ಯಂ । ವಂದೇ ಹಂ ತಂ ಜಗದ್ಗುರುಂ ॥

॥ ಶ್ರೀ ವೀರಶೈವ ಸದ್ಧರ್ಮ ಸ್ಥಾಪಕಾ ಸತತಂ ಭಜೇ ।
ರೇಣುಕಾದಿ ಶಿವಾಚಾರ್ಯಾ । ನ್ನಿಗಮಾಗಮ ವಿಶ್ರುತಾ ॥
॥ ಶ್ರೀ ರೇವಣಾಸಿದ್ಧ ಸಂಪ್ರಾಪ್ತಂ । ಚಂದ್ರಮೌಳೀಶಮಪ್ಯದಾತ್ ॥
ಆಖ್ಯಾನೇನ ಲಿಂಗೇನ । ತವಾಭೀಷ್ಟಾಪ್ತಿರಿತ್ಯಪಿ ॥

ತ್ರಿಭುವನಾಚಾರ್ಯವರೇಣ್ಯರಾದ ಶ್ರೀ ಆದಿ ಜ॥ ರೇವಣಸಿದ್ದರು ತಮ್ಮಲ್ಲಿಗೆ ಬಂದು ಶರಣಾಗತಿ ಭಾವದಿಂದ ಬದ್ಧಾಂಜಲಿ ಪುಟರಾದ ಶಿವಯೋಗಿವರೇಣ್ಯರಾದ ಆದಿ ಶ್ರೀ ಶಂಕರಾಚಾರ್ಯರನ್ನು ಸುಸ್ವಾಗತಿಸಿ ಶಿವಶಕ್ತಿ ಸಂಪುಟದಿಂದ ಸ್ವಯಂ ವಿರಾಜಿಸುವ ॥ ಘನಲಿಂಗಂ ಮಹಾಭಾಸಂ, ಸಚ್ಚಿದಾನಂದ ಲಕ್ಷಣಂ। ನಿಷ್ಕಲಂ ನಿಷ್ಕ್ರಿಯಂ ಶಾಂತಂ। ಸ್ವತಂತ್ರಂ ಸ್ವಪ್ರಕಾಶಿ ತತ್ ॥ ಸರ್ವೇಷಾಂ ಸ್ಥಾನ ಭೂತತ್ವಾ। ಲ್ಲಯ ಭೂತತ್ವತಸ್ತಥಾ। ತತ್ವಾನಾಂ ಮಹದಾದೀನಾಂ। ಸ್ಥಲಮಿತ್ಯಾಭಿದೀಯತೇ ॥ ಎಂದು ಚಿದ್ಘನಲಿಂಗ ತತ್ವವನ್ನು, ಶ್ರೀ ಮದಾಚಾರ್ಯರು ಆದಿ ಶ್ರೀ ಶಂಕರರಿಗೆ ಸ್ವಚ್ಛಂಧವಾಗಿ ಉಪದೇಶಿಸಿ, ಶ್ರೀ ಚಂದ್ರಮೌಳಿ ಲಿಂಗವನ್ನು ಕರುಣಾದ್ರ್ರ ಭಾವದಿಂದ ಶಂಕರರಿಗೆ ಅನುಗ್ರಹಿಸಿದರು.

ಬ್ರಹ್ಮಾದ್ವೈತಿಗಳಾದ ಶ್ರೀ ಶೃಂಗೇರಿ ಶಂಕರಾಚಾರ್ಯರು ತಮ್ಮ ಪ್ರಸ್ಥಾನ ತ್ರಯ ಭಾಷ್ಯಗಳಲ್ಲಿ ಕೆಲವೆಡೆ—

i) " ಲಿಂಗಿ ಚಕ್ರಿ ಪಾಖಂಡಿನಃ " ಎಂದೂ ಮತ್ತೂ

ii) ಮುಂಡಕೋಪನಿಷತ್ತಿನಲ್ಲಿ ಕಾಣುವ, " ತಪಸೋವಾಪ್ಯಲಿಂಗಾತ್ " ಎಂಬ ಮಂತ್ರ ಭಾಗಕ್ಕೆ ಭಾಷ್ಯವನ್ನು ರಚಿಸುತ್ತಾ, ಶಂಕರರು " ತಪಸೋವಾ " ತಪಸ್ವಿಯಾಗಿದ್ದರೂ ; " ತಪೋತ್ರಜ್ಞಾನಂ " ತಪವೆಂದರೆ ಜ್ಞಾನಂ ಎಂದು ಉದಹರಿಸಿ ; " **ಅಲಿಂಗಾತ್** " ಎಂಬ ಮಂತ್ರ ಭಾಗಕ್ಕೆ " **ಲಿಂಗರಹಿತಾತ್** " ಎಂದು ಅರ್ಥೈಸಿ, ॥ **ಲಿಂಗಂಸನ್ಯಾಸಃ** ॥ ಎಂದು ಅರ್ಥ ಮಾಡಿರುವರು. ಇದರಿಂದ ಕಂಡು ಬರುವುದೇನೆಂದರೆ, ಶ್ರೀ ಆದಿ ಶಂಕರಾಚಾರ್ಯರು ಮುಂಡಕೋಪನಿಷತ್ತಿನ ಮೇಲುಕ್ತವಾದ ವ್ಯಾಖ್ಯಾನದಲ್ಲಿ, ಲಿಂಗ ಶಬ್ದಕ್ಕೆ ಸನ್ಯಾಸವೆಂದು ಸ್ಪಷ್ಟವಾಗಿ ಉದಹರಿಸಿರುವರು. ಶಾಸ್ತ್ರೀಯವಾಗಿ ಪರಿಗಣಿಸಿದಾಗ, ಮೇಲ್ಕಂಡ " ಸನ್ಯಾಸ " ವೆಂಬ ಅರ್ಥ ಗೌಣವಿರುತ್ತೆ.

ಇತ್ಯಾದಿ ಕಾರಣಗಳಿಂದ ಶ್ರೀ ಶಂಕರಾಚಾರ್ಯರ ಅಂತ್ಯಕಾಲದ ಸಮಯದಲ್ಲಿ ಪರಮ ಜಗದ್ಗುರು ಶ್ರೀ ರೇವಣಸಿದ್ಧ ಮಹಾಯೋಗಿ ದೇಶಿಕೇಂದ್ರರು, ಶ್ರೀ ಶೈಲ ಗಿರಿ ಮಲ್ಲಿಕಾರ್ಜುನನ ಪ್ರೇರಣೆಯಂತೆ, ಲಿಂಗ ತತ್ವವನ್ನು ಕೂಲಂಕುಶವಾಗಿ ಶಂಕರಾಚಾರ್ಯರಿಗೆ ಬೋಧಿಸುತ್ತಾ—

॥ **ಲಿಂಗಂ ಚಿದಾತ್ಮಕಂ ಬ್ರಹ್ಮ। ತಚ್ಛಕ್ತಿಃ ಪ್ರಾಣರೂಪಿಣಿ** ॥ ಎಂದು ಮನದಟ್ಟಾಗುವಂತೆ ಶಂಕರರಿಗೆ ಬೋಧಿಸಿ, ಶ್ರೀ ಚಂದ್ರಮೌಳಿಲಿಂಗವನ್ನು ದಿನವಹಿ ತ್ರಿಕಾಲಂಗಳಲ್ಲಿ ಪೂಜಿಸೆಂದು ತಿಳಿಸಿ ಆಶೀರ್ವದಿಸಿದರು. ಅಸ್ತು

## ಶ್ರೀ ಚಂದ್ರಮೌಳೀಶ್ವರ ಲಿಂಗ ಪ್ರಧಾನ

॥ ಅಪ್ರತ್ಯಕ್ಷೋ ಮಹಾದೇವಃ । ಸರ್ವೇಷಾಮಾತ್ಮಮಾಯಯಾ ।
ಪ್ರತ್ಯಕ್ಷೋ ಗುರು ರೂಪೇಣ । ವರ್ತತೇ ಭಕ್ತಿಸಿದ್ಧಯೇ ॥
( ಸಿ. ಶಿ. ಅ. 9 ಶ್ಲೋ. 53 )

ಎಂಬ ಶ್ರೀ ಸಿದ್ಧಾಂತ ಶಿಖಾಮಣಿಯ ಬೋಧಾಮೃತದಂತೆ ಶ್ರೀ ಮಹಾ ಗುರುವೇ, ಶ್ರೀ ಜ್ಯೋತಿರ್ಲಿಂಗ ಮುಖದಿಂದ ಆವಿರ್ಭವಿಸಿದ, ಮಹಾದೇವನೆಂದರಿತು ಬ್ರಹ್ಮ ಜ್ಞಾನಿಗಳಾದ ಆದಿ ಶ್ರೀ ಶಂಕರಾಚಾರ್ಯ ಮಹೋದಯರು ಶ್ರೀ ಗುರು ಸಾರ್ವಭೌಮನಾದ ಪ್ರತ್ಯಕ್ಷ ಶಿವನಲ್ಲಿ ಅವ್ಯಭಿಚಾರಿಣಿ ಭಕ್ತಿಯಿಂದ ನಿವೇದಿಸಿ ಕೊಳ್ಳುತ್ತಾ : ಶಂಭೋ ನಿನ್ನ ಪಾದಾರವಿಂದಂಗಳಲ್ಲಿ ಸತತ " ತ್ವತ್ಪ್ರೇಮಾತ್ಮಕ ಭಕ್ತಿ ರೇವ ಸತತಂ । ಸ್ವಾದೀಯಸೀ ಶ್ರೇಯಸೀ " ಎಂದು ಬಿನ್ನೈಸಿಕೊಂಡಿರುವರು. ಶಿವನನ್ನು ಅನನ್ಯ ಭಕ್ತಿ ಭಾವದಿಂದ ಸ್ತುತಿಸುತ್ತಾ, ದೇವಾ, ಮಹಾದೇವಾ !

॥ ಸ್ಮೃತೌ ಶಾಸ್ತ್ರೇ ವೈದ್ಯೇ । ಶಕುನ ಕವಿತಾ ಗಾನ ಫಣಿತೌ ।।
ಪುರಾಣೇ ಮಂತ್ರೇ ವಾ ಸ್ತುತಿ । ನಟನ ಹಾಸ್ಯೇಷ್ವ ಚತುರಃ ॥
ಕಥಂ ರಾಜ್ಞಾಂ ಪ್ರೀತಿರ್ಭವತಿ । ಮಯಿ ಕೋಽಹಂ ಪಶುಪತೇ ।
ಪಶುಂ ಮಾಂ ಸರ್ವಜ್ಞ ಪ್ರಥಿತ । ಕೃಪಯಾ ಪಾಲಯ ವಿಭೋ ॥
ಎಂದು ಪ್ರಾರ್ಥಿಸಿರುವರು. (ಶಿವಾನಂದಲಹರಿ ಶ್ಲೋ. 5)

ಧೀಮಂತರಾದ ಆದಿ ಶ್ರೀ ಶಂಕರಾಚಾರ್ಯರು ವೀರಶೈವ ಧರ್ಮದ, ಅಡಿ ಪಾಯವೆನಿಸಿದ ಅವಿಕಾರ ಪರಿಣಾಮ ವಾದವನ್ನು ಸಂಪೂರ್ಣ ತಳ್ಳಿ ಹಾಕಿಲ್ಲ. ಯಾಕೆಂದರೆ ॥ ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ । ಜ್ಞಾನಬಲಕ್ರಿಯಾಚ ಎಂಬುದನ್ನೂ ಮತ್ತೂ ।। ನ ಶಿವೇನವಿನಾ ಶಕ್ತಿಃ ನ ಶಕ್ತಿಃ ರಹಿತ ಶಿವಃ ॥ ಪುಷ್ಪ ಗಂಧವದನ್ಯೋನ್ಯಂ । ಮಾರುತಾಂಬರಯೋರಿವ ॥ ಎಂಬ ಗೂಢವಾದ ಅಂಶವನ್ನು ಶಂಕರರು ಗಾಢವಾಗಿ ಮನಗಂಡಿದ್ದರು. ಅದ್ವೈತ ಪ್ರತಿಪಾದಿತವಾದ ವಿವರ್ತವಾದವನ್ನು ವೀರಶೈವ ಧರ್ಮದಲ್ಲಿ ನಿರಾಕರಿಸಿದ್ದರೂ, ತತ್ವವೇತ್ತರಾದ ಆದಿ ಶ್ರೀ ಶಂಕರಾಚಾರ್ಯರು ಶಿವಾದ್ವೈತ ಸಿದ್ಧಾಂತಕ್ಕನುಗುಣವಾಗಿ ತಮ್ಮಿಂದ ರಚಿತ ವಾದ ಸುಪ್ರಸಿದ್ಧ ಸೌಂದರ್ಯಲಹರಿಯಲ್ಲಿ ಜಗದಾಂಬೆಯನ್ನು ಮುಕ್ತ ಕಂಠದಿಂದ ಭಕ್ತ್ಯಾ ಸ್ತುತಿಸುತ್ತಾ, ಭೋ ಭೋ ಜಗಜ್ಜನನಿ–!

॥ ಶಿವಃ ಶಕ್ತ್ಯಾಯುಕ್ತೋ ಯದಿ । ಭವತಿ ಶಕ್ತಃ ಪ್ರಭವಿತುಂ ॥
ನ ಚೇ ದೇವಂ ದೇವೋ ನ ಖಲು । ಕುಶಲಃ ಸ್ಪಂದಿತುಮಪಿ ॥
ಅತಸ್ತ್ವಾ ಮಾರಾಧ್ಯಾಂ ಹರಿಹರ । ವಿರಿಂಚಾದಿಭಿರಪಿ ॥
ಪ್ರಣಂತುಂ ಸ್ತೋತುಂ ವಾ । ಕಥಮಕೃತ ಪುಣ್ಯಃ ಪ್ರಭವತಿ ॥
(ಸೌಂದರ್ಯಲಹರಿ)

ಪರಶಿವಾಭಿನ್ನ ಪರಾಶಕ್ತಿಯಿಂದ ಉದ್ಭವರಾದ ಹರಿ ಬ್ರಹ್ಮಾದಿ ತ್ರಿಮೂರ್ತಿಗಳು, ಶ್ರೀದೇವಿಯನ್ನು ಆರಾಧಿಸಲುಪಕ್ರಮಿಸಿದರೆಂಬ ಈ ದಿವ್ಯಸ್ತುತಿ, ಶಿವಾದ್ವೈತ ಪ್ರೋಕ್ತ ಶಿವನ ಸಹಧರ್ಮಚಾರಿಣಿಯಾದ ಉಮೆಯನ್ನು, ಪುಳುಕಾಂಕಿತ ಭಾವದಿಂದ ಶಂಕರರು ಮತ್ತೆ ಸ್ತುತಿಸುತ್ತ, "ಓ ಜಗಜ್ಜನನಿ" ನಿನ್ನ ದಿವ್ಯ ಸಾನ್ನಿಧ್ಯ ವಿಶೇಷದಿಂದ, ಸೃಷ್ಟಿ, ಸ್ಥಿತಿ, ಸಂಹಾರ ಲೀಲೆಗಳನ್ನು ತ್ರಿಮೂರ್ತಿಗಳು ಜರುಗಿಸುತ್ತಲಿರುವರು. ಅಂಬಾ ! ॥ **ತೇನೈವ ತೃಣಮಪಿ ನ ಚಲತಿ** ।। ಯೆಂಬ ಉಪನಿಷದ್ವಾಣಿಯಂತೆ, ನಿನ್ನಯತ್ಕಿಂಚಿತ್ ಪ್ರಭಾವವಿಲ್ಲದಿದ್ದರೆ ತ್ರಿಮೂರ್ತಿಗಳೂ ಚಲನವಿಲ್ಲದೆ ಅಶಕ್ತರೆನಿಸುವರು. ಹೆಚ್ಚೇನು, ಮರದ ಎಂದೆಲೆಯೂ ಸಹ ನೀನರಿಯದೆ ಚಲಿಸಲಾರದು ಎಂದು ಹೃದಯಂಗಮವಾಗಿ ಘೋಷಿಸಿರುವರು. ಶ್ರೀ ಶಂಕರರ ಸಿದ್ಧಾಂತ ರಮ್ಯವಾದ ಅದ್ವೈತ ಸಿದ್ಧಾಂತ, ಚತುರ್ವೇದಗಳಲ್ಲಿನ ಮಹಾ ವಾಕ್ಯಗಳು, ಅಂದರೆ, ಋಗ್ವೇದಾಂತರ್ಗತವಾದ ಮಹಾವಾಕ್ಯ ; " **ಪ್ರಜ್ಞಾನಂ ಬ್ರಹ್ಮ** " ; ಯಜುರ್ವೇದಾಂತಾರ್ಗತವಾದ ತಿರುಳು, " **ಅಹಂ ಬ್ರಹ್ಮಾಸ್ಮಿ** " ; ಸಾಮವೇದಾಂತರ್ಗತವಾದ ಸಾರಾಮೃತ ; " **ತತ್ವಮಸಿ** " ; ಮತ್ತು ಅಥರ್ವಣ ವೇದದ ಮಹಾವಾಕ್ಯ " ಅಯಂ ಆತ್ಮ ಬ್ರಹ್ಮ " ಎಂಬೀ ಘನತರವಾದ ಸ್ವಸ್ವರೂಪಾನು ಸಂಧಾನದಲ್ಲಿ ತಲ್ಲೀನರಾದ ಪರಮ ಅದ್ವೈತಾಚಾರ್ಯರು, ಸದಾ ಅಂತರ್ಮುಖಿಗಳಾಗಿ ; ॥ ಆತ್ಮಾತ್ವಂ ಗಿರಿಜಾಮತಿಃ ॥ ಪರಿಜನಾಃ ಪ್ರಾಣಾಃ । ಶರೀರಂ ಗೃಹಂ । ಪೂಜಾತೇ ವಿಷಯೋಪಭೋಗ ರಚನಾ । ನಿದ್ರಾ ಸಮಾಧಿಸ್ಥಿತಿಃ ॥ ಸಂಚಾರಃಪ್ರದಯೋಃ ಪ್ರದಕ್ಷಿಣವಿಧಿಃ । ಸ್ತೋತ್ರಾಣಿ ಸರ್ವಾಗಿರೋ । ಯದ್ಯತ್ಕರ್ಮ ಕರೋಮಿ ತತ್ತದಖಿಲಂ । **ಶಂಭೋ ತವಾರಾಧನಂ** ॥ ಎಂದು ಧ್ಯಾನ ಮಗ್ನರಾದ ಆಚಾರ್ಯವರ್ಯರು ಅದ್ವೈತಸ್ಥಿಯನ್ನು ಬಾಹ್ಯಾಭ್ಯಂತರಗಳಲ್ಲೂ ಅಳವಡಿಸಿಕೊಂಡಿದ್ದರು. ಅದೇ ಕಾಲದಲ್ಲಿ ಶ್ರೀ ಜಗದಾದಿ ಪರಮ ಜಗದ್ಗುರು ಸಾರ್ವಭೌಮ, ತ್ರಿಭುವನಾಚಾರ್ಯವರೇಣ್ಯ ಆದಿ ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರನ್ನು ತಾವು ಸಾಕ್ಷಾತ್ತಾಗಿ ಸಂದರ್ಶಿಸಿದ ನಂತರ, ಮಹಾಚಾರ್ಯರ ಕೃಪಾಲಬ್ಧ ಪರಂಜ್ಯೋತಿಸ್ವರೂಪಕ್ಕೆ ಅನನ್ಯ ಭಕ್ತಿ ಭಾವೇನ ಶಿರಬಾಗಿ, ಪರಮಾಚಾರ್ಯರ ದಿವ್ಯೋ

ಪದೇಶದಂತೆ ಶ್ರೀ ರತ್ನಗರ್ಭ ಗಣಪತಿಯನ್ನೂ ಶ್ರೀ ಚಂದ್ರಮೌಳೀಶ್ವರ ಲಿಂಗವ ದಿನವಹಿ ತ್ರಿಕಾಲಂಗಳಲ್ಲೂ ವಿಧಿವತ್ತಾಗಿ ಪೂಜಿಸಿ ಆರಾಧಿಸಲುಪಕ್ರಮಿಸಿದರು. ಆ ಆದಿ ಶ್ರೀ ಜಗದ್ಗುರು ಶಂಕರಾಚಾರ್ಯರು ತಾವು ಸ್ವತಃ ಪೂಜಿಸಿ ತಮ್ಮ ಶ್ರೀಅದ್ವ ಮಠದ ದೇವತಾ ಸಾರ್ವಭೌಮ ಶ್ರೀ ಚಂದ್ರಮೌಳಿ ಲಿಂಗವೆಂದು ಹೃತ್ಪೂ ಘೋಶಿಸಿ, ಭಕ್ತ್ಯಾ ಆಚರಣೆಗೆ ಪ್ರಿತ್ಯಾದರದಿಂದ ತಂದಿದ್ದರಿಂದ, ಎಲ್ಲಾ ಅದ್ವ ಮಠಗಳಲ್ಲೂ ನಿರಂತರ ಪೂಜೆಗೊಳ್ಳುವ ಶ್ರೇಷ್ಠ ಪದ್ಧತಿ, ಆಚಂದ್ರಾರ್ಕ ಪರ್ಯ ಪೂಜನೀಯವೆನಿಸಿದೆ. ॥ ಗುರು ಸಾಕ್ಷಾತ್ಪರಬ್ರಹ್ಮ ॥ ಎಂಬ ಶೃತಿವಾಣಿಯಂತೆ ಚಂದ್ರಮೌಳೀಶ್ವರ ಲಿಂಗಾಂತರ್ಗತವಾದ ಚಿಜ್ಯೋತಿಯೇ ಶ್ರೀ ಭಗವಾನ್ ಮ ಗುರು ರೇವಣಸಿದ್ಧರೆಂದು ತತ್ವಜ್ಞಾನಿ ಆದಿ ಶ್ರೀ ಶಂಕರಾಚಾರ್ಯರು ನಿಸ್ಸಂದ ವಾಗಿ ಮನಗಂಡಿದ್ದರು.

ಮೇಲುಕ್ತವಾದ ಮಹದಂಶಗಳಿಂದ ಕೂಡಿದ ತತ್ವ ಬಹುಸನಾತನವೆನಿಸಿರು "ತತ್ವಾನಾಂ ಮಹದಾದೀನಾಂ" ಅಂದರೆ, ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂ ಆಗಮಾಮ್ನಾಯಾದಿಗಳನ್ನು ವೊಳಗೊಂಡಂತೆ ಆದಿಗಾದಿಯೆನಿಸಿದೆ. ಈ ಕಾರಣದಿ ಪಾರಮೇಶ್ವರಾಗಮದಲ್ಲಿ —

॥ ಸಹಿ ವೀರಶೈವ ಸದ್ವೃಶ । ಮತಮಸ್ತಿ ಜಗತ್ರಯೇ ।
ಸರ್ವ ಭೋಗ ಪ್ರದಂ ಪುಣ್ಯಂ । ಶಿವ ಸ್ಸಾಯುಜ್ಯ ದಾಯಕಂ ॥

ಎಂದು ಪ್ರಶಂಶಿಸಿರಲಾಗಿವೆ. ಕಾಮಿಕಾದಿ ವಾತುಲ ಪರ್ಯಂತವಿರುವ ಶಿವಾಗಮಗಳ ಸಾರ ಶಿವಾದ್ವೈತ ಸಿದ್ಧಾಂತ ಈ ಸಿದ್ಧಾಂತದ ಹೃದಯ ಏಕೋತ್ತ ಶತಸ್ಥಲವೆಂಬ ಷಟ್ಸ್ಥಲ ಸಿದ್ಧಾಂತ. Shivadwaitha Siddhantha ha been rightly hailed as "The Tower of Spiritualism"

"ಸೋಹಂ; ಅಯಮಾತ್ಮ ಬ್ರಹ್ಮ" ಎಂದು ಅಂತರ್ಮುಖಿಗಳಾಗಿ ಕೇವ ಆತ್ಮಾನುಸಂಧಾನದಲ್ಲಿ ಮೈ ಮರೆತಿರಬೇಕಾದ, ಅದ್ವೈತಮತಾಚಾರ್ಯ ಶ್ರೀ ಶಂಕರಾಚಾರ್ಯರು, ತಮ್ಮ ಜೀವಿತದ ಕೊನೆ ಕಾಲದಲ್ಲಿ ಆದಿ ಶ್ರೀ ಜ। ರೇವ ಸಿದ್ಧರ ಕೃಪಾಕಟಾಕ್ಷಕ್ಕೆ ಪಾತ್ರರಾದ ಬಳಿಕ ಶ್ರೀ ರತ್ನಗರ್ಭ ಗಣಪತಿಯನ್ನು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಪೂಜಿಸಲುಪಕ್ರಮಿಸಿದರು. ಅಖಂಡವಾದ ಶಿವಾ ದ್ವೈತ ಸಿದ್ಧಾಂತದಲ್ಲಿ ಅದ್ವೈತವು ಸಹಜವಾಗಿಯೇ ಮೈ ಗೂಡಿರುವುದು ಸರಿಯಷ್ಟೆ ಈ ಕಾರಣಗಳಿಂದ ಅದ್ವೈತ ಮಠಗಳಲ್ಲಿ ಶಿವಾದ್ವೈತ ಸಿದ್ಧಾಂತದ ಆಚರಣೆ. ಆ

ಶ್ರೀ ಶಂಕರಾಚಾರ್ಯರಿಂದ ಭಕ್ತಿಪೂರ್ವಕ ನಿತ್ಯಾಚರಣೆಗೆ ಬರುವಂತಾಯಿತು. ಇದು ವೈಧಿಕ ತಾಂತ್ರಿಕ ಆಚರಣೆಯೆಂದು ಧಾರಾಳವಾಗಿ ಹೇಳಬಹುದು.

ಇತ್ತೀಚೆಗೆ ಈ ಕಾರಣದಿಂದ, ಅದ್ವೈತ ಮಠಾಧಿಪತಿಗಳು ಬ್ರಹ್ಮೀಭೂತರಾದರೆ ಅವರ ಶ್ರೀ ಪಾರ್ಥಿವ ಶರೀರವನ್ನು–ವೀರಶೈವ ಮಠಾಚಾರದಂತೆ–ಭೂಗರ್ಭದಲ್ಲಿ ವಿದ್ಯುಕ್ತವಾಗಿ ಸಮಾಧಿಯನ್ನು ಏರ್ಪಡಿಸಿ, ಶ್ರೀ ಗುರುಗಳ ದೇಹವನ್ನು ಆ ಮಹಾ ಸಮಾಧಿಯಲ್ಲಿ ಅಳವಡಿಸುವರು. ಬ್ರಾಹ್ಮಣರು ಕಳೇಬರಗಳನ್ನು ಅಗ್ನಿಸ್ಪರ್ಶದಿಂದ ಭಸ್ಮೀಬೂತಗೊಳಿಸುವುದು ತಿಳಿವ ವಿಷಯವಷ್ಟೆ. ಈ ಪದ್ಧತಿ ಶಾಸ್ತ್ರೀಯವಾ ? ಎನಿಸುತ್ತೆ. ಯಾಕೆಂದರೆ ಬ್ರಾಹ್ಮಣರು 8ನೇ ವಯಸ್ಸಿನಲ್ಲಿ ಬ್ರಹ್ಮಚಾರಿ ವಟುಗಳಿಗೆ ಬ್ರಹ್ಮೋಪನಯನ ಸಂಸ್ಕಾರವನ್ನು ಮತ್ತು ಶ್ರೀ ಗಾಯಿತ್ರಿ ಮಂತ್ರೋಪದೇಶವನ್ನು ವಿಧಿವತ್ತಾಗಿ ನೆರವೇರಿಸುತ್ತಾರಷ್ಟೆ. ಯಾಕೆಂದರೆ–

॥ ಜನ್ಮನಾಜಾಯತೇ ಶೂದ್ರಃ । ಸಂಸ್ಕಾರೇಣ ದ್ವಿಜ ಉಚ್ಯತೆ ॥

ಈ ವೈದಿಕ ತಾಂತ್ರಿಕ ಕ್ರಮದಿಂದ, ಹೋಮಾಗ್ನಿ ಮಂತ್ರಾಗ್ನಿಗಳ ಪ್ರಭಾವದಿಂದ ಅತಪ್ತ ಶರೀರವನ್ನು ಹೊಂದಿ, ಪೂರ್ವದ ಮಲಪಾಶ ಬಂಧಗಳಿಂದ ಮುಕ್ತರಾಗಿ, ಮಂತ್ರಾಗ್ನಿಯಿಂದ ದಹ್ಯವಾದ ಶರೀರವುಳ್ಳವನಾಗಿ, ಅಂದಿನಿಂದ ದ್ವಿಜರೆನಿಸುವರು. ಬ್ರಾಹ್ಮಣ ಸ್ತ್ರೀಯರು ಈ ವೈದಿಕ ಕರ್ಮಕ್ಕೆ ದೂರವಿದ್ದು ಹಾಗೇ ಉಳಿಯುವರು. ಬ್ರಹ್ಮೋಪನಯನ ಸಂಸ್ಕಾರದಿಂದಲೂ, ಮಂತ್ರಾಗ್ನಿಯಿಂದ ದಹ್ಯ ದೇಹವುಳ್ಳವನಾಗಿ, ಬ್ರಾಹ್ಮಣ್ಯವನ್ನು ಉಳಿಸಿಕೊಂಡು ಪ್ರಕಾಶಿತ ದೇಹವುಳ್ಳವನಾಗಿ ಪೂಜ್ಯನೆನಿಸಿರುವನು. ಆದರೆ ಇಲ್ಲಿ ಗಮನೀಯವಾದ ಅಂಶವೇನೆಂದರೆ–

॥ ದಗ್ಧಸ್ಯ ದಹನಂ ನಾಸ್ತಿ । ಪಕ್ವಸ್ಯ ಪಚನಂ ಯಥಾ ॥

ಎಂದಿದೆ ಶಿವಾಗಮ. ಅನ್ನವನ್ನು ಪಕ್ವವಾಗಿ ಒಮ್ಮೆ ಬೇಯಿಸಿ ಬಸಿದ ನಂತರ, ಪುನಃ ಅದನ್ನು ಅಗ್ನಿಯಲ್ಲಿ ಬೇಯಿಸುವುದು ಸರಿಯಲ್ಲ. ಅದರಂತೆ ವಿಪ್ರರು ಬ್ರಹ್ಮೋಪನಯನ ಕಾಲದಲ್ಲೇ, ಶಾಸ್ತ್ರೀಯವಾದ ಪದ್ಧತಿಯಿಂದ ಉಪನಯನ ಮಹೋತ್ಸವವೆಂಬ ವೇದೋಕ್ತ ಹೋಮಾಗ್ನಿ ಮಂತ್ರಾಗ್ನಿಗಳಿಗೆ ವಟುವಿನ ಅಶುದ್ಧ ದೇಹವನ್ನು ದಹಿಸಿದಂತೆ ಮಾಡಿ ಪವಿತ್ರಗೊಳಿಸಿ, ಬ್ರಾಹ್ಮಣ್ಯ ಧರ್ಮ ಕವಚವನ್ನು ಧರಿಸಿ, ದ್ವಿಜನಾದ ಬಳಿಕ, ಆ ದೇಹವನ್ನು ಮೃತನಾದ ಬಳಿಕ. ಪುನಃ ಭೌತಿಕಾಗ್ನಿಗೆ ಆಹುತಿ ಕೊಡುವುದು ಯಾವ ಧರ್ಮ? ಆಧ್ಯಾತ್ಮಿಕ ಆಚರಣೆಯಿಂದಲೂ ಶಿವಜ್ಞಾನಾದಿಗಳ ವ್ರತದಿಂದ ಕೂಡಿದ್ದು ಒಮ್ಮೆ ಮಂತ್ರ ದಗ್ಧವಾದ ಕಳೇಬರವನ್ನು ಮತ್ತೆ ಭೌತಿಕಾಗ್ನಿಯಿಂದ ಸುಟ್ಟು ಬೂದಿ ಮಾಡುವುದು ಅಂದರೆ– " ದಗ್ಧಸ್ಯ ದಹನಂ ನಾಸ್ತಿ " ಎಂದಿರುವಾಗಈ ಪದ್ಧತಿ ಸರಿಯೇ ಎನಿಸುತ್ತೆ.

ವೀರಶೈವರಾದ ಶಿವಾದ್ವೈತಿಗಳು, ಶೈಷವದಲ್ಲೇ ಸ್ತ್ರೀ ಪುರುಷರಾದಿಯ್ಲ
ಬ್ರಹ್ಮಚಾರಿ ಬ್ರಹ್ಮಚಾರಿಣಿಯರಾಗಿರುವಾಗಲೇ, ತಾಂತ್ರಿಕ ವೈದಿಕ ಮಾರ್ಗಾನುಸ
ಶ್ರೀ ಮಹಾ ಗುರುವಿನ ಅಮೃತ ಹಸ್ತದಿಂದ ಶಿವದೀಕ್ಷಾ ಸಂಸ್ಕಾರಕ್ಕೆ ವೊಳಪ
ತ್ರಿವಿಧ ದೀಕ್ಷೆಗಳಿಂದಲೂ, ಇಷ್ಟಲಿಂಗಧಾರಣ ಪೂಜಾ, ಶಿವಪಂಚಾಕ್ಷರೀ ಮ
ಜಪೋಪದೇಶಗಳ ನಂತರ ಶ್ರೀ ಗುರುವಿನ ಹಸ್ತಮಸ್ತಕ ಸಂಯೋಗ ದೀಕ್ಷಾ ಸಂಸ್
ಗಳಿಂದ ಆಧ್ಯಾತ್ಮಿಕ ಜ್ಞಾನರೂಪ ಶಿವಾಗ್ನಿಯಿಂದ ದಹ್ಯವಾದ ಶ
ವುಳ್ಳವರಾಗುವರು.

॥ ಲಿಂಗಧಾರಣ ಮಾತ್ರೇಣ । ಶಿವತ್ವಂ ಪ್ರಾಪ್ತಿ ರೇವಹಿ ॥
॥ ಲಿಂಗಾಂಗ ಸಂಗಿನೋ ವತ್ಸಾ । ಪುನರ್ಜನ್ಮ ನ ವಿದ್ಯತೇ ॥
॥ ಏಕೇನ ಜನ್ಮನಾಮುಕ್ತಿ । ರ್ವೀರಾಣಾಂತು ಮಹೇಶ್ವರೀ ॥

ಎಂಬಂತೆ ಲಿಂಗಾಂಗಿಯ ದೇಹ, ಶಿವ ಲಿಂಗಮಯವಾದ ದಿವ್ಯದೇಹ. ಆದ್ದರಿ
ಪರಮೇಶ್ವರನು, " ಮದ್ಭಕ್ತಕಾಯೋ ಮಮಕಾಯಃ " ಎಂದಿರುವನು. ಇತ್ಯಾ
ಕಾರಣಗಳಿಂದ ಜಗದಾದಿಯಿಂದಲೂ ವೀರಶೈವರು, ಮರಣಾಂತರದಲ್ಲಿ ಶವವನ
ಭೂಗರ್ಭದ, ಸಮಾಧಿಯಲ್ಲಿ ಶಿವಯೋಗದಲ್ಲಿರುವಂತೆ ಕುಳ್ಳಿರಿಸಿ, ವಿದ್ಯುಕ್ತವಾ
ಅಂತ್ಯ ಸಂಸ್ಕಾರಗಳನ್ನು ಜಂಗಮ ಗುರುಗಳ ನೇತೃತ್ವದಲ್ಲಿ ನೆರವೇರಿಸಿದ ನಂತ
ಆ ಶರಣನ ಕಳೇಬರವನ್ನು ಮಣ್ಣಿನಲ್ಲಿ ಮರೆ ಮಾಡುವರು. ವಟುಗಳಾಗಿರುವಾಗ
ವೇಧಾ ದೀಕ್ಷೆ, ಮಂತ್ರದೀಕ್ಷೆ ಮತ್ತು ಕ್ರಿಯ ದೀಕ್ಷೆಗಳೆಂಬ ದೀಕ್ಷಾತ್ರಯಗಳಿಂದಲ
ಇಷ್ಟಲಿಂಗಧಾರಣ ಮತ್ತು ಪ್ರಣವ ಸಹಿತ ಶಿವ ಪಂಚಾಕ್ಷರೀ ಮಹಾ ಮಂತ್ರೋ
ದೇಶಗಳೆಂಬ, ಶಿವಜ್ಞಾನಾಗ್ನಿಯಿಂದ ಶ್ರೀ ಗುರುವಿನ ನೇತೃತ್ವದಲ್ಲಿ ವೊಮ್ಮೆ ಆಧ
ತ್ಮಿಕವಾಗಿ ದಗ್ಧವಾಗಿರುವ ಲಿಂಗಿಕಾಯವನ್ನು ಪುನಃ ಮರಣಾಂತ್ಯದಲ್ಲಿ ಭೌತಿಕಾಗ್ನಿ
ಗುರಿಮಾಡುವುದಿಲ್ಲ. ಆದಿ ಶ್ರೀ ಶಂಕರಾಚಾರ್ಯರನ್ನು ಮೊದಲು ಮಾಡಿ ಎ
ಅದ್ವೈತ ಮಠಾಧಿಪತಿಗಳನ್ನೂ, ಅವರು ಬ್ರಹ್ಮೀಭೂತರಾದ ನಂತರ, ಅವ
ಪಾರ್ಥಿವ ಲಿಂಗೆ ಶರೀರಗಳನ್ನು ಭೌತಿಕಾಗ್ನಿಯಿಂದ ದಹಿಸದೆ ॥ ದಗ್ಧಸ್ಯ ದಹ
ನಾಸ್ತಿ ॥ ಎಂಬ ಶೃತಿ ಪ್ರಮಾಣಾನುಸಾರ, ಪರಮ ವೀರಶೈವಾಚಾರದಂತೆ, ಭೂಗರ್
ದಲ್ಲಿ ಸಮಾಧಿ ಯೋಗದಲ್ಲಿ ವಿಧಿವತ್ತಾಗಿ ಕುಳ್ಳಿರಿಸಿ, ಪೂಜಿಸಿ ಮಣ್ಣಿನಲ್ಲಿ ಮ
ಮಾಡುವರು. ಈ ಕಾರಣದಿಂದ ಶ್ರೀ ಶೃಂಗೇರಿ ಜಗದ್ಗುರು ವಿದ್ಯಾರಣ್ಯ
**॥ ತತಃ ಶ್ರೀ ರೇವಣಸಿದ್ಧ ಸಂಪ್ರದಾಯಾನು ವರ್ತಿನಃ ಶಂಕರಾಚಾರ್ಯ
ವರ್ಯಾಣಾಂ ॥ ಪಾರಂಪರ್ಯ ಕ್ರಮಾಗತಂ** ॥ ಎಂದು ಘೋಷಿಸಿರುವರು.





॥ ನ ಗುರೋರಧಿಕಂ ನ ಗುರೋರಧಿಕಂ । ನಾಸ್ತಿತತ್ವಂ ಗುರೋಃಪರಂ ॥



ಆಧ್ಯಾತ್ಮಿಕ ಶಿರೋರತ್ನ ಟಿ. ಬಿ. ಬಸವರಾಜಯ್ಯನವರು

॥ ಗವಾಂ ಶರ್ಪಿ ಶರೀರಸ್ತು । ನ ಕರೋತ್ಯಾತ್ಮ ಪೋಷಣಂ ।
ನಿಸ್ಸೃತಂ ಕರ್ಮಾಚರಿತಂ । ಪುರಸ್ತಾಸಾಂತು ಭೇಷಜಂ ॥

॥ ಕಿಂ ಯಜ್ಞೈಃ ರಗ್ನಿಹೋತ್ರಾದ್ಯೈಃ । ಕಿಂ ತಪೋಭಿಶ್ಚ । ದುಶ್ಚರೈಃ ।
ಲಿಂಗಾರ್ಚನ ರತಿರ್ಯಸ್ಯ । ಸ ಸಿದ್ಧಃ ಸರ್ವಕರ್ಮಸು ॥

॥ ಆಯುರ್ವರ್ಷ ಶತಂ ನೃಣಾಂ । ಪರಿಮಿತಾಂ ರಾತ್ರೌತದರ್ಧಂಗತಂ ।
ತಸ್ಯಾರ್ಧಸ್ಯ ಪರಸ್ಯ ಚಾರ್ಧಮ । ಪರಂ ಬಾಲತ್ವ ವೃದ್ಧತ್ವಯೋಃ ॥
ಶೇಷಂ ವ್ಯಾಧಿ ವಿಯೋಗದುಃಖ । ಸಹಿತಂ ಸೇವಾದಿಭಿರ್ನಿೀಯತೇ ।
ಜೀವೇ ವಾರಿತರಂಗ ಚಂಚಲತರೇ । ಸೌಖ್ಯಂ ಕುತಃ ಪ್ರಾಣಿನಃ॥ ೧ ॥

॥ ಆಯುರ್ನಶ್ಯತಿ ಪಶ್ಯತಾಂ । ಪ್ರತಿದಿನಂ ಯಾತಿಕ್ಷಯಂ ಯೌವ್ವನಂ ।
ಪ್ರತ್ಯಾಯಾಂತಿ ಗತಾಃ ಪುನ । ರ್ನದಿವಸಾಃ । ಕಾಲೋ ಜಗದ್ಭಕ್ಷಕಃ ॥
ಲಕ್ಷ್ಮೀತೋಯ ತರಂಗಭಂಗ । ಚಪಲಾ ವಿದ್ಯುಚ್ಚಲಂ ಜೀವಿತಂ ।
ತಸ್ಮಾನ್ಮಾಂ ಶರಣಾಗತಂ । ಶರಣದತ್ವಂ ರಕ್ಷರಕ್ಷಾದುನಾ ॥ ೨ ॥

॥ ಗಾತ್ರಂ ಸಂಕುಚಿತಂ ಗತಿ । ರ್ವಿಗಳಿತಾ ಭ್ರಷ್ಟಾಚ ದಂತಾವಳಿಃ ।
ದೃಷ್ಟಿರ್ನಶ್ಯತಿ । ವರ್ಧತೇ ಬಧಿರತಾ । ವಕ್ತ್ರಂಚ ಲಾಲಾಯತೇ ॥
ವಾಕ್ಯಂ ನಾದ್ರಿಯತೇಚ, ಬಾಂಧವಜನೋ । ಭಾರ್ಯಾನ ಸಂಭಾಷತೇ ।
ಹಾ ಕಷ್ಟಂ ! ಪುರುಷಸ್ಯ ಜೀರ್ಣವಯಸಃ । ಪುತ್ರೋಪ್ಯ ಮಿತ್ರಾಯತೇ ।೩।

॥ ಯಥಾ ಜಾತಾಂಧಸ್ಯ ಸ್ವರೂಪ । ಜ್ಞಾನಂ ನ ವಿದ್ಯತೇ ॥
ತಥಾ ಗುರೂಪದೇಶೇನ ವಿನಾ । ಕಲ್ಪಕೋಟಿ ಶತೈರಪಿ ।
ತತ್ವ ಜ್ಞಾನಂ ನ ಜಾಯತೇ ॥ (ಮಹಾ ನಾರಾಯಣೋಪನಿಷದ್), ॥ ೪ ॥

॥ ಯದ್ವತ್ ಘಟಪಟ ಕುಡ್ಯಾದಿಷು । ಮುಖಂ ನೈವ ಪ್ರತಿಬಿಂಭಿತೇ ।
ಕಿಂತು ನಿರ್ಮಲೇ ಮುಕುರೇ ತದ್ವತ್ । ಆತ್ಮ ರಾಗ ದ್ವೇಶಾದಿ ದೂಷಿತ ।
ಚಿತ್ತೇ ನಃ ಪ್ರತಿಫಲತಿ । ಕಿಂತು ರಾಗದ್ವೇ ಶಾದಿ ಮಲರಹಿತೇ ।
ಶುದ್ಧೋ ಚಿತ್ತೇ ಪ್ರತಿ ಫಲತಿ ॥ ೫ ॥

॥ ಗುರೂಕ್ತ ಮಂತ್ರ ಮಾರ್ಗೇಣ । ಇಷ್ಟಲಿಂಗಂತು ಶಾಂಕರೀ ॥
ಮಚ್ಛಿಖಾ ಚಕ್ರಗಲಿತಂ । ಇಷ್ಟಲಿಂಗಂ ಮಹೇಶ್ವರೀ ॥

॥ ಹೃತ್ಪದ್ಮ ಮಧ್ಯೇ ಪುರುಷಃ ಪ್ರಮಾಣಂ । ನಿತ್ಯಾತ್ಮಕಂ ಸರ್ವ ಜಗತ್ಸ್ವರೂಪಂ ॥
ಧ್ಯಾಯಾಮಿ ನಿತ್ಯಂ ಪರಮಾತ್ಮ ಸಂಜ್ಞಂ । ಚಿದ್ರೂಪಮೇಕಂ ವಚಸಾಮಗಮ್ಯಂ ॥ ೬ ॥

**॥ ಗುರು ಭಕ್ತಿಂ ಸದಾ ಕುರ್ಯಾತ್ ॥**

# ಶ್ರೀ ಆದಿ ಶಂಕರಾಚಾರ್ಯರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗ ಪ್ರಧಾನದ ಮಂಗಳ ಘಟ್ಟ

ಮೈಸೂರು ಶ್ರೀಮನ್ ಮಹಾರಾಜರವರ ಆಸ್ಥಾನ ವಿದ್ವಾನ್ ಕರ್ನಾಟಕ ಕವಿ ಕಂಠೀರವ, ವೇ॥ ಬ್ರ॥ ಶ್ರೀ ಶ್ರೀಕಂಠಶಾಸ್ತ್ರಿಗಳು, ನಂಜನಗೂಡು, ಈ ಮಹೋದಯರು ತಮ್ಮಿಂದ ರಚಿತವಾದ, ಕನ್ನಡ ಶ್ರೀ ರೇಣುಕ ವಿಜಯ ಪುರಾಣದಲ್ಲಿ, ಆದಿ ಶ್ರೀ ಶಂಕರಾಚಾರ್ಯರಿಗೆ ಶ್ರೀ ಆದಿ ಜ॥ ರೇವಣಸಿದ್ಧರಿಂದ, ದತ್ತವಾದ ಶ್ರೀ ಚಂದ್ರಮೌಳೀಶ್ವರ ಲಿಂಗದ ವಿಷಯವನ್ನು, ಶ್ರೀ ಶಾಸ್ತ್ರಿಗಳು ಹೃದಯಂಗಮವಾಗಿ ಪ್ರತಿಪಾದಿಸಿರುವ– ಒಂಭತ್ತನೆಯ ಸಂಧಿಯಲ್ಲಿನ ಪದ್ಯಗಳು :–

॥ ಆಗಳಾ ಶ್ರೀಶೈಲದೆಡೆಯಲಿ । ರಾಗದೂರನು ಚಂದ್ರಮೌಳಿಯು ।
ಬೇಗದಿಂದಲಿ ಕಾಂಬ ಬಯ್ಕೆ । ಯನಾಂತು ಸೆರೆ ನೋಂತು ॥
ಯೋಗಿವರ್ಯನು ಶಂಕರಾರ್ಯನು, ಬೀಗಿ ಶಿವನಾಮಾಮೃತಂಗುಡಿ ।
ದೇಗಳುಂ ಕಟ್ಟುಗ್ರ ತಪವೆಸಗುತ್ತಲಿರ್ದನಲಾ ॥ ॥ ೨೦ ॥

॥ ನಿರಶನ ವ್ರತದಿಂದೆ ಹರನನು । ನಿರತಮುಂ ಭಜಿಸುತ್ತಲಿರೆ,ಯಿರೆ ।
ಭರದೆ ತಾರಾಪಥದಿ ನೊಗೆದು । ದದೊಂದು ನಲ್ನುಡಿಯು ॥
ಪರಮ ಯೋಗಿಯೇ ಬರಿದೆ। ಬಳಲದಿರರಿಯು, ನೀ ನಾ, ಚಂದ್ರಮೌಳೀಶ್ವರ।
ಸುನಾಮಕ ಲಿಂಗವಾರ್ಜಿಸಿ, ನುತಿಸೆ ಮೇಲಹುದು ॥ ॥ ೨೧ ॥

॥ ಎಳಸಿದೆಳಪುಗಳೆಲ್ಲ ಫಲಿಪುವು । ತೊಳಲದಿರು ರೇಣುಕ ಸಮಾಖ್ಯನು ।
ಸಲಿಸುವನು ನಿನಗೊಸೆದು । ಶಶಿಮೌಳೀಶಲಿಂಗವನು ॥
ಬಳಿಯ ಮೆನ್ನನು ಕಾಂಬೆ, ನೀ । ನೆನುತಲಿ, ನಭಸ್ಥಲದತ್ತಣಿಂದುಲಿ ।
ಯಲು, ಸುಧೋಪಮ ವಚ । ನವನಾಲಿಸಿ, ನಲಿದ ಶಂಕರನು ॥ ೨೩ ॥

॥ ಬರುತಿರಲಿ ಕಾಶ್ರಮದ ಮಧ್ಯದೆ । ವರ ಪರಿತ್ಕಂಥಾ ಕಮಂಡಲು ।
ಮೆರೆಯೆ ಭಿಕ್ಷಾ ಪಾತ್ರಮುಂ ಮೇಣ್ । ಭಸ್ಮ ಘುಂಟಿಕೆಯುಂ ॥
ಕರದೆಸೆಯ ಲಶ್ವತ್ಥದಂಡಮು । ಮರರೆ ! ರವಿಕೋಟಿ ಪ್ರಕಾಶಂ ।
ಶಿರದೆ ಮುವತ್ತಾರು ಜಡೆ, ಸು । ತ್ರೈಸೆಯೆ, ಸೊಗಯಿಸಿತು ॥ ೨೯ ॥

॥ ಒಡನೆ ತತ್ಪದಯುಗಕೆ ನಮಿಸುತೆ ಸಡಗರದೆ ಶಂಕರನು ಗುರುವೇ ।
ಮೃಡನಕಾಂಬಾ ಬಯ್ಕೆಯಿಂದಲಿ । ತಪವನೆಸಗಿದೆನು ॥
ಕೊಡಕೆಗಮರ್ದಿನ ಸೋನೆಯಂತಿರೆ । ನುಡಿವಿಯುತ್ತಟದಿಂದೆ ಸೋಂಕಿ ।
ತ್ತೊಡೆಯ ನಿನ್ನಿಂದೆನಗೆ ಕಾಮಿತ । ಸಿದ್ಧಿಯಹುದೆನುತೆ ॥ ೩೦ ॥

ಅದರಿ ನಾನೈ ತಂದೆನಿಲ್ಲಿಗೆ ಸದಯ । ನಿನ್ನನು ನೋಳ್ಪ ತವಕದೆ ।
ಪದುಳದಿಂದರ್ಶನವನಿತ್ತ್ಯೈ ಧನ್ಯ । ನಾನಾದೆ. ಮುದವ ನೀವರ, ನರಿಯೇ ।
ನನ್ನರ ನೊದವಿಸೈ ಶಿವಭಕ್ತಿ ಭಾಗ್ಯವ, ಚದುರ ನೀಂ ಶ್ರೀ ಚಂದ್ರಮೌಳೀ
ಶ್ವರನ ನೆನಗೀಯೈ ॥ ೩೧ ॥

॥ ಈ ತೆರದೆ ಬಿನ್ನವಿಸೆ ಭಕ್ತಿಯೊ । ಳಾ ತಪೋನಿಧಿ, ಬಳಿಕ ಸುರವರ ।
ಗೀತ ವೈಭವ ರೇಣುಕನು । ಶಿವನಾಜ್ಞೆಯನು ನೆನೆದು ॥
ಖ್ಯಾತಮಹ ಶಶಿಮೌಳಿಲಿಂಗವ, ನೋತು ಶಂಕರಗಿತ್ತ ನಮರವ್ರಾತ ।
ಮತಿ ಸಂಭ್ರಮದೆ ಕರೆಯಲು. ಕಮ್ರಲರಸರಿಯ ॥ ೩೩ ॥

॥ ಚಾರೆ ಹೃದಯದೆ ಪ್ರದಿದ ಚಿಂತಾ । ಭಾರಮತಿಶಯ ಸಂಮುದವು ।
ಸಲೆ ತೋರೆ ಚಿತ್ತದೆ ದಿವ್ಯ ರೂಪವು । ತೊಳಗಿ ಬೆಳಗುತಿರೆ ॥
ಚಾರುಗರಳ ಪುರೀಶನನು ಮನ । ವಾರೆ ನುತಿಸುತೆ ಬಳಿಕ, ತುಂಗಾ ।
ತೀರಮಂ ಶಂಕರನು ಸಾರ್ದನು । ಸಾಧು ಸಾದರನು ॥ ೩೪ ॥

ಸ್ಮಾರ್ತಸ್ಪ್ರಮತಾನುಯಾಯಿಗಳು, ವಿಪ್ರಶ್ರೇಷ್ಠರೂ ಪಂಡಿತ ಸಿಂಹರೂ ಆದ ನಂಜನಗೂಡು ವಾಸಿಗಳಾದ, ವೇ॥ ಬ್ರ॥ ಶ್ರೀಕಂಠ ಶಾಸ್ತ್ರಿಗಳು, ತುಂಬಿದ ಭಕ್ತಿ ಭರಿತ ಹೃದಯದಿಂದ ಮೇಲ್ಕಂಡ ಸತ್ಕಾಂಶಗಳನ್ನು ರಚಿಸಿ ಲೋಕಕ್ಕರುಹಿರುವರು. ಅಸ್ತು ।



॥ ಓಂ ಶ್ರೀ ಗುರೂಣಾಂ ಗುರುವೇ ನಮಃ ॥

॥ ಉಮಾಸಹಾಯಂ ಪರಮೇಶ್ವರಂ ಪ್ರಭುಂ ।
ನೀಲಕಂಠಂ ಪ್ರಶಾಂತಂ ಧ್ಯಾತ್ವಾ ।
ಮುನಿರ್ಗಚ್ಛತಿ ಭೂತಯೋನಿಂ ।
ಸಮಸ್ತ ಸಾಕ್ಷಿಂ ತಮಸ: ಪರಸ್ತಾತ್ ॥

॥ ತತ್ರಲೀನ ಮಭೂತ್ಪೂರ್ವಂ । ಚೇತನಾ ಚೇತನಂ ಜಗತ್ ।
ಸ್ವಾತ್ಮಲೀನಂ ಜಗತ್ಕಾರ್ಯಂ ಸ್ವಪ್ರಕಾಶ್ಯಂ ತದದ್ಭುತಂ ॥
(ಸಿ. ಶಿ. ಅ. 2 ಶ್ಲೋ. 7)

॥ ಸ್ಥಿರೈ ರಂಗೈಃ ॥

ಹೊಳೆನೀರಿನಲ್ಲಿ ಆಡುವಾಗ, ಆಮೆಯು, ಅಂಗಗಳನ್ನು ಹೊರಚಾಚಿರುತ್ತೆ, ಅಪಾಯ ಸಂಭವಿಸಿದಾಗ ವೊಡನೆ ತನ್ನಂಗಗಳನ್ನೆಲ್ಲಾ ವೊಳಗಡೆಗೆ ಎಳೆದುಕೊಳ್ಳುತ್ತೆ. ಅಂತೂ ಎಲ್ಲಾ ಕಾಲದಲ್ಲೂ ಆಮೆಯ ಅಂಗಗಳು ಸ್ಥಿರವಾಗಿ ಅದರ ದೇಹದೊಳಗಿರುತ್ತವೆ. ಅದರಂತೆಯೇ–

॥ ಯತೋ ವಾ ಇಮಾನಿ ಭೂತಾನಿ ಜಾಯಂತೇ ।
ಏನ ಜಾತಾನಿ ಜೀವಂತಿ । ಯತ್ಪ್ರಯಂ ।
ತ್ಯಭಿಶಂ ವಿಶಂತಿ । ತದ್ವಿಜಿಜ್ಞಾಸಸ್ವ ತದ್ಬ್ರಂಹ ॥
(ಉಪನಿಷತ್)

ಚರಾಚರಾತ್ಮಕವಾದೀ ಅಖಂಡ ವಿಶ್ವವು, ಅಖಂಡೇಶ್ವರನ । ಅಂತರಂಗದಲ್ಲಿ ಮಹಾ ಪ್ರಳಯ ಕಾಲದಲ್ಲಿ ವಿಲೀನವಾಗಿದ್ದು, ಶಿವನು ಸೃಷ್ಟ್ಯೋನ್ಮುಖನಾದಾಗ ಬೀಜಾಂಕುರ ನ್ಯಾಯಾನುಸಾರ, ಪರಮನ ಸತ್ಸಂಕಲ್ಪ ವಿಶೇಷೇಣ ಕ್ಷಣಾರ್ಧದಲ್ಲಿ ವಿವಿಧ ಜಗತ್ತು ಉದ್ಭವಿಸುವುದು. ಶಿವನು ಸರ್ವಶಕ್ತನೂ ಸರ್ವಜ್ಞನೂ ಯಿರುವನು ಇದರಿಂದಾಗಿ " ಇಚ್ಛಾಮಾತ್ರ ಪ್ರಭೋ ಸೃಷ್ಠಿಃ " ಎಂದೆನಿಸಿರುವನು. ಅಂತೂ ಸೃಷ್ಠಿಕಾಲದಲ್ಲೂ ಮತ್ತು ವಿಲೀನ ಕಾಲದಲ್ಲೂ ಸಹ ಈ ವಿಚಿತ್ರಾಯ ಮಾನವಾದ ದೃಶ್ಯ ಪ್ರಪಂಚ, ಪರಶಿವ ಬ್ರಹ್ಮದಲ್ಲಿ–ಬೀಜದಲ್ಲಿ ದೊಡ್ಡ ಆಲದ ವೃಕ್ಷ ಕಾಣದೆ, ಸೂಕ್ಷ್ಮಾತಿ ಸೂಕ್ಷ್ಮವಾಗಿ ಅಡಗಿರುವಂತೆ ಅಂತರ್ಗತವಾಗಿರುತ್ತೆ. ಅಂತೂ ದೃಶ್ಯಾದೃಶ್ಯ ವಿಶ್ವವೆಲ್ಲಾ ಪರಮಾತ್ಮನ; " ಸ್ಥಿರೈ ರಂಗೈಃ " ಎಂದೆನಿಸಿದೆ. ಕಾಳಿದಾಸ

ಮಹಾ ಕವಿಯು, ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತೂ ಆತ್ಮಗಳೆಂಬ ಎಂಟು ವಿಧವಾದ ಶರೀರಗಳಿಂದ, ಪರಶಿವ ಬ್ರಹ್ಮವು ಜಗತ್ತಾಗಿ ಪ್ರಾದುರ್ಭವಿಸಿರುವುದೆಂದು ನಮಸ್ಕರಿಸಿರುವನು. ಪರಾತ್ಪರ ತತ್ವವು ಅವಿಕಾರ ಪರಿಣಾಮ ಸ್ಥಿತಿಯಲ್ಲಿ ವಿರಾಜಿತವಾಗಿದೆ. ಬಂಗಾರದಿಂದ ವಿವಿಧ ಆಭರಣಗಳನ್ನು ಮಾಡಿ ಸಂತೋಷಿಸಿದರೂ, ಆ ಆಭರಣಗಳನ್ನು ಅಗ್ನಿಯಲ್ಲಿ ಕರಗಿಸಿದಾಗ, ಅವೆಲ್ಲಾ ಒಂದೇ ಬಂಗಾರದ ಘಟ್ಟಿಯಾಗಿ ಪೂರ್ವಸ್ಥಿತಿಗೆ, ಕಿಂಚಿತ್ತೂ ಲೋಪವಿಲ್ಲದೆ ಬರುವಂತೆ, ಪರಶಿವ ಬ್ರಹ್ಮದ ಪ್ರಭಾಮಯ ದಿವ್ಯಾಂಗಗಳು ಸತತ "ಸ್ಥಿರೈ ರಂಗೈಃ" ಎಂದು ಶ್ಲಾಘನೀಯ ರೀತಿಯಲ್ಲಿ ಸ್ತುತ್ಯವಿರುವುವು. ಅಸ್ತು



ಆದಿ ಶ್ರೀ ಶಂಕರಾಚಾರ್ಯರಿಂದ ಆರಾಧಿತವಾದ, "ಶ್ರೀ ಚಂದ್ರಮೌಳಿ ಲಿಂಗ" ಅದ್ವೈತ ಮಠಗಳ ಶ್ರೀ ಗುರು ಪರಂಪರೆಯವರಿಗೆ, ಆರಾಧ್ಯ ದೈವವೆನಿಸಿದೆ.–ಈ ಬಗೆಗೆ ಅಧಿಕೃತ ಗ್ರಂಥಾಧಾರಗಳು.

ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ಆದಿ ಶ್ರೀ ಜ॥ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರಿಂದ, ಶ್ರೀ ಶೃಂಗೇರಿ ಶ್ರೀ ಆದಿ ಶಂಕರಾಚಾರ್ಯರು "ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು" ಸಾಕ್ಷಾತ್ತಾಗಿ ಪಡೆದು, ಮಹಾಚಾರ್ಯರ ದಿವ್ಯ ಕೃಪಾನುಗ್ರಹಕ್ಕೆ ಪಾತ್ರರಾದ ಮಹದಂಶ, ಸತ್ಯವಿದ್ದು, ಶ್ರೀ ಶೃಂಗೇರಿ ಮಹಾ ಸಂಸ್ಥಾನಕ್ಕೆ ಸೇರಿದ, ಪ್ರಾಚೀನ ಮಹದ್ಗ್ರಂಥಗಳಲ್ಲಿ ಉಕ್ತವಾಗಿರುವುದು ಬಲವಾದ ಹಾಗೂ ನಿರ್ವಿವಾದವಾದ ಪ್ರಥಮ ದರ್ಜೆಯ ಸಾಕ್ಷಿಯೆನಿಸಿದೆ.

ಈ ಬಗೆಗೆ ಶ್ರೀ ಶೃಂಗೇರಿ ಮಹಾ ಸಂಸ್ಥಾನ ಮಠಗಳಿಗೆ ಅನ್ವಯಿಸುವ ಬೃಹದ್ಗ್ರಂಥಗಳ ಪೈಕಿ, ಕೆಲವು ಪ್ರಧಾನ ಗ್ರಂಥಗಳನ್ನು ಈ ಕೆಳಗೆ ನಮೂದಿಸಲಾಗಿದೆ.

1. "ಶ್ರೀ ಬೃಹದ್ ಶಂಕರ ವಿಜಯ" ಶ್ರೀ ಆದಿ ಶಂಕರಾಚಾರ್ಯರ ಬಾಲ್ಯದ ಗೆಳೆಯ ಶ್ರೀ ಚಿತ್ಸುಖಾಚಾರ್ಯ ವಿರಚಿತ ಮಹದ್ಗ್ರಂಥ. ಇದು ಸತ್ಯ ಸುಂದರವಾದ ಮಹಾಗ್ರಂಥ. ಶ್ರೀ ಶೃಂಗೇರಿ ಮಹಾ ಸಂಸ್ಥಾನ ಮಠಗಳ ಗ್ರಂಥಗಳಿಗೆಲ್ಲಾ ಬಹು ಪ್ರಾಚೀನವಾದ ಅಂದರೆ ಕ್ರಿ. ಪೂ. 476 ರ. ಸರಹದ್ದಿನಲ್ಲಿ ಚಿತ್ಸುಖಾಚಾರ್ಯರಿಂದ ರಚಿತವಾದ ಸತ್ಯ ಸುಂದರವಾದ ಬೃಹದ್ಗ್ರಂಥ. ಆದಿ ಶ್ರೀ ಶಂಕರರ ಆತ್ಮೀಯ ಗೆಳೆಯರಾದ ಇವರು, ಶಂಕರರು ಕ್ರಿ. ಪೂ. 477 ರಲ್ಲಿ ಬ್ರಹ್ಮೀಭೂತರಾದೊಡನೆ, ಶ್ರೀ ಬೃಹದ್ ಶಂಕರ ವಿಜಯವನ್ನು, ಸ್ವಚ್ಛಂದವಾಗಿ ಶ್ರೀ ಚಿತ್ಸುಖಾಚಾರ್ಯರು ರಚಿಸಿರುವರು. ಈ ಗ್ರಂಥದ "ಪ್ರಾಚೀನ ಮುದ್ರಣ" ಅಧಿಕೃತ ಗ್ರಂಥವೆನಿಸಿರುತ್ತೆ.

2). " ಶ್ರೀ ಪಿತಾಮಹ ಸಂಹಿತೆ " ಈ ಮಹಾಗ್ರಂಥ, ಶ್ರೀ ಶೃಂಗೇರಿ ಮಠದ ಜ॥ ವಿದ್ಯಾರಣ್ಯರಿಂದ ಕ್ರಿ. ಶ. 14ನೇ ಶತಮಾನದಲ್ಲಿ ವಿರಚಿತವಾಗಿದೆ. ಇದರಲ್ಲಿ ಶ್ರೀ ಚಂದ್ರಮೌಳಿ ಲಿಂಗ ಶ್ರೀ ರಂಭಾಪುರಿ ವೀರ ಸಿಂಹಾಸನಾಧೀಶ್ವರ ಆದಿ ಶ್ರೀ ಜ॥ ರೇವಣಸಿದ್ಧರಿಂದ, ಶ್ರೀ ಶೃಂಗೇರಿ ಆದಿ ಶ್ರೀ ಶಂಕರಾಚಾರ್ಯರಿಗೆ ದತ್ತವಾದ ಬಗ್ಗೆ, ಅಧಿಕೃತ ಉಲ್ಲೇಖನವಿದೆ ಎಂಬುದಾಗಿ ತಿಳಿದು ಬಂದಿದೆ.

3) ಶ್ರೀ ಭಾರತಿ ಕೃಷ್ಣಯತಿಯೆಂಬ ಮಹಾಗುರುಗಳು ರಚಿಸಿರುವ ಶ್ರೀ ವಿದ್ಯಾರಣ್ಯ ಕೃತಿ " ಎಂಬ ಉದ್ಗ್ರಂಥವಲ್ಲೂ ಮೇಲ್ಕಂಡ ಶ್ರೀ ಚಂದ್ರಮೌಳೀಶ್ವರ ಪ್ರಧಾನದ, ವಿಷಯ ಪ್ರತಿಪಾದಿತವಾಗಿರುವುದಾಗಿ ಕಂಡುಬಂದಿದೆ.

4) "ಶ್ರೀ ಶಿವತತ್ವ ರತ್ನಾಕರ. " ಕ್ರಿ. ಶ. 1631 ರಿಂದ 1709 ರ ಕಾಲಾವಧಿಯಲ್ಲಿದ್ದ ಕೆಳದಿ ಅರಸು ಮನೆತನದ ರಾಜ ; ಪಂಡಿತ ಶ್ರೀಬಸವಪ್ಪನಾಯಕರಿಂದ ಸಂಸ್ಕೃತದಲ್ಲಿ ವಿರಚಿತವಾದ " ಶ್ರೀ ಶಿವತತ್ವ ರತ್ನಾಕರ " ಎಂಬ ಉದ್ಗ್ರಂಥದಲ್ಲೂ ಶ್ರೀ ಶಂಕರರಿಗೆ ಶ್ರೀ ಆದಿ ಜ॥ ರೇವಣಸಿದ್ಧರಿಂದ, " ಚಂದ್ರಮೌಳೀಶ್ವರಲಿಂಗ " ಅನುಗ್ರಹವಾದ, ಸತ್ಯ ಸುಂದರ ವಿಷಯ ಪ್ರತಿಪಾದಿಸಲ್ಪಟ್ಟಿದೆ. ಪಂಡಿತ ಶ್ರೀ ಬಸವಪ್ಪನಾಯಕರು ತಮ್ಮಿಂದ ರಚಿತವಾಗಿರುವ " ಶಿವತತ್ವ ರತ್ನಾಕರ " ವೆಂಬ ಗ್ರಂಥದಲ್ಲಿ ನಿರೂಪಿಸುತ್ತಾ ಶ್ರೀ ವಿದ್ಯಾರಣ್ಯರ " ಪಿತಾಮಹ ಸಂಹಿತೆ " ಮತ್ತೂ ಶ್ರೀ ಭಾರತಿ ಕೃಷ್ಣಯತಿ ವಿರಚಿತ "ಶ್ರೀ ವಿದ್ಯಾರಣ್ಯಕೃತಿ " ಎಂಬ ಮಹಾ ಗ್ರಂಥಗಳಲ್ಲಿ ಶ್ರೀ ವೀರ ಸಿಂಹಾಸನಾಧೀಶ್ವರ ಆದಿ ಶ್ರೀ ಜ॥ ರೇವಣಸಿದ್ಧರು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಶ್ರೀ ಆದಿ ಶಂಕರಾಚಾರ್ಯರಿಗೆ ಅನುಗ್ರಹಿಸಿರುವ ಅಂಶವನ್ನು ಅವರುಗಳು ಗಂಭೀರವಾಗಿ ಉಲ್ಲೇಖಿಸಿರುವುದನ್ನು ನೋಡಿ, ತಾವು ಶಿವತತ್ವ ರತ್ನಾಕರದಲ್ಲಿ ಅದೇ ವಿಷಯವನ್ನು ಪ್ರತಿಪಾದಿಸಿರುವುದಾಗಿ ಬರೆದಿರುತ್ತಾರೆ.

5) " ಶ್ರೀ ಗುರುವಂಶ ಮಹಾಕಾವ್ಯ " ಈ ಮಹಾ ಕಾವ್ಯವನ್ನು ಕ್ರಿ. ಶ. 1706-41 ರ 35 ವರ್ಷಗಳು ಶ್ರೀ ಶೃಂಗೇರಿ ಶ್ರೀ ಶಾರಾದಾದ್ವೈತ ಮಠಕ್ಕೆ ಅಧಿಪತಿಗಳಾಗಿದ್ದ ಶ್ರೀ ಜ॥ ಸಚ್ಚಿದಾನಂದ ಭಾರತಿ ii ಶ್ರೀಗಳು, ತಮ್ಮ ಆಸ್ಥಾನ ವಿದ್ವಾಂಸರಾಗಿದ್ದ ಪಂಡಿತ ವೇ॥ ಬ್ರಂ॥ ಕಾಶಿ ಲಕ್ಷ್ಮಣ ಶಾಸ್ತ್ರಿಗಳಿಂದ, ಆದಿ ಶ್ರೀ ಶಂಕರರಿಂದ ತಮ್ಮವರಿಗೆ, ಈ ಪೀಠಕ್ಕೆ ಆಗಿ ಹೋಗಿರುವ ಶ್ರೀ ಗುರು ಪರಂಪರೆಯ ಬಗೆಗೆ ಸತ್ಯ ಸುಂದರವಾದ ಕಾವ್ಯವನ್ನು ರಚಿಸುವಂತೆ ಆಜ್ಞಾಪಿಸಿದರು. ಕಾಶಿ ಶ್ರೀ ಲಕ್ಷ್ಮಣ ಶಾಸ್ತ್ರಿಗಳು ಗುರುಗಳ ಆಶೀರ್ವಾದದ ಬಲದಿಂದ, ಶ್ರೀ ಪೀಠದ ಪ್ರಾಚೀನ ಗ್ರಂಥಾಧಾರಗಳನ್ನನುಸರಿಸಿ ಶ್ರೀ ಗುರುವಂಶ ಮಹಾಕಾವ್ಯವನ್ನು ಅಧಿಕೃತವಾಗಿ

ರಚಿಸಿರುವುದಾಗಿ ಪ್ರತಿಚ್ಛೆ ಮಾಡಿರುವರು. ಅಷ್ಟೆ ಅಲ್ಲ. ಈ ಮಹಾ ಕಾವ್ಯದ 19 ಅಧ್ಯಾಯಗಳಲ್ಲಿ ಪ್ರಮುಖವಾಗಿ ಅಧ್ಯಾಯ 3 ಶ್ಲೋಕ 33, 34 ರಲ್ಲಿ ಶ್ರೀ ಚಂದ್ರ ಮೌಳಿಲಿಂಗ,ಯಾರಿಂದ ಶ್ರೀ ಆದಿ ಶಂಕರರಿಗೆ ದತ್ತವಾಯಿತೆಂಬ ವಿವರಣೆಯನ್ನು ಸ್ಪಷ್ಟ ವಾಗಿ ವ್ಯಾಖ್ಯಾನ ಮಾಡಿರುವರು. ಯಿತ್ಯಾದಿ ವಿಷಯುಗಳೂ; 5ನೇ ಸರ್ಗದ 59ನೇ ಶ್ಲೋಕದಲ್ಲಿ "ಶ್ರೀ ರೇವಣಸಿದ್ಧರ" ಹೆಸರು ಮತ್ತು 6ನೇ ಸರ್ಗದ 1, 2ನೇ ಶ್ಲೋಕ ಗಳಲ್ಲೂ " ಶ್ರೀ ವೀರ ಸಿಂಹಾಸನಸನಾ ಶ್ರೀ: " ಎಂದೂ ಮತ್ತು " ರೇವಣಾಸಿದ್ಧ ಯೋಗಿ " ಎಂದೂ ಉಕ್ತವಾಗಿದೆ. ಈ ಮಹಾಕಾವ್ಯದ 3ನೇ ಸರ್ಗದ ಶ್ಲೋಕ 33 ರಲ್ಲಿ, ಸುಪ್ರಸಿದ್ಧ ಗ್ರಂಥಕರ್ತರು "ಸು ಸಿದ್ಧ" ಎಂಬ ಪದಕ್ಕೆ "ಶ್ರೀ ರೇವಣಸಿದ್ಧ" ರೆಂದು ಸ್ವತಃ ವ್ಯಾಖ್ಯಾನದಲ್ಲಿ ಊರ್ಜಿತಗೊಳಿಸಿರುವ, ಇತ್ಯಾದಿ ವಿಷಯಗಳು. ಈ ಮಹಾಕಾವ್ಯ ಸುಮಾರು ಕ್ರಿ. ಶ. 1730 ರಲ್ಲಿ ರಚಿತವಾಗಿದೆ.

6) " ಶ್ರೀ ಕೆಳದಿ ನೃಪ ವಿಜಯ " ಮೈಸೂರು ಓರಿಯಂಟಲ್ ಲೈಬ್ರರಿ ಯವರ ವತಿಯಿಂದ, ಪ್ರಕಾಶಿತಗೊಳಿಸಿರುವ " ಕೆಳದಿ ನೃಪವಿಜಯ " ವೆಂಬ ಗ್ರಂಥ ದಲ್ಲಿ ಶ್ರೀ ಶೃಂಗೇರಿ ಆದಿ ಶ್ರೀ ಶಂಕರಾಚಾರ್ಯರಿಗೆ ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ಶ್ರೀ ಆದಿ ಜಗದ್ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾ ಚಾರ್ಯರು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿದ ವಿಷಯ ರಚಿತ ವಾಗಿರುವುದೆಂದು ಕಂಡುಬಂದಿದೆ. ಈ ಕೃತಿ ಸುಮಾರು ಕ್ರಿ. ಶ. 1763 ರಲ್ಲಿ ಇಕ್ಕೇರಿ ರಾಜರಿಂದ ರಚಿತವಾಗಿದೆ.

7) " ಸಂಸ್ಕೃತದ ಶ್ರೀ ರೇಣುಕ ವಿಜಯ ಮಹಾಪುರಾಣ " ಶ್ರೀ ಸಿದ್ಧನಾಥ ಶಿವಾ ಚಾರ್ಯ ವಿರಚಿತ ಈ ಮಹಾ ಗ್ರಂಥದಲ್ಲೂ ವೇಲ್ಕಂಡ ಶ್ರೀ ಚಂದ್ರಮೌಳಿ ಲಿಂಗ ಪ್ರದಾನದ ವಿಷಯ ವಿಸ್ತಾರವಾಗಿ ಪ್ರತಿಪಾದಿಸಲಾಗಿದೆ.

8) ಈ ಪವಿತ್ರವಾದ ವಿಷಯ ಯಿನ್ನೂ ಅನೇಕ ಪ್ರಸಿದ್ಧ ಗ್ರಂಥಗಳಲ್ಲಿ ವಿದ್ವನ್ಮಣಿ ಗಳು ರಚಿಸಿರುವುದು ಆಧಾರಬದ್ಧವಾಗಿ ವೇದ್ಯವಿರುತ್ತೆ.



## ಶ್ರೀಶೈಲದ ಗಿರಿಯಲ್ಲಿ ಪರಿಶೋಭಿಸುವ
## ಬೃಹದ್ ಸಾಕ್ಷಿ ಮಹಾ ಗಣಪತಿಯ ನಿದರ್ಶನ

ಆದಿ ಶ್ರೀ ಶಂಕರಾಚಾರ್ಯರು ವೊಮ್ಮೆ ಶ್ರೀಶೈಲದಲ್ಲಿ ಮನೋಹರವಾ

ಶಿಖರದ ವಂದೆಡೆಯಲ್ಲಿ, ಪದ್ಮಾಸನಾಸೀನರಾಗಿ ಮಂಡಿಸಿ ॥ ಧ್ಯಾನಾವಸ್ಥಿತ ತದ್ಗ ತೇನ ಮನಸಾ। ಪಶ್ಯಂತಿ ಯಂ ಯೋಗಿನಃ ॥ ಎಂಬಂತೆ ಶ್ರೀ ಭ್ರಮರಾಂಬಾ ಸಮೇತನಾದ ಮಲ್ಲಿಕಾರ್ಜುನನ ದೇವಾಲಯದ ಪಂಚ ಕಲಸಗಳಿಗಭಿ ಮುಖವಾಗಿ ಕುಳಿತು ನಿರ್ಮಲ ಭಾವದಿಂದ ಗಾಢವಾಗಿ ಶಿವನನ್ನು ಧ್ಯಾನಿಸುತ್ತ ಲಿದ್ದರು. ಆ ವೇಳೆಗೆ ತಮ್ಮ ಸುಮಾರು 23 ವರ್ಷಗಳ ಕಾಲಾವಧಿಯೊಳಗಾಗಿ ಸಮಸ್ತ ಪ್ರಸ್ಥಾನತ್ರಯಗಳಿಗೆ ಬರೆಯಬೇಕಾದ ಎಲ್ಲಾ ಭಾಷ್ಯಾಧಿಗಳನ್ನೂ ಯಿನ್ನೂ ಅಸಂಖ್ಯಾತವಾದ ಧರ್ಮಗ್ರಂಥಗಳನ್ನೆಲ್ಲಾ ಸಮಗ್ರವಾಗಿ ರಚಿಸಿ, ಶಿಷ್ಯರಿಗೆ ಬೋಧಿಸಿ ಅಖಂಡವಾಗಿ ಅದ್ವೈತ ಮತವನ್ನು ಭಾರತದಲ್ಲಿ ಸುವ್ಯವಸ್ಥಿತವಾಗಿ ಸ್ಥಾಪಿಸಿದರು. ಇನ್ನು ಮುಂದೆ ಯಾವ ಕೃತಿಯನ್ನೂ ರಚಿಸುವ ಯೋಚನೆಯಿಲ್ಲದೆ – ಧ್ಯಾನಯೋಗ್ದ ದಲ್ಲಿ ಸಮಾಧಿಸ್ಥರಾಗಬೇಕೆಂದು ಸಂಕಲ್ಪ ಮಾಡಿದರು. ಅಂಥಪ್ಪ ವಂದು ಶಿವಧ್ಯಾನದ ಶುಭ ಮುಹೂರ್ತದಲ್ಲಿ, ಜಗತ್ಪತಿಯಾದ ಶ್ರೀ ಭ್ರಮರಾಂಬೆಯೊಡೆಯನು, ಶಂಕರರೆ ಸಗಿದ ಧರ್ಮ ಪ್ರಚಾರ ಮತ್ತು ಅವರಿಂದ, ಶ್ರೀ ಆದಿ ಅಗಸ್ತ್ಯ ಮಹರ್ಷಿಗಳ ಕೃಪಾಶೀರ್ವಾದಗಂಳಿದ ರಚಿಸಿದ ಅಪಾರ ಘನ ಶಾಸ್ತ್ರ ಭಂಡಾರಗಳನ್ನೂ ಗಮನಿಸಿ, ಶಂಕರಾಚಾರ್ಯರನ್ನು ಕರುಣೆಯಿಂದ ಅನುಗ್ರಹಿಸಿ, ಲೋಕವರಿಯು ವಂತೆ ಆಶೀರ್ವದಿಸಬೇಕೆಂದು ಭಗವಂತನು ಮನಸ್ಸು ಮಾಡಿದನು. ಶ್ರೀ ಶಂಕರರದು ಇದೆಂಥಾ ಭಾಗ್ಯ, ಇವರಿಂದಾಗಿ ಶ್ರೀ ಗಿರಿ ಮಲ್ಲಿಕಾರ್ಜುನನು, ಶಂಕರಾಚಾರ್ಯರು ತಪಸ್ಸನ್ನೆಸಗುತ್ತಿದ್ದ ನಿರ್ಜನ ಹಾಗೂ ಪ್ರಶಾಂತವಾದ ಸ್ಥಳದಲ್ಲಿ ತನ್ನ ಅಮೃತವಾಣಿ ಯಿಂದ, ಓಂ ಶಂಕರಾ ! ನೀನೆಸಗಿರುವ ವೇದೋಪನಿಷದ್ ಭಾಷ್ಯಾದಿಗಳೂ ಅವರ ಪ್ರಚಾರ ಕಾರ್ಯಗಳೂ ಸದಾ ಸಂಸ್ಮರಣೀಯವೆನಿಸಿವೆ. ಆದರಿಂದಾಗಿ, ಸನಾತನ ಧ ರ್ಮೋ ದ್ಧಾ ರ ಕಾರ್ಯವನ್ನು ನೀನೆಸಗಿರುವುದರಿಂದ, ನಿನ್ನನ್ನು ಈಗ ನಾವು ಸನ್ಮಾನಿಸಿ ಗೌರವಿಸಿ ಆಶೀರ್ವದಿಸಬೇಕೆಂದು ಸಂಕಲ್ಪ ಮಾಡಿರುವೆವು. ನೀನು ತ್ವರೆ ಯಿಂದ, ಭದ್ರಾತೀರ ಪ್ರವಿರಾಜಮಾನ ಶ್ರೀಮದ್ರಂಭಾಪುರಿ ಭವ್ಯತರ ವೀರ ಸಿಂಹಾ ಸನಾಧೀಶ್ವರರಾದ, ಆದಿ ಜ॥ ಶ್ರೀ ಶ್ರೀ ಶ್ರೀ ರೇವಣಸಿದ್ಧ ಶಿವಾಚಾರ್ಯ ಮಹಾ ಪಾದಂಗಳವರನ್ನು ಸಂದರ್ಶಿಸುವವನಾಗು, ಎಂಬುದಾಗಿ ಶ್ರೀಶೈಲ ಮಲ್ಲಿಕಾರ್ಜುನನ ದಿವ್ಯ ಅಶರೀರವಾಣಿ ನಭೋ ಮಂಡಲದಲ್ಲಿ, ಹ್ರೀಂಕಾರ ಧ್ವನಿಯಿಂದ ಝೇಂಕರಿಸಿತು. ಇದನ್ನು ಕೇಳಿದ ಶಂಕರರು ಪುಳುಕಾಂಕಿತ ಭಾವದಿಂದ ಉತ್ತಿಷ್ಠ ರಾಗಿ ಮೆಲ್ಲಗೆ ಕಣ್ತೆರೆದು ತಮ್ಮ ಸುತ್ತಲೂ ವಿಶಾಲ ದೃಷ್ಟಿಯಿಂದ ನೋಡಿದರು. ಘೋರಾರಣ್ಯದ ವಿನಃ ಏನೂ ಕಾಣಲಿಲ್ಲ. ಧೀಮಂತರಾದ ಆಚಾರ್ಯರು ಆಗ ಇದು ಪ್ರಭು ಶ್ರೀ ಮಲ್ಲಿಕಾರ್ಜುನನ ಘನ ಸಂದೇಶವೆಂದು ಚಿತ್ತದಲ್ಲಿ ನಿಶ್ಚಯಿಸಿ, ವೊಡನೆ ಶಿವ ಸ್ಮರಣೆಯೊಂದಿಗೆ, ಆಕಾಶಮಾರ್ಗವಾಗಿ ಶ್ರೀ ಮಲಯಾಚಲ ಪುಣ್ಯ ಪ್ರದೇಶದ, ಭದ್ರಾತೀರ ಪ್ರವಿರಾಜಮಾನ ಶ್ರೀಮದ್ರಂಭಾಪುರೀ ವೀರ ಸಿಂಹಾಸನದ ಪತಿ ೧೦೦೮ ಶ್ರೀ ಆದಿ ಜ॥ ಸಾರ್ವಭೌಮ ಶ್ರೀ ಶ್ರೀ ಶ್ರೀ ರೇವಣಸಿದ್ಧ ಮಹಾಚಾರ್ಯರನ್ನು

ಶಂಕರರು ದೃಷ್ಟಿಸಿ ನೋಡಿದರು. ಶಂಕರಾಚಾರ್ಯರು ಸಹಜವಾಗಿಯೇ ಮಹ
ಜ್ಞಾನಿಗಳಾದುದರಿಂದ, ಶಿವಲಿಂಗೋದ್ಭವ ದಿವ್ಯ ಮಂಗಳ ಮೂರ್ತಿಗಳಾದ ಶ್ರೀ
ಮದಾಚಾರ್ಯವರೇಣ್ಯರನ್ನು ಪ್ರಥಮ ಭಾರಿಗೆ ಸಂದರ್ಶಿಸಿದೊಡನೆ, ಸಾಕ್ಷಾತ್
ಶಿವ ಸ್ವರೂಪದ ಮಂತ್ರಮಯ ದಿವ್ಯ ದೇಹಧಾರಿ, ದೇಶಿ ಕೇಂದ್ರರೆಂದು ಮನಗ
ವೊಡನೆ ಅನನ್ಯ ಭಕ್ತಿ ಭಾವದಿಂದ ಶರಣಾಗತರಾದರು. ತತ್ವಜ್ಞಾನಿ ಶಂಕರರು
ಜ॥ ರೇವಣಸಿದ್ಧರೆಂಬುದು ಗೋಚರವಾಯಿತು. ಸ್ವಲ್ಪಕಾಲ ಮೌನ ಮು
ಯಲ್ಲಿದ್ದು ಜಗದಾಚಾರ್ಯರನ್ನು ಶಂಕರಾಚಾರ್ಯರು ತುಂಬು ಹೃದಯದಿಂದ ಸ್ತು
ಸುತ್ತಾ, ತಾವು ಶ್ರೀ ಮಲ್ಲಿಕಾರ್ಜುನನ ದಿವ್ಯ ಸಂದೇಶದಂತೆ ಮಹಾ ವೀರ ಸಿಂ
ಸನ ಪೀಠಕ್ಕೆ ಬಂದು ತಮ್ಮ ದಿವ್ಯ ತೇಜಃ ಪುಂಜವಾದ ರೂಪವನ್ನು ಕಂಡು ಧ
ನಾದೆನೆಂದು ನಿವೇದಿಸಿಕೊಂಡರು.

ಸರ್ವಜ್ಞ ಮೂರ್ತಿಗಳಾದ, ಶಿವಲಿಂಗ ಸಂಭವ ಆದಿ ಶ್ರೀ ಜ॥ ರೇವಣಸಿದ್ಧರು
ಕರುಣಾರಸಪೂರಿತ ॥ ಪ್ರಣಯ ನಜುಷಾ । ಚಕ್ಷುಸಾ ವೇಷ್ಯ ಮಾಣಃ ॥ ಎಂಬಂ
ಪರಮ ಆದರಾಭಿಮಾನಗಳಿಂದ ಬಂದಿರುವ ಸುಜ್ಞಾನಿ ಆದಿ ಶ್ರೀ ಶಂಕರಾಚಾಯ
ರನ್ನು ಕುರಿತು ಕುಶಲ ಪ್ರಶ್ನೆಗಳ ನಂತರ, ಅನಾದಿ ಸಂಸಿದ್ಧವಾದ ಶಿವಶಕ್ತಿ ಸಂಪುಟ
ಗಾಢವಾದ ತತ್ವವನ್ನು, ಸ್ಫೂರ್ತಿದಾಯಕವಾಗಿ ಶ್ರೀ ರೇವಣಸಿದ್ಧರು ಸಂಗ್ರಹವಾ
ಶ್ರೀ ಶಂಕರಾಚಾರ್ಯರಿಗೆ " ಕುಸುಮಾದಪಿ ಕೋಮಲಂ " ಎಂಬ ರೀತಿಯಲ್ಲಿ ಹೃ
ಯಂಗಮವಾಗಿ ವಿವರಿಸಿದರು. ಶ್ರೀ ಮಹಾ ಗುರುವಿನ ಅಮೃತಹಸ್ತದಿಂ
ಕರುಣಾಪೂರಿತ ಭಾವದಿಂದ, ತನ್ನ ಆತ್ಮ ತೇಜಸ್ಸಿನ ಚಿತ್ಕಳೆಯನ್ನೇ ಮಹಾ ಗು
ಶಿಷ್ಯೋದ್ಧಾರಾರ್ಥ, ಜಗತ್ಕಲ್ಯಾಣಾರ್ಥ ಇಷ್ಟಲಿಂಗ ರೂಪದಲ್ಲಿ ಹರಸಿ, ಶಿಷ್ಯ
ವಾಮಕರಕಮಲ ಪೀಠದಲ್ಲಿರಿಸಿ, ಅವಧಾನ ಭಕ್ತಿಯಿಂದ ಪೂಜಿಸುವಂತೆ ಅರುಹಿ.
ಪಂಚಾಕ್ಷರೀ ಮಹಾ ಮಂತ್ರೋಪದೇಶದಿಂದ ಶ್ರೀ ಗುರು ತನ್ನ ಶಿಷ್ಯನನ್ನು ಅಪ್ಪ
ಕೊಳ್ಳುವನೆಂದರುಹಿದರು, ನಿಜೇಷ್ಟಲಿಂಗಪೂಜೆ ತನ್ನ ಆತ್ಮಲಿಂಗದ ಪೂಜೆಯೇ ಆ
ಯೆಂದು ರೇವಣಸಿದ್ಧರು, ತಮ್ಮೆದುರಿಗೆ ವಿನೀತ ಭಾವದಿಂದ ಪೀಠದ ಮೇಲೆ ಕು
ತಿದ್ದ, ಜ್ಞಾನಾನುಭವದಲ್ಲಿ ಪಾದರಸ ಸದೃಶರಾದ ಆದಿ ಶ್ರೀ ಶಂಕರಾಚಾರ್ಯ
ಅರುಹಿದರು.

ಶ್ರೀ ಮಹಾ ಗುರುವಿನ ಅಮೃತ ಹಸ್ತದಿಂದ ಅನುಗ್ರಹೀತವಾದ ಶಿವಲಿ
ಇಷ್ಟಲಿಂಗವನ್ನು, ತನ್ನ ನಿಜಾತ್ಮ ಕಳೆಯೆಂದು ಬೋಧಿಸಿ; ವತ್ಸ ಶಂಕರಾ–

a) " ಹೃದಯಾಬ್ಜೇ ಜ್ವಲಂತ, ಮಂಗುಷ್ಠಮಿತಂ ಪುರಾಣಂ ।
ಲಿಂಗ ಸ್ವರೂಪಂ ॥ (ಮಹಾಸ್ಕಾಂದ)

b) ॥ ಲಿಂಗಂ ಪರೋಹೃತ್, ಕುಹುರಾಭಿ ಸಂಜ್ಞಕಂ ॥

( ಶಿವಸೂತ್ರ )

c) ॥ ನಾದಾತ್ಮ ಲಿಂಗಂ ಸ್ಥಿತ ಮಂಗಳಾಯ ॥ (ಸೂಕ್ಷ್ಮಾಗಮ)

ಇಂತಪ್ಪ ಆತ್ಮಲಿಂಗ ತತ್ವವನ್ನು ಸ್ವಾತ್ಮದಲ್ಲಿರಿತು, ನಿತ್ಯಾನು ಸಂಧಾನದಿಂದ, ॥ ಮಾನವಃ ಶಿವಯೋಗೇನ ಶಿವೋಭವತಿ ॥ ಯೆಂದು ಅರುಹಿದರು. ಶ್ರೀ ಸಿದ್ಧನಾಥ ಶಿವಾಚಾರ್ಯರ ಕೃತ ಸಂಸ್ಕೃತ ರೇಣುಕವಿಜಯ ಪುರಾಣದಲ್ಲಿ ಈ ವಿಷಯ ಉಕ್ತವಾಗಿದೆ.

ಶ್ರೀಶೈಲ ಗಿರಿ ಶಿಖರದಲ್ಲಿ ಶಂಕರರು ತಪಸ್ಸನ್ನು ಮಾಡುವ ಕಾಲದಲ್ಲಿ, ಶ್ರೀ ಗಿರಿ ಮಲ್ಲಿಕಾರ್ಜುನನು ಅಶರೀರವಾಣಿಯಿಂದ, ಯತೀಂದ್ರರನ್ನು, ಶ್ರೀಮದ್ರಂಭಾಪುರಿ ಗುರುವರೇಣ್ಯರ ಸನ್ನಿಧಿಗೆ ಬರುವಂತೆ, ಆಜ್ಞಾಪಿಸಿದುದು ನಿಜವೆಂಬುದಕ್ಕೆ ಅಲ್ಲೇ ಹೌದೆಂದು ಹೇಳಲು ಸಾಕ್ಷೀ ರೂಪವಾಗಿ ಶ್ರೀ ಗಣಪತಿಯು ಬೃಹದಾಕಾರ ದಿಂದ ನಿಂತು ಪರಿಶೋಭಿಸುತ್ತಲಿಹನು. ದೈವೀರಹಸ್ಯ ಬಡಪಾಯಿ ಮಾನವ ತಕ್ಷಣ ಅರ್ಥ ಮಾಡಿಕೊಳ್ಳಲಾರ ॥ ಮಮ ಮಾಯಾ ದುರತ್ಯಯ ॥ ಎಂದಿದ್ದಾನೆ ಗೀತಾಚಾರ್ಯ. ಈ ಕಾರಣದಿಂದ ಮೇಲ್ಕಂಡ ಮಂಗಳ ಮೂರ್ತಿ ಶ್ರೀ ಗಣಪತಿಗೆ ಅಂದಿನಿಂದ " ಸಾಕ್ಷಿ ಗಣಪತಿ " ಎಂದು ಹೆಸರಾಯಿತು.

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

ಧ್ಯಾನ : ॥ ಶ್ರೀ ವೀರಶೈವ ಸದ್ಧರ್ಮ, ಸ್ಥಾಪಕಾನ್ ಸತತಂ ಭಜೇ ।
ರೇಣುಕಾದಿ ಶಿವಾಚಾರ್ಯಾ । ನ್ನಿಗಮಾಗಮ ವಿಶ್ರುತಾನ್ ॥ ೧ ॥

॥ ಸ ವೇ ತ್ಯಾದಿ ಶೃತಿ ಪ್ರೋಕ್ತಾಃ । ಪುರುಷಾಸ್ಸಂತಿ ಪಂಚಧಾ ।
ತಾನೇವ ಶ್ರೀ ಗುರೂನ್ನೌಮಿ । ಶಿವವ್ಯೂಹಾನ್ ಸನಾತನಾನ್ ॥ ೨ ॥

॥ ಲೋಕಮೇತಂ ಸಮುದ್ಧರ್ತುಂ । ಲಿಂಗ ಪಂಚಕ ನಿರ್ಗತಾನ್ ।
ಸರ್ವಶಕ್ತಿಃ ಯುತಾನ್ವಂದೇ । ಪಂಚಾಚಾರ್ಯಾನ್ ಜಗದ್ಗುರೂನ್ ॥ ೩ ॥

ಶ್ರೀ ಆದಿ ಜ॥ ರೇಣುಕಾಚಾರ್ಯರು ದ್ವಾಪರ ಯುಗಾರಂಭದಲ್ಲಿ ಶ್ರೀ
ನಪ್ಪಣೆಯಂತೆ ಶ್ರೀಮತ್ಕೈಲಾಸದಿಂದ ಭುವಿಗೆ ಯಿಳಿಯುತ್ತಿರುವಾಗ ಅಗ
ಮಾರ್ಗದಲ್ಲಿ – ಸತ್ಯಲೋಕಕ್ಕೆ ಆಗಮಿಸಿ, " ಶ್ರೀಶಾರದಾಂಬೆಯ ಪ್ರಾರ್ಥ
ಯಂತೆ ವಿದ್ಯಾಂಬೆಗೆ " " ಶ್ರೀ ರತ್ನಮಯ ಲಿಂಗವನ್ನು" ಅನುಗ್ರಹಿಸಿದ

○ ○ ○

॥ ಪ್ರವಿದಿತಾಜ ರಮೇಶ ಶಕ್ರ ।
ಧ್ರುವ ದಿವಾಕರ ಕುಮುದ ಬಾಧಂವ ।
ಭುವನಗಳ ದಾಂಟುತ್ತೆ ಗೌರೀ ।
ರಮಣನಾಜ್ಞೆಯಲಿ ॥ ಜವದಿ ಸಾರಿದನಲ್ತೆ ।
ಭೂಲೋಕವನು ಸದ್ಯೋಜಾತ ।
ಮುಖ ಸಂಭವನು ರೇಣುಕ ।
ನಮಲ ಶಿವ ಸಿದ್ಧಾಂತ ಪಾರಗನು ॥

(ಶ್ರೀ ರೇಣುಕವಿಜಯ ಪುರಾಣ)

ವೀರ ಮಾಹೇಶ್ವರ ಸಂಪ್ರದಾಯದ ಶ್ರೀ ಮಹಾಗುರು ವರ್ಗದವರಿಂದ ವಿ
ವತ್ತಾಗಿ ಅನುಗ್ರಹೀತವಾಗಿರುವ ಲಿಂಗಾಂಗಿ, ಅಖಿಲ ದೇವ ದಾನವ ಮಾನವಾದಿಗ
ಹಾಗೂ ಶ್ರೀ ಬಸವಾದಿ ಸಮಸ್ತ ವಿರಕ್ತ ಪ್ರಮಥರೂ, ಹಗಲಿರುಳೂ ಜಗದ
ಪರಮ ಜಗದ್ಗುರು ವರೇಣ್ಯರಾದ ಶ್ರೀ ರೇಣುಕಾದಿ ಪಂಚಾಚಾರ್ಯರನ್ನು ಅವಧಾ
ಭಕ್ತಿಯಿಂದ ಸ್ಮರಿಸಿ. ಸ್ತುತಿಸಿ ಪೂಜಿಸುವುದು ಅವರವರ ನಿತ್ಯ ನೈಮಿತ್ತಿಕ ಕರ
ವಾಗಿದೆ ಎಂಬುದನ್ನು ಸ್ಮರಣೆಯಲ್ಲಿರಿಸಿರುವುದು ಆದ್ಯ ಕರ್ತವ್ಯವೆನಿಸಿದೆ. ಯಾಕೆಂ
ಶೃತಿಯಲ್ಲಿ ಈ ಪರಮಾಚಾರ್ಯರನ್ನು "ಸದ್ಯೋಜಾತಾದಯಃ" ಎಂದು ಸ್ತುತಿಸ
ಗಿದ್ದು, ಚಿದಾದಿತ್ಯ ಸ್ವರೂಪಿಗಳಾದ ಶ್ರೀ ರೇವಣಸಿದ್ಧರ ಶ್ರೀ ಪಾದ ಕಮಲಗಳ
ನಿರಂತರ ಅಖಿಲ ಮುವತ್ಮೂರು ಕೋಟಿ ದೇವತೆಗಳು ನಿತ್ಯ ಭಕ್ತಿಯಿಂದ ವಂದಿಸ
ಭಾವವನ್ನು ಎತ್ತಿ ತೋರಿಸುತ್ತಾ " ಸಮಸ್ತ ಸುರೌಘ । ವಂದಿತ ಪದಯುಗ
ಶ್ರೀ ರೇಣುಕ ಗಣೇಶನ ಪ್ರಾಭವವನಭಿ ವರ್ಣಿಸುವ, ಸರ್ವಮಂಗಳ ಸರಣಿಯಿದು
ಎಂದು ಹಾಡಿ ಪಾಡಿ ಕೊಂಡಾಡಿ ಗುರುಭಕ್ತಿಯನ್ನು ಪುಳುಕಾಂಕಿತಭಾವದಿಂದ ಪ್ರ
ಸಿರುತ್ತಾರೆ. ಇದು ಸ್ಮರಣೀಯವಿರುತ್ತೆ.

## ಶ್ರೀ ಶಾರದಾಂಬೆಗೆ ಸತ್ಯಲೋಕದಲ್ಲಿ ರತ್ನಮಯ ಲಿಂಗವಿತ್ತಿದ್ದು.

ಶ್ರೀ ಜ॥ ರೇಣುಕರು ಶಿವಲೋಕದಿಂದ ಪೊರಮಟ್ಟು ಶ್ರೀ ವೈಕುಂಠವನ್ನು ಸೇರುತ್ತಲೇ, ಶ್ರೀ ಲಕ್ಷ್ಮೀನಾರಾಯಣರಿಂದ ಪೂಜಿತರಾದರು. ಅದರಿಂದ ಸಂಪ್ರೀತರಾದ ಭಗವತ್ಪಾದಾಚಾರ್ಯರು ಶ್ರೀ ಮಹಾ ವಿಷ್ಣುವಿಗೆ ॥ ಇಂದ್ರನೀಲಂ ರತ್ನಮಯ ಶಿವಲಿಂಗಂ ಪೂಜಿತಂ ವಿಷ್ಣುನಾ ॥ : ಶ್ರೀ ಮಹಾಲಕ್ಷ್ಮಿಗೆ " ಶ್ರೀ ವೃಕ್ಷರೂಪಂಚ ಲಕ್ಷ್ಮ್ಯಾ " ಅಂದರೆ ಆ ರತ್ನಮಯ ಶಿವಲಿಂಗದಲ್ಲಿ ಬಿಲ್ವ ವೃಕ್ಷದ ರೂಪ ಥಳಥಳಿಸುವ ಲಿಂಗವನ್ನು ಕರುಣೆಯಿಂದಿತ್ತು ಶ್ರೀ ಲಕ್ಷ್ಮೀನಾರಾಯಣರನ್ನು ಆಶೀರ್ವದಿಸಿ, ಅಲ್ಲಿಂದ ಇಳಿಯುತ್ತಾ ಸತ್ಯಲೋಕವನ್ನು ಪ್ರವೇಶಿಸಿದರು.

ತಕ್ಷಣ ಚತುರ್ಮುಖ ಬ್ರಹ್ಮನು ಶಾರದೆಯೊಂದಿಗೆ ಶ್ರೀ ಜಗದಾಚಾರ್ಯರನ್ನು ಅತ್ಯಂತ ಭಕ್ತಿಯಿಂದ ಸ್ವಾಗತಿಸಿ, ಪೂಜಿಸಿ, ಸ್ತುತಿಸಲು, ಇವರ ಭಕ್ತಿಗೆ ಸುಪ್ರೀತರಾದ ಶ್ರೀ ರೇಣುಕ ತ್ರಿಭುವನಾಚಾರ್ಯರು, ಚತುರ್ಮುಖ ಬ್ರಹ್ಮನಿಗೆ–

" ಆಸೀಲ್ಲಿಗಂ ವೈಢೂರ್ಯಂ ವಿಧಿನಾ ॥

ವಿಧಿನಾ । ಚತುರ್ಮುಖೇನ । ವೈಢೂರ್ಯರೂಪಂ ॥ ಶಿವಲಿಂಗವನ್ನೂ ; ವಿದ್ಯಾಂಬೆಯೊಡದ ಶ್ರೀ ಶಾರದಾಂಬೆಗೆ–

॥ ಅಥ ಸರಸ್ವತೀ । ರತ್ನರೂಪಂ । ಶಿವಲಿಂಗಂ ಪೂಜಿತ ಮಾಸೀತ್ ॥

ಅಥಚ ಶ್ರೀ ಸರಸ್ವತೀ ಭಾರತೀ । ರತ್ನರೂಪಂ ॥ ರತ್ನಮಯ ಶಿವಲಿಂಗಂ ಪೂಜಯಾಮಾಸ ಭಕ್ತ್ಯಾ ॥

ಈ ಪ್ರಕಾರ ಸತ್ಯಲೋಕದಲ್ಲಿ (ಚತುರ್ಮುಖನ ಬ್ರಹ್ಮಲೋಕದಲ್ಲಿ) ಬ್ರಹ್ಮನಿಗೆ ವೈಢೂರ್ಯಮಯ ಶಿವಲಿಂಗವನ್ನು, ಶ್ರೀ ಶಾರದಾಂಬೆಗೆ ರತ್ನಮಯ ಶಿವಲಿಂಗವನ್ನು ಪ್ರಸನ್ನ ಭಾವದಿಂದಿತ್ತು ಅನುಗ್ರಹಿಸಿರುವರು. ಶಿವಶಕ್ತಿ ಸಂಪುಟದಿಂದ ವಿರಾಜಿಸುವ, ಶಿವಲಿಂಗ ತತ್ವರಹಸ್ಯವನ್ನು ವಿದ್ಯಾಂಬೆಗೆ ಶ್ರೀ ಗುರುದೇವನು ಅರುಹುತ್ತಾ, ಹೇ ವೀಣಾಪಾಣಿ, ನಿತ್ಯದ ಶಿವಲಿಂಗೋಪಾಸನೆಯಿಂದ–

॥ ಹೃದಯಾಬ್ಜ ಕೋಶಾಂತರ । ಪಕಾಶ ಲಬ್ಧಾಂಗುಷ್ಟ ।
ಪರಿಮಾಣಸ್ಯ ಲಿಂಗಾಕಾರ ಮಸ್ತೀತಿ । ತಸ್ಯ ರೂಪತ್ವ ಸಿದ್ಧಿಃ ॥

(ಅಪ್ಪಯ್ಯ ದೀಕ್ಷಿತರು.)

॥ ಸರ್ವ ಹೃದಯ ಪ್ರಕಾಶಃ ॥ ಎಂಬಂತೆ ಶಿವಯೋಗಿಗಳ, ಶಿವಶರಣ ಶುದ್ಧಾಂತರಂಗದಲ್ಲಿ ಪ್ರಜ್ವಲಿಸುವ, ಹೃದಯಾಂತರಾಳದಲ್ಲಿ, ಅಂಗುಷ್ಠ ಪ್ರಮಾಣ ಕೋಟಿ ಕೋಟಿ ಕನಕಮಯ ಹೊಂಬಣ್ಣದ, ಪ್ರಾಣ ಲಿಂಗಾಕಾರದ ಚಿನ್ಮಯ ಚಿಜ್ಜ್ಯೋತಿರ್ಲಿಂಗದ ಸಂದರ್ಶನವನ್ನು, ಅಂತರಂಗದ ಕಣ್ಣಿನಿಂದ ಶ್ರೀ ಗುರು ಕಟಾ ದಿಂದ, ಸ್ವಾತ್ಮದಲ್ಲಿ ಕಂಡು ತನ್ಮಯರಾಗಲು, ಶಿವಲಿಂಗಾರಾಧನೆ, ಇಷ್ಟಲಿಂಗ ಪೂಜ ದಿಗಳು ಅವಶ್ಯವೆಂದುಪದೇಶಿಸಿ, ಅಲ್ಲಿಂದ ಹೊರಟ ಶ್ರೀ ಗುರು ಸಾರ್ವಭೌಮರು, ಇಂದ್ರಾದಿ ಅನಂತ ಲೋಕಗಳನ್ನು ಸಂದರ್ಶಿಸುತ್ತಾ ಶಿವೋಕ್ತಿಯಂತೆ ಭುವಿಗಿಳಿದರು.



## ಶ್ರೀ ಬೃಹತ್ ಶಂಕರ ವಿಜಯ

**ಧ್ಯಾನ :** ॥ ಅಧ್ಯಾತೀತಪದೇ ಅಲಂಕೃತ ಶಿವೇ ।
ಅರ್ಥಾಂತರರ್ಥೇಪರೇ, ಅತ್ಯರ್ಥೇ ।
ಅಮಲಾಶಯೇ ಅತಿದಯೇ ।
ಅರ್ಧೇಂದು ಭೂಷೋಜ್ವಲೇ ॥

॥ ಅಧ್ಯಕ್ಷೇ, ಅಮರಾಂಗನಾ ಪರಿವೃತೇ ।
ಅಧ್ಯಾತ್ಮ ವಿದ್ಯಾಮಯೇ ।
ಅವ್ಯಕ್ತೇ ಅಚಲಾದಿ ರಾಜತನಯೇ ।
ವಂದೇ ಅಖಿಲಾಂಡೇಶ್ವರೀ ॥

ಆದಿ ಶ್ರೀ ಶಂಕರರ ಬಾಲ್ಯ ಸ್ನೇಹಿತ ಶ್ರೀ ಚಿತ್ಸುಖಾಚಾರ್ಯರು, ಶಂಕ ನೆರಳಿನೋಪಾದಿಯಲ್ಲಿ – ದೇಹ ನೆರಳಿನಂತೆ ಇವರೀರ್ವರೂ ಸದಾ ವಂದು ಜೋ ಯಾಗಿ ಅಗಲದಂತೆ ಯಿದ್ದ ಸುಹೃತ್‌ಗಳಿವರು, ಒಂದು ದಿವಸ ಶಂಕರರು ತಮ ಆತ್ಮೀಯ ಗೆಳೆಯ ಶ್ರೀ ಚಿತ್ಸುಖಾಚಾರ್ಯಾದಿ ನಾಲ್ಕು ಬಾಲಕರೊಂದಿಗೆ ಕಾಲ ಗ್ರಾಮದ ವಂದು ವಟವೃಕ್ಷದಡಿಯಲ್ಲಿ **॥ ಬಾಲಃ ಯಾವತ್ ಕ್ರೀಡಾಸಕ್ತಃ ॥** ಎಂಬಂತೆ, ಗೋಲಿ ಆಟದಲ್ಲಿ ನಿರತರಾಗಿದ್ದರು. ಈಶಾಜ್ಞೆಯೋ ಎಂಬಂತೆ, ಅ ಶ್ರೀ ಅಗಸ್ತ್ಯರು ತಮ್ಮ ದಿವ್ಯ ದೃಷ್ಟಿಯಿಂದ, ಶಂಕರರ ವಂದಂಶ, ಇಳೆಯಲ್ಲಿ ಶಂಕ ಚಾರ್ಯರಾಗಿ ಅವತರಿಸಿರುವ ಮಹದಂಶವನ್ನು ಮನಗಂಡರು. ಕೂಡಲೇ ತಮ

ನಾಲ್ಕು ಜನ ಶಿಷ್ಯರೊಂದಿಗೆ ಶಂಕರರ ದರ್ಶನಾರ್ಥ ಕಾಲಟಿಗೆ ಬಂದಾಗ, ಗೋಲಿ ಯಾಡುತ್ತಿದ್ದ ಶಂಕರನು ಪ್ರತಿ ಸಾರಿಯೂ ಗುರಿ ತಪ್ಪದೆ ಗೋಲಿಗಳನ್ನು ಠಾ, ಠಾಂ, ಯೆಂದು ಹೊಡೆಯುತ್ತಿದ್ದುದನ್ನು ಅಗಸ್ತ್ಯರು ದೂರದಿಂದಲೇ ನೋಡಿ, ತಮ್ಮ ಹಿಂಬದಿಯಲ್ಲಿದ್ದ ನಾಲ್ಕು ಜನ ಶಿಷ್ಯರಿಗೆ, ತೇಜಸ್ವಿಯಾದ ಬಾಲಕ ಶಂಕರನನ್ನು ತೋರಿಸಿ ನೋಡಿದಾಗ ಇವರೆಲ್ಲರೂ, ಶಿವಾಂಶ ಸಂಭೂತನಾವ ಶಂಕರನನ್ನು ದೂರ ದಿಂದ ವಂದಿಸಿದರು. ನಂತರ ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರರ ಪ್ರಪ್ರಥಮ ಶಿಷ್ಯರೂ, ಶಿವ ಸರ್ವೋತ್ತಮತ್ವವನ್ನು ಸತತ ಹೃದಯಂಗಮವಾಗಿ ಎತ್ತಿ ಹಿಡಿದ, ಘನ ತಪೋಧನರಾದ ಅಗಸ್ತ್ಯರು, ಶಂಕರ ಬಾಲಕನನ್ನು ಸಮೀಪಿಸಿ, ಐದು ವರುಷದ ಬಾಲಕನ ಕರವನ್ನು ಹಿಡಿದೆತ್ತಿ ಅವನ ಮಸ್ತಕದ ಮೇಲೆ ತಮ್ಮ ಅಮೃತ ಹಸ್ತವನ್ನಿಟ್ಟು, ಹಸ್ತಮಸ್ತಕ ಸಂಯೋಗ ದೀಕ್ಷೆಯಿಂದ ಕಟಾಕ್ಷಿಸಿದರು. ಮಹರ್ಷಿಗಳ ದಿವ್ಯ ಸ್ಪರ್ಶದಿಂದ ತಕ್ಷಣ ಶಂಕರರ ದೇಹದಲ್ಲಿ ದಿವ್ಯ ವಿದ್ಯುತ್ ಶಕ್ತಿ, ದೇದೀಪ್ಯಮಾನವಾಗಿ ಬೆಳಗಿದಂತಾಯಿತು. ಒಡನೆ ಶಂಕರ ಬಾಲಕನು ಪಾದರಸದಂತೆ ಜಾಗೃತನಾಗಿ ತನ್ನಂ ತರಂಗದಲ್ಲಿನ ದಿವ್ಯ ಜ್ಯೋತಿಯನ್ನು ಸಂದರ್ಶಿಸಿದೊಡನೆ, ಅಗಸ್ತ್ಯ ಮಹರ್ಷಿಗಳ ಶ್ರೀಪಾದಂಗಳಲ್ಲಿ ವಿನಯದಿಂದ ನಮಸ್ಕರಿಸಿ ಎದುರಲ್ಲಿ ಶಿರಬಾಗಿ ನಿಂತನು. ಆಗ ಮಹರ್ಷಿಗಳು ವತ್ಸಾ ! ನಿನ್ನ ಅವತಾರದ ಉದ್ದಿಶ್ಯವೇನು ನೀನೀಗ ಮಾಡುತ್ತಿರುವ ಕೆಲಸವಾವುದು ? ಅಖಿಲೋಪನಿಷದಾದಿಗಳಿಗೆ, ಪ್ರಸ್ಥಾನ ತ್ರಯಂ ಗಳಿಗೆ ಭಾಷ್ಯಾದಿಗಳನ್ನು ರಚಿಸಿ, ಸನಾತನ ಧರ್ಮೋದ್ಧಾರ ಮಾಡಲಿಕ್ಕಾಗಿಯೇ ಭುವಿ ಯಲ್ಲಿ ನೀನವತರಿಸಿರುವುದೆಂದು ತಿಳಿ. ಈ ಕಾರ್ಯವನ್ನು ನೀನೀಗ ಮಾಡಬೇಕೆಂದು ಅಗಸ್ತ್ಯರು ಆಜ್ಞಾಪಿಸಿದರು. ಪ್ರಾಜ್ಞರಾದ ಶಂಕರರು ಎಚ್ಚೆತ್ತು ವಿನಯಪೂರ್ವಕ ಅರಿಕೆ ಮಾಡಿಕೊಳ್ಳುತ್ತಾ। ಶ್ರೀ ಗುರುವರೇಣ್ಯರೇ ! ವೈಷ್ಣವೀ ಮಾಯಾಪಾಶ ದಿಂದಾಗಿ ನಾನು ಮೋಸ ಹೋದೆ. ನಿಮ್ಮ ಆಶೀರ್ವಾದದಿಂದ ಸ್ಫೂರ್ತಿಗೊಂಡೆ. ಆದರೆ ತಮ್ಮಿಂದುಕ್ತವಾದ ಪ್ರಸ್ಥಾನತ್ರಯಗಳೇತ್ಯಾದಿ ಅಪೌರುಷೇಯ ವಾಣಿಗೆ ಭಾಷ್ಯಾದಿಗಳನ್ನು ರಚಿಸಲು ನನಗೆ ಆಯುಷ್ಯವಿಲ್ಲ, ಕ್ಷೀಣಾಯುಃ ವಾದ ನನಗೆ ಶಿವನು ಕೇವಲ ಎಂಟು ವರ್ಷಗಳ ಆಯುಷ್ಯವನ್ನು ಅನುಗ್ರಹಿಸಿರುವನು. ಅದರಲ್ಲಿ ಈಗಾಗಲೇ 5 ವರ್ಷಗಳು ನೀರಿನಂತೆ ಹರಿದಿದೆ. ಇನ್ನುಳಿದ 3 ವರ್ಷ ಕಾಲದಲ್ಲಿ ಏನನ್ನು ತಾನೆ ನಾನು ಮಾಡಲು ಸಾಧ್ಯ ? ಎಂದು ಕಣ್ ಕಂಬನಿಯೊಂದಿಗೆ ದುಃಖಿಸಿದರು. ದಯಾಮಯರಾದ ಶ್ರೀ ಕುಂಭ ಸಂಭವರು, ಶಿಷ್ಯನನ್ನು ಸಂತೈಸಿಸಿ, ಶಂಕರಾ ! ಚಿಂತಿಸಬೇಡ, ನನ್ನ ಮಹಾ ಗುರು ಭಗವತ್ಪಾದ ಶ್ರೀ ರೇಣುಕ ಜಗದ್ಗುರುಗಳ ದಿವ್ಯ ಕೃಪಾಬಲದಿಂದ, ನನ್ನ ತಪಸ್ಸಿನ ಪ್ರಭಾವದಿಂದ ನಿನ್ನ ಆಯುಷ್ಯ ಮತ್ತೆಂಟು ವರ್ಷಕಾಲ ವೃದ್ಧಿಯಾಗಲಿ ಎಂದು ಹರಸಿರುವೆನು. ಧೈರ್ಯದಿಂದಿರು. ಶಿವನಿತ್ತಿ ರುವುದರಲ್ಲಿ ಉಳಿದ ಮೂರು ವರ್ಷಗಳು ಸೇರಿ ಯಿನ್ನೂ ನಿನಗೆ ಹನ್ನೊಂದು ವರ್ಷ

ಗಳ ಕಾಲ ಉಳಿದಿದೆ. ಈ ಕಾಲಾವಧಿಯಲ್ಲಿ, ವೇದಾಗಮ ಶಾಸ್ತ್ರಗಳಿಗೂ ಪ್ರಸ್ಥಾ ತ್ರಯಗಳಿಗೂ ಅಖಂಡವಾದ ಭಾಷ್ಯಾದಿಗಳನ್ನು ರಚಿಸಿ, ಸನಾತನ ಧರ್ಮೋದ್ಧಾ ಕಾರ್ಯಗಳನ್ನೆಸಗುವಂತೆ ಕೃಪಾದೃಷ್ಟಿಯಿಂದ ವೀಕ್ಷಿಸಿ, ಹೃತ್ಪೂರ್ವಕವಾಗಿ ಹ ಧರು. ಆಗಶಂಕರ ಬಾಲಕನ ಆನಂದಕ್ಕೆ ಪಾರವಿಲ್ಲದಂತಾಯಿತು. ಸಾಕ್ಷಾತ್ ಶಿವ ಶಿವಾಚಾರ್ಯರ ರೂಪದಲ್ಲಿ ತಮಗೆ ಸಂದರ್ಶನವಿತ್ತು, ನನ್ನಲ್ಲಿ ಸುಪ್ತವಾಗಿದ್ದ ತೇಜಸ್ಸನ್ನು, ಮಹರ್ಷಿಗಳು ತಮ್ಮ ಪ್ರಜ್ವಲಿಸುವ ತಪೋಶಕ್ತಿಯಿಂದ ಉಜ್ವಲಗೊ ಮುಂದೆ ನಾನು ಮಾಡಬೇಕಾದ ಕಾರ್ಯವನ್ನು ನೆರವೇರಿಸಲು ಮಾರ್ಗದರ್ಶನ ಋವರು ಎಂದು ತಮ್ಮ ಪ್ರಪ್ರಥಮ ಗುರುವರೇಣ್ಯರೂ, ದೀಕ್ಷಾ ಗುರುಗಳೂ ಆದಿ ಅಗಸ್ತ್ಯ ಮಹರ್ಷಿಗಳಿರುವರೆಂದು, ಭಕ್ತಿಪೂರ್ವಕ ಅವರನ್ನು ಸ್ಮರಿಸುತ್ತಾ ವಂದಿಸಿ, ಸ್ತುತಿಸುತ್ತಿದ್ದ ಹಾಗೇ, ತಪೋಧನರು ಅಂತರ್ಧಾನರಾದರು. ಇ ಕಾಲಡಿ ಕ್ಷೇತ್ರದ ವಿಶಾಲವಾದ ಹಸರು ಅರಳಿ ಮರದ ನೆರಳಡಿಯಲ್ಲಿ ಜರುಗಿತು. ಶಂಕರರು. ಆನಂದ ತುಂಬಿದ ಹೃದಯಸ್ವಾಂತರಾಗಿ, ತಮ್ಮ ಆತ್ಮೀಯ ಗೆಳ ಶ್ರೀ ಚಿತ್ಸುಕಾಚಾರ್ಯರೊಂದಿಗೆ ಎಲ್ಲವನ್ನು ವಿವರಿಸಿ ಆನಂದಿಸಿದರು.

ಇಂತಪ್ಪ ನಿತ್ಯ ಸತ್ಯ ಸುಂದರವಾದ ಮಹವಂಶಗಳನ್ನು ನಾವು ಪರಿಶುದ್ಧ ಭಾ ದಿಂದ ನೋಡಬೇಕಾದರೆ ಶ್ರೀ ಶೃಂಗೇರಿ ಮಹಾ ಸಂಸ್ಥಾನದ ವತಿಯಿಂದ, ಶ್ರೀ ಶ್ರೀ ಗುರುಪೀಠದ ಪ್ರಾಚೀನ ಆಸ್ಥಾನ ವಿದ್ವಾಂಸರು, ನಿಷ್ಕಲ್ಮಷ ಭಾವದಿಂದ ರಚಿಸಿ, ಶ್ರೀ ಪೀಠದ ವತಿಯಿಂದಲೇ ತಮಿಳು ನಾಡಿನ ಶ್ರೀರಂಗಂ ಪುಣ್ಯ ಕ್ಷೇತ್ರದ ಶ್ರೀ ವಾ ವಿಲಾಸ ಮುದ್ರಣಾಲಯದಲ್ಲಿ ಈಗ್ಗೆ ಸುಮಾರು ಐವತ್ತು ವರ್ಷಗಳಿಗೂ ಹಿಂದೆಯ ಅಚ್ಚಾಗಿರುವ, ಮೂಲ ಗ್ರಂಥಗಳನ್ನು ಪರಿಶೋಧಿಸಿ, ಓದಿ ಸಂತೋಷಪಡಬೇಕಾಗಿ ಕಾರಣ ಇತ್ತೀಚಿನ ಪ್ರಮುಖ ಗ್ರಂಥಗಳಲ್ಲಿ, ಕಾಲೋಚಿತವಾಗಿ ಸತ್ಯಕ್ಕೆ ದೂರವಾ ವಿಷಯಗಳನ್ನು ಪ್ರಕಾಶಪಡಿಸಲಾಗಿವೆಯೆಂದು ಮನನೊಂದು ಹೇಳಬೇಕಾಗಿದೆ.



## ಆದಿ ಶ್ರೀ ಜ॥ ರೇವಣಸಿದ್ಧರಿಂದ ವಿರಚಿತವಾದ ಹತ್ತು ಕೋಟಿ ಶ್ಲೋಕಗಳನ್ನೊಳಗೊಂಡ ಪರಮ ರಹಸ್ಯವೆಂಬ ಸಂಸ್ಕೃತ ಮೂಲ ಗ್ರಂಥ

" ಪರಮರಹಸ್ಯ "ವೆಂಬ ಸಂಸ್ಕೃತದ ಉದ್ಗ್ರಂಥ 10 ಕೋಟಿ ಶ್ಲೋಕಗಳಿಂದ ವಿರಾಜಿಸುತ್ತಲಿದೆ. ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ಶಿವ ಲಿಂಗೋದ್ಭವ ಮಂಗಳಮೂರ್ತಿ ಶ್ರೀ ೧೦೦೮ ಜಗದಾದಿ ಜಗದ್ಗುರು ಶ್ರೀ ಶ್ರೀ ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರಿಂದ, ಕೃಪೆಯಾ ಅನುಗ್ರಹೀತವಾದ ಶಿವಾದ್ವೈತ ಸಿದ್ಧಾಂತ ಪ್ರತಿಪಾದಕ ಹತ್ತು ಕೋಟಿ ಶ್ಲೋಕಗಳಿಂದ ಉಲ್ಲೇಖಿಸಿರುವ ಪರಮ ರಹಸ್ಯ " ವೆಂಬ ಅದ್ವಿತೀಯ ಬೃಹದ್ಗ್ರಂಥದ ವಿಷಯ :

**Shivadwaitha Philosophy is the Tower of Spiritualism.**

॥ ಓಂಕಾರ ಪಂಜರ ಶುಕೀಂ । ಉಪನಿಷದುದ್ಯಾನ ಕೇಳಿ ಕಲಕಂಠೀಂ ।
ಆಗಮ ವಿಪಿನಮಯೂರೀಂ । ಆರ್ಯಾಂ ಅಥರ್ವಾವಯೇ ಗೌರೀಂ ॥ ೧ ॥

॥ ಆದ್ಯೇ ಆಗಮ ಸಂಪ್ರದಾಯ ನಿಪುಣೇ ।
ಆಚಾರ್ಯ ವರ್ಯಾರ್ಚಿತೇ । ಆಧಾರಾದಿ ಸರೋಜ ಪೀಠನಿಲಯೇ ।
ಆಲೋಲ ನೀಲಾಲಕೇ । ಆತಾಮ್ರಾಧರ ಚಾರು ಮಂದ ಹಸಿತೇ ।
ಆಪೀನ ವಕ್ಷೋರುಹೇ । ಆ ಬ್ರಹ್ಮಾಚ್ಯುತ ಶಂಕರಾರ್ಚಿತಪದೇ ।
ವಂದೇ ಅಖಿಲಾಂಡೇಶ್ವರೀ ॥ ॥ ೨ ॥

ಶ್ರೀ ಶಾಂಭವೀ ವಿದ್ಯಾಮಯ ಓಂಕಾರ ಪ್ರಣವೋಪಾಸನೆಯನ್ನು ಅನಂತ ಮುಖದ ಮಹತ್ವವನ್ನು ಅಖಂಡವಾಗಿ, ಪುಂಖಾನು ಪುಂಖವಾಗಿ ಉದ್ಘೋಷಿಸುವ ದಿವ್ಯಾಮೃತಮಯ ಮಹಾಕಾವ್ಯ ಕಲ್ಪತರು " ಪರಮ ರಹಸ್ಯ " ವೆಂಬ ಬೃಹದ್ ಗ್ರಂಥ, ಇದನ್ನು ಕಲಿಯುಗ ದಾದಿಯಲ್ಲಿ ಅಂದರೆ ಕ್ರಿ. ಪೂ. 1885 ರಿಂದ ಕ್ರಿ. ಪೂ. 485 ರ ಸುಮಾರು. 1400 ವರ್ಷಗಳ ಕಾಲಾವಧಿಯಲ್ಲಿ, ಶ್ರೀ ಕೊಲ್ಲಿಪಾಕಿ ಶ್ರೀ

ಆದಿ ಶ್ರೀ ಜ॥ ರೇವಣಸಿದ್ಧರಿಂದ ವಿರಚಿತವಾದ ಪರಮರಹಸ್ಯವೆಂಬ ಸಂಸ್ಕೃತ ಗ್ರಂಥ

ಸೋಮನಾಥ ಪೃಥ್ವಿಲಿಂಗ ಗರ್ಭಾವಿಭೂತರಾದ, ಚಿನ್ಮಯ ತೇಜೋರೂಪಿ, ಪ್ರಣವ ಸಹಿತ ಶಿವ ಪಂಚಾಕ್ಷರೀ ಮಹಾಮಂತ್ರಮಯ ದಿವ್ಯದೇಹ ಧಾರಿಗಳಾದ ಆದಿ ಶ್ರೀ ೧೦೦೮ ಜಗದ್ಗುರು ಶ್ರೀ ಶ್ರೀ ಶ್ರೀ ರೇವಣಸಿದ್ಧ ದೇಶಿಕೇಂದ್ರ ಮಹಾ ಶಿವಯೋಗಿ ಶಿವಾಚಾರ್ಯರು, ಕರುಣಾ ರಸಪೂರಿತ ಭಾವದಿಂದ, ಲೋಕೋದ್ಧಾರ, ತ್ರಿಭುವನೋದ್ಧಾರ ಹಾಗೂ ಸಮಸ್ತ. ಹರಿ ಬ್ರಹ್ಮೇಂದ್ರಾದಿ ದೇವ ದಾನವ ಮಾನವ ಮತ್ತೂ ಎಂಭತ್ತುನಾಲ್ಕು ಲಕ್ಷ ಜೀವಕೋಟಿಗಳ ಜಗಮುದ್ಧರಣಾರ್ಥ ಸತ್ವಪೂರಿತವಾದ ಮಹಾತತ್ವವನ್ನು, ಅಂದಿನ ದೇಶ ಭಾಷೆಯಾದ ಜನಜನಿತವಾದ ಸಂಸ್ಕೃತ ಭಾಷೆಯಲ್ಲಿ ಸರ್ವಜ್ಞ ಮೂರ್ತಿಗಳಾದ ಮಹಾಚಾರ್ಯರು ಸುಮಾರು ಹತ್ತು ಕೋಟಿ ಶ್ಲೋಕಗಳಿಂದ ಮೇಲ್ಕಂಡ "ಪರಮ ರಹಸ್ಯ" ವೆಂಬ ಶಾಸ್ತ್ರ ಪ್ರತಿಪಾದಿತ ಮಹಾ ಕೃತಿ ರತ್ನವನ್ನು ಅನುಗ್ರಹಿಸಿ ರಚಿಸಿ ಮಹೋಪಕಾರವನ್ನೆಸಗಿರುವರು. ಅಂದ ಬಳಿಕ ಮೇಲ್ಕಂಡ ಮಹಾ ಗ್ರಂಥ ಮಹಾ ಚಾರ್ಯರಿಂದ ರಚಿತವಾಗಿ ಇಲ್ಲಿಗೆ ಸುಮಾರು 3870 ವರ್ಷಗಳಾಗಿವೆ. ವಿಶ್ವಧರ್ಮ ಪ್ರತಿಪಾದಕವಾದ ಪರಮ ಸನಾತನ ತಾಂತ್ರಿಕ ವೈದಿಕ ಧರ್ಮವೆನಿಸಿದ ವೀರಶೈವ ಮತ ತತ್ವ ಶಿವಾದ್ವೈತ ಸಿದ್ಧಾಂತವನ್ನು "ಜಗದಗಲ ಮುಗಿಲಗಲ ನಿಮ್ಮಗಲ" ವೆಂಬ ಗಾಂಭೀರ್ಯ ಭಾವದಿಂದ ತಮ್ಮ ಕಾಲದ ನಾಡಭಾಷೆ, ದೇಶಭಾಷೆ ಹಾಗೂ ಜನರಾಡುತ್ತಿದ್ದ ಭಾಷೆಯಾದ ಸಂಸ್ಕೃತ ಭಾಷೆಯಲ್ಲಿ ಪರಮ ರಹಸ್ಯವೆಂಬ ಬೃಹದ್ ಗ್ರಂಥವನ್ನು ಹತ್ತು ಕೋಟಿ ಶ್ಲೋಕಗಳಿಂದ ಘನ ಗಂಭೀರವಾದ ಅರ್ಥ ಗರ್ಭಿತ ಸುಂದರ ಶೈಲಿಯಲ್ಲಿ ಶ್ರೀ ಶ್ರೀಗಳವರು ರಚಿಸಿ ಮೋಕ್ಷ ಪ್ರದವಾದ ಮಹೋಪದೇಶವನ್ನು ಮಾಡಿರುವರು.

ಅಲ್ಪಾಯು ಮತ್ತು ಅಲ್ಪಜ್ಞನಾದ ಮಾನವನು ಇಂಥಾ ಕೃತಿಯನ್ನು ರಚಿಸಲು ಸಾಧ್ಯವಿಲ್ಲ. ರಚಿಸುವುದಂತಿರಲಿ, ಓದಿ ಅರ್ಥ ಮಾಡಿಕೊಳ್ಳುವ ಶಕ್ತಿ ಸಹನೆಯಿಲ್ಲದ ಲೋಕದ ಜನತೆಗೆ ಹವಿನಾಲ್ಕು ನೂರು ವರ್ಷಗಳ ವರವಿಗೂ ಸರ್ವಮಂಗಳವನ್ನು ಕೋರುತ್ತಾ, ಚಿತ್ತ ಚಾರಿ ಶಿವನನ್ನು ಅಖಂಡವಾಗಿ ಅಂದರೆ ತಮ್ಮಿಷ್ಟಲಿಂಗವನ್ನು ತ್ರಿಕಾಲಂಗಳಲ್ಲೂ ವಿಧಿವತ್ತಾಗಿ ಪೂಜಿಸಿ, ಜನತೆಗೆ ಗುರುಲಿಂಗ ಜಂಗಮ, ವಿಭೂತಿ ರುದ್ರಾಕ್ಷಿ, ಶಿವ ಪಂಚಾಕ್ಷರೀ ಮಹಾಮಂತ್ರ ಜಪಾನುಷ್ಠಾನಕ್ರಮ ಪದ್ಧತಿಗಳನ್ನು, ಮತ್ತೂ ಪಾದೋದಕ ಪ್ರಸಾದಗಳ ಸೀಮಾತೀತವಾದ ಪ್ರಭಾವಗಳನ್ನೂ ವಿಸ್ತರಿಸಿ ಬೋಧಿಸುತ್ತಾ ಅಹೋರಾತ್ರಿಯೆನ್ನದೆ ಈ ತತ್ವ ಪ್ರಸಾರ ಕಾರ್ಯವೇ ಶಿವಕಾಯಕದ ವ್ರತವೆಂದು ಮಹಾಚಾರ್ಯರು ಶಿವನರಿಯುವಂತೆ ಶ್ರಮಿಸಿರುವರು. "ಸರ್ವೇಜನಾಃ ಸುಖಿನೋ ಭವಂತು, ಲೋಕಾಃ ಸಮಸ್ತಾಃ ಸರ್ವಮಂಗಳಾನಿ ಭವಂತು" ಎಂಬ

ಆದಿ ಶ್ರೀ ಜ॥ ರೇವಣಸಿದ್ಧರಿಂದ ವಿರಚಿತವಾದ ಪರಮರಹಸ್ಯವೆಂಬ ಸಂಸ್ಕೃತ ಗ್ರಂಥ

ಉದಾತ್ತ ಭಾವದಿಂದ ರಂಜಿತರಾಗಿದ್ದರು. ಶ್ರೀ ಜಗದಾಚಾರ್ಯ ರೇವಣಸಿದ್ಧರು ಅಯೋನಿಜರೂ ಪ್ರಣವಮಯ ಲಿಂಗದೇಹಿಗಳಾದ್ದರಿಂದ "ಪರಮ ರಹಸ್ಯ " ವೆಂಬ ಆಧ್ಯಾತ್ಮಿಕ ಉದ್ಗ್ರಂಥವನ್ನು ಲೀಲಾಜಾಲವಾಗಿ ರಚಿಸಲು ಸಾಧ್ಯವಾಯಿತು.

ಹತ್ತು ಕೋಟಿ ಶ್ಲೋಕಗಳಿಂದ ಕೂಡಿರುವ " ಪ ರ ಮ ರ ಹ ಸ್ಯ " ಬೃಹದ್ಗ್ರಂಥವು, ಚತುರ್ವೇದಗಳ, 28 ಶಿವಾಗಮಗಳ, 108 ಉಪನಿಷತ್ತುಗಳ, ಬ್ರಹ್ಮ ಸೂತ್ರಗಳ ಹಾಗೂ ಪ್ರಸ್ಥಾನತ್ರಯಗಳ, ಸಾರವತ್ತಾದ ಮಹವಂಶಗಳನ್ನು ಈ ದೈವೀ ಕೃತಿ ಗರ್ಭೀಕರಿಸಿಕೊಂಡಿದೆ. ಶ್ರೀ ವ್ಯಾಸೋಕ್ತ ಹತ್ತು ಶಿವಪುರಾಣಗಳ, ಶಿವಗೀತೆಯ ಸಾರಸರ್ವಸ್ವ " ಪರಮರಹಸ್ಯ " ಗ್ರಂಥ. ವೊಂದೊಂದು ಶಿವಾಗಮವು ಹೆಚ್ಚೆಂದರೆ ಒಂದು ಕೋಟಿ ಯಿನ್ನೂ ಅಧಿಕ ಸಂಖ್ಯೆಯ ಶ್ಲೋಕಗಳಿಂದ ಕೂಡಿರುವುವು. ಅಖಿಲ ಶಾಸ್ತ್ರೀಯವಾದ ವೀರಶೈವ ಸಿದ್ಧಾಂತವನ್ನು ಶ್ರೀ ಮದಾಚಾರ್ಯರು ವ್ಯಾಪಕವಾಗಿ ಉಲ್ಲೇಖಿಸಿರುವ ಕಾರಣ ಅಷ್ಟೊಂದು ಬೃಹದ್ ಗ್ರಂಥವಾಗಲು ಕಾರಣವಾಯಿತು. ಶಕ್ತಿ ವಿಶಿಷ್ಟಾದ್ವೈತದಲ್ಲಿ ಪಂಚಾಚಾರಗಳು ಪ್ರಮುಖವೆನಿಸಿವೆ. ವೀರಶೈವ ತಾತ್ವಿಕ ಮಹಾಪುರುಷನ ದೇಹವೇ ಅಷ್ಟಾವರಣವಾದರೆ ಪಂಚಾಚಾರಗಳು ಆ ಮಹಾಪುರುಷನ ಪಂಚ ಪ್ರಾಣಗಳೆನಿಸಿವೆ. ಆಚಾರ, ಈ ಮತದಲ್ಲಿ ಎದ್ದು ಕಾಣುವ ಪರಮ ವೈಶಿಷ್ಟ್ಯ. " ಆಚಾರಃ ಪ್ರಥಮೋ ಧರ್ಮಃ " ಎಂದಿದೆ ಶೃತಿ. ಅಭಿಷೇಕ ಪ್ರಿಯನಾದ ಶಿವನಿಗೆ ಆಚಾರ ಅತ್ಯಂತ ಆತ್ಮೀಯವೆನಿಸಿದೆ. ಲಿಂಗಾಚಾರ. ಸದಾಚಾರ, ಶಿವಾಚಾರ ಗಣಾಚಾರ ಮತ್ತು ಭೃತ್ಯಾಚಾರವೆಂಬ, ವಿಚಾರಪೂರಿತವಾದ ಹಾಗೂ ಫಲಪ್ರದವಾದ ಪಂಚಾಚಾರಗಳು, ಮಾನವನ ನಿತ್ಯ ಜೀವನದಲ್ಲಿ ಹಾಸುಹೊಕ್ಕಾಗಿ ಬಳಸಿವೆ. ಪಂಚಾಚಾರಗಳ ನಿತ್ಯಾನುಷ್ಠಾನದಿಂದ ಬಾಹ್ಯಾಭ್ಯಂತರಗಳ ಪಂಚೇಂದ್ರಿಯಗಳು ಮತ್ತು ಅಂತಃಕರಣ ಚತುಷ್ಟಯಗಳು ಕ್ರಮೇಣ ಪುಟಕ್ಕಿಟ್ಟ ಬಂಗಾರದಂತೆ ಶುಭ್ರ ವೆನಿಸಿ, ಮುಂದಿನ ಷಟ್ಸ್ಥಲ ಸಿದ್ಧಾಂತದ ತಿರುಳನ್ನು ಸ್ವಾನುಭೂತಿಯಲ್ಲರಿಯಲು, ಅಂಗನು ಅರ್ಹನೆನಿಸುವನು. " ಪರಮರಹಸ್ಯ " ಮಹಾ ಗ್ರಂಥದಲ್ಲಿ ಶ್ರೀ ಮದಾಚಾರ್ಯ ರೇವಣಸಿದ್ಧರು ಪಂಚಾಚಾರ್ಯದ ಬಗೆಗೆ ಎಳೆಎಳೆಯಾಗಿ ಬೆಳಕಿಗೆ ತಂದು, ಕೂಲಂಕಷವಾಗಿ ಭಿತ್ತರಿಸಿರುವುದಾಗಿ ಕಂಡುಬರುತ್ತೆ. ಶ್ರೀ ಗುರುಕೃಪೆ ಯಿಂದ ಶಿಷ್ಯರು ಈ ತತ್ವದ ರಹಸ್ಯವನ್ನು ಅರಿಯಬೇಕು.

ಮುಂದಿನ ಹಂತ ಶ್ರೀ ಷಟ್ಸ್ಥಲದ ಅರಿವು ಅನುಭವ ಸಂಧಾನಗಳು ಸಾಧಕರು ಅಂತರ್ಮುಖಿಗಳಾಗಿ ಶಿವಜ್ಞಾನ, ಶಿವಪೂಜೆ, ಶಿವವ್ರತ, ಶಿವಮಂತ್ರ ಜಪ ಹಾಗೂ

ಆದಿ ಶ್ರೀ ಜ॥ ರೇವಣಸಿದ್ಧರಿಂದ ವಿರಚಿತವಾದ ಪರಮರಹಸ್ಯವೆಂಬ ಸಂಸ್ಕೃತ ಗ್ರಂಥ

ಶಿವಧ್ಯಾನಗಳೆಂಬ ಪಂಚ ಯಜ್ಞಗಳನ್ನು ನಿತ್ಯ ಶ್ರದ್ಧಾ ಭಕ್ತಿಗಳಿಂದ ಆಚರಿಸುತ್ತಾ, ತನ್ನ ಹೃನ್ಮಂದಿರದಲ್ಲಿ ಲಿಂಗರೂಪಿ ಪರಶಿವನನ್ನು, ಶ್ರೀ ಗುರು ಕಟಾಕ್ಷದಿಂದ ಕಾಣು ಮಹತ್ತರವಾದ ವಿದ್ಯೆ ಷಟ್ಸ್ಥಲ ಇದು ಅಂಗಷಟ್ಸ್ಥಲ. ಮತ್ತು ಲಿಂ ಷಟ್ಸ್ಥಲವೆಂದು ಇತ್ತೆರನಾಗಿದೆ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಇವು ಆರು ಅಂಗಷಟ್ಸ್ಥಲಗಳೆನಿಸಿವೆ. ಆಚಾರಲಿಂಗ, ಗುರುಲಿಂಗ ಇವು ಇಷ್ಟಲಿಂಗದ ದಿವ್ಯ ಕವಲುಗಳು ಪ್ರಾಣಲಿಂಗ ಶಿವಲಿಂಗ ಜಂಗಮಲಿಂಗಗಳಿಂದ ಕೂಡಿದ್ದರೆ ಪ್ರಸಾದಲಿಂಗ ಮಹಾಲಿಂಗಗಳು ಭಾವಲಿಂಗದ ಎರಡು ಎಸಳುಗಳೆನಿಸಿ ನವಲಿಂಗಗಳಿಂದ ವಿರಾಜಿ ವಾಗಿವೆ. ಶಿವಲೀಲೆಯಿಂದಾಗಿ ಅಂಗಸ್ಥಲವು 44 ಪ್ರಕಾರ ವಿಂಗಡಣೆಗೊಂಡರೆ, ಲಿಂಗಸ್ಥಲವು 57 ಪ್ರಕಾರ ಪ್ರಾದುರ್ಭಾವಗೊಂಡು ವೊಟ್ಟು 101 ಸ್ಥಲಗಳಿಂದ ಷಟ್ಸ್ಥಲಸಿದ್ಧಾಂತ ಆದಿಗಾದಿಯೆನಿಸಿ, ಜಗದಾದಿಯಿಂದ ವಿಕಾಸಗೊಂಡು ಸರ್ವತ್ರ ಪ್ರಕಾಶಿಸುತ್ತಲಿವೆ. ಇವೆಲ್ಲ ಸ್ಥಲಗಳನ್ನು ಶರಣನ ದಿವ್ಯಾಂಗದಲ್ಲಿ ನಿತ್ಯ ಶಿವೋ ಪಾಸನೆಯಿಂದ ಹಾಗೂ ಶ್ರೀ ಮಹಾ ಗುರುವಿನ ಲವಲೇಶ ಕಟಾಕ್ಷದ ಪ್ರಭಾವದಿಂದ ಕಾಣಬೇಕಾಗಿದೆ. ಸ್ಥಲ ವೆಂದರೆ ಪರಮ ಆಶ್ರಯದಾತನಾದ ಶಿವ ಅಥವಾ ಶಿವತೇಜ ಸ್ಸೆಂದರ್ಥ ಶರಣನು ಸರ್ವಾಂಗಲಿಂಗಮಯವಾಗಿದ್ದು ಅವನ್ನು ಅಂತರಂಗದಲ್ಲಿ ಸಂದ ರ್ಶಿಸುತ್ತಾ, ಲಿಂಗಭೋಗೋಪ ಭೋಗಿಯಾಗಿ, ಲಿಂಗಾಂಗ ಸಾಮರಸ್ಯ ಸುಖದ ಸಾಯುಜ್ಯ ಮೋಕ್ಷಾನಂದದಲ್ಲಿ ಪೂರ್ಣವಿರಮಿಸುವುದೇ ಷಟ್ಸ್ಥಲ ಸಿದ್ಧಾಂತದ ಪರಮ ಧ್ಯೇಯ: "ಲಿಂಗಪತಿ ಅಂಗಸಾ ಮಹಾಸತಿ" ಯೆಂಬ ಪಾತಿವ್ರತ್ಯ ಧರ್ಮಾವ ಲಂಬನೆಯಿಂದ, ಸತೀಮಣಿಯಾದ ಅಂಗನು, ಪತಿದೇವ ಲಿಂಗರೂಪಿ ಪರಶಿವನಲ್ಲಿ ಶ್ರೀ ಮಹಾ ಗುರುಕೃಪೆಯಿಂದ, ನದಿ ಸಾಗರದೊಂದಿಗೆ ಸಂಗಮವಾಗಿ ಸಾಗರವಾಗು ವಂತೆ, ಕರ್ಪೂರ ಜ್ಯೋತಿಸ್ಪರ್ಶದಿಂದ ತಾನು ಪರಂಜ್ಯೋತಿಯಂತೆ ಬೆಳಗುವ ತೆರ ದಲ್ಲಿ, ಸತೀಮಣಿಯಾದ ಅಂಗನು ( ಅಂ ಗಚ್ಛಯತೀತಿ ಅಂಗಃ ) ಪತಿದೇವ ಪರಶಿವ ಲಿಂಗದಲ್ಲಿ ಶ್ರೀ ಗುರು ಕಟಾಕ್ಷದಿಂದ ಕೂಡಿ ಬೈಲಿನಲ್ಲಿ ಬೈಲಾಗುವ ವಿಧಾನ ಲಿಂಗಾಂಗ ಸಮರಸ ಸಾಯುಜ್ಯ ಮೋಕ್ಷವೆನಿಸಿದೆ. ವೀರಾಗ್ರಣಿಯಾದ ಶರಣನು " ಏಕೇನ ಜನ್ಮ ನಾ ಮುಕ್ತಿಃ । ವೀರಶೈವಾನಾಂತು ಮಹೇಶ್ವರೀ " ಎಂಬ ಶಿವಾಗಮೋಕ್ತಿಯಂತೆ, ಇದೇ ಜನ್ಮದಲ್ಲಿ ಶರಣನು ಬದುಕಿರುವಾಗಲೇ ಐಕ್ಯ ಸ್ಥಿತಿಯ ಶಿವಾನಂದ, ಆತ್ಮಾ ನಂದದ ಪರಮ ಸುಖವನ್ನು ಅನುಭವಿಸುತ್ತಿರುವನು. ಈ ಕಾರಣಗಳಿಂದ ಪಾರಮೇ ಶ್ವರಾಗಮವು ॥ ನ ಹಿ ವೀರ ಶೈವ ಸದೃಶ । ಮತಮಸ್ತಿ ಜಗತ್ರಯೇ । ಸರ್ವಭೋಗ ಪ್ರದಂ ಪುಣ್ಯಂ । ಶಿವ ಸಾಯುಜ್ಯದಾಯಕಂ ॥ ಎಂದು ಉಗ್ಗಡಿಸಿದೆ.

ಆದಿ ಶ್ರೀ ಜ॥ ರೇವಣಸಿದ್ಧರಿಂದ ವಿರಚಿತವಾದ ಪರಮರಹಸ್ಯವೆಂಬ ಸಂಸ್ಕೃತ ಗ್ರಂಥ

ಶ್ರೀಮದ್‌ಜಗದಾಚಾರ್ಯ ರೇವಣಸಿದ್ಧರು, ವೀರಶೈವ ಮತ ಧರ್ಮವನ್ನು, ಷಟ್‌ಸ್ಥಲ ಸಿದ್ಧಾಂತದ ಸಾರಾಮೃತವನ್ನು ತಮ್ಮ ಬೃಹದ್ ಕೃತಿ "ಪರಮರಹಸ್ಯ" ವೆಂಬ ಗ್ರಂಥದಲ್ಲಿ, ನೂರ್ಮಡಿ ಅಲ್ಲ ಸಹಸ್ರ ಸಹಸ್ರ ಮಡಿರೂಪದಲ್ಲಿ ವಿಸ್ತರಿಸಿ ರಚಿಸಿರುವುದರಿಂದ ಹತ್ತು ಕೋಟಿ ಶ್ಲೋಕಗಳಲ್ಲಿ ಸಮುದ್ರದ ಅಲೆಗಳಂತೆ ವ್ಯಾಖ್ಯಾನ ಮಾಡಿದ್ದರಿಂದ ಈ ಗ್ರಂಥ ಕಲಿಯುಗದಾದಿ ಕಾಲದಲ್ಲೇ ಅಗಾಧವಾದ ಸನಾತನ ತಾಂತ್ರಿಕ ವೈದಿಕ ಧರ್ಮ ಪ್ರತಿಪಾದಕ ಮಹಾ ಗ್ರಂಥವಾಗಿ ಅವತರಿಸಿತು. "ಪರಮರಹಸ್ಯ" ಮಹಾ ಗ್ರಂಥದ ವೈಭವವನ್ನು ವರ್ಣಿಸುತ್ತಾ—

॥ ತರಂಗೈರುತ್ತುಂಗೈಃ । ಕೃತದುರಿತ ಭಂಗೈಃ ।
ವಿಜಯ ತೇ । ವಚೋ ಮಾಧುರ್ಯಾಢ್ಯೈಃ ।
ವಿವಿಧ ಬಹುವಸ್ತೂ । ತ್ತಮಗಣೈಃ ರಹಸ್ಯಾ
ಖ್ಯೈಃ । ರುಮ್ಯದ್ಗ್ರುಣಿಮಣಿಭಿಃ । ರಾಕಲ್ಪ ಮಖಿಲಃ ಪ್ರಭಂದೋಯಂ ।
ರತ್ನಾಕರ ಇವಾ ಬುಧಾವೋದ ಜನಕಃ ॥

ಶ್ರೀ ಕೈಲಾಸನಾಥನೆನಿಸಿದ ಕೊಲ್ಲಿಪಾಕಿ ಶ್ರೀ ಸೋಮನಾಥಲಿಂಗ ಸಂಭವರಾದ ಜಗನ್ ಮಂಗಳಮೂರ್ತಿ ಆದಿ ಶ್ರೀ ಜ॥ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು, ಕರುಣೆಯಿಂದ ಜಗದೋದ್ಧಾರಾರ್ಥ ಮತ್ತು ಶಿವಾದ್ವೈತ ಸಿದ್ಧಾಂತವೆಂಬ ವಿಶ್ವಧರ್ಮವನ್ನು ಜಗದಾದ್ಯಂತ ಸ್ಥಾಪಿಸಿ, ಪ್ರಸಾರಮಾಡಿ, ಧರ್ಮಾಚರಣೆ ಮೂಲಕ ಮುಮುಕ್ಷುಗಳಿಗೆ ಮೋಕ್ಷ ಮಾರ್ಗವನ್ನು ತೋರಿಸಿದ "ಪರಮರಹಸ್ಯ" ವೆಂಬ ಬೃಹದ್ ಧರ್ಮಗ್ರಂಥದ ವೈಖರಿ ಮೇಲ್ಕಂಡ ಶ್ಲೋಕದಲ್ಲಿ ಬಹು ಸುಂದರವಾಗಿ ವರ್ಣಿತವಾಗಿದೆ: **ಮಹಾ ಗುರುಕೃತ ಕಾವ್ಯವಿದು :—**

" ಶಿವಾದ್ವೈತ ಸಿದ್ಧಾಂತವೆಂಬ ಶಿವ ಸಮುದ್ರದ ಮೇಲ್ಗಡೆ ಉಕ್ಕುತ್ತಿರುವ ಪರಮೋನ್ನತ ತರಂಗ ರಾಜಿಗಳು, ಪ್ರತಿನಿಮಿಷ ನಿಮಿಷಗಳಲ್ಲೂ ನೂರು, ಸಾವಿರ ಸಾವಿರ ಅಲೆಗಳಂತೆ ಧುಮ್ಮಿಕ್ಕಿ ಹೌ ಹಾರುವಂತೆ, ಮೂವತ್ತಾರು ತತ್ವಗಳೆಂಬ ತರಂಗಗಳು ಪರಮ ರಹಸ್ಯ ಗ್ರಂಥದಲ್ಲಿ ಧಿಮ್ಮಿ ಧಿಮ್ಮಿತ್ತಾ ಹತ್ತು ಕೋಟಿ ಶ್ಲೋಕಗಳ ರೂಪದಲ್ಲಿ ವಿಸ್ತಾರಗೊಂಡಿವೆಯೋ ಎನಿಸುತ್ತೆ. ಈ ಮಹಾ ಕಾವ್ಯದ ತಿರುಳನ್ನು ಶ್ರೀ ಗುರು ಮುಖದಿಂದ ಶ್ರವಣ ಮಾಡಿದರೆ, ನಮ್ಮ ಪೂರ್ವಾರ್ಜಿತ ಪಾಪ ಪಂಕ

ಆದಿ ಶ್ರೀ ಜ॥ ರೇವಣಸಿದ್ಧರಿಂದ ವಿರಚಿತವಾದ ಪರಮರಹಸ್ಯವೆಂಬ ಸಂಸ್ಕೃತ ಗ್ರಂಥ

ಶೋಷಿತವಾಗುವುವು. ಈ ಬೃಹದ್ ಗ್ರಂಥವಲ್ಲುಕ್ತವಾದ ಶ್ರೀಗುರುವಾಣಿ ಅಧ್ಯಾ ವಿದ್ಯಾಮಯವೆನಿಸಿ, ಮಧುರಾತಿ ಮಧುರವೆನಿಸಿರುವುದು ಪರಮರಹಸ್ಯ ಮಹಾ ಕಾವ್ಯದ ಹೃದಯದಲ್ಲಿ "ಸರ್ವಹೃದಯ ಪ್ರಕಾಶಃ" ಎಂಬ ಉಪನಿಷದ್ವಾಣಿಯಂ "ವಿವಿಧ ವಸ್ತೂತ್ತಮಗಣೈಃ" ಎಂದರೆ ಅದ್ವಿತೀಯವೆನಿಸಿದ ಏಕೋತ್ತರ ಶತಸ್ಥ ಗಳ ವಿವರಣೆ ವಿವಿಧ ಉತ್ತಮೋತ್ತಮವಾದ ಹಾಗೂ ಮೋಕ್ಷಪ್ರದವಾದ, ಅಷ್ಟಾ ವರಣ, ಪಂಚಾಚಾರ, ಷಟ್‌ಸ್ಥಲ: ಅವಿಕಾರ ಪರಿಣಾಮವಾದ, "ಏಕತ್ವದ ಬಹುತ್ವ, ಬಹುತ್ವದಲ್ಲಿ ಏಕತ್ವದ, ಪಾದರಸದಂಥಾ ಶಕ್ತಿಯುತವಾದ ಅಂಶ, ಅ ಕ್ರಿಯಾ ಬಹುಫಲ, ಅಹಿಂಸಾ ತತ್ವದ ನೆಲೆ, ಮೃಣ್ಮಯ ವಸ್ತುವನ್ನು ತನ್ನಂತೆ ಚ ಯಗೊಳಿಸುವ, ಜ್ಞಾನಕ್ರಿಯ ಸಮ ಸಮುಚ್ಚಯ ಸ್ಥಿತಿ, ಯಿತ್ಯಾದಿ ಅನಂತ, ಅ ವರ್ಣನೀಯ "ರಹಸ್ಯಾಖ್ಯೈಃ" ಗೋಪ್ಯವಾದ ಮತ್ತು ಘನ ಗಂಭೀರವಾದ ಶಿವಾ ವಿದ್ಯೆಯ ಅಗಮ್ಯ ಆಗರ "ಪರಮರಹಸ್ಯ" ವೆಂಬ ಅದ್ಭುತ ದಿವ್ಯಕೃತಿ.

ಇಂತಪ್ಪ ಸನಾತನವಾದ ಮಹಾ ಚಿಜ್ಜ್ಯೋತಿರ್ಮಯ ಗ್ರಂಥ ಏನಾಯಿತು! ಎಲ್ಲಿದೆ ? ಇದು ಜನಜನಿತವಾಗಿ ನಾನಾ ಭಾಷೆಗಳಲ್ಲಿ ಪ್ರಕಟನೆಗೊಂಡು, ಕಾಲ ಕಾ ಜ್ಞಾನ ವಾಸಿಷ್ಟ ಯೋಗ ಶಾಸ್ತ್ರ, ಶಿವಗೀತೆ, ಭಗವದ್ಗೀತೆ, ಶ್ರೀ ನಾರದಭಕ್ತಿ ಸೂ ಗಳ ತೆರದಲ್ಲಿ ಜನಜನಿತವಾಗಿ ಭಾರತಾದ್ಯಂತ ಪ್ರಸಾರವಾಗಲಿಲ್ಲವೇಕೆ ? ಅಂದೋ ಅಚ್ಚರಿ ಅಚ್ಚರಿ !! "ಪರಮರಹಸ್ಯ" ವೆಂಬ ವಿಶ್ವಧರ್ಮ ಅಂದರೆ ಶ್ರೀ ವಿ ಶ್ವರನ ಶ್ರೀಮುಖದಿಂದ ಪ್ರಥಮತಃ ಉಪದೇಶ ರೂಪದಲ್ಲಿ ಶ್ರೀ ಜಗನ್ಮಾತೆ ಗಿರಿ ಜ್ಞಾನ ಪಂಡಿತಸ್ವಾಮಿ ಶ್ರೀ ಷಣ್ಮುಖನಿಗೆ ಅನುಗ್ರಹಿಸಿದ, ಶಿವಾತ್ಮ ವಿದ್ಯಾ ಸಾಗ ಕೋಟ್ಯಾನು ಅನಂತ ಕೋಟಿ ತರಂಗಗಳಲ್ಲಿ, ಚೈತನ್ಯಮಯವಾದ ಹತ್ತು ಕೋ ಶ್ಲೋಕಗಳಿಂದ ವಿರಾಜಿತವಾದ "ಪರಮರಹಸ್ಯ" ಮಹಾ ಉದ್ಗ್ರಂಥ ವಂದ ಸಾಕ್ಷಾತ್ ಶಿವಸ್ವರೂಪಿಗಳೂ ಪ್ರಕೃತಿ ತತ್ವಕ್ಕೆ ಅತೀತರೂ ಆದ ಆದಿ ಶ್ರೀ ರೇವಣಸಿದ್ಧರು, ಅಖಿಲ ದೇವ, ದಾನವ ಹಾಗೂ ಮಾನವರ ಮೇಲೆ ತಮಗಿರು ಅವ್ಯಾಜ ಪ್ರೇಮಾತಿಶಯದಿಂದಾಗಿ, ರಚಿಸಿ, ಭಾರತಾದ್ಯಂತ ಸುದೀರ್ಘಕಾಲ ಅ ಅನೇಕ ಶತಮಾನಗಳ ವರವಿಗೆ ಅಖಂಡವಾಗಿ ಪ್ರಸಾರ, ಆ ತತ್ವಾಚರಣೆ ಮೂ ಉಪದೇಶವನ್ನು ಕೋಟಿ ಅನಂತ ಕೋಟಿ ಆಸ್ತಿಕ ವೃಂದಕ್ಕೆ ಅವರವರ ಪ್ರಾದೇ ಭಾಷೆಗಳಲ್ಲಿ ಅಮೋಘವಾಗಿ ಬೋಧಿಸಿ, ಆಶೀರ್ವದಿಸಿ, ಎಲ್ಲರನ್ನೂ ತಮ್ಮ ಶಿ ರನ್ನಾಗಿ ಮಾಡಿಕೊಂಡು, ಜಾತ್ಯಾತೀವಾದ ಹೆದ್ದಾರಿಯಲ್ಲಿ ಅಂದೇ ಶ್ರಮಿಸಿ, ಶಿ ಅಣತಿಯನ್ನು ಪರಿಪೂರ್ಣವಾಗಿ ಧರೆಯಲ್ಲಿ ಯಶಸ್ಸಿನಿಂದ ಜ॥ ರೇವಣಸಿದ್ಧ ದಯಾಮಯ ಸಮನ್ವಯ ಭಾವದಿಂದ ನೆರವೇರಿಸಿರುವರು...........

ಆದಿ ಶ್ರೀ ಜ॥ ರೇವಣಸಿದ್ಧರಿಂದ ವಿರಚಿತವಾದ ಪರಮರಹಸ್ಯವೆಂಬ ಸಂಸ್ಕೃತ ಗ್ರಂಥ

ಸಂತೋಷಕರವಾದ ವಂದು ವಿಷಯವೇನೆಂದರೆ– " ಪರಮರಹಸ್ಯ " ವೆಂಬ ಶಿವಜ್ಞಾನ ಭರಿತ ಭಂಡಾರ ಗ್ರಂಥವು ಪೂರ್ಣರೂಪದಲ್ಲಿ ಹಸ್ತಗತವಾಗದೆ ಯಿದ್ದರೂ, ಸದ್ಯ ಇಪ್ಪತ್ತಾರು ಸಾವಿರ ಶ್ಲೋಕಗಳುಳ್ಳ ಅದರ ವಂದು ಭಾಗದ ಕೃತಿ, ಮೈಸೂರಿನ ಓರಿಯಂಟಲ್ ಲೈಬ್ರರಿಯಲ್ಲಿರುವುದಾಗಿ ; ರಾಯ ಚೂರಿನ ಉದ್ದಾಮ ಪಂಡಿತರಾದ ವೇ॥ ಶ್ರೀ ಚಂದ್ರಶೇಖರ ಶಾಸ್ತ್ರಿಗಳು ಕಂಡಿರುವು ದಾಗಿ ತಿಳಿಸಿರುತ್ತಾರೆ. ಶ್ರೀ ಆಂಜನೇಯಸ್ವಾಮಿ ಶ್ರೀ ಸೀತಾನ್ವೇಷಣ ಮಾಡಿದಂತೆ, ಲಿಂಗಾಂಗಿ ವಿದ್ವಜ್ಜನರು, ಪರಮರಹಸ್ಯ ಗ್ರಂಥದ ಅಸ್ತಿತ್ವವನ್ನು ಸ್ವಧರ್ಮಾಭಿಮಾನ ದಿಂದ ಶ್ರಮಿಸಿ ಭಾರತಾದ್ಯಂತ ಹುಡುಕಿದರೆ ಯಿನ್ನೂ ಹೆಚ್ಚಿನ ಸವರಿ ಗ್ರಂಥದ ಸಂಸ್ಕೃತ ಪ್ರತಿಗಳು ಸಿಗಬಹುದು. ಈ ದಿಶೆಯಲ್ಲಿ ಪ್ರಾಚೀನ ಪಂಡಿತರ ದೃಷ್ಟಿಗೆ ಈ ಮಹಾಗ್ರಂಥ ಬಿದ್ದಿದೆ.

i) ವೀರಶೈವ ಸಾಹಿತ್ಯ ಸಂಶೋಧಕರಾದ, ಶ್ರೀ ಸ್ಟೀಲ್ ಎಂಬ ಆಂಗ್ಲೇಯ ಸಂಸ್ಕೃತ ಘನ ಪಂಡಿತರು.

ii) ಪಾಲ್ಕುರಿಕೆ ಸೋಮನಾಥಾರಾಧ್ಯ ವೀರಶೈವ ಘನ ಪಂಡಿತರೂ,

iii) ಈಗ್ಗೆ ಸುಮಾರು 450 ವರ್ಷಗಳ ಹಿಂದಿದ್ದ, ಸೋಸಲೇ ಶ್ರೀ ರೇವಣ ಸಿದ್ಧರೆಂಬ ಉದ್ಧಾಮ ಪಂಡಿತರೂ ಮತ್ತು

iv) ಮಹಾರಾಷ್ಟ್ರ ದೇಶದ ಘನ ಪಂಡಿತ ಶ್ರೀ ಮನ್ಮಥನಾತ್ ಸ್ವಾಮೀಜಿಯ ವರು ಸಹ, ಮೇಲ್ಕಂಡ " ಪರಮರಹಸ್ಯ " ಗ್ರಂಥದ ಅಸ್ಥಿತ್ವದ ಬಗ್ಗೆ ತಮ್ಮ ದೃಢ ಅಭಿಪ್ರಾಯಗಳನ್ನು ಗ್ರಂಥಗಳಲ್ಲಿ ವ್ಯಕ್ತಪಡಿಸಿರುತ್ತಾರೆ.

ಪಾಲ್ಕುರಿಕೆ ಶ್ರೀ ಸೋಮನಾಥಾರಾಧ್ಯರು ತಾವು ರಚಿಸಿರುವ " ಜ್ಯೋತಿ ರ್ಮಯ ಶಾಂಭವೀ ದೀಕ್ಷೆ " ಎಂಬ ಗ್ರಂಥದಲ್ಲಿ " ಪರಮರಹಸ್ಯ " ವೆಂಬ ಬೃಹದ್ಗ್ರಂಥದ ಬಗೆಗೆ ಸ್ವಾರಸ್ಯವಾಗಿ ನಿರೂಪಿಸಿರುವರು,

ಈಗ್ಗೆ ಸುಮಾರು 450 ವರ್ಷಗಳ ಪೂರ್ವದಲ್ಲಿದ್ದ ಸೋಸಲೇ ಮಹಾ ವಿದ್ವಾನ್ ವೇ॥ ಬ್ರ॥ ಶ್ರೀ ರೇವಣಾರಾಧ್ಯರು, ತಾವು ರಚಿಸಿರುವ " ಶಿವತತ್ವ ಪ್ರಕಾಶ " ಯೆಂಬ ಉದ್ಗ್ರಂಥದಲ್ಲಿ ಪ ರ ಮ ರ ಹ ಸ್ಯ ಮಹಾಗ್ರಂಥದ ಬಗೆಗೆ ವಿಸ್ತಾರವಾಗಿ ಪ್ರಸ್ತಾಪಿಸಿರುವರು.

ಆದಿ ಶ್ರೀ ಜ॥ ರೇವಣಸಿದ್ಧರಿಂದ ವಿರಚಿತವಾದ ಪರಮರಹಸ್ಯವೆಂಬ ಸಂಸ್ಕೃತ ಗ್ರಂಥ

ಮೇಲ್ಕಂಡ ಪಂಡಿತರ ಗ್ರಂಥಕ್ಕೆ ಮಹಾರಾಷ್ಟ್ರದ ಪಂಡಿತವರ್ಯ ಶ್ರೀ ವಿಶ್ವ ಥನಾತ್ ಸ್ವಾಮೀಜಿಯವರು ಟೀಕೆಯನ್ನು ರಚಿಸಿರುವರು. ಇವರು ತಮ್ಮ " ದೇದೀಪ್ಯ " ವೆಂಬ ಗ್ರಂಥದಲ್ಲಿ " ಪರಮರಹಸ್ಯ " ಮಹಾಗ್ರಂಥದ ಬಗ್ಗೆ ತಮ್ಮ ಸಖೇದಾಶ್ಚರ್ಯವನ್ನು ವ್ಯಕ್ತಪಡಿಸುತ್ತಾ ಆ ಬೃಹದ್ ಗ್ರಂಥಕರ್ತೃ, ಆದಿ ಶ್ರೀ ಜ ರೇವಣಸಿದ್ಧರಲ್ಲಿ ಗೌರವ ತೋರಿಸಿ ಸ್ತುತಿಸಿರುವರು. ವೇದಾಂತ, ಸಿದ್ಧಾಂತಗಳಲ್ಲಿ ಸಮಸ್ತ ಮಂತ್ರಗಳಿಗೆ, ಸರ್ವಧರ್ಮ, ಸರ್ವಶೃತಿ ಸಮನ್ವಯಾರ್ಥಗಳನ್ನು ಶಿವಾ ದ್ವೈತ ಸಿದ್ಧಾಂತದಲ್ಲಿ ವಿಪುಲವಾಗಿ ಉಲ್ಲೇಖಿಸಲಾಗಿದೆ. ವಿಶ್ವವು ಕ್ಷರಾಕ್ಷರಗಳಿಂ ಸೃಷ್ಟಿಸಲಾಗಿದೆ. ಸೃಷ್ಟಿಕರ್ತನಾದ ಅಕ್ಷರನನ್ನು ಆಶ್ರಯಿಸಿಕೊಂಡೇ ಕ್ಷರರೂಪ ಜಗತ್ತು ವರ್ಧಿಸುತ್ತಲಿದೆ. ಕ್ಷರಾಕ್ಷರಗಳ ಸಹಜ ಸಂಬಂಧ ಅವಿನಾಭಾವ ಸಂಬಂಧವುಳ್ಳದ್ದು. ಈ ವಿಷಯ ಶೃತಿ ಸ್ಮೃತಿಗಳಲ್ಲಿ ಪ್ರತಿಪಾದಿಸಲಾಗಿದೆ.

1) " ಅಕ್ಷರಾತ್ಸಂಭವ ತೀಹ ವಿಶ್ವಂ " 2) " ಅಕ್ಷರಾತ್ಪರತಃ ಪರಃ "
3) " ಅಕ್ಷರಾಣಾಂ । ಅಕಾರೋಸ್ಮಿ " 4) " ಅಕ್ಷರಂ ಬ್ರಹ್ಮ ಪರಮಂ "
5) " ಕೂಟಸ್ಥೋ ಅಕ್ಷರ ಉಚ್ಯತೇ " 6) " ಸ ಬ್ರಹ್ಮಾ । ಸ ಶಿವಃ । ಸ ಹರಿಃ । ಸ್ಸೇಂದ್ರಃ । ಸೋ ಅಕ್ಷರಃ । ಪರಮ ಸ್ವರಾಟ್ । ಇತಿ ಶೃತಿಃ ".
7) " ಅಂ । ಗಚ್ಛಯತೀತಿ ಅಂಗಃ "

ಶಿವಾಗಮಾಮ್ನಾಯಾದಿಗಳಲ್ಲಿ ಜೀವೇಶ್ವರರ ಅರ್ಥಾತ್ ಲಿಂಗಾಂಗಗಳ ಅವಿನಾ ಭಾವ ಸಂಬಂಧವ ಪರಮರಹಸ್ಯವನ್ನು ವಿಸ್ತಾರವಾಗಿ ಪ್ರತಿಪಾದಿಸುತ್ತಾ–

" ಅಂಗುಷ್ಟಮಾತ್ರಃ ಪುರುಷೋಂತರಾತ್ಮಾ । ಸದಾ ಜನಾನಾಂ ಹೃದಯೇ ಸಂನ್ನಿವಿಷ್ಟಃ ॥ ಎಂದು ಪ್ರತಿಪಾದಿತವಾಗಿದೆ ( ಕಠೋಪನಿಷತ್ತು )

ಇಂತಪ್ಪ ಪರಮೋತ್ಕೃಷ್ಟ ಮಂತ್ರ ಭಾಗಗಳನ್ನು ಶ್ರೀ ಆದಿ ಜ॥ ರೇವಣಸಿದ್ಧರು ತಮ್ಮ ಅನಂತ " ಪರಮರಹಸ್ಯ " ವೆಂಬ ಬೃಹದ್ಗ್ರಂಥವಲ್ಲಿ ಸಾಗರ ತರಂ ನ್ಯಾಯದಂತೆ ಪುಂಖಾನು ಪುಂಖವಾಗಿ ಉದಹರಿಸಿ, ವ್ಯಾಖ್ಯಾನ ಮಾಡಿರುವ ಜಗದಾಚಾರ್ಯರ ಮಹಿಮೆ ಶಿವನ ಮಹಿಮೆಯಷ್ಟೇ ಅಪ್ರಮೇಯವೆನಿಸಿರುವುದು

॥ ಶಿವಂ ಶಾಂತಂ ॥

ಟಿ. ಬಿ. ಬಸವರಾಜಯ್ಯ

— ● —

**Dr. S. S. Maruliah, M. A., Phd.,**
P No. 354622, Door No 3,
Service Road, R.P.C. Attiguppe
Near Vijayanagara, Bangalore.

## ಒಂದು ಅವಲೋಕನ

ಬುದ್ಧನಾಗಲು ಹೊರಟ ಸಿದ್ಧಾರ್ಥ ತನ್ನೊಡನೆ ಬಂದ ಸೇವಕ ವಂದಕನನ್ನು ಕುರಿತು ಹೀಗೆ ಹೇಳುತ್ತಾನೆ :

ಗತಜೀವಿ ಮಾನವನ ಅರ್ಥದೊಳು ಪಾಲ್ಗೊಂಬ
ದಾಯಾದಿಗಳು ಬಹಳವಿರುವುದುಂಟು
ಆದೊಡೀ ಪೃಥವಿಯಲ್ಲಿ ಧರ್ಮ ದಾಯಾದಿಗಳು
ದುರ್ಲಭರು, ಏಕೇಕೆ–ಇಲ್ಲವೇನೋ !

–ಹೌದು ಧರ್ಮಕ್ಕೆ ದಾಯಾದಿಗಳೇ ಇಲ್ಲ, ಅದೇ ರೀತಿ ಧರ್ಮಭೂಯಿಷ್ಠವಾದ ಸಾಹಿತ್ಯ ರಚನೆ, ಅಧ್ಯಯನದಲ್ಲಿ, ಸಂಸ್ಕೃತಿ ಪರವಾದ ವಿಚಾರ ಸಂವರ್ಧನೆ ಇವುಗಳ ಬಗೆಗೂ ಪಾಲುಕೇಳುವ ಯಾವ ದಾಯಾದಿಯೂ ಇಲ್ಲ. ಇಂತಹ ದಾಯಾದ್ಯ ಭೀತಿ ಇಲ್ಲದ ಧಾರ್ಮಿಕ ಸಾಹಿತ್ಯ ರಚನೆಯ ಮಹಾ ಮಣಿಹವನ್ನು ಕೈಗೆತ್ತಿಕೊಂಡು ನಾಡಿಗೆ, ನುಡಿಗೆ ವಿಶೇಷವಾಗಿ ವೀರಶೈವ ಸಮಾಜಕ್ಕೆ ಅವಿಶ್ರಾಂತ ಸೇವೆ ಸಲ್ಲಿಸುತ್ತಿರುವ ಆಧ್ಯಾತ್ಮ ಶಿರೋರತ್ನ, ಧರ್ಮದ್ಯುತಿ ಸಂವರ್ಧನಾಚಾರ್ಯ ಶ್ರೀ ಟಿ. ಬಿ. ಬಸವರಾಜಯ್ಯನವರು ನಿಜಕ್ಕೂ ಅಭಿನಂದನಾರ್ಹರು.

ಶ್ರೀಯುತರು ಈಗಾಗಲೇ The Essentials of Spiritualism ಎಂಬ ಸುಮಾರು ಆರುನೂರು ಪುಟಗಳಷ್ಟು ವ್ಯಾಪ್ತಿ ದೀಪ್ತಿಯುಳ್ಳ ಬೃಹತ್ತಾದ ಹಾಗೂ ಮಹತ್ತಾದ ಗ್ರಂಥವನ್ನು ಕೊಟ್ಟು ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದ್ದಾರೆ. ಅದು ವಿಶ್ವ ದರ್ಮದ ಸಮಗ್ರ ಸಂಹಿತೆ, ಅದರ ವಿಭಾವ ವಿನ್ಯಾಸ ಮುಮುಕ್ಷುಗಳಿಗೆ ಕೈಗನ್ನಡಿಯಂತಿದೆ. ವಿಶ್ವಾದ್ಯಂತ ಸಂಚರಿಸಿ ಮಹಾ ಮಹಾ ಪಂಡಿತರಿಂದ ಮನ್ನಣೆ ಪಡೆದ ಪುಣ್ಯ ಕೃತಿ ಅದಾಗಿದೆ. ಶಿವಾಗಮಗಳು ಹಾಗೂ

ಉಪನಿಷತ್ತುಗಳೆಂಬ ಸಹಸ್ರ ಸಹಸ್ರ ಕಿರಣಗಳ ಮೂಲಕ ತನ್ನ ಪ್ರಾತಿಭೆ ಪ್ರಭೆಯನ್ನು ಜಗತ್ತಿನಾದ್ಯಂತ ಪಸರಿಸುತ್ತಿರುವ 'ಶಿವಾದ್ವೈತ' ವೆಂಬ ಚಿದಾದಿತ್ಯ ದ್ಯುತಿಪಡ ದರ್ಶನಕೃತಿ ಅದು ಸಚ್ಚಿದಾನಂದ ನಿತ್ಯ ಪರಿಪೂರ್ಣನಾದ ಪರಶಿವನ ಪರಾ ಪ್ರತಿ ಯೇ ಚಿದ್ಘನರೂಪ ಧಾರಣ ಮಾಡಿ ಧರ್ಮ ಚಿಂತಕರಿಗೆ ದಾರಿದೀಪ ಎಂಬಂ ಇಂದಿಗೂ ಎಂದಿಗೂ ಉಜ್ವಲ ಪ್ರಭೆಯಿಂದ ಬೆಳಗುತ್ತಿದೆ.

ಇಂತಹ ಆತ್ಮ ಪರವಾದ ಆಧ್ಯಾತ್ಮ ವೇದಕವಾದ ತೀರ್ಥ ಸಾಹಿತ್ಯ ಕೃತಿ ನ್ನಿತ್ತ ಶ್ರೀ ಬಸವರಾಜಯ್ಯನವರ ಎರಡನೆಯ ಸಾಹಸ " ಶ್ರೀ ಚಂದ್ರಮೌಳೀಶ್ವ ಲಿಂಗ ಪ್ರಧಾನ " ಎಂಬ ಸಂಶೋಧನ ಕೃತಿ ಆದಿ ಜಗದ್ಗುರು ಶಂಕರಾಚಾರ್ಯರಿಗೆ ಜಗದ್ಗುರು ಶ್ರೀ ರೇವಣಸಿದ್ಧರು ಚಂದ್ರಮೌಳೀಶ್ವರಲಿಂಗ ಮತ್ತು ರತ್ನಗರ್ಭ ಗ ಪತಿ ಇವುಗಳನ್ನು ಅನುಗ್ರಹಿಸದುದಾಗಿ ಪ್ರತೀತಿ, ಇದು ಐತಿಹ್ಯವೊ ಅಥವಾ ಐತಿಹಾ ಸಿಕ ಘಟನೆಯೊ ಅಂತೂ ಇದರ ಬಗೆಗೆ ಸಂಶೋಧನೆ ನಡೆಯಬೇಕಾಗಿತ್ತು, ನಡೆದಿದೆ. ಅದಕ್ಕೆ ಶ್ರೀ ಟಿ. ಬಿ. ಬಸವರಾಜಯ್ಯನವರು ಕಂಕಣಬದ್ಧರಾಗಿ ನಿಂತಿರುವುದು ಸ್ತುತ್ಯಾರ್ಹ, ಆದರೂ ಇದು ತುಂಬಾ ಗಂಭೀರ ವಿಚಾರ. ಈ ಬಗೆಯ ಚಿಂತಾನಾ ತ್ಮಕ, ಸಂಶೋಧನ ಶೀಲ ವಸ್ತುವಿನ ವಿನ್ಯಾಸದಲ್ಲಿ ಮೈಯೆಲ್ಲಾ ಕಣ್ಣಾಗಿರಬೇಕು. ಹೃದಯ ವೈಶಾಲ್ಯವೂ ಇರಬೇಕಾದ ಅಗತ್ಯ ಇದೆ. ಈ ರೀತಿಯ ವಸ್ತುವುಳ್ಳ ಒಂದು ಸಿದ್ಧ ಶಿಲ್ಪವನ್ನು ಆಧ್ಯಾತ್ಮ ಬಂಧು ಶ್ರೀ ಬಸವರಾಜಯ್ಯನವರು ನಮ್ಮ ಕಣ್ಣು ಮುಂದಿರಿಸಿ ಅದರ ಅವಲೋಕನದ ಜ್ಯೋತಿರ್ವಲಯದಲ್ಲಿ ನಮ್ಮನ್ನು ಬಹು ದೂರ ಕೊಂಡೊಯ್ಯುತ್ತಾರೆ. ಎಲ್ಲೂ ಸಹ ದಣಿವಾಗುವುದೇ ಇಲ್ಲ. ತನಗೆ ತಾನು ಓದಿಸಿಕೊಂಡು ಹೋಗುತ್ತದೆ. ಇದು ಈ ರಚನೆಯ ವೈಶಿಷ್ಟ್ಯ.

ಆಧ್ಯಾತ್ಮ ಸಾಹಿತಿ ಶ್ರೀ ಟಿ. ಬಿ. ಬಸವರಾಜಯ್ಯನವರು ಜನ್ಮತಃ ಧಾರ್ಮಿಕ ದೃಷ್ಟಾರರು ಅಂದರೆ ಧರ್ಮದ ಒಳ ತಿರುಳನ್ನು ಕಾಣುವವರು, ಕಾಣಿಸುವವರು ಸದಾ ಅವರು ಬದುಕಿನೆಲ್ಲೆಡೆಯಲ್ಲೂ ಸೈತನ್ನು ಕಂಡವರು ಸಹಜತೆ ಸರಳತೆಗಳನ್ನು ಅನುಭವಿಸಿ, ಅನುಷ್ಠಾನಕ್ಕೆ ತಂದವರು. ಅವರದು ಹೃದ್ಯವಾದ ಗದ್ಯ. ಅದರಲ್ಲಿ ಕಸುವಿದೆ, ಕಾಂತಿಯಿದೆ. ಅವರದು ಯಾರನ್ನೂ ದಣಿಸುವ ಸಾಹಿತ್ಯವಲ್ಲ ತಣಿಸುವ ಸಾಹಿತ್ಯ ಅದು ನೀಡುವ ತೃಪ್ತಿಯೇ ಆತ್ಮಾನಂದ ಹಾಗೂ ಆತ್ಮ ಸಾಕ್ಷಾತ್ಕಾರಕ್ಕೆ ನಾಂದಿಯಾಗಿದೆ.

ಶ್ರೀ ಬಸವರಾಜಯ್ಯನವರ ಸಂಶೋಧನೆ ತುಂಬಾ ವಿಶ್ಲೇಷಣಾತ್ಮಕವಾದದ್ದು. ಅದರಲ್ಲಿ ಅವರದೇ ಆದ ವೈಖರಿ ಇದೆ. ಬಣ್ಣ ಬಣ್ಣದ ಅಂಗಡಿಯನ್ನು ಅದು ತೆ

ದಿಡುತ್ತದೆ. ಅವರ ಶೈಲಿ ಸುಭಗ ಸುಂದರ, ಅಂತೆಯೇ ಅಲ್ಲಲ್ಲಿ ತನ್ನನ್ನೇ ತಾನು ವೈಭವೀಕರಿಸಿಕೊಳ್ಳುವುದೂ ಉಂಟು. ಅವರಾಡುವ ಮಾತುಗಳು ಸಹಾನುಭೂತಿ ಹಾಗೂ ಸಾನುಕ್ರೋಶತೆಗಳನ್ನು ಮೈಗೂಡಿಸಿಕೊಂಡಿರುತ್ತವೆ. ಇಂತಹ ಓದಿಸಿ ಕೊಂಡು ಹೋಗುವ ಪ್ರಾಸಾದಿಕ ಗುಣವೇ ಅವರ ಶೈಲಿಯ ರಹಸ್ಯ.

ಆಧ್ಯಾತ್ಮ ಶಿರೋಮಣಿ, ಮಹಾನ್ ಸಾಹಿತಿ ಶ್ರೀ ಟಿ. ಬಿ. ಬಸವರಾಜಯ್ಯ ನವರು ಬಹುಶ್ರುತರು. ಭಾವುಕ ಬಂಧುಗಳು ಅವರ ಬದುಕೇ ಒಂದು ಭವ್ಯ ಭಾವ ಗೀತೆ. ಸಾಹಿತ್ಯ ರಚನೆಯೇ ಶಿವನಪೂಜೆ ಎಂಬ ಪವಿತ್ರತಮ ಭಾವನೆ ಉಳ್ಳವರು ನಮ್ಮ ಬಸವರಾಜಯ್ಯನವರು. ಅವರ ಆಯಾಸರಹಿತ ಲೇಖಣಿಗೆ ಸರ್ವಶಕ್ತಿಯನ್ನೂ ಆ ರೇಣುಕಾದಿ ಜಗದ್ಗುರು ಪಂಚಾಚಾರ್ಯರು ಅನುಗ್ರಹಿಸಲಿ ಎಂದು ಪ್ರಾರ್ಥಿಸಿ ವಿರಮಿಸುತ್ತೇನೆ.

" ರಾಗಿಣಿ " ಡಾ॥ ಸಾ. ಸಿ. ಮರುಳಯ್ಯ

ರಕ್ತಾಕ್ಷಿ ನವರಾತ್ರಿ ದುರ್ಗಾಷ್ಟಮಿ
ಗಾಂಧೀ ಜಯಂತಿ ಶುಭದಿನ
ದಿನಾಂಕ ೨-೧೦-೮೪ರ ಮಂಗಳವಾರ

## ಸ್ಥಿ ರೈ ರಂ ಗೈ

॥ ನಾದಬಿಂದು ಕಲಾದಿ ನಮೋ ನಮೋ । ವೇದಮಂತ್ರ ಸ್ವರೂಪಾ
ನಮೋ ನಮೋ ಬಹುಕೋಟಿ ನಮೋ ನಮೋ ॥

ಪರಶಿವ ಬ್ರಹ್ಮ ನಾದ ಬಿಂದು ಕಲಾಮಯವಾಗಿಯೂ ಮತ್ತೂ ನಾದಬಿಂದು ಕಲಾತೀತವಾಗಿಯೂ ಇದೆ. ಅದು ಷಡಧ್ವಮಯ ಅಂದರೆ–ವರ್ಣಾಧ್ವ, ಪದಾಧ್ವ, ಮಂತ್ರಾಧ್ವ, ಭುವನಾಧ್ವ, ತತ್ವಾಧ್ವ ಹಾಗೂ ಕಲಾಧ್ವ ರೂಪಗಳಿಂದ ವಿರಾಜಿತವಾಗಿಯೂ ಮತ್ತೂ ಷಡಧ್ವಾತೀತನಾಗಿಯೂ ಇದೆ: ಅಧ್ವಾ ಯೆಂದರೆ ಪ ರ ಶಿ ವ ನನ್ನು ಕಾಣುವ ಮಾರ್ಗ ಎಂದರ್ಥ. ಅಷ್ಟೇ ಅಲ್ಲ ಶಿವನು 36 ತತ್ವಗಳ ರೂಪದಲ್ಲೂ ವ್ಯಾಪಕನಾಗಿದ್ದಾನೆ ಅವು ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ, ಮಾಯಾ, ಕಲಾ, ಕಾಲ, ರಾಗ, ವಿಧ್ಯೆ, ನಿಯತಿ ಮತ್ತೂ ಪಂಚಭೂತಗಳೂ, ಪಂಚ ಜ್ಞಾನೇಂದ್ರಿಯಗಳೂ, ಪಂಚ ಕರ್ಮೇಂದ್ರಿಯಗಳೂ, ಶಬ್ದ, ಸ್ಪರ್ಶ, ರೂಪ, ರುಚಿ ಗಂಧ, ಇತ್ಯಾದಿ ಪಂಚ ವಿಷಯಗಳೂ ಮತ್ತು ಪುರುಷ, ಪ್ರಕೃತಿ, ಬುದ್ಧಿ ಅಹಂಕಾರ ಮತ್ತು ಮನಸ್ಸುಗಳೆಂಬ ಮೂವತ್ತಾರು ತತ್ವಗಳೂ, ಹಾಗೂ ಚಿತ್, ಅಚಿತ್, ಚಿದಚಿತ್ ಗಳೂ, ಸತ್, ಅಸತ್, ಸದಸತ್ ಮತ್ತೂ ಸಕಲ, ಸಕ್ಯನಿಷ್ಕಲ ಮತ್ತು ನಿಷ್ಕಲ

ಇವೆಲ್ಲವೂ ಪರಶಿವನ ಸ್ಥಿರಾಂಗಗಳೆಂದು ಪ್ರಸಿದ್ಧವಿರುವುವು. ಅಖಿಲ ನಿಗಮಾಗ ಗಳೂ ಪ್ರಸ್ಥಾನತ್ರಯಗಳೂ ಪರಶಿವನ ಚಿನ್ಮಯವಾದ ದಿವ್ಯಾಂಗಗಳನ್ನು ಕಾಣ ಸದಾ ಶ್ರಮಿಸುತ್ತಲಿರುವುವು.

ಪರಶಿವ ಬ್ರಹ್ಮನ ನೈಜವಾದ ಸ್ಥಿರಾಂಗಗಳು ಇವೇಯೆಂದು ನಿಷ್ಕರ್ಶೆಯಿಂ ದೃಢಪಡಿಸಲು, ಹರಿಬ್ರಹ್ಮೇಂದ್ರಾದಿಗಳಿಂವಲೂ ಅಸದಳವೆಂದ ಬಳಿಕ ಬಡ ಮಾನ ತ್ತಬಲ್ಲನು ॥ ಹರಿ ಬ್ರಹ್ಮಾದೀನಾಂ । ನಿಕಟೆ ಭಾಜಾಮ ಸುಲಭಂ ॥ ಎಂದಿದೆ ಶಿವಮ ಮ್ನಾಸ್ತುತಿ. ಹೊಮ್ಮೆ ನಾಲ್ಕು ಜನ ಹುಟ್ಟು ಕುರುಡರು ಆನೆಯೆಂದರೇನು ? ಅ ಹೇಗಿದೆ ? ನೋಡೋಣವೆಂದು, ಆನೆಯ ಬಳಿಗೆ ಬಂದರು. ಮೊದಲಿನ ಕುರುಡ ಕೈಗೆ ಸೊಂಡಿಲು ಸಿಕ್ಕಿ ಓಹೋ ಆನೆ ಹೊನಕೆಯಂತಿದೆ ಎಂದು ನಿಶ್ಚಯಿಸಿದನು. ಎರಡನೆಯವನ ಕೈಗೆ ಅದರ ಕಾಲು ದೊರಕಿತು. ಆಗ ಆ ಕುರುಡ ಆನೆ ಮರ ಬುಡವಂತಿದೆ ಎಂದು ಕೂಗಿದನು. ಮತ್ತೆ ಮೂರನೆಯವನ ಹಸ್ತಕ್ಕೆ ಅದರ ಹೊಟ್ಟೆ ಸಿಕ್ಕಿತು ಅದನ್ನು ಸವರುತ್ತಾ ಅಬ್ಬ ಬ್ಬಾ ಆನೆ ಬೆಟ್ಟದಂಗಿದೆ ಎಂದನು. ನಾಲ್ಕನೆಯ ಕುರುಡನ ಕೈಗೆ ಅದರ ಬಾಲ ಸಿಕ್ಕಿತು ಅದನ್ನು ಹಿಡಿದು ಸವರುತ್ತಾ ಆನೆ ಬಹಳ ಕ್ಷ ವಾಗಿದೆ ಎಂದನು. ಹೀಗಾಗಿ ಅವರಲ್ಲಿ ಯಾರೂ ಆನೆಯ ನಿಜವಾದ ಆಕೃತಿಯನ್ನು ಅರಿಯದವರಾದರು.

ಇದರಂತೆ ಅಜ್ಞಾನಾಂಧಕಾರದಿಂದ, ಅಲ್ಪಜ್ಞನಾದ ಮಾನವನು ಆದಿಮಧ್ಯಾಂ ರಹಿತವಾದ, ಸ್ಫುರಣಮಯ ವಿಮರ್ಶಾಶಕ್ತಿಯಿಂದ ಬೆಳಗುವ, ಸದ ಸದಾದಿ ವಿಕ ಶೂನ್ಯವಾದ ಹಾಗೂ ಸಜಾತೀಯ ವಿಜಾತೀಯ, ಸ್ವಗತ ವಿಗತ ಭೇದರಹಿತ: ಇಂತಪ್ಪ ॥ ಅತ್ಯ ತಿಷ್ಠ ದ್ದಶಾಂಗುಲಂ ॥ ಎಂಬ ಶುದ್ಧ ಸ್ಫಟಿಕದಂಥಾ ಪರಾತ್ಪರ ಪ ಶಿವ ಬ್ರಹ್ಮನ " ಸ್ಥಿರೈರಂಗೈಃ " ಅಗೋಚರ, ಅಚಿಂತ್ಯ, ಅಪ್ರಮೇಯವೆನಿಸಿದ ಸ್ಥಿ ವಾದ ಅಂಗಗಳಿಗೆ, ನಿರವಯವ ಪರವಸ್ತುವಿಗೆ ಅವ್ಯಭಿಚಾರಿಣಿ ಭಕ್ತಿಪೂರ್ವಕ ಅನಂ ಕೋಟಿ ನಮಸ್ಕಾರಗಳನ್ನು ಪುನಃ ಪುನಃ ಅರ್ಪಿಸುತ್ತೇನೆ.

॥ ಸುಲಭದಾ ಭಕುತಿಗೆ । ಅತಿಸುಲಭನೆಂದೆನಿಸುವ । ಉಮಾಕಾಂತನ ಭ ಮನವೇ । ಎನ್ನಿಷ್ಟ ದೇವತಾ ಸ್ವರೂಪಿಯ ಉಮೇಶನ ನೆನೆಮನವೇ । ಸದಾ ಸ ಮನವೇ ॥

॥ ಶಿವಂ ಭೂಯಾತ್ ॥

T. B. Basavarajayy



॥ ಓಂ ಶ್ರೀ ಗುರೂಣಾಂ ಗುರುವೇ ನಮಃ ॥

## ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರ ಕಾಲ

॥ ನಮಃಸ್ತುಂಗ ಶಿರಶ್ಚುಂಬಿ ।
ಚಂದ್ರಚಾಮರ ಚಾರವೇ ॥
ತ್ರೈಲೋಕ್ಯ ನಗರಾರಂಭ ।
ಮೂಲಸ್ಥಂಭಾಯ ಶಂಭವೇ ॥

ಶಿವನ ಮಹೋನ್ನತವಾದ ಮಸ್ತಕವನ್ನು ಮುದ್ದಿಡುವ ಚಂದ್ರನೆಂಬ ಚಾಮರದಿಂದ ದಿವ್ಯಾಲಂಕೃತನಾದ ಮೂರುಲೋಕಗಳೆಂಬ ನಗರಗಳ ಸೃಷ್ಟಿಯ ಪ್ರಾರಂಭೋತ್ಸವಕ್ಕೆ ಹಾಗೂ ಅವುಗಳ ಇರುವಿಕೆಗೆ ಮೇಲಿಂದ ಮೇಲಿನ ಪ್ರವರ್ಧಮಾನಂಗಳಿಗೆ, ಮೂಲಸ್ಥಂಭವೆನಿಸಿದ ಶಂಭುವಿಗೆ ಅನಂತ ನಮಸ್ಕಾರಗಳನ್ನು ಅರ್ಪಿಸುವೆನು.

## ಅಧ್ಯಾಯ 1

ಶ್ರೀ ಭಗವತ್ಪಾದ ಆದಿ ಶಂಕರಾಚಾರ್ಯರ ಕಾಲ ಯಾವುದು ? ಎಂಬ ವಿಷಯದ ಬಗೆಗೆ ಅನಾದಿ ಕಾಲದಿಂದಲೂ, ವಿದ್ವನ್ಮಂಡಲಿಯವರಲ್ಲಿ ಭಿನ್ನಾಭಿಪ್ರಾಯಗಳು ಇದ್ದೇ ಯಿವೆ, ಅಷ್ಟೇ ಅಲ್ಲ. ಶ್ರೀ ಶಂಕರರು ಸ್ಥಾಪಿಸಿದ ಚತುರಾಮ್ನಾಯ ಮಠಾಧಿಪತಿಗಳೂ ಮತ್ತು ಶ್ರೀ ಶಿವಕಂಚಿ ಕಾಮಕೋಟಿ ಮಠಾಧಿಪತಿಗಳ ಮಧ್ಯೆ ಸಹ ಶತಮಾನಗಳಿಂದ ಶ್ರೀ ಮದಾಚಾರ್ಯರಿದ್ದ ಕಾಲ ಇದೆ ಎಂಬ ಬಗೆಗೆ, ಅವರಲ್ಲಿ ಏಮತವಿಲ್ಲದೆ ಯಿಂದಿನವರೆವಿಗೂ ಊಹಾಪೋಹವಾಗಿಯೇ ವುಳಿದು ಬಂದಿದೆ. ಲೋಕದಲ್ಲಿ ಮಹಾತ್ಮರ, ಅವತಾರ ಪುರುಷರ ಮತ್ತೂ ಕೆಲವು ಮಹಾಕವಿಗಳ ಸರಿಯಾದ ಕಾಲಮಾನ ತಿಳಿಯದೆ, ಇಂದಿಗೂ ಆ ವಿಷಯಗಳು ಡೋಲಾಯಮಾನವಾಗಿಯೇ ವುಳಿದು ಬಂದಿವೆ. ಇದ್ದರೆ ತಾನೇನು. ಅವರುಗಳೆಸಗಿದ ಕೃತಿ, ಕಾವ್ಯ, ಸಾಹಿತ್ಯ ಮತ್ತೂ ಪವಾಡಗಳು, ಅವರು ಭುವಿಯಲ್ಲಿದ್ದ ಬಗೆಗೆ ಸಾಕಷ್ಟು ನಿದರ್ಶನಗಳನ್ನೀಯುವುವು.

ಶ್ರೀ ಮದಾಚಾರ್ಯ ಶಂಕರರು ಭುವಿಯಲ್ಲಿದ್ದ ಬಗೆಗೆ ಪ್ರಧಾನವಾಗಿ ಎರಡು ವರ್ಗದ ವಿದ್ವಜ್ಜನರಲ್ಲಿ, ಎರಡು ವಿಧವಾದ ಅಭಿಪ್ರಾಯಗಳು ನೆಲಸಿವೆ. ಒಂದು

ವರ್ಗದ ಪಂಡಿತರು ಶ್ರೀ ಶೃಂಗೇರಿ ಮಠಗಳಲ್ಲಿ ದೊರೆತ ಅಮೂಲ್ಯ ಆಧಾ ಗಳಿಂದಾಗಿ, ಶ್ರೀ ಆದಿ ಶಂಕರರು ಕ್ರಿ. ಪೂ. 509 ರಿಂದ 477ರ ಕಾಲಾವಧಿಯ 32 ವರ್ಷಗಳಲ್ಲಿದ್ದರೆಂದು ನಿಶ್ಚಯಿಸಿರುತ್ತಾರೆ. ಇದೇ ಶ್ರೀ ಶೃಂಗೇರಿ ಮಹಾ ಸಂಸ್ಥಾ ನಕ್ಕೆ ಸೇರಿದ ಮತ್ತೆ ಕೆಲವು ವಿದ್ವಾಂಸರು, ಶ್ರೀ ಮದಾಚಾರ್ಯರು ಕ್ರಿ. ಶ. 788 ರಿಂದ 820 ರ ಕಾಲಾವಧಿಯ 32 ವರ್ಷಗಳಲ್ಲಿದ್ದರೆಂದು ಸಾರುತ್ತಲಿದ್ದಾರೆ ಈ ವಿಧವಾದ ದ್ವಿವಿಧ ಅಭಿಪ್ರಾಯಗಳು ಭಾರತೀಯರಲ್ಲಿ ಬಗೆ ಹರಿಯದಿರುವುದರಿಂ ವಿದೇಶೀಯ ಪಂಡಿತರಲ್ಲೂ ಈ ವಿಷಯದ ಬಗೆಗೆ ಸಾಕಷ್ಟು ಕಳವಳವನ್ನುಂ ಮಾಡಿದೆ,

## ಶ್ರೀ ಆದಿ ಶಂಕರಾಚಾರ್ಯರ ಜಾತಕದಿಂದ ಅವರು ಜನಿಸಿದ ವೃತ್ತಾಂತ ಖಚಿತಪಡುವುದು.

ಆದಿ ಶ್ರೀ ಶಂಕರಾಚಾರ್ಯರು ಜನಿಸಿದ ಶುಭ ಮೂಹೂರ್ತದ ಬಗೆಗೆ ಕ್ರಿ.ಪೂ. ಐದನೆಯ ಶತಮಾನದ 509 ರಲ್ಲಿ ಜನನ ಇವರ ಬಗೆಗೆ ಶ್ರೀ ಚಿತ್ಸುಕಾಚಾರ್ಯ ವಿರ ಚಿತ ಬೃಹದ್ ಶಂಕರ ವಿಜಯದಲ್ಲಿ ಅಧಿಕೃತವಾದ ಜನನ ಕುಂಡಲಿಯನ್ನು ಕಾಣ ಬಹುದಾಗಿದೆ.

" ಶ್ರೀ ನಂದನನಾಮ ಸಂವತ್ಸರ, ವೈಶಾಖಮಾಸ, ಶುಕ್ಲಪಕ್ಷ, ಪಂಚಮಿತಿಥಿ, ಭಾನುವಾರ ಧನುರ್ಲಗ್ನ, ಪುನರ್ವಸು ನಕ್ಷತ್ರ ಸೂರ್ಯನು ಮೇಷರಾಶಿಯಲ್ಲಿದ್ದು, ಚಂದ್ರನು ಪುನರ್ವಸು ನಕ್ಷತ್ರದ ಉಚ್ಛ್ರಾಯ ಸ್ಥಿತಿಗೆ ಏರುತ್ತಿದ್ದು, ಕಟಕ ಲಗ್ನವ ಏರುಮುಖದಲ್ಲಿರುವಾಗ, ಮಧ್ಯಾಹ್ನ ಅಭಿಜಿತ್ ಮುಹೂರ್ತದಲ್ಲಿ, ಶ್ರೀ ಶಂಕರರು, ಶ್ರೀಮತಿ ಆರ್ಯಾಂಬಾಗರ್ಭಸುಧಾಂ ಬುಧಿಯಲ್ಲಿ – ಪೂರ್ವ ಸಮುದ್ರದಿಂದ ರಶ್ಮಿ ಮಂತನಾದ ಸೂರ್ಯನು ಮೆಲ್ಲಗೆ ಉದಯಿಸುವಂತೆ ಜ್ಞಾನಸೂರ್ಯ ಸದೃಶರೂ ಶಿವಾಂಶ ಸಂಭೂತರೂ ಆದ ಶ್ರೀ ಶಂಕರರು ಉದಿಸಿದರು. " ಇವರು ಕ್ರಿ. ಪೂ. 509 ರಲ್ಲಿ ಕಾಲಟಿಯಲ್ಲಿ ಜನಿಸಿದುದಾಗಿ, ಶ್ರೀ ಚಿ ತ್ಸು ಕಾ ಚಾ ರ್ಯ ವಿರಚಿ ॥ ಅಧಿಕೃತವಾದ ಬೃಹದ್ ಶಂಕರ ವಿಜಯದಲ್ಲಿ ॥ ನಿರೂಪಿಸಿರುವರು. ಈ ಬಗೆಗೆ ಯಿನ್ನೂ ಹೆಚ್ಚಿನ ವಿವರಗಳನ್ನು ಮುಂದಿನ ಅಧ್ಯಾಯಗಳಲ್ಲಿ ಮನಗಾಣ ಬಹುದು.

ಮತ್ತೊಂದು ವಿಷಯವೇನೆಂದರೇ " ಜಿನವಿಜಯ " ವೆಂಬ ಮಹಾ ಗ್ರಂಥ ದಲ್ಲಿ ಶಂಕರರು ಮಾಹಿಷ್ಮತಿ ನಗರಕ್ಕೆ ಹೋಗುವ ಮಾರ್ಗದ ಮಧ್ಯದಲ್ಲಿ, ಕರ್ಮ

ದಿಂದಲೇ ಸಂಪತ್ತು ಮತ್ತು ಮೋಕ್ಷ ಸಿಗುತ್ತೆಂಬ ಕರ್ಮಕಾಂಡವನ್ನು ಪ್ರತಿಪಾದಿಸುವ ಪ್ರಸಿದ್ಧಪುರುಷ ಶ್ರೀ ಕುಮಾರಿಲ ಭಟ್ಟನನ್ನು, ಆಚಾರ್ಯರು ಸಂಧಿಸಿ ಮಾತನಾಡಿದರು. ಮೋಕ್ಷಕ್ಕೆ ಜ್ಞಾನವೇ ಹೇತು ಕರ್ಮವಲ್ಲೆಂದು ಶಂಕರಾಚಾರ್ಯರು ಕುಮಾರಿಲ ಭಟ್ಟನಿಗೆ ಬೋಧಿಸಿದರು. ಆಗ ಶ್ರೀ ಶಂಕರರು 15 ವರ್ಷದ ಪ್ರಾಯದವರಾಗಿದ್ದರು. ಕಲಿಯುಗ ಗತಾಃ 2608 ಅಂದರೆ ಕ್ರಿ. ಪೂ. 494ರಲ್ಲಿ ಕುಮಾರಿಲ ಭಟ್ಟನನ್ನು ಒಂದು ಸಾರಿ ಮಾತ್ರ ಶಂಕರರು ಕಂಡು ಅವನೊಂದಿಗೆ ಕೆಲವು ಮಾತುಗಳನ್ನಾಡಿದರು ಆಗ ಹಟವಾದಿಯಾದ ಕುಮಾರಿಲ ಭಟ್ಟನು ಕರ್ಮವೇ ಹೆಚ್ಚಿನದೆಂದು ಜಗತ್ತಿಗೆ ತೋರಿಸಲು ಪ್ರತಿಜ್ಞಾಪುರುಷನಾಗಿ ಗುಂಡಿಯೊಂದರಲ್ಲಿಳಿದು, ಕಂಠದವರವಿಗೆ ಭತ್ತದ ಹೊಟ್ಟನ್ನು ತುಂಬಿಸಿ, ಅಗ್ನಿಸ್ಪರ್ಶ ಮಾಡಿಕೊಂಡು ಅಸುನೀಗಲು ಸಿದ್ಧನಾಗಿದ್ದ ವೇಳೆಯದು. ಶಂಕರರ ಹಿತೋಪದೇಶಕ್ಕೆ ಕುಮಾರಿಲ ಭಟ್ಟನು ಮನಸ್ಸು ಕೊಡಲಿಲ್ಲವೆಂದು ಜಿನವಿಜಯವೆಂಬ ಜೈನರ ಪ್ರಸಿದ್ಧ ಗ್ರಂಥವಲ್ಲುಕ್ತವಾಗಿದೆ.

ಇದೇ ಜಿನ ವಿಜಯದಲ್ಲಿ ಆದಿ ಶಂಕರರು, ಕಲಿಯುಗ 2625 ರಲ್ಲಿ ಅಂದರೆ ಯುಧಿಷ್ಠಿರ ಶಕ 3102–2625 = ಕ್ರಿ. ಪೂ. 477 ರಲ್ಲಿ ನಿರ್ಯಾಣ ಹೊಂದಿದರೆಂದು ನಿರೂಪಿಸಲಾಗಿದೆ. ಅಂದ ಬಳಿಕ ಶ್ರೀ ಆದಿ ಶಂಕರಾಚಾರ್ಯರ ಜನನ ಕ್ರಿ. ಪೂ. 509 ಎಂದೂ, ಅವರ ನಿರ್ಯಾಣ ಕ್ರಿ. ಪೂ. 477 ಎಂದು ವೇದ್ಯವಾಗುತ್ತೆ. ಆದ್ದರಿಂದ ಆಚಾರ್ಯರು ಕ್ರಿ. ಪೂ. ಕಾಲಾಬ್ಧಿಯ 32 ವರ್ಷಗಳು ಜೀವಿಸಿದ್ದರೆಂದು ಕಂಡುಬರುತ್ತೆ. ಶ್ರೀ ಆದಿ ಶಂಕರಾಚಾರ್ಯರು, ಶ್ರೀ ಕುಮಾರಿಲ ಭಟ್ಟನನ್ನು ಸಂಧಿಸಿದಾಗ ಕುಮಾರಿಲನು ಶಂಕರರಿಗಿಂತಲೂ 48 ವರ್ಷ ಹಿರಿಯನಿದ್ದನು. ಕುಮಾರಿಲ ಭಟ್ಟನ ಜನನ ಕ್ರಿ. ಪೂ. 557 ಬಿ. ಸಿ. ಇದರಿಂದಲೂ ಶಂಕರರ ಜನನ, ಕ್ರಿ. ಪೂ. 509 ಎಂಬುದು ಸ್ಪಷ್ಟಪಡುತ್ತೆ. ಚಿತ್ಸುಖಾಚಾರ್ಯರು ತಮ್ಮಿಂದ ರಚಿತವಾಗಿರುವ ಬೃಹದ್ ಶಂಕರ ವಿಜಯದಲ್ಲಿ ಆದಿ ಶಂಕರಾಚಾರ್ಯರು ಕ್ರಿ. ಪೂ. 509 ರಲ್ಲಿ ಜನಿಸಿದುದಾಗಿ ರಚಿಸಿರುವರು. ಇದು ಜಿನವಿಜಯ ಗ್ರಂಥಾಧಾರವಂತೆ ನಿಜವೆನಿಸಿರುವುದು. ಇಲ್ಲಿ ಗಮನಾರ್ಹವಾದ ಅಂಶವೆಂದರೆ, ಪೂರ್ವಮೀಮಾಂಸ ಪ್ರತಿಷ್ಠಾಪನಾಚಾರ್ಯ ಶ್ರೀ ಕುಮಾರಿಲ ಭಟ್ಟನಿಗೂ ಜೈನರಿಗೂ ಶ್ರೀ ಶಂಕರಾಚಾರ್ಯರಿಗೂ ಎಣ್ಣೆ ಸೀಗೇಕಾಯಿಯಷ್ಟು ವಿರೋಧವಿದ್ದರೂ ಜಿನ ವಿಜಯಕಾರರು ಅವರ ಕಾಲಮಾನವನ್ನು ಸರಿಕಂಡಂತೆ ನಿಜಾಂಶವನ್ನೇ ಪ್ರತಿಪಾದಿಸಿರುವರು. ಇದರಿಂದ ಆದಿ ಶ್ರೀ ಶಂಕರರು ಕ್ರಿ. ಪೂ. 509 ರಿಂದ 477 ಬಿ. ಸಿ. ಕಾಲಾವಧಿಯ 32 ವರ್ಷಗಳು ಬದುಕಿದ್ದರೆಂಬುದು ಖಚಿತವಾದಂತಾಗಿದೆ.

ಈ ವಿಷಯ ಹೀಗಿರುವಾಗ ಮತ್ತೆ ಕೆಲವು ಪಂಡಿತರು ಶ್ರೀ ಆದಿ ಶಂಕರಾಚಾರ್ಯರು ಕ್ರಿ. ಶ. ಎಂಟನೆಯ ಶತಾಬ್ಧಿಯಲ್ಲಿ, ಅಂದರೆ ಕ್ರಿ. ಶ. 788

ರಿಂದ 820 ಎ.ಡಿ. ಈ ಕಾಲಮಾನಕ್ಕೆ ಸರಿಯಾದ 32 ವರ್ಷಗಳು ಜೀವಿಸಿದ್ದರೆಂದು ಹೇಳುತ್ತಲಿರುವರು. ಶ್ರೀ ಶೃಂಗೇರಿ ಪೀಠದ ಇಂದಿನ ಪರಮ ಪೂಜ್ಯ ಶ್ರೀ ಜಗದ್ಗುರು ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳು ಮೇಲ್ಕಂಡಂತೆ ಕ್ರಿ. ಶ. ಎಂಟನೇ ಶತಮಾನದಲ್ಲಿ ಆದಿ ಶ್ರೀ ಶಂಕರರಿದ್ದುದಾಗಿ ವ್ಯಕ್ತ ಪಡಿಸಿರುವರು. ಕ್ರಿ. ಶ. ಎಂಟನೇ ಶತಮಾನದಲ್ಲಿ ಶ್ರೀ ಶೃಂಗೇರಿ ಪೀಠಾಧಿಪತಿಗಳಾಗಿದ್ದ ಶ್ರೀ ಶಂಕರಾಚಾರ್ಯರು ಆದಿ ಶಂಕರರ ಗುರು ಪರಂಪರೆಯಲ್ಲಿ ಅನುಕ್ರಮವಾಗಿ ಬಂದ 38ನೇ ಜಗದ್ಗುರುಗಳೆಂದು ಕಂಡುಬಂದಿದೆ. ಆದ್ದರಿಂದ ಇವರು ಶ್ರೀ ಅಭಿನವ ಶಂಕರಾಚಾರ್ಯರೆಂದು ಪ್ರತೀತಿಯಿದೆ. ಇವರು ಶ್ರೀ ಆದಿ ಶಂಕರರಷ್ಟೇ ತಪಸ್ವಿಗಳೂ, ಭಾಷ್ಯಾಕಾರರೂ ಆಗಿದ್ದು, ಭಾರತಾದ್ಯಂತ ಸಂಚರಿಸಿ, ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿ, ಕಾಶ್ಮೀರದ ಸರ್ವಜ್ಞ ಸಿಂಹಾಸನವನ್ನು ಏರಿ, ಕೆಲ ಕಾಲಾನಂತರ, ಹಿಮಾಲಯ ಪ್ರದೇಶದಲ್ಲಿ ಸಂಚರಿಸಿ, ಕೊನೆಯಲ್ಲಿ ಅಲ್ಲಿನ ಶ್ರೀ ದತ್ತಾತ್ರೇಯರ ಗುಹೆಯೊಳಗೆ ಪ್ರವೇಶಿಸಿದವರು, ಹಿಂತಿರುಗಲಿಲ್ಲವೆಂದು ಪ್ರತೀತಿಯಿದೆ. ಇವರ ಆದಿ ಜನ್ಮಸ್ಥಳ ಶ್ರೀ ಸುಕ್ಷೇತ್ರ ಚಿದಂಬರವೆಂದು ತಿಳಿದುಬಂದಿದೆ. ಎರಡನೆಯವರೆನಿಸಿದ ಈ ಶ್ರೀ ಅಭಿನವ ಶಂಕರಾಚಾರ್ಯರು 52 ವರ್ಷಗಳ ಕಾಲ ಜೀವಿಸಿದ್ದು, ಕ್ರಿ. ಶ. 840 ರಲ್ಲಿ ಶ್ರೀ ದತ್ತಾತ್ರೇಯ ಗುಹೆಯೊಳಗೆ ಮೇಲುಕ್ತವಾದಂತೆ ಪ್ರವೇಶಿಸಿ ಮುಕ್ತರಾದರು. ಆದ್ದರಿಂದ ಅಭಿನವ ಶಂಕರಾಚಾರ್ಯರು ಶ್ರೀ ಆದಿ ಶಂಕರರಿಂದ 38 ನೇ ಶ್ರೀ ಶೃಂಗೇರಿ ಶಾರದಾ ಪೀಠದ ಅಧ್ಯಕ್ಷರಿರುವರು. ಇದೇ ಅಂಶವನ್ನು ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯರು, ತಮ್ಮ "ಶಕ್ತಿ ವಿಶಿಷ್ಟಾದ್ವೈತ" ವೆಂಬ ಬೃಹದ್ ಗ್ರಂಥದಲ್ಲಿ ಮತ್ತು ಶ್ರೀ ರೇಣುಕ ಪರಂಜ್ಯೋತಿ ಎಂಬ ಗ್ರಂಥದಲ್ಲೂ ವ್ಯಕ್ತಪಡಿಸಿರುವರು. ಶ್ರೀ ಕಂಚಿ ಕಾಮಕೋಟಿ ಪೀಠದ ಆಧಾರದಿಂದಲೂ ಸಹ ಕ್ರಿ. ಶ. ಎಂಟನೆಯ ಶತಮಾನದಲ್ಲಿದ್ದ ಶ್ರೀ ಶೃಂಗೇರಿ ಪೀಠಾಧಿಪತಿಗಳು 38ನೇ ಅಭಿನವ ಶಂಕರಾಚಾರ್ಯರೆಂಬುದು ಧೃಢಪಟ್ಟಿದೆ.



## ಅಧ್ಯಾಯ 2

### ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ, ಜಗದಾದಿ ಜಗದ್ಗುರು ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರ ಶಿವಲಿಂಗೋದ್ಭವದ ಕಾಲ ಮತ್ತು ಶಿವಲಿಂಗಾವತಾರದ ವಿಷಯ

" ನಮಃ ಸಾಂಭಾಯ ನಿತ್ಯಾಯ । ಶಿವಾಯ ಪರಮಾತ್ಮನೇ ।
ಷಟ್ತ್ರಿಂಶ ತತ್ವ ಬೀಜಾಯ । ಲಿಂಗ ರೂಪಾಯ ಶಂಭವೇ ॥

ಅಯೋನಿಜರಾದ ಶ್ರೀ ಆದಿ ಜ॥ ರೇವಣಸಿದ್ಧ ಮಹಾಚಾರ್ಯರ ಲಿಂಗಾವತಾರದ ಕಾಲ ಯಾವುದೆಂದು ನಿರ್ಧರಿಸುವ ಕಾರ್ಯ, ಮಹತ್ವದ ವಿಷಯವಿರುತ್ತೆ. ಆದಿ ಶ್ರೀ ಶಂಕರಾಚಾರ್ಯರ ಕಾಲ ಕ್ರಿ.ಪೂ. 509 ಎಂದು ನಿಖರವಾಗಿ ಸಂಶೋಧನೆಯಿಂದ ತಿಳಿದಿದೆಯಷ್ಟೆ. ಪುನಃ ಇದೇ ವಿಷಯದ ಬಗ್ಗೆ ಮತ್ತಷ್ಟು ಆಳವಾದ ಸಂಶೋಧನೆಯ ವಿವರಗಳನ್ನು ಮುಂದಿನ ಹನ್ನೊಂದನೆಯ ಅಧ್ಯಾಯದಲ್ಲಿ ಅನುವಾದ ಮಾಡಿ, ಆದಿ ಶ್ರೀ ಶಂಕರಾಚಾರ್ಯರು ಭುವಿಯಲ್ಲಿದ್ದುದು ಕ್ರಿ. ಪೂ. 509 ರಿಂದ 477 ಬಿ. ಸಿ. ಕಾಲಾವಧಿಯ 32 ವರ್ಷಗಳು ಮಾತ್ರ ಎಂಬ ಸ್ಪಷ್ಟೀಕರಣದೊಂದಿಗೆ ಮಹತ್ವದ ಅಂಶಗಳನ್ನು ಮತ್ತಷ್ಟು ಆಧಾರಗಳಿಂದ ನಿರೂಪಿಸಲಾಗಿರುವುದು.

ಪ್ರಸ್ತುತ ಶ್ರೀ ಆದಿ ಜ॥ ಶಿವಲಿಂಗ ಗರ್ಭಾವಿರ್ಭೂತರಾದ ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ, ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯ ಭಗವತ್ಪಾದರು, ಶ್ರೀ ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗದ ಮುಖದಿಂದ ಶಿವನಾಜ್ಞೆಯಂತೆ ಯಾವಾಗ, ಭುವಿಯಲ್ಲಿ ಅವತರಿಸಿದರೆಂಬುದನ್ನು ಅರಿಯಬೇಕಾಗಿದೆ.

ಶ್ರೀ ಆದಿ ಜಗದ್ಗುರು ರೇವಣಸಿದ್ಧರು ಈಶಾಜ್ಞೆಯಂತೆ ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗದಿಂದ ಕ್ರಿ. ಪೂ. ಕಾಲಾವಧಿಯಲ್ಲಿ ಉದ್ಭವಿಸಿ, 1400 ವರ್ಷಗಳು, ಮಂತ್ರಮಯ ದಿವ್ಯ ದೇಹಧಾರಿಗಳಾಗಿ ಭುವಿಯಲ್ಲಿ ರಾ, ರಾಜಿಸಿರುವರು. ಪೂರ್ವಾರ್ಧದ 700 ವರ್ಷ ಶಿವಯೋಗದಲ್ಲಿ ಅಂತರ್ಮುಖಿಗಳಾಗಿದ್ದು ನಂತರದ ಉತ್ತರಾರ್ಧದ 700 ವರ್ಷ, ನವಖಂಡ ಪೃಥ್ವಿಯಾದ್ಯಂತ ಆಕಾಶಮಾರ್ಗದಲ್ಲಿ ಸಂಚರಿಸಿ, ಶಿವನಾಣತಿಯಂತೆ ವಿಶ್ವಧರ್ಮವೆನಿಸಿದ, ಶಿವಾದ್ವೈತ ಸಿದ್ಧಾಂತವನ್ನು ಜಗದಾದ್ಯಂತ ಭಾನುಕೋಟಿ ಪ್ರಕಾಶಮಾನವಾಗಿ ಅಖಿಲ ಆಸ್ತಿಕ ವೃಂದಕ್ಕೆ ಮನನೀಯವಾಗಿ ಅವರವರ ಪ್ರಾದೇಶಿಕ ಭಾಷೆಗಳಲ್ಲಿ ಬೋಧಿಸಿ, ಈ ಸಿದ್ಧಾಂತವನ್ನು ಇಳೆಯಲ್ಲಿ ಊರ್ಜಿತವಾಗಿ ಸ್ಥಾಪಿಸಿರುವರು. ಅಂದ ಬಳಿಕ ಶ್ರೀ ಮದಾಚಾರ್ಯ ರೇವಣಸಿದ್ಧ ಭಗವತ್ಪಾದರು ಶಿವಲಿಂಗ ಮುಖದಿಂದ ಅವತರಿಸಿದ ಕಾಲವಾವುದು ? ಶ್ರೀ ಜ॥ ರೇವಣಸಿದ್ಧರೂ ಮತ್ತೂ ಶ್ರೀ ಆದಿ ಶಂಕರಾಚಾರ್ಯರೂ ಸಮಕಾಲೀನರಾ ? ಎಂಬುದನ್ನು ನಿರ್ಧರಿಸಬೇಕು. ಆದಿ ಶ್ರೀ ಶಂಕರಾಚಾರ್ಯರು ಕ್ರಿ. ಪೂ. 509 ರಿಂದ ಕ್ರಿ. ಪೂ. 477-76 ರ 32 ವರ್ಷಗಳ ಅವಧಿವರವಿಗೆ ಭುವಿಯಲ್ಲಿದ್ದ

ರಷ್ಟೆ. ಆದಿ ಶ್ರೀ ಜ॥ ರೇವಣಸಿದ್ಧರು ಶ್ರೀ ಕೊಲ್ಲಿಪಾಕಿ ಸೋಮನಾಥ ಲಿಂಗ ದಿವ್ಯ ಮುಖದಿಂದ ಸುಮಾರು ಕ್ರಿ.ಪೂ. 1885ರಲ್ಲಿ ಶಿವನಾಣತಿಯಂತೆ ಆವಿರ್ಭವಿ 1400 ವರ್ಷಕಾಲ ಅಂದರೆ ಸುಮಾರು ಕ್ರಿ. ಪೂ. 485 ರ ಕಾಲಾವಧಿಯ ವರ ಭುವಿಯಲ್ಲಿ ರಾ, ರಾಜಿಸಿದರು. ಅಂದ ಬಳಿಕ ಕ್ರಿ. ಪೂ. 509 ರಿಂದ 485 ರ 24 ವರ್ಷಗಳ ಕಾಲಾವಧಿಯಲ್ಲಿ, ಮೇಲುಕ್ತವಾದ ಶ್ರೀ ಉಭಯಾಚಾರ್ಯರು, ಸ ಕಾಲೀನರೆನಿಸಿ ಭುವಿಯಲ್ಲಿ ಪ್ರಕಾಶಮಾನರಾಗಿದ್ದರೆಂದು ನಿಸ್ಸಂದೇಹವಾಗಿ ಕಂ ಬರುತ್ತೆ. ಶ್ರೀ ಆದಿ ಜ॥ ರೇವಣಸಿದ್ಧರಿಂದ ಅನುಗ್ರಹೀತರಾದಾಗ, ಆದಿ ಶ್ರೀ ಶಂಕರಾಚಾರ್ಯರು ಸುಮಾರು 23 ಅಥವಾ 24 ವರ್ಷಗಳ ಯುವಕರಾಗಿರಬೇಕು. ಶ್ರೀ ಶೃಂಗೇರಿಯಿಂದ, ಶಿವಕಂಚಿಗೆ ಸುಮಾರು ಕ್ರಿ.ಪೂ. 485-84ರಲ್ಲಿ ಬಂದ ನಂತ ಸುಮಾರು 7-8 ವರ್ಷಕಾಲ ಶ್ರೀ ಶಂಕರರು ಶ್ರೀ ಶಿವಕಂಚಿಯಲ್ಲಿ ವಾಸ್ತವ್ಯವಾ ದ್ದರು. ಈ ತಮ್ಮ ಕೊನೆಯ ಕಾಲಾವಧಿಯಲ್ಲಿ, ಶಿವಕಂಚಿಯಲ್ಲಿ ಸುಮಾರು ಕ್ರಿ.ಪೂ. 483ರಲ್ಲಿ ಶ್ರೀ ಕಂಚಿ ಕಾಮಕೋಟಿ ಪೀಠವನ್ನು, ಕಡಸಿಯ ಐದನೇ ಪೀಠವಾ ಸ್ಥಾಪಿಸಿ, ಶ್ರೀ ರತ್ನಗರ್ಭ ಗಣಪತಿ ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗಾರಾಧ ಯಲ್ಲಿ ತತ್ಪರರಾಗಿ, ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುತ್ತಾ ಸುಮಾರು 6 ವರ್ಷ ತಾವೇ ಈ ಪೀಠಕ್ಕೆ ಅಧಿಪತಿಗಳಾಗಿದ್ದು ಕ್ರಿ. ಪೂ. 477-76 ರಲ್ಲಿ ಶ್ರೀ ಶಂಕರಾ ಚಾರ್ಯರು ಬ್ರಹ್ಮೀಭೂತರಾದುದಾಗಿ ಪ್ರತೀತಿ. ಪ್ರಾಯಶಃ ಶ್ರೀ ಶಂಕರರು ಶ್ರೀ ಆದಿ ಜ॥ ರೇವಣಸಿದ್ಧರಿಂದ ಅನುಗ್ರಹೀತರಾದ ಬಳಿಕ, ಶ್ರೀ ಪಂಚಾಚಾರ್ಯರು, ಪಂಚ ಪೀಠಗಳನ್ನು ಸ್ಥಾಪಿಸಿರುವುದನ್ನರಿತು, ತಾವು ಚತುರಾಮ್ನಾಯ ಮಠಗ ಜೊತೆಗೆ, ಶ್ರೀ ಕಂಚಿ ಕಾಮಕೋಟಿ ಮಠವನ್ನು ಸ್ಥಾಪಿಸಿ, ಪಂಚ ಪೀಠಗಳನ್ನು ಸ್ಥಾ ಸಿದ, ತತ್ವಜ್ಞಾನಿಗಳಾದ ಶ್ರೀ ಶಂಕರರಿಗೆ ಮನಶ್ಶಾಂತಿ ಮತ್ತು ತೃಪ್ತಿ ಉಂಟಾದು ಕಂಡುಬರುತ್ತೆ.

ಇಲ್ಲಿ ಒಂದು ವಿಷಯ ತಿಳಿಸಲು ಆಶಿಸುತ್ತೇನೆ. ಒಂದು ದಿವಸ ವೇದಾಂ ಜ್ಞಾನ ವೃದ್ಧರಾದ, ಶ್ರೀ ಸ್ವಾಮಿ ಸಚ್ಚಿದಾನಂದೇಂದ್ರ ಸರಸ್ವತಿ, ಅಧ್ಯಕ್ಷರು, "ಅಧ್ಯಾ ತ್ಮ ಪ್ರಕಾಶ ಕಾರ್ಯಾಲಯ" ಹೊಳೆನರಸೀಪುರ, ಇವರು, ಶ್ರೀ ಚಂದ್ರಮೌಳೀಶ್ವ ಲಿಂಗವನ್ನು ಶ್ರೀ ರೇಣುಕರು, ಶ್ರೀ ಶೃಂಗೇರಿ ಶಂಕರರಿಗೆ ಕೊಟ್ಟರೆಂದು ನೀವು ಗ್ರಂ ಬರೆದಿರುತ್ತೀರ. ಯಾವ ಆಧಾರದ ಮೇಲೆ ರಚಿಸಿರುವಿರಿ ? ಶ್ರೀ ಶಂಕರರಾಗಲಿ ಅಥವಾ ಶ್ರೀ ಸಾಯಣಾಚಾರ್ಯರಾಗಲಿ, ಅವರ ಅಪಾರ ಕೃತಿಗಳಲ್ಲಿ ಎಲ್ಲೂ ಮೇಲ್ಕಂಡ ಚಂದ್ರಮೌಳಿ ಲಿಂಗದ ಶಬ್ದವೇ ಯಿಲ್ಲದಿರುವಾಗ, ನೀವು ಹೇಗೆ ರಚಿ ಪ್ರಕಟಿಸಿದಿರೆಂದು ನನ್ನನ್ನು, ಸಮಕ್ಷಮದಲ್ಲಿ ಪ್ರಶ್ನಿಸಿದರು. ಶ್ರೀ ಸ್ವಾಮಿಗಳು ಅದ್ವೈತದಲ್ಲಿ ಮಹಾ ಪಂಡಿತರು, ಅನುಭವಿಗಳು, ಆಚಾರ ಸಂಪನ್ನರು. ನಾನು

ಅವರನ್ನು 1971ರಲ್ಲಿ ಸಂದರ್ಶಿಸಿದಾಗ ಶ್ರೀಗಳು ಸುಮಾರು 80 ವರ್ಷಗಳ ವೃದ್ಧರು. ಪೂಜ್ಯ ಶ್ರೀಗಳ ಪ್ರಶ್ನೆಗೆ ಭಕ್ತಿ ಪೂರ್ವಕ ಸದುತ್ತರವನ್ನೀಯುತ್ತಾ– ಸ್ವಾಮಿನ್ ! ಆದಿ ಶ್ರೀ ಶಂಕರಾಚಾರ್ಯರು, ತಮ್ಮ ಬಾಲ್ಯದ ಗುರುಗಳಾದ ಮಹಾ ಶಿವಾಚಾರ್ಯ ಶಿಖಾಮಣಿ ಹಾಗೂ ಮುನಿಚಂದ್ರರಾದ ಶ್ರೀ ಆದಿ ಅಗಸ್ತ್ಯ ಮಹರ್ಷಿಗಳು, ಕೃಪಾ ಕರಿಸಿ, ಹಸ್ತ ಮಸ್ತಕ ಸಂಯೋಗ ಕಟಾಕ್ಷ ದೀಕ್ಷೆಯಿಂದ ಅನುಗ್ರಹಿಸಿದ ಫಲವಾಗಿ, ಸಕಲೋಪನಿಷತ್ತುಗಳಿಗೂ ಮತ್ತು ಬ್ರಹ್ಮ ಸೂತ್ರಗಳಿಗೂ ಅಖಂಡವಾಗಿ ಭಾಷ್ಯಾದಿ ಗಳನ್ನು ಗಂಭೀರವಾಗಿ ರಚಿಸಿ, ಸರ್ವತ್ರ ಪ್ರಚಾರ ಮಾಡಿರುತ್ತಾರೆ. ಚತುರಾಮ್ನಾಯ ಮಠಗಳನ್ನು ಸ್ಥಾಪಿಸಿ, ಶ್ರೀ ಸುರೇಶ್ವರಾಚಾರ್ಯಾದಿ ನಾಲ್ಕು ಶಿಷ್ಯರನ್ನು ಚತು ರಾಮ್ನಾಯ ಮಠಗಳಿಗೆ ಅಧಿಪತಿಗಳನ್ನಾಗಿ ಮಾಡಿ, ಕೃತಿ ರಚನೆ ಕಾರ್ಯದಿಂದ ನಿವೃ ತ್ತರಾಗಿ, ಶ್ರೀಶೈಲಗಿರಿಯ ಉನ್ನತಶಿಖರವೆಂದರಲ್ಲಿ, ರಮಣೀಯವಾದ ವಂದೆಡೆಯಲ್ಲಿ ಸರ್ವಸಂಘ ಪರಿತ್ಯಾಗದಿಂದ, ಅಂತರ್ಮುಖಿಗಳಾಗಿ, ಶ್ರೀ ಭ್ರಮರಾಂಬಾ ಸಮೇತ ಮಲ್ಲಿಕಾರ್ಜುನರನ್ನು ವಂದಿಸಿ, ಧ್ಯಾನಯೋಗದಲ್ಲಿ ತನ್ಮಯರಾಗಿದ್ದ ಕಾಲವದು.

ಸನಾತನ ಧರ್ಮೋದ್ಧಾರ ಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸಿ ಶಿವನ ಕೃಪೆಗೆ ಪಾತ್ರರಾದ ಯತಿರಾಜ ಶ್ರೀ ಶಂಕರರನ್ನು, ಸೂಕ್ತ ರೀತಿಯಲ್ಲಿ ಅನುಗ್ರಹಿಸಿ ಆಶೀರ್ವದಿಸಬೇಕೆಂದು ಶ್ರೀ ಪರ್ವತೇಶನಾದ ಗಿರಿಮಲ್ಲಿಕಾರ್ಜುನನು, ವಂದು ಶುಭ ಘಳಿಗೆಯಲ್ಲಿ " ಹೇ ಶಂಕರಾ ! ನೀನೆಸಗಿದ ಧಾರ್ಮಿಕ ಕೃತಿ, ಕಾವ್ಯ, ಭಾಷ್ಯಾದಿ ಗಳಿಂದ, ಲೋಕೋದ್ಧಾರಣ ಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸಿ ಧನ್ಯನಾಗಿ ರುವೆ. ಇದರಿಂದಾಗಿ ನಾವು ನಿನ್ನನ್ನು ಗೌರವಿಸಿ ಆಶೀರ್ವದಿಸಬೇಕೆಂದಿದ್ದೇವೆ. ನೀನು ತಕ್ಷಣ ಮಲಯಾಚಲ ಪುಣ್ಯ ಪ್ರದೇಶದ, ಭದ್ರಾನದೀ ತೀರ ಪ್ರವಿರಾಜಮಾನ ಶ್ರೀ ಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ, ಆದಿ ಶ್ರೀ ಜII ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರನ್ನು ಸಂದರ್ಶಿಸೆಂಬ ಅಶರೀರವಾಣಿಯೊಂದು ನಭೋ ಮಂಡಲದಲ್ಲಿ ಬೋರ್ಗರೆಯಿತು. God's ways are always mysterious which no man can immediately comprehend. ಚಕಿತರಾದ ಶಂಕರರು ಕಣ್ತೆರೆದು ನೋಡಿದಾಗ ಪ್ರಶಾಂತವಾದ ನಿರ್ಜನ ಪ್ರದೇಶದ ವಿನಃ ಏನೂ ಗೋಚರಿಸಲಿಲ್ಲ. ಅವರು ಸುಜ್ಞಾನಿಗಳಾದ್ದರಿಂದ, ಇದು ಶ್ರೀ ಗಿರಿ ಮಲ್ಲಿಕಾರ್ಜುನನ ದಿವ್ಯ ಸಂದೇಶವೆಂದರಿತು, ವೊಡನೆ ಆಕಾಶ ಮಾರ್ಗವಾಗಿ ಶ್ರೀ ರಂಭಾಪುರಿಗೆ ದಯಮಾಡಿಸಿ ಶ್ರೀ ಮಹಾಚಾರ್ಯವರೇಣ್ಯರನ್ನು ಸಂದರ್ಶಿಸಿ ದೊಡನೆ, ಶಂಕರಾಚಾರ್ಯರ ಆನಂದಕ್ಕೆ ಪಾರವಿಲ್ಲದಂತಾಯಿತು. ಸಾಕ್ಷಾತ್ ಶ್ರೀಮ ತ್ಕೈಲಾಸನಾಥನೇ ಶ್ರೀ ಆದಿ ಜII ರೇವಣಸಿದ್ಧರೆಂಬುದು ಅವರ ಚಿತ್ತಕ್ಕೆ ವೇದ್ಯವಾಗು ತ್ತಲೇ, ಮಹಾಚಾರ್ಯರಲ್ಲಿ ಭಕ್ತಿಪೂರ್ವಕ ಶರಣಾಗತರಾದರು. " ವಿದ್ವಾನೇವ

ವಿಜಾನಾತಿ । ವಿದ್ವಜ್ಜನ ಪರಿಶ್ರಮಃ ॥ ಎಂಬುಕ್ತಿಯಂತೆ ತತ್ವಜ್ಞಾನಿ ಶಂಕರರು ಮ ಣ್ಮಯ ದೇಹಧಾರಿಗಳಾಗಿದ್ದು, ಚಿನ್ಮಯ ಸ್ವರೂಪಿ ಶ್ರೀ ಮಹಾಗುರುವಿನ ದಿವ್ಯಾ ಗ್ರಹದಿಂದ, ಅನುಗ್ರಹೀತರಾಗಿ, ಶಿವಶಕ್ತಿ ಸಂಪುಟದಿಂದ ವಿರಾಜಿಸುವ, ಶ್ರೀ ಚಂ ಮೌಳೀಶ್ವರ ಲಿಂಗವನ್ನು ಪಡೆದು ತತ್ಫಲವಾಗಿ ತಾವೂ ಸಹ ಶ್ರೀ ಗುರು ಕರು ಯಿಂದ ಚಿನ್ಮಯರಾಗಿ ಬೆಳಗಿದ, ನಿತ್ಯ ಸತ್ಯ ಸುಂದರವಾದ ತತ್ವವನ್ನು ಆದಿ ಶ್ರೀ ಶಂಕರಾಚಾರ್ಯರು ಆಚರಿಸಿ, ಅನುಭವಿಸಿ, ಆನಂದಿಸಿದರೇ ವಿನಃ, ಉಕ್ತಿಗೆ ಎಟಕದ ಮಂಗಳಘಟ್ಟವನ್ನು ತಮ್ಮ ಶಿಷ್ಯರಿಗೆಲ್ಲ ಕರ್ಣಾ ಕರ್ಣಿಕೆಯಾಗಿ ಬೋಧಿಸಿ, ಶ್ರೀ ಚಂದ್ರಮೌಳೀ ಲಿಂಗವನ್ನು ಮಹಾ ಗುರೂಕ್ತಿಯಂತೆ. ತಾವು ಮೊದಲು ತ್ರಿಕಾಲ ಗಳಲ್ಲೂ ಅತ್ಯಂತ ಭಕ್ತಿಯಿಂದ ಆರಾಧಿಸಿ, ಆಚರಣೆಗೆತಂದು ಇತರರಿಗೆ ಮಾರ್ಗದರ್ಶ ನ ನೀಡಿದರು. ಶಂಕರರ ಗ್ರಂಥ ರಚನಾ ಕಾರ್ಯ ಆ ಹೊತ್ತಿಗೆ ಪೂರ್ವವೇ ಸಮಾಪ್ತಿಯಾಗಿ ಸ್ದುದರಿಂದ, ಯಾವ ಗ್ರಂಥದಲ್ಲಿಯೂ, ಮೋಕ್ಷಪ್ರದವಾ ಮೇಲುಕ್ತವಾದ ವಿಷಯವನ್ನು ಪುನಃ ಬರೆಯಲು, ಶಂಕರರು ಯತ್ನಿಸಲಿಲ್ಲ ಶ್ರೀ ಶಂಕರಾಚಾರ್ಯರೇ ಶ್ರೀ ಚಂದ್ರಮೌಳಿಲಿಂಗ ಪ್ರಧಾನದ ವಿಷಯವನ್ನು ಎಲ್ಲೂ ಬರೆಯದೆ ಇರುವಾಗ, ಮಹಾ ಪ್ರಾಜ್ಞರಾದ ಶ್ರೀ ಸಾಯಣಾಚಾರ್ಯ ತಮ್ಮ ಕೃತಿಗಳಲ್ಲಿ ಈ ವಿಷಯವನ್ನು ಬರೆಯಲು ಹೇಗೆ ಸಾಧ್ಯವಾದೀತೆಂದು, ನಾ ವಿನಯಪೂರ್ವಕ ಶ್ರೀ ಸಚ್ಚಿದಾನಂದೇಂದ್ರ ಸರಸ್ವತಿ ಸ್ವಾಮಿಗಳಲ್ಲಿ ಅರಿಕೆ ಮಾ ಕೊಂಡೆ, ಅವರು ಮನಸ್ಕರಿಸಲಿಲ್ಲ. ಆಗ ನಾನು ಶ್ರೀ ಶೃಂಗೇರಿ ಆಸ್ಥಾನ ವಿದ್ವಾ ಶ್ರೀ ಕಾಶಿ ಲಕ್ಷ್ಮಣಶಾಸ್ತ್ರಿ ವಿರಚಿತ " ಗು ರು ವ ಂ ಶ ಕಾ ವ್ಯ ದ " ಆಧಾ ಕೊಟ್ಟು, ಶ್ರೀ ಚಂದ್ರಮೌಳಿಲಿಂಗ ಶ್ರೀ ಆದಿ ಶಂಕರರಿಗೆ ದತ್ತವಾದ ಅಂಶವನ್ನು ವಿವರಿಸಿದರೂ, ಪೂರ್ಣಪ್ರಜ್ಞರಾದ ಶ್ರೀಗಳು ಅದಕ್ಕೂ ವಿಮುಖರಾಗಿದ್ದರು. ನನ ಆಶ್ಚರ್ಯವೆನಿಸಿತು, ಆಗ ನಾನು ಅವರನ್ನು ನಮಸ್ಕರಿಸಿ ಫಲಪುಷ್ಪಾದಿಗಳನ್ನು ಅ ಸಿದೆ. ಶ್ರೀಗಳು ಹಸನ್ಮುಖರಾಗಿ ನನ್ನನ್ನು ಗೌರವಿಸಿ ಆಶೀರ್ವದಿಸಿದರು.

ಆದಿ ಶ್ರೀ ಶಂಕರಾಚಾರ್ಯರ ಪ್ರಪ್ರಥಮ ಗುರು, ವೀರಶೈವ ಸಂಪ್ರದಾಯ ತಪಃ ಸಿದ್ಧ ಮನೋರಥರೂ, ತ್ರಿಕಾಲ ಜ್ಞಾನಿಗಳೂ, ತ್ರಿಲೋಕ ಸಂಚಾರಿಗಳ ಆದ ಮುನಿಚಂದ್ರ ಶ್ರೀ ಆದಿ ಅಗಸ್ತ್ಯ ಮಹರ್ಷಿಗಳೆಂದು ಶ್ರೀ ಬೃಹದ್ ಶಂ ವಿಜಯ ಯಿತ್ಯಾದಿ ಅಧಿಕೃತ ಗ್ರಂಥಗಳಿಂದ ವೇದ್ಯವಿರುತ್ತೆ. ಆದರೆ ಶಂಕರರ ಶ್ರೀ ಗುರು ಪರಂಪರೆ ರೂಢಿಯಲ್ಲಿ ಕೆಳಗಿನಂತೆ ಸ್ತುತಿಸಲಾಗಿದೆ.-

" ನಾರಾಯಣಂ ಪದ್ಮಭವಂ । ವಸಿಷ್ಠಂ ಶಕ್ತಿಂಚ ತತ್ಪುತ್ರ ।
ಪರಾಶರಂಚ ವ್ಯಾಸಂ ಶುಕಂ । ಗೌಡಪಾದಂ ಮಹಾಂತಂ ॥
ಗೋವಿಂದ ಯೋಗೀಂದ್ರ ಮಥಾ। ಸ್ಯಶಿಷ್ಯಂ ಶ್ರೀ ಶಂಕರಾಚಾರ್ಯ ।

ಮತಾಸ್ಯ ಸುರೇಶ್ವರ, ಪದ್ಮಪಾದಂಚ । ಹಸ್ತಾ ಮಲಕಂಚ ಶಿಷ್ಯಂ ।
ತಂ ತ್ರೋಟಕಂ ವಾರ್ತಿಕಾ ಕರಂ । ಅನ್ಯಾನ್ ಅಸ್ಮದ್ ಗುರೂ
ಸತತಂ ಮಾಂತೋಽಸ್ಮಿ ॥

ಈ ಪ್ರಕಾರ ಶ್ರೀ ಆದಿ ಶಂಕರಾಚಾರ್ಯರ ಶ್ರೀ ಗುರು ಪರಂಪರೆ ಬೆಳೆದು ಬಂದಿದೆ.

ಶ್ರೀಮದ್ರಂಭಾಪುರೀ ವೀರಸಿಂಹಸನಾಧೀಶ್ವರ ಆದಿ ಶ್ರೀ ಜ॥ ರೇವಣಸಿದ್ಧರಿಗೆ ಯಾವ ಪೂರ್ವ ಗುರುಪರಂಪರೆಯಿಲ್ಲ. ಅವರು ಶ್ರೀ ಸೋಮನಾಥ ಜ್ಯೋತಿರ್ಲಿಂಗ ಸಂಭವರಾದುದರಿಂದ, ಶ್ರೀ ಗುರುಪರಂಪರೆ ಅವರಿಂದ ಆರಂಭವಾಗುವುದು, ಇವರು ಸ್ವಯಂ ಭುವನಾಚಾರ್ಯ ವರೇಣ್ಯರೆಂದು ಶಿವಾಗಮಾದಿ ಶೃತಿ, ಶಾಸ್ತ್ರ, ಪುರಾಣಗಳಲ್ಲಿ ಸ್ತುತ್ಯರೆನಿಸಿರುವರು. ಪಂಚಾಚಾರ್ಯರ ವಿಷಯವಾಗಿ ಶ್ರೀ ಪರಮೇಶ್ವರನು ಶ್ರೀ ಜಗನ್ಮಾತೆ ಗಿರಿಜೆಗೆ ಅರುಹುತ್ತಾ–

ಮತ್ಪಂಚ ವದನೋದ್ಭೂ ತಾ: । ಸರ್ವ ಏವ ಗುರೂತ್ತ ಮಾ: ।
ತತ್ಸೃಷ್ಟ್ವಾನಾಂಚ ಸರ್ವೇಷಾಂ । ತತ್ಸಾಮರ್ಥ್ಯಂ ಕಥಂ ।
ಭವೇತ್। ತಸ್ಮಾತ್ಪಂಚ ವಿಧಾಚಾರ್ಯಾ: । **ಪಂಚ ಪೀಠಾಧಿ ದೇವತಾ: ।**
**ಪಂಚ ಸಿಂಹಾಸನಾಧೀಶಾ** । ಜಗದ್ಗುರುವರಾಶ್ಚ ತೇ ॥

(ಸುಪ್ರಭೇದಾಗಮ)

ಶ್ರೀ ರಂಭಾಪುರೀ " **ವೀರಸಿಂಹಾಸನ** " ಶ್ರೀಮದುಜ್ಜಯಿನಿ " **ಸದ್ಧರ್ಮ ಸಿಂಹಾಸನ** " ಶ್ರೀ ಹಿಮವತ್ಕೇದಾರ, " **ಪರಮ ವೈರಾಗ್ಯಸಿಂಹಾಸನ** " " **ಶ್ರೀಶೈಲ ಸೂರ್ಯಸಿಂಹಾಸನ** " ಮತ್ತು ॥ **ಶ್ರೀ ಕಾಶಿಜ್ಞಾನಸಿಂಹಾಸನ** ॥ ಈ ಅಯಿದು ಪರಮೋತ್ಕೃಷ್ಠವಾದ ಸಿಂಹಾಸನಗಳು, ಪಂಚ ತತ್ವಗಳ ಪ್ರತೀಕ ವೆನಿಸಿ, ಯುಗಾಂತರಗಳಿಂದ ವಿರಾಜಮಾನವಾಗಿವೆ ಎಂಬ ಸತ್ಯಾಂಶ ಆಗಮಾಮ್ನಾಯಾದಿಗಳಿಂದ ಸ್ಥಿರಪಟ್ಟಿವೆ, ಸದಾಶಿವನ ಸದ್ಯೋಜಾತಾದಿ ಪಂಚ ಮುಖಗಳನ್ನು ಪ್ರತಿನಿಧಿಸುವ **ಪಂಚ ಮಹಾ ಪೀಠಗಳ ನೆರಳಿನಡಿಯಲ್ಲಿ ಜಗತ್ತಿನಲ್ಲಿ** ಕಾಣುವ ಅಖಿಲ ಗುರು ಪೀಠಗಳೂ ಅನಾದಿಕಾಲದಿಂದ ಪರಿಶೋಭಿತವಾಗಿವೆ. ಆದ್ದರಿಂದ ಶ್ರೀ ಜ॥ ಪಂಚಾಚಾರ್ಯರುಗಳಿಂದ ಅವರ ವೀರ ಮಾಹೇಶ್ವರರ ಶ್ರೀ ಗುರುಪರಂಪರೆ ಪ್ರಾರಂಭಿಸುತ್ತೆ ಎಂಬುದು ನಿರ್ವಿವಾದವಾದ ವಿಷಯ. ಶ್ರೀ ಜ॥ ಪಂಚಾಚಾರ್ಯರು ಶಿವೋಕ್ತಿಯಂತೆ **ಸರ್ವತಂತ್ರ ಸ್ವತಂತ್ರ ಗುರುಸಾರ್ವಭೌಮರೆಂದು**. ಶೃತಿವಾಣಿ ಘೋಗರೆಯುತ್ತಲಿದೆ.

ಭಗವತ್ಪಾದ ಶ್ರೀ ಆದಿ ಜ॥ ರೇವಣಸಿದ್ಧರು ಆಯೋನಿಜರೂ ಮತ್ತು ತ್ರಿಭುವನಾಚಾರ್ಯರಾದ ಪ್ರಯುಕ್ತ, ಇಡೀ ಭೂ ಮಂಡಲಾದ್ಯಂತ ಆಕಾಶ ಮಾರ್ಗವಾಗಿ ಸಂಚರಿಸಿ ವಿಶ್ವದ ನಾನಾ ಭಾಗಗಳಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿ, ಭಕ್ತ ಸಮೂಹಕ್ಕೆ ಅಮೂರ್ತ ಸ್ವರೂಪಿಯಾದ ಪರಂಜ್ಯೋತಿ, ಭಕ್ತೋದ್ಧಾರಾರ್ಥ ಶಿವಲಿಂಗ ರೂಪದಲ್ಲಿ ಪ್ರಕಟವಾಗಿರುವರೆಂಬ ಅಂಶವನ್ನು ಹೊರಗೆಡಹಿ, ಪರಬ್ರಹ್ಮವು ಪೂಜ್ಯ ಪೂಜಕ ಭಾವಲೀಲೆಯಿಂದ ಮೂರ್ತಾಮೂರ್ತವೆನಿಸಿರುವುದೆಂದು ಭೋಧಿಸಿದರು. ಶ್ರೀ ರೇವಣಸಿದ್ಧ ಭಗವತ್ಪಾದಾಚಾರ್ಯರು, ಭಾರತದಲ್ಲಿ ಸಗೈದ ವಿಶ್ವಧರ್ಮ ಪ್ರಚಾರದ ಪ್ರತೀಕವಾಗಿ, ಈಗಲೂ ನಾವು ಅಲ್ಲಲ್ಲಿ ಕಾಣುವದೇನೆಂದರೆ ಶ್ರೀಮದಾಚಾರ್ಯರಿಂದ ಅನುಗ್ರಹಿಸಲ್ಪಟ್ಟ ಭುವಿಯಲ್ಲಿನ ದೇವತೆಗಳ ಅಂದರೆ-

1) ಕಾಶ್ಮೀರದ, ಶ್ರೀ ಶಾರದಾದೇವಿಯು ಮಸ್ತಕದಲ್ಲಿ ಕಾಣುವ ಶಿವಲಿಂಗ ಮುದ್ರೆ ;

2) ಕೊಲ್ಲಾಪುರದ, ಶ್ರೀ ಮಹಾಲಕ್ಷ್ಮಿ ದೇವಿಯ ಮಸ್ತಕದಲ್ಲಿನ ಶಿವಲಿಂಗ ಮುದ್ರೆ ;

3) ತುಳಜಾಪುರದ, ಅತಿ ಲಾವಣ್ಯವಾದ ದೇವೀ ವಿಗ್ರಹ, ಭವಾನಿಯ ಮಸ್ತಕದಲ್ಲಿ ಶಿವಲಿಂಗ ಮುದ್ರೆ ;

4) ಶಿವಕಂಚೀ ಶ್ರೀ ಕಾಮಾಕ್ಷಿದೇವಿಯ ಮಸ್ತಕದಲ್ಲಿನ ಶಿವಲಿಂಗ ಮುದ್ರೆ ;

5) ಶ್ರೀ ಪಂಡರಾಪುರದ ಶ್ರೀ ಪಾಂಡುರಂಗನ ಮಸ್ತಕದಲ್ಲಿ ಶಿವಲಿಂಗ ಮುದ್ರೆ ; ಇದನ್ನು ಶ್ರೀ ಸಂತ ತುಕಾರಾಮರು, ತಮ್ಮ ಅಭಂಗ ಶಾಸ್ತ್ರದಲ್ಲಿ ಮೇಲುಕ್ತವಾದ ಅಂಶವನ್ನು ಭಕ್ತಿಯಿಂದ ಹಾಡುತ್ತಾ, " **ವಿಠಲಕೀ ಮಸ್ತಕೇ ಲಿಂಗ ಧಾರಣಂ** " ಯೆಂದು ಪ್ರಸಿದ್ಧಿ ಪಡಿಸಿರುವರು.

6) ತಿರುಪತಿ ಕ್ಷೇತ್ರದ ಶ್ರೀ ವೆಂಕಟಾಚಲಪತಿಯು ( ಶ್ರೀ ಬಾಲಾಜಿಯ) ಮಸ್ತಕದಲ್ಲಿ ಶಿವಲಿಂಗ ಮುದ್ರೆ ರಾರಾಜಿಸುತ್ತಲಿರುವುದು.

7) ತಿರುವಾಂಕೂರಿನ ಅನಂತ ಶಯನದ ಶ್ರೀ ಪದ್ಮನಾಭಸ್ವಾಮಿ ಮಸ್ತಕದಲ್ಲಿ ಶಿವಲಿಂಗ ಮುದ್ರೆ ; ಯಿದೇ ಪ್ರಕಾರ ಭಾರತಾದ್ಯಂತ ಅನೇಕ ತೀರ್ಥ ಕ್ಷೇತ್ರಗಳಲ್ಲಿ ಭಗವಾನ್ ಶ್ರೀ ಆದಿ ಜ॥ ರೇವಣಸಿದ್ಧರು ತಮ್ಮ ಇಷ್ಟಲಿಂಗಾರಾಧನೆಯನ್ನೆಸಗುತ್ತಾ ಅಲ್ಲಲ್ಲಿ ವಿಶ್ವಧರ್ಮ ವೀರಶೈವ ಸಿದ್ಧಾಂತವನ್ನು ಸಮಸ್ತ ಮಾನವ ವರ್ಗಕ್ಕೆ ಜಾತಿಕು

ಮೇಲ್ಕೀಳ್ ವರ್ಗಗಳೆಂಬ ಭಾವವಿಲ್ಲದೆ ಅಂದೇ ಹಿತವಾಗುವಂತೆ, ಮಿತವಾಗಿ ಉಪದೇಶಿಸುತ್ತಾ ಜಗತ್ಕಲ್ಯಾಣವನ್ನು ಮಾಡಿ ಪೂಜನೀಯರಾಗಿರುವರು.

ಇವರು ಶಿವಪಂಚಾಕ್ಷರೀಮಯ ದಿವ್ಯ ದೇಹಧಾರಿಗಳಾದುದರಿಂದ ಹಾಗೂ ತ್ರಿಭುವನಾಚಾರ್ಯವರೇಣ್ಯರಾದುದರಿಂದ ಅಪಾರ ದೈವೀ ಲೀಲೆಗಳನ್ನು ನೆನೆದಾಕ್ಷಣ ಎಸಗಿ ಸಮಸ್ತ ದೇವ ದಾನವ ಮಾನವ ಕುಲಗಳನ್ನು ಉದ್ಧರಿಸುತ್ತಲಿರುವರು.

ಸರ್ವೇಜನಾಃ ಸುಖಿನೋ ಭವಂತು ।
ಲೋಕಾ : ಸಮಸ್ತಾ ಸನ್ಮಂಗಳಾನಿ ಭವಂತು ॥

ಎಂಬುದು ಶ್ರೀ ಪರಮಾಚಾರ್ಯರ ದಿವ್ಯ ಸಂದೇಶ.



ಯಂ ಬ್ರಹ್ಮಾ ವರುಣೇಂದ್ರ । ರುದ್ರ ಮರುತ : ಸ್ತುನ್ವನ್ತಿ ।
ದಿವ್ಯೈ : ಸ್ತವೈ : ರ್ವೇದೈಸ್ಸಾಂಗ । ಪದಕ್ರಮೋಪನಿಷದೈ : ।
ಗಾಯನ್ತಿ ಯಂ ಸಾಮಗಾ : ॥ ಧ್ಯಾನಾವಸ್ಥಿತ ತದ್ಗತೇನ ।
ಮನಸಾ ಪಶ್ಯನ್ತಿ ಯಂ ಯೋಗಿನೋ ಯಸ್ಯಾಂತಂ ನ ವಿದು ।
ಸ್ಸುರಾಸುರಗಣಾ ದೇವಾಯ ತಸ್ಮೈ ನಮ : ॥

## ಅಧ್ಯಾಯ 3

### ಶ್ರೀ ಶಿವಕಂಚಿ ಕಾಮಕೋಟಿ ಮಠ ಕ್ರಿ. ಪೂ. 483ರಲ್ಲಿ
ಆದಿ ಶ್ರೀ ಜಗದ್ಗುರು ಶಂಕರಾಚಾರ್ಯರಿಂದ ಸ್ಥಾಪಿತವಾದುದು.

ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರು ಕರ್ನಾಟಕ ದೇಶಕ್ಕೆ ಬಂದು ಮೊದಲು ಕೂಡಲಿ ಕ್ಷೇತ್ರದಲ್ಲಿ ವಂದು ಮಠ ಕಟ್ಟಿಸಿ ಅಲ್ಲಿ ವಾಸ್ತವ್ಯ ಮಾಡಿದರು. ನಂತರ ಶ್ರೀ ಶೃಂಗೇರಿ ಮಠವನ್ನೂ ಹಾಗೂ ದ್ವಾರಕಾ, ಬದ್ರಿ. ಪೂರಿಜಗನ್ನಾಥದಲ್ಲಿ ಚತುರಾಮ್ನಾಯ ಮಠಗಳನ್ನು ಕಟ್ಟಿಸಿ, ಶ್ರೀ ಸುರೇಶ್ವರಾಚಾರ್ಯ, ಪದ್ಮಪಾದಾಚಾರ್ಯ, ತೋಟಕಾಚಾರ್ಯ, ಹಸ್ತಾಮಲಕಾಚಾರ್ಯ ಯಿವರುಗಳನ್ನು ಆ ಮಠಗಳಿಗೆ ಅನುಕ್ರಮವಾಗಿ ಅಧಿಪತಿಗಳನ್ನಾಗಿ ಮಾಡಿದರು. ಶ್ರೀ ಆದಿ ಶಂಕರರು ಸ್ಥಾಪಿಸಿದ ಅದ್ವೈತ ಸಿದ್ಧಾಂತದ ಸಾಮ್ರಾಜ್ಯವನ್ನು ಶ್ರೀ ಚತುರಾಮ್ನಾಯ ಮಠಗಳ ಪರಮಾಚಾರ್ಯರುಗಳು

ಮುಂದುವರಿಸಿದರು. ಶ್ರೀ ಶಂಕರಾಚಾರ್ಯರು ಜೀವಿತದ ಕೊನೆಯಲ್ಲಿ ತಾವೆಸಗಿ ಮಹೋನ್ನತವಾದ ಧರ್ಮ ಪ್ರಚಾರದ ಹಾಗೂ ಭಾಷ್ಯಾದಿ ರಚನೆಗಳ ಫಲವಾಗಿ ಸರ್ವಕ್ಕೂ ಫಲಪ್ರದನಾದ ಸಾಕ್ಷಾತ್ ಕೈಲಾಸನಾಥನ ಅಪರಾವತಾರಿಗಳಾದ, ಶ್ರೀ ಲಿಂಗೋದ್ಭವ ದಿವ್ಯ ಮಂಗಳ ಮೂರ್ತಿ, ಚಿದಾದಿತ್ಯ ಸದೃಶ ಭಗವತ್ಪಾದ ಆದಿ ಶ್ರೀ ಜ॥ ರೇವಣಸಿದ್ಧರಿಂದ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಪಡೆದು, ಶ್ರೀ ಶೃಂಗೇರಿ ಶ್ರೀ ಶಾರದಾ ಪೀಠದಲ್ಲಿಟ್ಟು ತಾವು ಆರಾಧಿಸಿ, ಚತುರಾಮ್ನಾಯ ಮಠಗಳಲ್ಲೂ ಶ್ರೀ ದೇವತಾ ಸಾರ್ವಭೌಮ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಸತತ ಪೂಜಿಸ ಬೇಕೆಂದರುಹಿದರು. ಈ ಶಿವಲಿಂಗದ ವೃತ್ತಾಂತವನ್ನು ಮೊದಲು ಶ್ರೀ ಸುರೇಶ್ವರಾ ಚಾರ್ಯರಿಗೆ ವಿವರಿಸುತ್ತಾ, ಭಗವಾನ್ ಶ್ರೀ ಜ॥ ರೇವಣಸಿದ್ಧರು ತಮಗೆ ಅನು ಗ್ರಹಿಸಿದುದಾಗಿ ಸಂತೋಷ ಚಿತ್ತದಿಂದ ಸತ್ಯವನ್ನು ಅರುಹಿದರು.

ಕೆಲಕಾಲಾನಂತರ ಶ್ರೀ ಶಂಕರರು ಪ್ರಾಯಶಃ ಕ್ರಿ. ಪೂ. 485ರಲ್ಲಿ ತಮ್ಮ 25ನೇ ವರ್ಷದಲ್ಲಿ ಶ್ರೀ ಶೃಂಗೇರಿಯಿಂದ ಕೊನೆಯದಾಗಿ ಹೊರಟು ಶ್ರೀ ಶಿವಕಂಚಿ ಪಯ ಮಾಡಿಸಿದರು. ಶ್ರೀ ಏಕಾಂಬರೇಶ್ವರ ಹಾಗೂ ಕಂಚಿ ಕಾಮಾಕ್ಷಿ ದರ್ಶನ ಪೂಜಾದಿಗಳಿಂದ ಆಚಾರ್ಯರಿಗೆ ಆನಂದವೆನಿಸಿತು. ಶ್ರೀ ಕಂಚಿ ಏಕಾಂಬರೇಶ್ವರ ಪೃಥ್ವಿ ಲಿಂಗವೆಂಬುದು ಗಮನಾರ್ಹ. ಶ್ರೀ ಭಗವತ್ಪಾದ ಆದಿ ಶ್ರೀ ಜ॥ ರೇವಣ ಸಿದ್ಧರು ಪೃಥ್ವಿಲಿಂಗ ಮುಖಸಂಜಾತರು. ಈ ಕಾರಣದಿಂದ ಶ್ರೀ ರೇಣುಕರು ಕಂಚಿ ಶ್ರೀ ಏಕಾಂಬರೇಶ್ವರನ ಜಾಗ್ರುತ ಸ್ಥಾನವಲ್ಲಿ ಮಂಡಿಸಿ ಧ್ಯಾನಾರೂಢರಾದರು. ತಮ್ಮ ಆತ್ಮ ಪ್ರತೀಕವಾದ ತಮ್ಮ ಅಮೂರ್ತ ರೂಪದಿಂದೆಸೆವ, ಶ್ರೀ ಕಂಚಿ ಏಕಾಂಬರೇಶ್ವರು ಅಮೃತ ವಾಣಿಯಂತೆ, ಪರಮಾತ್ಮನನ್ನು ಸ್ಮರಿಸುತ್ತಾ ಭೂ ಸ್ಪರ್ಶ ಮಾಡುತ್ತಲೇ ಆಶ್ಚರ್ಯ ! ಪರಮಾಶ್ಚರ್ಯ !! ಶ್ರೀ ಸ್ವಾಮಿ ಸನ್ನಿಧಿಯ ಮುಂಭಾಗದ ಭೂಮಿ ಯಿಂದ ದೇದೀಪ್ಯಮಾನವಾದ, ಶಿವಲಾಂಛನ ಲಾಂಛಿತರಾದ, ಪರಂಜ್ಯೋತಿ ಸ್ವರೂಪದ ಶ್ರೀ ರುದ್ರಮುನಿ ಶಿವಾಚಾರ್ಯರು (ಭೂ ಜಾತರು) ಅವತರಿಸಿದರು.

ಈಶಾಜ್ಞೆಯಂತೆ ಶ್ರೀ ಜ॥ ರೇವಣಸಿದ್ಧರು ಅವರನ್ನು ಶ್ರೀ ಮತ್‌ರಂಭಾಪುರಿ ಪೀಠಕ್ಕೆ ಕರತಂದು, ಮಹಾಪೀಠದ ಅಧಿಪತಿಗಳನ್ನಾಗಿ ಮಾಡಿದರು. ಭೂ ಜಾತ ಶ್ರೀ ಜ॥ ರುದ್ರಮುನಿ ಶಿವಾಚಾರ್ಯರ ಪಟ್ಟಾಭಿಷೇಕ ಮಹೋತ್ಸವಕ್ಕೆ ಉಳಿ ಶ್ರೀ ಹಿಮವದ್ ಕೇದಾರ, ಶ್ರೀಶೈಲ, ಶ್ರೀಕಾಶಿ, ಉಜ್ಜಯಿನೀ ಮಹಾ ಪೀಠಾಧ್ಯ ಜಗದ್ಗುರುಗಳು ಪ್ರಸನ್ನರಾಗಿದ್ದರು ಮತ್ತು ಚೋಳ, ಕೇರಳ ಇತ್ಯಾದಿ ಅಸಂಖ್ಯಾತ ರಾಜರು ಮತ್ತು ಮಹಾ ರಾಜರೂ, ಯತಿಗಳೂ, ಪ್ರಮುಖ ವೇದ ವಿದ್ವರು ಮತ್ತು ಭಾರತದ ನಾನಾ ಮೂಲೆಗಳಿಂದ ಸಹಸ್ರಾರು ಪ್ರಮುಖರೂ, ನೆರೆದಿದ್ದರು

ಶರ್ವನಂ ನೆನೆದು ಸೋಂಕಲು ನೆಲವ ।
ನಿರದಾಯ್ಕನೆ ಮಹಾದ್ಯುತಿ ಯೊಂದು ।
ಪೊರಪೊಣ್ಮಿತ್ತು ನೆಲ ಬಿರಿಯೇ ॥
ಜಗಜಿಗಿಸೆ ಫಣೆಯೊಳಗೆ ಭಸ್ಮವು ।
ಸೊಗಯಿಸಲು ಕೊರಲೊಳಗೆ ರುದ್ರಾ ।
ಕ್ಷಗಳ ಸರವದು ಕನಕ ದೀಪ್ತಿಯು ।
ಮೂವತ್ತಾರು ಜಡೆಗಳೊಪ್ಪಿರಲು ॥
ಬಗೆಗೊಳಿಸೆ ಮಸ್ತಕದ ಶಿವಲಿಂಗವು ।
ಪಗಲೆರೆಯುನನು ಪಳಿವ ಪೊಗರದು ॥
ಮಿಗಿಲೆನಿಸಿ ಬಿಸವೆಂದ ಮುಣ್ಮಿಸೆ ।
ಮಗುವು ಚೆಲ್ವಾಯ್ತು ॥

ಇಂತಪ್ಪ ಶ್ರೀ ಆದಿ ಜ॥ ರೇವಣಸಿದ್ಧ ಮಹಾಶಿವಯೋಗಿ ಶಿವಾಚಾರ್ಯರ ಪರಮ ಜಾಗ್ರತಸ್ಥಾನ ಪೃಥ್ವಿಲಿಂಗ ಶ್ರೀ ಕಂಚಿ ಏಕಾಂಬರೇಶ್ವರ, ಆದಿ ಶ್ರೀ ಶಂಕರಾ ಚಾರ್ಯರು ತಮ್ಮ ಜೀವಿತದ ಕೊನೆಯ ಕಾಲದಲ್ಲಿ ಶ್ರೀ ಕಂಚಿ ಏಕಾಂಬರೇಶ್ವರನ ಸನ್ನಿಧಿ, ಅವರಿಗೆ ಪರಮ ಶಾಂತಿ ಧಾಮವೆನಿಸಿತು. ಆಚಾರ್ಯರಿಗೆ ಕೊನೆಯ ದಾಗಿ ಶ್ರೀ ಶಿವಕಂಚಿಯಲ್ಲಿ ಒಂದು ಮಠವನ್ನು ಸ್ಥಾಪಿಸಬೇಕೆಂಬ ಸಂಕಲ್ಪವೇರ್ಪಟ್ಟಿತು ದೈವ ಕೃಪೆಯಿಂದ ಕ್ರಿ. ಪೂ. 483ರಲ್ಲಿ ಶ್ರೀ ಕಂಚೀಕಾಮಕೋಟಿ ಮಠವನ್ನು ನಿರ್ಮಿಸಿದರು. ಆಗ ಶ್ರೀ ಶಂಕರಾಚಾರ್ಯರಿಗೆ ಸುಮಾರು 26 ವರ್ಷಗಳಿರಬೇಕು. ಶ್ರೀ ಕಂಚಿ ಕಾಮಕೋಟಿ ಪೀಠಕ್ಕೆ ತಾವು ಅಲ್ಲಿಂದ ಆರು ವರ್ಷ ಕಾಲ ಅಧಿಪತಿಗಳಾ ಗಿದ್ದು, ಕ್ರಿ. ಪೂ. 477–76 ರಲ್ಲಿ ಅಂದರೆ ತಮ್ಮ 32ನೇ ವಯಸ್ಸಿನಲ್ಲಿ ತಾವು ಶ್ರೀ ಸುರೇಶ್ವರಾಚಾರ್ಯರನ್ನು ಈ ಮಠಕ್ಕೆ ಅಧಿಪತಿಗಳನ್ನಾಗಿ ನೇಮಿಸಿ ತಾವು ಶ್ರೀ ಕಂಚಿ ಏಕಾಂಬರೇಶ್ವರ, ಶ್ರೀ ಕಾಮಾಕ್ಷಿಯರ ದಿವ್ಯ ಸಾನ್ನಿಧ್ಯದಲ್ಲಿ ದಿನವಹಿ ಶ್ರೀ ರತ್ನ ಗರ್ಭ ಗಣಪತಿಯನ್ನೂ ಮತ್ತೂ ಶ್ರೀ ಚಂದ್ರಮೌಳೀಶ್ವರ ಲಿಂಗ ಪೂಜಾಧ್ಯಾನಾದಿಗಳಲ್ಲಿ ಶಿವ ಪಂಚಾಕ್ಷರೀ ಮಹಾಮೂಲ ಮಂತ್ರ ಜಪದೊಂದಿಗೆ ಶಿವಯೋಗದ ಸಮಾಧಿಯಲ್ಲಿ ಬ್ರಹ್ಮೀಭೂತರಾದರೆಂದು ಶ್ರೀ ಕಂಚಿ ಕಾಮಕೋಟಿ ಮಠದ ವತಿಯಿಂದ ಸ್ಪಷ್ಟಪಟ್ಟಿದೆ. ಶ್ರೀ ಆದಿ ಶಂಕರರು ಸ್ಥಾಪಿಸಿದ ಐದನೆ ಮಠ ಶ್ರೀ ಕಂಚಿ ಮಠ. ವೀರಶೈವರ ಪಂಚ ಮಹಾ ಪೀಠಗಳಿರುವುದನ್ನು ಸ್ಮರಿಸಿ ತಾವೂ ಸಹ ಪಂಚ ಪೀಠಗಳನ್ನು ಸ್ಥಾಪಿಸಿದ ತೃಪ್ತಿ ಶ್ರೀ ಶಂಕರರಿಗೆ ಉಂಟಾಯಿತು.

ಭೂಜಾತ ಶ್ರೀ ರುದ್ರಮುನಿ ಶಿವಾಚಾರ್ಯರನ್ನು ಶ್ರೀಮದ್ರಂಭಾಪುರೀ ಜ॥ ತಮ್ಮ ಶ್ರೀ ವೀರಸಿಂಹಾಸನಾರೋಹಣಗೈಸಿ ಅವರ ಪಟ್ಟಾಭಿಷೇಕವನ್ನು,

ವಿಜೃಂಭಣೆಯಿಂದ ವೈಭವಯುತವಾಗಿ ನೆರವೇರಿಸಿದಾಗ, ಆ ಮಹಾಸಭೆಯಲ್ಲಿ ಶ್ರೀ ಮಹಾಗುರುವಿನಿಂದ ಆಹ್ವಾನಿತರಾದ–

ಮೆರೆಯೇ ವಿಶ್ವಾರಾಧ್ಯನೊಂದೆಡೆ ।
ಮೆರೆಯು ಲೇ ಕೋರಾಮ–ಪಂಡಿತಗುರುವರರು ।
ಕೆಲವೆ ಮೆರೆಯೆ ಪಾಂಡ್ಯ ಮಹೀಂದ್ರ ।
ಚೋಳೇಂದ್ರರು ಮೆರೆಯೆ ನೇಪಾಳ ಕೇರಳ ।
ದರಸರುಂ ಕಣ್ದೆರೆದು ರೇಣುಕ ಕಂಡ ನೆಲ್ಲರನು ॥ ॥ ೪ ॥

ಶ್ರೀ ಶ್ರೀ ಮಹಾಚಾರ್ಯರೂ, ಅನಂತಶಿವಾಚಾರ್ಯರೂ, ಋತ್ವಿಕ್ಕುಗಳೂ ವೈದಿಕರೂ, ರಾಜ ಮಹಾರಾಜರೂ ; ವೀರ ಮಾಹೇಶ್ವರರು ಮತ್ತೂ ಅಸಂಖ್ಯಾತ ಭಕ್ತಸ್ತೋಮ, ಚತುರ್ದಿಕ್ಕುಗಳಿಂದಲೂ ಪುಷ್ಪವೃಷ್ಟಿಯಿಂದ ವೇದ ಘೋಷದೊಂದಿಗೆ ಜಯ ಜಯಾ ಕಾರವನ್ನು ನಭೋಮಂಡಲ ಮುಟ್ಟುವಂತೆ ಹರ್ಷ ಧ್ವನಿಗೈದರು.



ಪರಂಬ್ರಹ್ಮ ಪರಂಧಾಮ । ಪವಿತ್ರಂ ಪರಮಂ ಭರ್ವಾ ।
ಪುರುಷಂ ಶಾಶ್ವತಂ ದಿವ್ಯಂ । ಆದಿ ದೇವ ಮಜಂ ವಿಭುಂ ॥

## ಅಧ್ಯಾಯ 4

### –: ಆದಿ ಶ್ರೀ ಶಂಕರಾಚಾರ್ಯರ ಸಂಕ್ಷಿಪ್ತ ಪಾವನ ಚರಿತ್ರೆ :–

ಶ್ರೀ ಶೃಂಗೇರಿ ಜ॥ ಆದಿ ಶಂಕರಾಚಾರ್ಯರ ಚರಿತ್ರೆ ಅತಿ ಪಾವನವಾದುದು.

ಶಂಕರಂ ಶಂಕರಾಚಾರ್ಯಂ । ಕೇಶವಂ ಬಾದರಾಯಣಂ ।
ಸೂತ್ರ ಭಾಷ್ಯ ಕೃತೌ ವಂದೇ । ಭಗವಂತೌ ಪುನಃ ಪುನಃ ॥ ॥ ೧ ॥
ಶ್ರೀ ಶಂಕರಾಚಾರ್ಯವರ್ಯೋ । ಬ್ರಹ್ಮಾನಂದ ಪ್ರದಾಯಕಃ ।
ಅಜ್ಞಾನ ತಿಮಿರಾದಿತ್ಯಃ । ಸುಜ್ಞಾನಾಂಬುಧಿ ಚಂದ್ರ ಮಾಃ ॥ ॥ ೨ ॥
ವಿಶಾಲ ಕೀರ್ತಿರ್ವಾಗೀಶಃ । ಸರ್ವಲೋಕ ಹಿತೋತ್ಸುಕಃ ।
ಕೈಲಾಸ ಯಾತ್ರಾ ಸಂಪ್ರಾಪ್ತ । ಚಂದ್ರಮೌಳಿ ಪ್ರಪೂಜಕಃ ॥ ॥ ೩ ॥

ಸೂಕ್ಷ್ಮತತ್ವ ರಹಸ್ಯಜ್ಞಃ । ಕಾರ್ಯಾಕಾರ್ಯ ಪ್ರಬೋಧಕಃ ॥
ಜ್ಞಾನ ಮುದ್ರಾಂಚಿತ ಕರಃ । ಶಿಷ್ಯ ಹೃತ್ತಾಪಹಾರಕಃ ॥ ॥ ೪ ॥

ಪರಶಿವನ ಪರಮ ಅಂಶ ಸ್ವರೂಪಿಗಳು ಶ್ರೀ ಶಂಕರರು. " ಆಚಾರ್ಯ ದೇವೋಭವ " ಎಂಬ ವೇದವಾಕ್ಯದಂತೆ ಶ್ರೀ ಶಂಕರಾಚಾರ್ಯರ ದಿವ್ಯ ಅಡಿದಾವರೆಗಳನ್ನು ಭಕ್ತಿಯಿಂದ ಪುನಃ ಪುನಃ ನಮಸ್ಕರಿಸುವೆನು.

ಕೇರಳ ದೇಶದ ರಾಜಧಾನಿ ತಿರುವಾಂಕೂರಿಗೆ, ಉತ್ತರದಲ್ಲಿ ಕಾಲಡಿ (ಕಾಲಟಿ) ಎಂಬ ಶಿವಕ್ಷೇತ್ರವಿದೆ. ಈ ಕ್ಷೇತ್ರದಲ್ಲಿ ಕ್ರಿ. ಪೂ. 509ರಲ್ಲಿ ಶಂಕರರು ಜನಿಸಿದರೆಂಬುದಕ್ಕೆ ಸಾಕಷ್ಟು ಬಲವಾದ ಆಧಾರಗಳಿವೆ. ಕಾಲಡಿ ಕ್ಷೇತ್ರ ಪೂರ್ಣಾ ನದಿಗೆ ಉತ್ತರ ದಿಕ್ಕಿನ ದಡವಲ್ಲಿದೆ. ಇಲ್ಲಿ ಶೈವ ಬ್ರಾಹ್ಮಣ ಸ್ಮಾರ್ತ ಸಂಪ್ರದಾಯದ, ನಂಬೂದ್ರಿ ಶ್ರೀಮಂತ ಮನೆತನದ, ಶ್ರೀ ವಿದ್ಯಾಧಿರಾಜರೆಂಬ ಮಹೋದಯರಿದ್ದರು. ಇವರ ಸುಪುತ್ರ ಶಿವಗುರು ಇವರು ದೈವಭಕ್ತಿ ಪರಾಯಣರು, ಧೀಮಂತರೂ ಶ್ರೀಮಂತರೂ ಆಗಿ, ಗೌರವಾನ್ವಿತ ಪುರುಷರಾಗಿದ್ದರು. ಇವರ ಧರ್ಮಪತ್ನಿ ಸಾಧ್ವೀಮಣಿ ಆರ್ಯಾಂಬಾ. ಆದಿ ಶ್ರೀ ಶಂಕರರ ತಂದೆ ಶ್ರೀ ಶಿವಗುರು ತಾಯಿ ಆರ್ಯಾಂಬಾ. ಆಗಿನ ಕಾಲದಲ್ಲೂ ಈಗಿನಂತೆ ಜನ ಧರ್ಮದೂರರಾಗಿ, ಪಾಪಾಚಾರ ಪರಾಯಣರಾಗಿದ್ದರು, ಸಾಮಾಜಿಕ ಸನ್ನಿವೇಶ ಚಿಂತಾಜನಕ ಸ್ಥಿತಿಯಲ್ಲಿತ್ತು.

ಶ್ರೌತಸ್ಮಾರ್ತ ವಿಧಾನ ಹೀನ ಮನುಜಾ ।
ಪಾಶಂಡ ಮಾರ್ಗೇರತಾ । ಪಾಪಾಚಾರ ಪರಾಯಣಾ ।
ಮುಹುರಹೋ ! ಧೃತ್ವಾಧರಾ ದು:ಖಿತಾ ।
ಬ್ರಹ್ಮಾಣಂ ಶರಣಂ ಯಯೌ ವಿಧಿ । ಮುಖಾ ದೇವಾಗಿರೀ ಶಾಂತಕಂ ।
ಗತ್ವಾ ತಂ ಪ್ರಣಿಪತ್ಯ ದು:ಖ ಮಖಿಲಂ । ಪ್ರೋಚು ರ್ಭವಸ್ಸಾದರಂ ॥

ಅಂದರೆ ಶಂಕರರ ಜನನಕ್ಕೆ ಪೂರ್ವ ಎಲ್ಲೆಲ್ಲೂ ಪಾಪಗಳು ಹೆಚ್ಚಾಗಿ ಪುಣ್ಯ ಕುಗ್ಗಿ, ಜನರು ಅಡಿಗಡಿಗೆ ಆಹಾಕಾರದಿಂದ ತಾಪಕ್ಕೀಡಾಗಿ ಪರಿತಪಿಸುತ್ತಲಿದ್ದರು. ಮಾನವರ ಮನೋಮಂಡಲದಲ್ಲಿ ಧರ್ಮ ಗ್ಲಾನಿಯುಂಟಾಗಿ, ಭಗವದವತಾರದ ಅವಶ್ಯಕತೆ ಯಿತ್ತು. ಇವರು ಶ್ರೇಷ್ಠವಾದ ನಂಬೂದ್ರಿ ಬ್ರಾಹ್ಮಣ ಮನೆತನದವರು. ಈ ದಂಪತಿಗಳಿರ್ವರೂ, ಪರಮ ಶಿವ ಭಕ್ತರು. ಇವರಿಗೆ ವೃದ್ಧಾಪ್ಯದ ಕಾಲ ಸನ್ನಿಹಿತವಾದರೂ, ಪುತ್ರಸಂತಾನವಿಲ್ಲವೆಂಬ ಕೊರತೆ ಮನದಲ್ಲಿ ಕಾಡುತ್ತಿತ್ತು. ಒಂದು ದಿನ ಸಾಧ್ವಿಆರ್ಯಾಂಬೆ ಇದೇ ಚಿಂತೆಯಲ್ಲಿ ಶಿವನನ್ನು ಧ್ಯಾನಿಸುತ್ತಾ ನಿದ್ರಿಸಿದಳು. " **ಅಪುತ್ರಸ್ಯ ಗತಿರ್ನಾಸ್ತಿ** " ಎಂಬ ಶೃತಿವಾಣಿ, ಪೂರ್ವ ಜನರಿಗೆ ಗಮನಾರ್ಹ

ವಾಗಿತ್ತು. ಆರ್ಯಾಂಬೆಯ ಭಕ್ತಿಗೆ ಶಿವನು ಆ ರಾತ್ರಿ ಕನಸ್ಸಿನಲ್ಲಿ ಕಾಣಿಸಿಕೊಂಡು, "ಅಮ್ಮಾ ನಿನಗೆ ಎಂಟು ವರ್ಷದ ಸತ್ಪುತ್ರ ಬೇಕೋ ಅಥವಾ ನೂರು ವರ್ಷವುಳ್ಳ ದುಷ್ಟ ಪುತ್ರ ಬೇಕೋ ? ಎಂದು ಪ್ರಶ್ನಿಸಿದನು ". ಇದನ್ನರಿತ ಸಾಧ್ವಿ ಹೆದರಿ ಎಚ್ಚ ಗೊಂಡು ಪತಿಯಲ್ಲಿ ಸಂಗತಿಯನ್ನು ತಿಳಿಸಿದಳು. ಶಿವನವೊಲುಮೆ ಈಗ ಆ ಎಂದರಿತ ಶಿವಗುರು, ನಿನ್ನಿಷ್ಟವೇನೆಂದು ಕೇಳಿದನು. ವೃದ್ಧಾಪ್ಯದಲ್ಲಿ ಪೂ ಪೂರ್ಣಾಯುವುಳ್ಳ ಪುತ್ರ ಬೇಕೆಂದಳು, ಅದಕ್ಕೆ ಶಿವಗುರು-

ಕಿಂ ಜಾತೈಃ ಬಹುಭಿಃ ಪುತ್ರೈಃ ಶೋಕ । ಸಂತಾಪಕಾರ ಕೈಃ ॥
ಏಕೇನಾಪಿ ಸುಪುತ್ರೇಣ । ವಿದ್ಯಾಯುಕ್ತೇನ ಸಾಧುನಾ ।
ಆಹ್ಲಾದಿತಂ ಕುಲಂ ಸರ್ವಂ । ಯಥಾ ಚಂದ್ರೇಣ ಶರ್ವರೀ ॥

ದೀರ್ಘಾಯುವುಳ್ಳ ದುಷ್ಟ ಪುತ್ರನಿಂದ ಕೆಟ್ಟ ಹೆಸರಿನೊಂದಿಗೆ ನರಕವೇರ್ಪಡು ವುದು. ವಿದ್ಯಾವಂತನೂ ಗುಣವಂತನೂ ಆದ ಪುತ್ರನಿಂದ ವಂಶದ ಕೀರ್ತಿ ಮತ್ತು ಸ್ವರ್ಗ ಪ್ರಾಪ್ತಿ ಆಗುತ್ತೆ. ಅಂತರಿಕ್ಷದಲ್ಲಿ ರಾತ್ರಿ ವೇಳೆ ಲಕ್ಷ ನಕ್ಷತ್ರಗಳಿದ್ದರೂ, ವಂ ಪೂರ್ಣ ಚಂದ್ರೋದಯದಂಥಾ ಬೆಳಕು ಇರಲಾರದೆಂದು ಪತ್ನಿಗೆ ಅರುಹಿದನು. ತದನಂತರ ಆರ್ಯಾಂಬೆಯ ಪ್ರಾರ್ಥನೆಯಂತೆ ಶಿವನು ಕೇವಲ ಎಂಟು ವ ಆಯುಷ್ಯವುಳ್ಳ ಸತ್ಪುತ್ರರತ್ನನನ್ನು ಅನುಗ್ರಹಿಸಿದನು. ಆಗ ಶಿವಗುರು ಆರ್ಯಾ ಬೆಯರಿಗೆ ಆದ ಮಹದಾನಂದಕ್ಕೆ ಪಾರವೇ ಯಿಲ್ಲ. ಶಿವ ಪ್ರಸಾದದಿಂದ ಶಿವಾ ಸಂಭೂತನಾದೀ ಸುಪುತ್ರನಿಗೆ " ಶಂಕರ " ಎಂದು ನಾಮಕರಣ ಮಾಡಿ ದಾ ಧರ್ಮ, ಅನ್ನದಾನಾದಿ ಕೈಂಕರ್ಯಗಳನ್ನೆಸಗಿ ಶಿವನನ್ನು ಕೊಂಡಾಡಿದರು. " ಕರೋತೀ ತಿ ಶಂಕರ : "; ಸುಖದಾಯಕನೆಂದರ್ಥ.

ನಮಗೆ ಇಲ್ಲಿ ಮುಖ್ಯವಾದ ಅಂಶವೆಂದರೆ ಶ್ರೀ ಶಂಕರರ ಜನನ.

## ಶ್ರೀ ಆದಿ ಶಂಕರರ ಜಾತಕದ ವಿವರ

" ತಿಷ್ಯೇ । ಪ್ರಾಯ್ಯೆಯ । ನಲ ಸೇವಧೀ ।
ಬಾಣ ನೇತ್ರೇ । ಏ ನಂದನೇ । ದಿನ ಮಾನ ।
ಉದಗಧ್ವ ಭಾಜೀ ॥ ರಾಧೇ । ಅದಿತೇ ।
ರುಡುವಿನಿರ್ಗತ ಮಂಗಲಗ್ನೇ ॥ ಆಸ್ಯ ಹುತವಾ
ಶಿವಗುರು : ಸಚ್ಚ ಶಂಕರೇತಿ ॥ "

ಶ್ರೀ ಆದಿ ಶಂಕರಾಚಾರ್ಯರು ಶ್ರೀಮತಿ ಆರ್ಯಾಂಬೆಯ ಗರ್ಭಸುಧಾಂಬುಧಿ ಯಲ್ಲಿ ಅವಶತಸಿದ ಶುಭ ಯೋಗವಲ್ಲಿ, ಗ್ರಹಗತಿಗಳು ಮೋಲುಕ್ತವಾದಂತೆ ವಿರಾಜಿಸಿದವು.

ಅನಲ = 3 ಸೇವಧೀ = 9 ಬಾಣ = 5 ನೇತ್ರ = 2 ಅಂದರೆ ಈ ವೇಳೆಗೆ ಕಲಿಯುಗ 2593 ಅಂದರೆ ಆಗ ಕ್ರಿ. ಪೂ. 509 ಎಂದಾಗುತ್ತೆ. ಶಂಕರರು ಅವತರಿಸಿದ್ದು ಭಾನುವಾರ, ವೈಶಾಖ ಮಾಸ; ಶುಕ್ಲ ಪಂಚಮಿ, ಧನುರ್ಲಗ್ನ, ನಂದನನಾಮ ಸಂವತ್ಸರ, ಪುನರ್ವಸು ನಕ್ಷತ್ರ; ಸೂರ್ಯನು ಮೇಶ ರಾಶಿಯಲ್ಲಿದ್ದು ಚಂದ್ರನು ಪುನರ್ವಸು ನಕ್ಷತ್ರದ ಉಚ್ಚಾ ್ರಯ ಸ್ಥಿತಿಗೆ ಏರುತ್ತಿದ್ದು, ಕಟಕ ಲಗ್ನವು ಏರುಮುಖವಲ್ಲಿರುವಾಗ, ಅಭಿಜಿ಼ ಮುಹೂರ್ತದಲ್ಲಿ – ಶ್ರೀಶಂಕರರು – ಸೂರ್ಯೋ ದಯವಂತೆ ಅವತರಿಸಿದರು. ಈ ಗಂಡು ಶಿಶುವಿನ ಜನನವಾರ್ತೆ ಕೇಳಿದ ಕಾಲಟಿ ಗ್ರಾಮ ವಾಸಿಗಳೂ ಮತ್ತೂ ಬಂಧು ಭಾಂಧವರು ಸಂತೋಷದಿಂದ ಮೋಲಾಡಿದರು. ಶಂಕರರು ದಿನೆ ದಿನೆ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಾ ತನ್ನ ಮನಮೋಹಕವಾದ ಹಾವ ಭಾವ ವಿಲಾಸಗಳಿಂದ ತಾಯ್ತಂದೆಗಳಿಗೂ ಬಂಧು ಜನರಿಗೂ ಮತ್ತು ಇತರ ರಿಗೂ ಆನಂದದಿಂದ ಹಿಗ್ಗುವಂತೆ ಮಾಡಿದರು. ಶಂಕರರು ಸುಮಾರು ನಾಲ್ಕು ವರ್ಷಗಳ ಹುಡುಗನಾಗಿರುವಾಗ ಅವರ ತಂದೆ ಶಿವಾಧೀನರಾದರು, ಆರ್ಯಾಂಬೆ ಅತೀವ ದು:ಖಕ್ಕೀಡಾದಳು. ವೃದ್ಧೆ ಏಕೈಕ ಪುತ್ರನನ್ನು ಸಲಹುವ ವಿಷಯದಲ್ಲಿ ಮಗ್ನ ಳಾಗಿದ್ದಳು. ಇತ್ತ ಹುಡುಗ ಶಂಕರ, ಕಾಲಟಿ ಕ್ಷೇತ್ರದ ನಾಲ್ಕು ಗೆಳೆಯರೊಂದಿಗೆ ಆಟಪಾಟಗಳನ್ನಾಡುತ್ತಾ ಕಾಲ ಕಳೆಯುತ್ತಿದ್ದನು. ಈ ಸ್ನೇಹಿತರಲ್ಲಿ ಚಿತ್ಸುಕಾಚಾರ್ಯ ನೆಂಬ ಗೆಳೆಯ ಶಂಕರರ ಆತ್ಮೀಯ ಗೆಳೆಯನಾಗಿದ್ದನು. ಇವರ ದೇಹ ಎರಡು ಆತ್ಮ ವೊಂದೆಂಬ ತೆರದಲ್ಲಿ ಕೂಡಿ ದೇಹ ನೆರಳಿನಂತೆ ವರ್ತಿಸುತ್ತಿದ್ದರು. ಇವರು ಬಾಲ್ಯದ ವಿದ್ಯಾರ್ಜನೆಗಾಗಿ ಶಾಲೆಗೆ ಹೋಗುತ್ತಿದ್ದರು. ಇವರೀರ್ವರೂ ಸ್ವಭಾವತಃ ಬ್ರಾಹ್ಮಣ್ಯ ದಿಂದ ತೇಜಸ್ವಿಗಳಾಗಿದ್ದರು.

## ಕಾಲಟಿಯಲ್ಲಿ ಬಾಲಕ ಶಂಕರನಿಗೆ ಶ್ರೀ ಆದಿ ಅಗಸ್ತ್ಯ ಮಹರ್ಷಿಗಳ ಅಪೂರ್ವ ಸಂದರ್ಶನ.

ತಪೋಧನರಾದ ಶ್ರೀ ಅಗಸ್ತ್ಯರಿಗೆ ಶಂಕರನ ಅಂಶ ಶ್ರೀ ಶಂಕರಾಚಾರ್ಯರ ರೂಪದಲ್ಲಿ, ಕಾಲಟಿ ಕ್ಷೇತ್ರದಲ್ಲಿ ಅವತರಿಸಿರುವುದಾಗಿ ತಮ್ಮ ಜ್ಞಾನ ದೃಷ್ಟಿಗೆ ಗೋಚರವಾಯಿತು.

ತಕ್ಷಣ ಮಹರ್ಷಿಗಳು ತಮ್ಮ ನಾಲ್ಕು ಜನ ಶಿಷ್ಯರೊಂದಿಗೆ, ಶ್ರೀ ಶಂಕರರ ದರ್ಶನಾರ್ಥ ಕಾಲಟಿಗೆ ಬಂದರು. ಆಗ ವಿಶಾಲವಾದ ಒಂದು ಅಶ್ವಥ ವೃಕ್ಷದಡಿಯಲ್ಲಿ ಶಂಕರರು ತಮ್ಮ ಸ್ನೇಹಿತರಾದ ಚಿತ್ಸುಕಾಚಾರ್ಯರೇ ಇತ್ಯಾದಿ ನಾಲ್ಕು ಬಾಲಕ ರೊಂದಿಗೆ " ಬಾಲ: ಯಾವತ್ ಕ್ರೀಡಾಸಕ್ತ: " ಎಂಬಂತೆ ಗೋಲಿ ಆಟವಾಡು ತ್ತಿದ್ದರು. ಅಗಸ್ತ್ಯರ ದೃಷ್ಟಿ ಈ ಬಾಲಕರ ಮೇಲೆ ದೂರದಿಂದ ಬಿತ್ತು. ಸುಜ್ಞಾನಿ ಗಳಾದ ಅಗಸ್ತ್ಯರ ದೃಷ್ಟಿ ತೇಜಸ್ವಿಯಾದ ಶಂಕರ ಕುಮಾರನ ಮೇಲೆ ನಾಟಿತು. ಶ್ರೀ ಶಂಕರಾಂಶ ಸಂಭೂತನಾದ ಸುಕುಮಾರ ಶಂಕರಾಚಾರ್ಯರಿವರೆಂದು ಮಹರ್ಷಿ ಗಳು ತಕ್ಷಣ ಮನಗಂಡು ದೂರದಿಂದ ಶಂಕರರನ್ನು ನಮಸ್ಕರಿಸಿದರು. ಆತನಾಡುವ ಗೋಲಿಯಾಟದ ವೈಖರಿ, ಗುರಿ ತಪ್ಪದೆ ಗೋಲಿಗಳನ್ನು ಮೇಲಿಂದ ಮೇಲೆ ಹೊಡ ಯುತ್ತಿರುವ ಬಾಲಕನ, ಏಕೈಕ ಲಕ್ಷ್ಯದ ನಿರೀಕ್ಷೆಯನ್ನು ಗುರ್ತಿಸಿದರು.

ಶ್ರೀ ಆದಿ ಅಗಸ್ತ್ಯ ಮಹರ್ಷಿಗಳು ಭಗವತ್ಪಾದ ಆದಿ ಶ್ರೀ ಜ|| ರೇಣುಕಾ ಚಾರ್ಯರ ಪ್ರಪ್ರಥಮ ಶಿಷ್ಯರೆಂಬುದು ಆಧ್ಯಾತ್ಮಿಕ ಪ್ರಪಂಚಕ್ಕೆ ಭಾನುಕೋಟಿ ಪ್ರಕಾಶ ಮಾನವಾಗಿ ತಿಳಿದ ವಿಷಯವಷ್ಟೆ. ದ್ವಾಪರ ಯುಗದಾದಿಯ ಪರ್ವಕಾಲದಲ್ಲಿ ಶಿವ ಲಿಂಗ ಮುಖದಿಂದ ರೇಣುಕರು ಅವತರಿಸುತ್ತಲೇ, ಈಶಾಜ್ಞೆಯಂತೆ ವಿಶ್ವಧರ್ಮ ವೆನಿಸಿದ ಶಿವಾದ್ವೈತ ಸಿದ್ಧಾಂತದ ತಿರುಳನ್ನೊಳಗೊಂಡ " ಶ್ರೀ ಸಿದ್ಧಾಂತ ಶಿಖಾ ಮಣಿ " ನಾಮಕ ಶ್ರೀ ರೇಣುಕ ಗೀತೆಯನ್ನು ಅಗಸ್ತ್ಯರಿಗೆ ಅವರ ಮಲಯಾಚಲದಲ್ಲಿ ಕಂಗೊಳಿಸುವ ಪ್ರಶಾಂತ ವಾತಾವರಣದಿಂದ ಕೂಡಿದ ಆಶ್ರಮದಲ್ಲಿ ಮೇಲ್ಕಂಡ ಘನ ತತ್ವವನ್ನು ಅಂದೇ ಭುವಿಯಲ್ಲಿ ಬೋಧಿಸಿದರು. ರೇಣುಕಾಚಾರ್ಯರು ಶ್ರೀ ಕೊಲ್ಲಿಪಾಕಿ ಸೋಮನಾಥ ಲಿಂಗದ ಮುಖದಿಂದ ದ್ವಾಪರ ಯುಗದಾದಿಯಲ್ಲಿ ಅವತರಿಸಿದೊಡನೆ.

ಕೊಲ್ಲೀ ಪಾಕ್ಯ ಭಿದೇ । ಪುರೇ ಸು ವಿಮಲೇ ।
ಸೋಮೇಶ ಲಿಂಗಾ ಚ್ಚು ಭಾತ್ ।
ಆವಿರ್ಭೂಯ ತತೋಗತೋ ಗಗನತೋ ।
ಅಗಸ್ತ್ಯಾಶ್ರಮಂ ಪಾವಯನ್ ॥

ಯಸ್ತಸ್ಮೈ ವಿನತಾಯ ವೇದ ವಿಹಿತಂ ।
ಸಿದ್ಧಾಂತ ಮಾ ಬೋಧಯತ್ ।
ಸ ಶ್ರೀ ರೇಣುಕ ಯೋಗಿರಾಟ್ ।
ವಿತನು ತಾಂ ಸಾನಂದ ಮುರ್ವೀತಲಂ ॥

ಪರಶಿವಬ್ರಹ್ಮದ ಅತುಲ ತೇಜೋರಾಶಿ ಸ್ವೇಚ್ಛೆಯಿಂದ ಧರ್ಮೋದ್ಧರಣ ಕಾರ್ಯಾರ್ಥ ಶ್ರೀ ಕೊಲ್ಲಿಪಾಕಿ ಸೋಮನಾಥ ಜ್ಯೋತಿರ್ಲಿಂಗದ ಮುಖದಿಂದ, ಚಿತ್ಕಳಾ ರೂಪವಾಗಿ ಮೊದಲು ತೋರಿತು.

ಲಿಂಗ ಮಧ್ಯೇ ಮಹಾದೇವಃ । ಸಾಕ್ಷಾನ್ನಿತ್ಯಂ ವ್ಯವಸ್ಥಿತಃ ।
ಅನುಗ್ರಹಾಯ ಲೋಕಾನಾಂ । ತಸ್ಮಾಲ್ಲಿಂಗಂ ಪ್ರಪೂಜಯೇತ್ ॥

ಶಿವಲಿಂಗದ ಮಧ್ಯೆ ಪರಶಿವನ ಅತುಲ ತೇಜಸ್ಸು ಸದಾ, ಜಗದೋದ್ಧಾರ ಹಾಗೂ ಭಕ್ತೋದ್ಧಾರಾರ್ಥ ಪರಿಶೋಭಿಸುತ್ತಲಿರುವುದು. ಈ ತೇಜಸ್ಸು ಶಿವಲಿಂಗ ರೂಪದಿಂದ ಮೊದಲು ಸೂಕ್ಷ್ಮವಾದ ಚಿತ್ಕಳೆಯಿಂದ ಹೊರಹೊಮ್ಮಿ ತಕ್ಷಣ ಮಂತ್ರ ಮಯ ದಿವ್ಯ ದೇಹಧಾರಿಗಳಾಗಿ ಶ್ರೀ ಆದಿ ಜ॥ ರೇಣುಕಾಚಾರ್ಯರು ದ್ವಾಪರ ಯುಗದಾದಿಯಲ್ಲಿ ಅವತರಿಸಿದರೆಂದು ಶೃತಿಸಾರುತ್ತಲಿದೆ.

**॥ ನ ಭೂತ ಸಂಘ ಸಂಸ್ಥಾನೋ । ದೇವಸ್ಯ ಪರಮಾತ್ಮನ : ॥**

ಇಂತಪ್ಪ ಶ್ರೀ ಜಗದಾಚಾರ್ಯರ ಪ್ರಥಮ ಶಿಷ್ಯ ಶ್ರೀ ಆದಿ ಅಗಸ್ತ್ಯರು. ಅಗಸ್ತ್ಯ ಮಹರ್ಷಿಗಳು ಚಿರಂಜೀವಿಗಳು. ಚತುರ್ಯುಗಗಳಲ್ಲಿಯೂ ಇಚ್ಛಾ ಮಾತ್ರದಲ್ಲಿ ಕಾಣಿಸಿಕೊಳ್ಳುವಂತಃ ಶಿವ ಸ್ವರೂಪಿಗಳು. ತ್ರೇತಾಯುಗಾಂತ್ಯದಲ್ಲಿ ಶ್ರೀಮದ್ರಾಮಾಯಣದ ಯುದ್ಧ ಕಾಂಡದಲ್ಲಿ ಮಹಾ ಶಿವಭಕ್ತನಾದ ದಶಕಂಠ ರಾವಣನನ್ನು ಸಂಹರಿಸಲು ಉಪಾಯ ತಿಳಿಯದೆ ಶ್ರೀ ರಾಮನು ಮರದಡಿಯಲ್ಲಿ ಶಿರದಲ್ಲಿಟ್ಟಕರದೊಂದಿಗೆ ಕುಳಿತು ಚಿಂತಾಕ್ರಾಂತನಾಗಿರುವಾಗ, ಜ॥ ರೇಣುಕರ ಪರಮ ಶಿಷ್ಯ ಆದಿ ಅಗಸ್ತ್ಯರು ಆಕಾಶ ಮಾರ್ಗದಲ್ಲಿ ಬಂದು ರಣರಂಗದಲ್ಲಿ ಚಿಂತಾಕ್ರಾಂತ ನಾಗಿದ್ದ ಶ್ರೀ ರಾಮರಿಗೆ ಆದಿತ್ಯ ಹೃದಯ ಮಹಾಮಂತ್ರವನ್ನು ಬೋಧಿಸುತ್ತಾ

ರಾಮ ರಾಮ ಮಹಾ ಭಾಹೋ । ಶೃಣು ಗುಹ್ಯಂ ಸನಾತನಂ ।
ಆದಿತ್ಯ ಹೃದಯಂ ಪುಣ್ಯಂ । ಸರ್ವ ಶತೃ ವಿನಾಶನಂ ॥

ಎಂದು ಉಪದೇಶಿಸಿ ಈ ಮಂತ್ರವನ್ನು ವಿಧಿವತ್ತಾಗಿ ಪುನಶ್ಚರಣ ಮಾಡಿ, ಸಿದ್ಧಿಪಡೆದು ರಾವಣನನ್ನು ನಂತರ ಸಂಹಾರ ಮಾಡೆಂದು ಆಶೀರ್ವದಿಸಿರುವರು. ಇದಕ್ಕೆ ಮುನ್ನ ಶ್ರೀ ಸೀತಾರಾಮರು ದಂಡಕಾರಣ್ಯದಲ್ಲಿ ಪ್ರವಾಸ ಮಾಡುವಾಗ ಒಂದು ರಾತ್ರಿ ಶ್ರೀ ಅಗಸ್ತ್ಯಾಶ್ರಮದಲ್ಲಿ ತಂಗಿದ್ದು ಶ್ರೀಮತಿ ಲೋಪಾಮುದ್ರಾದೇವಿ ಮತ್ತೂ ಅಗಸ್ತ್ಯರ ಆತಿಥ್ಯವನ್ನು ಸ್ವೀಕರಿಸಿ ಅವರ ಆಶೀರ್ವಾದವನ್ನು ಪಡೆದಿರುವರು.

ದ್ವಾಪರ ಯುಗಾರಂಭದಲ್ಲಿ ಶ್ರೀ ಅಗಸ್ತ್ಯ ದಂಪತಿಗಳು ಭಗವತ್ಪಾದ ಜಗದಾದಿ ಶ್ರೀ ಆದಿ ಜ॥ ರೇಣುಕಾಚಾರ್ಯರನ್ನು ಸಂದರ್ಶಿಸಿ, ಪಾದಪೂಜೆ ಮಾಡಿ, ॥ ಗುರು ಪೂಜೈವ ಪೂಜಸ್ಯ । ಚ್ಛಿವಸ್ಯ ಪರಮಾತ್ಮನಃ ॥ ಎಂಬಂತೆ ಶ್ರೀ ಮಹಾ ಗುರುವಿನ ಪೂಜಯೇ ಶಿವನ ಪೂಜೆಯೆನಿಸಿದೆ ಶ್ರೀ ಗುರುವೇ ಹರನು. ಹರನು ಭಕ್ತಾನು ಗ್ರಹಾರ್ಥ ಮಹಾ ಕರುಣೆಯಿಂದ ಶ್ರೀ ಮಹಾಗುರು ರೂಪದಲ್ಲಿ ಆವಿರ್ಭವಿಸುವನು. ಇತಿವೇದ : ಎಂದು ಅರಿತಿದ್ದರು ಆದ್ದರಿಂದಲೇ ಇಂತಪ್ಪ ತ್ರಿಭುವನಾಚಾರ್ಯರಾದ ಪಂಚಾಚಾರ್ಯರನ್ನು ಸದ್ಭಕ್ತರು, ಅನಾದಿ ಕಾಲದಿಂದ ಲೋಕ ಕಲ್ಯಾಣಾರ್ಥ ಸರ್ವತ್ರ ಆಡಿಗಡಿಗೆ ಅಲ್ಲಲ್ಲಿ ಬಹು ವಿಜೃಂಭಣೆಯಿಂದ ಅಡ್ಡಪಲ್ಲಕ್ಕಿ ಮಹೋತ್ಸವದಲ್ಲಿ ಬಿಜ ಮಾಡಿಕೊಂಡು ಮೆರಸುತ್ತಾರೆ. " ಶ್ರೀ ಗುರುವೇ ಪರಶಿವನೆಂಬಾತನನ್ನು, ಶಿಷ್ಯನೆಂಬ ಕಣಾ " ಎಂದು ಶ್ರೀ ತೋಂಟದ ಸಿದ್ಧಲಿಂಗೇಶ್ವರರು ಅಪ್ಪಣೆ ಕೊಡಿಸಿರುವರು. ಶ್ರೀ ಮಹಾ ಗುರುವು ಅಡ ಪಲ್ಲಕ್ಕಿ ಉತ್ಸವ ಸಮಯದಲ್ಲಿ ಪಲ್ಲಕ್ಕಿ ಏರುವಾಗ " ಮಹಾ ಗುರುವೆನಿಸುವನು ". ಉತ್ಸವದ ಪಲ್ಲಕ್ಕಿ ಮಧ್ಯೆ ಪದ್ಮಾಸನಾಸೀನನಾಗಿರುವಾಗ, " ಶಿವಲಿಂಗ ಮೂರ್ತಿಯಂತೆ " ಪ್ರಜ್ವಲಿಸುವನು. ಪಲ್ಲಕ್ಕಿಯಿಂದ ಇಳಿಯುವಾಗ " ಜಂಗಮ ರೂಪದಲ್ಲಿ " ಎಲ್ಲರನ್ನೂ ಆಶೀವರ್ದಿಸುತ್ತಾ ಶ್ರೀ ಮಹಾಗುರು, " ತ್ರ್ಯಂಬಕನಂತೆಸೆವನು ". ಆದ್ದರಿಂದ ಶ್ರೀ ಗುರು ತಿರುಗಾಡುವ " ಮಹಾ ಕಲ್ಪವೃಕ್ಷವೆಂದು " ತತ್ವವೇತ್ತರು ಅರಿತಿರುವರು.

ಲೋಕ ಕಲ್ಯಾಣಾರ್ಥ ಶ್ರೀ ಗುರುವನ್ನು ಭಕ್ತರು ಅತ್ಯಂತ ಭಕ್ತಿಭಾವದಿಂದ, ಶಿವನೆಂದರಿತು ॥ ಗುರು ಸ್ಸಾಕ್ಷಾತ್ಪರ ಬ್ರಹ್ಮ ॥ ಎಂಬ ವೇದವಾಣಿಯಂತೆ ಅರಿತು, ಮಹಾ ಗುರುವನ್ನು ಅಲಂಕೃತವಾದ ಅಡ್ಡ ಪಲ್ಲಕ್ಕಿಯಲ್ಲಿ ಮೂರ್ತಗೊಳಿಸಿ, ರಾಜ ಬೀದಿಗಳಲ್ಲಿ ರಾಜ ವೈಭವದ ಗೌರವಗಳೊಡನೆ ಅವರ ಸನಾತನವಾದ ಮಹಾ ಪೀಠದ ಗೌರವಕ್ಕನುಗುಣವಾಗಿ, ಬಹು ವಿಜೃಂಭಣಾ ಭಾವದಿಂದ ಮೆರೆಯಿಸುವ ಅಧಿಕೃತವಾದ ಪದ್ಧತಿ ಪ್ರಾಚೀನ ಕಾಲದಿಂದಲೂ ಭಾರತೀಯರಲ್ಲಿ ನಡೆದು ಬಂದಿದೆ. ಇಂಥಾ ಪದ್ಧತಿಯನ್ನು ರದ್ದು ಮಾಡಬೇಕೆಂಬ ಆಧುನಿಕರಲ್ಲಿ ಕೆಲವು ಪತಿತರಾದ ಮಾನವರು ಅಪಲಪಿಸುತ್ತಿರುವರು, ಇದು ಅವರ ಅಸೂಯಾ ಭಾವದ ಕಿಂಚಿಜ್ಞತ್ವವೆಂದು ಹೇಳದೆ ಬೇರೆ ವಿಧಿಯಿಲ್ಲ. ಇಂಥವರು ಮಹಾ ಗುರುವನ್ನು ವ್ಯಕ್ತಿಗತ ದೃಷ್ಟಿಯ ಅಳತೆ ಕೋಲಿನಿಂದ ಅಳೆದು ಅವರು ನಮ್ಮಂತೆಯೇ ಒಬ್ಬರೆಂದು ಭಾವಿಸಿ, ಘೋರ ಪಾತಕಕ್ಕೆ ಗುರಿಯಾಗಿ " ಕೂಪದೊಳು ನೇಣು ಸರಿದಂತೆ " ಇಳಿಯಬೇಕಾಗುವುದು ಶಿವಂ ಶಾಂತಂ. ಈ ತತ್ವವನ್ನರಿಯದ ಪಾಮರರು ಪಂಚಾಚಾರ್ಯರು ತಮ್ಮಂತೆ ಯೇ ಯೆಂಬ ವ್ಯಕ್ತಿಗತ ದೃಷ್ಟಿಯಲ್ಲಿ ನೋಡಿ ಪತಿತರಾಗುತ್ತಿರುವರು.

ಅವಜಾನಂತಿ ಮಾಂ ಮೂಢಾ: । ಮಾನುಷೀಂ ತನು ಮಾಶ್ರಿ ತಂ ।
ಪರಂ ಭಾವ ಮಜಾನಂತೋ । ಮಮ ಭೂತ ಮಹೇಶ್ವರ: ॥ ( ಗೀತ )

ಪಂಚ ಪೀಠಾಧಿ ದೇವಾನಾಂ । ಏ ಜಾನಂತಿ ಸಮಾನ ತಾಂ ।
ತೇ ಗರ್ಧಭಾಶ್ಚ ಸಂಪ್ರೋಕ್ತಾ । ಜ್ಞಾನ ಶೂನ್ಯ ತ್ವತ: ಶಿವೇ ॥

( ಸುಪ್ರಭೇದಾಗಮ )

ಆದಿ ಶ್ರೀ ಅಗಸ್ತ್ಯರು ಕಲಿಯುಗದ ಕ್ರಿ. ಪೂ. ಐದನೆ ಶತಮಾನದಲ್ಲಿ ಸ್ವೇಚ್ಛಾ ರಾಜಿತ ವಿಗ್ರಹರಾಗಿ ಸಂಚರಿಸುತ್ತಾ, ಶ್ರೀ ಆದಿ ಶಂಕರಾಚಾರ್ಯರಿಗೆ ಕರುಣೆಯಿಂದ ದರ್ಶನವಿತ್ತು ; ಆ ಬಾಲಕನನ್ನು ಕಾಲಟಿಯಲ್ಲಿ ತಮ್ಮ ಹಸ್ತಮಸ್ತಕ ಸಂಯೋಗ ದೀಕ್ಷೆಯಿಂದ ಅನುಗ್ರಹಿಸಿ ಆಶೀರ್ವದಿಸಿದರು. ಆದ್ದರಿಂದ ಆದಿ ಶ್ರೀ ಶಂಕರರ, ಪ್ರಥಮ ಗುರು ಶ್ರೀ ಆದಿ ಅಗಸ್ತ್ಯಮಹರ್ಷಿಗಳೆಂದರಿಯಬೇಕು.

ಶ್ರೀ ಅಗಸ್ತ್ಯರು ತಮ್ಮ ಶಿಷ್ಯರನ್ನು ದೂರದಲ್ಲೇ ಇರಿಸಿ, ಅಶ್ವತ್ಥ ಮಹಾವೃಕ್ಷ ಡಡಿಯಲ್ಲಿ, ಯಾವುದನ್ನೂ ಅರಿಯದೆ ಆಟವಾಡುತ್ತಿದ್ದ, ಐದು ವರ್ಷದ ಸುಕುಮಾರ ಶಂಕರರತ್ತ ಸಮೀಪಿಸಿ, ಬಾಲಕನನ್ನು " ಪ್ರಣಯ ನಜುಷಾ । ಚಕ್ಷುಸಾ । ನೇಕ್ಷ ಮಾಣಃ " ಗಾಢವಾದ ವಾತ್ಸಲ್ಯ ಭಾವದಿಂದ ಅವನ ಬಲ ಹಸ್ತವನ್ನು ಹಿಡಿದೆತ್ತಿ, ಕರುಣಾ ರಸಪೂರ್ವಕ ಅವನನ್ನು ವೀಕ್ಷಿಸಿ " ಶಂಕರಾ ; ನಿನ್ನ ಅವತಾರದ ಗುರಿ ಏನು, ನೀನೀಗ ಮಾಡುತ್ತಿರುವುದೇನೆಂದು ಪ್ರಶ್ನಿಸಿದರು ? " ತಪೋಧನರಾದ ಮಹರ್ಷಿಗಳ ಹಸ್ತ ಸ್ಪರ್ಶ ಹಾಗೂ ಕಟಾಕ್ಷ ದೀಕ್ಷೆಯಿಂದ ಎಚ್ಚೆತ್ತ ಶಂಕರನ ದೇಹದಲ್ಲಿ, ತಕ್ಷಣ ವಿದ್ಯುದ್ ಚಲನೆಯಂಥಾ ದಿವ್ಯ ಶೈವೀ ತೇಜಸ್ಸು ಪ್ರವೇಶಿಸಿತು. ಇದರಿಂದ ಪ್ರಬುದ್ಧನಾದ ಬಾಲಕನು, ಅಗಸ್ತ್ಯರನ್ನು ಭಕ್ತಿಯಿಂದ ನಮಸ್ಕರಿಸಿ ಅವರ ಪ್ರಶ್ನೆಯನ್ನು ಉತ್ತರಿಸುತ್ತಾ, ಮಾಯೆಯಿಂದ ತಾನು ಆವೃತನಾದ ಕಾರಣ, ತಿಳಿಯಲಾಗದೆ ಹೋದೆನೆಂದು ಗದ್ಗದ ಸ್ವರದಿಂದಲೂ ಕಣ್‌ಕಂಬನಿಯಿಂದ ಅರಿಕೆ ಮಾಡಿಕೊಂಡನು. ಆಗ, ನೀನು ವೇದಾಗಮೋಪನಿಷದಾದಿಗಳಿಗೆ, ಪ್ರಸ್ಥಾನತ್ರಯಗಳಿಗೆ ಭಾಷ್ಯಾದಿಗಳನ್ನು ರಚಿಸಿ, ಧರ್ಮೋದ್ಧಾರ ಕಾರ್ಯಕ್ಕಾಗಿ ಈ ಜನ್ಮವೆತ್ತಿರುವೆ, ತಡಮಾಡದೆ ಈ ಕಾರ್ಯವನ್ನು ತ್ವರಿತಗೊಳಿಸೆಂದು ಆಜ್ಞಾಪಿಸಿದರು ಶಂಕರನು ನನಗೆ ಶಿವನಿತ್ತ ಎಂಟು ವರ್ಷದ ಆಯುಷ್ಯದಲ್ಲಿ ಈಗಾಗಲೇ ಐದು ವರ್ಷಗಳು ನೀರಿನಂತೆ ಹರಿದು ಹೋಗಿದೆ. ಮಿಕ್ಕುಳಿದಿರುವ ಮೂರು ವರ್ಷಗಳ ಅಲ್ಪಾವಧಿಯಲ್ಲಿ ಸಪ್ತಸಾಗರದಂತಿರುವ ಶಾಸ್ತ್ರಾರ್ಥಗಳನ್ನು ಹೇಗೆ ಉಲ್ಲೇಖಿಸಲು ಸಾಧ್ಯ ? ಎಂದು ಮರುಗಿದನು ಇವನ ಹೃದಯದ ಇಂಗಿತವನ್ನರಿತ ತ್ರಿಕಾಲ ಜ್ಞಾನಿ ಕರುಣಾ ಮೂರ್ತಿ ಅಗಸ್ತ್ಯರು, ವತ್ಸಾ ! ಇದಕ್ಕಾಗಿ ದು:ಖಿಸಬೇಡ. ನನ್ನ ಮಹಾ ಗುರು ಶ್ರೀ ರೇಣುಕಾಚಾರ್ಯರ ದಿವ್ಯಾನುಗ್ರಹ ಬಲದಿಂದ ನಿನಗೆ ಈಗ ಮತ್ತೆಂಟು ವರ್ಷ ಆಯುಷ್ಯ ವೃದ್ಧಿಯಾಗುವಂತೆ ಹರಸಿದ್ದೇನೆ. ಆದ್ದರಿಂದ ಮುಂಬರುವ

ಶ್ರೀ ಶೃಂಗೇರಿ ಶಂಕರರಿಗೆ ದತ್ತವಾದ ಶ್ರೀ ಚಂದ್ರಮೌಳಿ ಲಿಂಗ:

ಹನ್ನೊಂದು ವರ್ಷಗಳ ಕಾಲಾವಧಿಯಲ್ಲಿ ಭಾಷ್ಯಾಧಿಗಳನ್ನು ರಚಿಸಿ, ಧರ್ಮೋದ್ಧಾ ಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸೆಂದು ಆಶೀರ್ವದಿಸಿ, ಶ್ರೀ ಅಗಸ್ತ್ಯ ಶಿಷ್ಯರೊಂದಿಗೆ ಅಂತರ್ಧಾನರಾದರು. ಶ್ರೀ ಮುನಿಚಂದ್ರನಾದ ಅಗಸ್ತ್ಯರ ಉಪ ವನ್ನು ಸ್ಮರಿಸುತ್ತಾ ಶಂಕರನು ಅದರಂತೆ ಕಾರ್ಯೋನ್ಮುಖನಾಗಲು ದ್ಯುಕ್ತನಾದ

ಆದ್ದರಿಂದ ಶ್ರೀ ಆದಿ ಶಂಕರಾಚಾರ್ಯರ ಬಾಲ್ಯದ ಪ್ರಥಮ ಗುರುವರ ರೆಂದರೆ, ಶ್ರೀ ಆದಿ ಅಗಸ್ತ್ಯ ಮಹರ್ಷಿಗಳೆಂದು ವೇದ್ಯವಾಗುತ್ತೆ.

— ● —

## ಅಧ್ಯಾಯ 5

ತದ್ವಿದ್ಧಿ ಪ್ರಣಿ ಪಾತೇನ ।। ಪರಿ ಪ್ರಶ್ನೇನ ಸೇವ್ಯಯಾ ।।
ಉಪದೇಕ್ಷ್ಯಂತಿ ತೇ ಜ್ಞಾನಂ । ಯೋಗಿನಃ ತತ್ವ ದರ್ಶಿನಃ ।।

( ಗೀತ )

## ಶಂಕರರ ಬಾಲ್ಯ ಸನ್ಯಾಸ:

ಬಾಲ್ಯದ ಸನ್ಯಾಸ ಸ್ವೀಕಾರ ಸಾಮಾನ್ಯವಾದುದಲ್ಲ. ಪೂರ್ವಾರ್ಜಿತ ತಪ ಶಕ್ತಿಬೇಕು. ಶ್ರೀಮದ್ವೀರಾಂಜನೇಯ ಮತ್ತೂ ಶ್ರೀ ಶುಕಬ್ರಹ್ಮರು ನೈಷ್ಠಿಕ ಬ್ರ ಚಾರಿಗಳೆಂಬುದು ಲೋಕ ಪ್ರಸಿದ್ಧವಿದೆ. ಮೇಲುಕ್ತರಾದವರು ; ಸನಕ, ಸನಂ ಸನತ್ಸು ಜಾತ ಮತ್ತೂ ಸನತ್ಕುಮಾರಾದಿಗಳಂತೆ ಯಾವ ಜೀವವೂ ಪ್ರಥಮಾಶ್ ಸಂಭ್ರಮರಾಗಿಯೇ ಉಳಿದು ಪರಿವ್ರಾಜಕಾಚಾರ್ಯರಾಗಿ ಶೋಭಿಸುತ್ತಲಿರುವ ಯುಗ ಯುಗಾಂತರಗಳಿಂದಲೂ ಸನಕಾದಿ ಮಹರ್ಷಿಗಳನ್ನು ಶೃತಿ " ಚತ್ವಾರೋ ಬಾಲಾಃ " ಎಂದಿದೆ. ಕಾರಣ ಶಿವನ ಸನ್ನಿಧಿಯಲ್ಲಿ ಸರ್ವ ಮಕ್ಕಳೆಂಬುದು ಸರಿಯಷ್ಟೆ. ಕಾಲಟಿಯಲ್ಲಿ ಶ್ರೀ ಶಂಕರರು ಬಾಲ್ಯದಲ್ಲೇ ಸುಕೃತ ವಿಶೇಷದಿಂದ, ಭಗವಾನ್ ಶ್ರೀ ಆದಿ ಅಗಸ್ತ್ಯ ಮುನಿ ಪುಂಗವರ ದಿವ್ಯ ಮಸ್ತಕ ಸಂಯೋಗ ದೀಕ್ಷಾ ಪ್ರಭಾವಕ್ಕೊಳಗಾದ ನಿಮಿತ್ತ, ಕೂಡಲೇ ವೈರ ಭಾವದಿಂದ ಮನೆಯನ್ನು ತ್ಯಜಿಸಿ ಹೊರಡಲು ನಿರ್ಧರಿಸಿದರು. ಆಗ ತರಳ ಶಂಕರ ಪ್ರಾಯಶಃ ಐದು ವರ್ಷಗಳಿದ್ದಿರಬಹುದು. ಶುಭ ಮುಹೂರ್ತದಲ್ಲಿ ತನ್ನ

ಆರ್ಯಾಂಬೆಯ ಪಾದಗಳಿಗೆರಗಿ, ಇಂತು ಪರಿವ್ರಾಜಕನಾಗಿ ಮನೆಯಿಂದ ಹೊರಡುವುದಾಗಿ ವಿನಯದಿಂದ ಅರುಹಿದನು. ಈ ಹಿಂದೆಯೇ ಶಂಕರನು ಪೂರ್ಣಾನದಿಯಲ್ಲಿ ಸ್ನಾನ ಮಾಡುವಾಗ ಮೊಸಳೆಯ ದವಡೆಯಿಂದ ಮುಕ್ತನಾದಾಗ, ಆರ್ಯಾಂಬೆ ಮಗನ ಸನ್ಯಾಸ ಸ್ವೀಕಾರಕ್ಕೆ ಸಮ್ಮತಿಸಿದ್ದಳು. ವೃದ್ಧಳಾದ ತಾಯಿಯ ಅನುಕೂಲಕ್ಕಾಗಿ, ಗಂಗಾ ಮಾತೆಯನ್ನು ಭಕ್ತಿಯಿಂದ ಸ್ತುತಿಸಿ ದೂರದ ಪೂರ್ಣಾನದಿಯು, ತಮ್ಮ ಮನೆಯ ಹಿಂಬದಿಯಲ್ಲಿ ಪ್ರವಹಿಸುವಂತೆ ಪ್ರಾರ್ಥಿಸಿದ ಫಲವಾಗಿ ನದಿ ಪ್ರವಾಹವು ತನ್ನ ದಿಶೆಯನ್ನು ಬದಲಿಸಿ ; ಶಂಕರರ ಮನೆ ಹಿಂಬದಿಯಲ್ಲಿ ಪ್ರವಹಿಸಲಾರಂಭಿಸಿತು. ಆಶ್ಚರ್ಯದಾಯಕವಾದ ಶಿವ ಲೀಲೆಯಿದು. ಶ್ರೀ ಶಂಕರರು ಬಾಲ್ಯದಲ್ಲೆಸಗಿದ ಪ್ರಥಮ ಪವಾಡವಿದು.

ಮತ್ತೂಂದು ಸಂದರ್ಭದಲ್ಲಿ ಬಾಲ್ಯ ಸನ್ಯಾಸಿ, ಅಗ್ರಹಾರದ ಒಂದು ಮನೆ ಮುಂದೆ " ಭವತಿ ಭಿಕ್ಷಾಂದೇಹಿ " ಎನಲು, ಆ ಮನೆಯೊಡತಿ ಕಡುಬಡವಳಾದ್ದರಿಂದ, ಮನೆಯಲ್ಲಿದ್ದ ಒಂದು ಒಣಗಿದ ನೆಲ್ಲಿಕಾಯಿಯನ್ನು ತಂದು; ಶಂಕರ ವಟುವಿನ ಹಸ್ತದಲ್ಲಿ ಭಕ್ತಿಯಿಂದಿರಿಸಿ, ಸ್ವೀಕರಿಸಬೇಕೆಂದು ತನ್ನ ನಿರ್ಗತಿಕ ಹಾಗೂ ಅಸಹಾಯಕ ಸ್ಥಿತಿಯನ್ನು ಕಣ್ ಕಂಬನಿಗಳಿಂದ ಶಂಕರರಲ್ಲಿ ಅರಿಕೆ ಮಾಡಿಕೊಂಡಳು. ಈಕೆಯ ಭಕ್ತಿಗೆ ಮೆಚ್ಚಿದ ಶಂಕರರು, ಆ ನೆಲ್ಲಿಕಾಯಿಯ ಭಿಕ್ಷೆಯನ್ನು ಆದರದಿಂದ ಸ್ವೀಕರಿಸಿ, ಅದಕ್ಕೆ ಪ್ರತಿಫಲವಾಗಿ ನಿಂತ ಸ್ಥಳದಲ್ಲೇ ಶ್ರೀ ಮಹಾ ವಿಷ್ಣುವಿನ ವಕ್ಷ ಸ್ಥಳ ನಿವಾಸಿನಿಯಾದ ಲಕ್ಷ್ಮಿಯನ್ನು ಭಕ್ತಿಯಿಂದ ಶಂಕರರು, " ಕನಕಧಾರಾ ಸ್ತೋತ್ರ " ಶ್ಲೋಕಗಳಿಂದ ಸ್ತುತಿಸಿದರು. ಮಹಾತ್ಮರ ಮಹಿಮೆಯನ್ನರಿತವರಾರು ? ತಕ್ಷಣ ದಾನಿಯ ಮನೆ ಮೇಲೆ ಬಂಗಾರದ ನೆಲ್ಲಿಕಾಯಿಗಳ ಸುರಿಮಳೆಗರೆಯಿತು. ಇದು ಶಂಕರರ ಪರಮಾಶ್ಚರ್ಯಕರವಾದ ಎರಡನೇ ದೈವೀ ಪವಾಡ. ಶಿವಯೋಗದಲ್ಲಿ ಸಿದ್ಧ ಪುರುಷರಾದ ಕಲಸೋದ್ಭವ ಶ್ರೀ ಆದಿ ಅಗಸ್ತ್ಯ ತಪೋಧನರ ಆಶೀರ್ವಾದದ ಅನುಗ್ರಹ ಬಲವಿದೆಂದು ನಿಸ್ಸಂದೇಹವಾಗಿ ಹೇಳಬಹುದು. ಕುಂಭೋದ್ಭವರಾದ ಶ್ರೀ ಅಗಸ್ತ್ಯ ಮಹರ್ಷಿಗಳಾದರೋ, ಶಿವಾಚಾರ್ಯರುಗಳಲ್ಲಿ ಅಗ್ರಗಣ್ಯರೆನಿಸಿ, ಶಿವಲಿಂಗೋದ್ಭವರಾದ ಸಾಕ್ಷಾತ್ ಪರಶಿವ ಸದೃಶ ಶ್ರೀ ಆದಿ ಜಗದ್ಗುರು ರೇಣುಕಾಚಾರ್ಯರ ಕೃಪಾಕಟಾಕ್ಷಲವಲೇಶದಿಂದ ಮಹರ್ಷಿ ಕುಲಚಂದ್ರರೆನಿಸಿ ತ್ರಿಕಾಲಂಗಳಲ್ಲೂ ಸ್ತುತ್ಯರೂ ವಂದ್ಯರೂ ಆಗಿ ಪರಿಶೋಭಿಸುತ್ತಲಿದ್ದರು.

ವೃದ್ಧಳಾದ ಆರ್ಯಾಂಬೆ ಮಗನು ಪರಿವ್ರಾಜಕನಾಗಿ ಹೊರಟಿರುವ ರೀತಿಯನ್ನು ಕಂಡು, ಕುವರನ ಅಗಲಿಕೆಯಿಂದ ಮನನೊಂದು, " ಮಗನೆ ! ನನಗೆ ಮುಂದೇನು ಗತಿ ? " ಎಂದು ಹಲುಬಿದಳು. ಅಸಹಾಯಕಳಾದ ತಮ್ಮ ಪೂಜ್ಯ ಮಾತೆಯ ಸ್ಥಿತಿಗೆ ತಾವು ಕ್ವಚಿತ್ ಮರುಗಿದವರಾದರೂ, ತಕ್ಷಣ ಧೈರ್ಯದಿಂದ

॥ ಅಮ್ಮಾ ! ನಿನ್ನ ಆಪತ್ಕಾಲದಲ್ಲಿ ಮಗನೇ ಶಂಕರಾ ! ಎಂದು ವೊಮ್ಮೆ ನನ್ನ ಸ್ಮರಿಸಿದರೆ ತಕ್ಷಣ ನಿನ್ನೆದುರಲ್ಲಿ ಕಾಣಿಸಿ, ನಿನಗೆ ಬೇಕಾದ ಶೈತ್ಯೋಪಚಾರ ಮಾಡುತ್ತೇನೆಂದರುಹಿ," ತಾಯಿಯ ದು:ಖವನ್ನು ಶಮನಗೊಳಿಸಲು ಆಕೆ ಹಸ ಳಾದಳು. ಆಗ ಮತ್ತೊಮ್ಮೆ ಶಂಕರರು ಪ್ರೀತಿ ಪೂರ್ವಕ ತಾಯಿಯನ್ನು " ಮಾ ದೇವೋ ಭವಯೆಂದು " ನಮಸ್ಕರಿಸಿ, ತಮ್ಮ ಆದಿ ಮಹಾಗುರು ಶ್ರೀ ಆದಿ ಅ ಮಹರ್ಷಿಗಳ ಶ್ರೀಪಾದಕಮಲಗಳನ್ನು ಸ್ಮರಿಸುತ್ತಾ ಅಕಳಂಕ ಭಾವದಿಂದ, ಜ ಜನ್ಮ ಭೂಮಿಯನ್ನು ತ್ಯಜಿಸಿ ತಪಸ್ವಿಗಳಾಗಿ ಹೊರಟರು. ಆಗ ಅವರೊ ಆತ್ಮೀಯ ಗೆಳೆಯರಾದ ಶ್ರೀ ಚಿತ್ಸುಕಾಚಾರ್ಯರು, ಶಂಕರರ ದೇಹದ ನೆರಳಿ ಬಿಡದೆ ಅವರ ಬೆಂಗಾವಲಿಗರಾಗಿ ಹೊರಟರು. ಶಂಕರರಂತೆ ತಾವೂ ನೈಷ್ಠಿಕ ಬ್ರ ಚಾರಿಗಳಾಗಿ ತಮ್ಮ ಮನೆಯನ್ನೂ, ತಾಯ್ತಂದೆಗಳನ್ನೂ ಧೀರೋದ್ಧಾರ ಭಾ ಗಳಿಂದ ಶಂಕರರಂತೆ ತ್ಯಜಿಸಿ ಮಿತ್ರನನ್ನು ಹಿಂಬಾಲಿಸಿದರು. ಈ ಗೆಳೆಯರ ದೇ ಎರಡು, ಆತ್ಮ ಹಾಗೂ ಮನೋಸ್ಥೈರ್ಯ, ಧ್ಯೇಯಗಳು ವಂದೆನಿಸಿದ್ದವು.

ಶ್ರೀಮದ್ರಾಮಾಯಣದ ಅಯೋಧ್ಯಾಕಾಂಡ, ಇಲ್ಲಿ ಸ್ಮರಣೀಯವಿರು ಅಯೋಧ್ಯಾನಗರದಿಂದ, ಯೌವ್ವ ರಾಜ್ಯಾಭಿಷೇಖದ ಸಂಭ್ರಮಗಳನ್ನೆಲ್ಲಾ ತ್ಯಜಿ ಪಿತೃವಾಕ್ಯ ಪರಿಪಾಲನಾರ್ಥ, ಯುವರಾಜ ಕುಮಾರ ಶ್ರೀ ಕೋದಂಡರಾ ಸೀತಾಸಮೇತ, ಹದಿನಾಲ್ಕು ವರ್ಷಗಳಕಾಲ ವನವಾಸಾರ್ಥ, ತಾಯ್ತಂದೆಗಳ ಭಕ್ತ್ಯಾವಂದಿಸಿ ಅವರ ಆಶೀರ್ವಾದಗಳೊಂದಿಗೆ, ಮಂಗಳಕರವಾಗಿ, ಅಕಳಂಕ ಭಾ ದಿಂದ, ಚಿತ್ರಕೂಟಾಭಿಮುಖವಾಗಿ ಹೊರಟ ಸಮಯವದು. ಆಗ ಶ್ರೀ ರಾಮಾ ನಾದ ಲಕ್ಷ್ಮಣನು, ಅಣ್ಣನನ್ನು ವಂದು ಕ್ಷಣವೂ ಬಿಟ್ಟಗಲದೆ ಇದ್ದ ಪುಣ್ಯಪು ಸುಮಿತ್ರಾ ಸುಕುಮಾರ, ತಾನೂ ಅವರೊಂದಿಗೆ ಅರಣ್ಯಕ್ಕೆ ಹೊರಟು ನಿಂತ. ಅ ನಿಗೆ ಬೆಂಗಾವಲಾಗಿರಲು ನಿರ್ಧರಿಸಿ, ಸ್ವಾತ್ಮ ಪ್ರೀತಿ ಪುರಸ್ಸರ ಭಾವದಿಂದ ಶ್ರೀ ಲಕ್ಷ್ಮಣನು ವಲ್ಕಲಧಾರಿಯಾಗಿ ಅವರನ್ನು ನೆರಳಿನಂತೆ ಹಿಂಬಾಲಿಸಿದ. ಅಯೋಧ ನಗರದಿಂದ ಮೂವರು ವನವಾಸಕ್ಕಾಗಿ ಹೊರಟ ಸನ್ನಿವೇಶವನ್ನು ಕರ್ನಾಟಕ ಸಂಗೀ ಪಿತಾಮಹರೆಂದು ಹೆಸರಾಂತ, ತಿರುವೈಯ್ಯಾರಿನ ಶ್ರೀ ತ್ಯಾಗರಾಜ ಸ್ವಾಮಿಗ ತಮ್ಮೊಂದು ಮನಮೋಹಕ ಕೀರ್ತನೆಯಲ್ಲಿ ಬಣ್ಣಿಸುತ್ತಾ–

॥ ವೆಡಲೆನು ಕೋದಂಡಪಾಣಿ । ಅನುಜ ಸೌಮಿತ್ರಿತೋಗೂಡೀ ॥ ವೆಡಲೆ
ಕರಮುನ ಛಾಪಮುಲು ಮೆರೆಯೂ । ಉರ ಮುನ ಹಾರಮುಲು ಮೆರೆಯ
ಪುರಮುನ ಜನುಲೆಲ್ಲ ಪೊಗಡ । ವೆಡಲೆನು ಕೋದಂಡಪಾಣಿ ।
ಅನುಜಾ ಸೌಮಿತ್ರಿತೋ ಗೂಡಿ ॥

ಎಂಬೀ ಕೀರ್ತನೆ ಮನಮೋಹಕವೆನಿಸಿದೆ.

ನಾರು ಸೀರೆ ನಾರು ಮಡಿಗಳನ್ನುಟ್ಟು ಸೀತಾರಾಮರು ಅಯೋಧ್ಯೆಯನ್ನು ಬಿಟ್ಟು ಹೊರಡುವಾಗ, ಆಜಾನು ಬಾಹು ಶ್ರೀ ರಾಮನ ಹಸ್ತದಲ್ಲಿ ಕೋದಂಡಾಯುಧವು ಪ್ರಜ್ವಲಿಸುತ್ತಿರಲು, ಆತನ ಹಿಂದೆ ಸಹಧರ್ಮಚಾರಿಣಿಯಾದ ಸೀತಾ, ನಂತರ, ಆದಿ ಶೇಷಾಂಶ ಸ್ವರೂಪಿ ಶ್ರೀ ಲಕ್ಷ್ಮಣನು ಬಿಲ್ಲುಬಾಣಗಳೊಂದಿಗೆ ತೆರಳಿದ ರೀತಿಯನ್ನು ಶ್ರೀ ತ್ಯಾಗರಾಜರು ಸುಂದರವಾಗಿ ವರ್ಣಿಸಿದ್ದಾರೆ.

॥ ಪರಿತ್ರಾಣಾಯ ಸಾಧೂ ನಾಂ । ವಿನಾಶಾಯಚದು ಷ್ಕೃ ತಾಂ ॥
ಧರ್ಮ ಸಂಸ್ಥಾ ಪನಾರ್ಥಾಯ । ಸಂಭವಾಮಿ ಯುಗೇ ಯುಗೇ ॥

( ಭಗವದ್ಗೀತಾ )

ಎಂಬ ಭಗವಾದ್ವಾಣಿಯಂತೆ ಶ್ರೀ ಸೀತಾರಾಮ ಲಕ್ಷ್ಮಣರು ದಂಡಕಾರಣ್ಯವನ್ನು ಹೊಕ್ಕರು. ಶ್ರೀರಾಮನ ಬೆಂಗಾವಲಿಗಾಗಿ, ರೆಪ್ಪೆಗಳು ಕಣ್ಣುಗಳನ್ನು ಸದಾ ರಕ್ಷಿಸುವ ತೆರದಲ್ಲಿ, ಶ್ರೀ ಸೀತಾರಾಮರ ರಕ್ಷಣೆಗಾಗಿ, ರಾಮನನ್ನು ಲಕ್ಷ್ಮಣನು ಹಿಂಬಾಲಿಸಿದಂತೆ ; ಶ್ರೀ ಆದಿ ಶ ಂ ಕ ರ ರು ಕಾಲಟಿಯಿಂದ ಹೊರಟಾಗ ಅವರೊಂದಿಗೆ ಧೀಮಂತರಾದ ಶ್ರೀ ಚಿತ್ಸುಕಾಚಾರ್ಯರು, ಬೆಂಗಾವಲಾಗಿ ಉತ್ತರಾಭಿಮುಖವಾಗಿ ಹೊರಟರು.

ಮಾರ್ಗಮಧ್ಯದಲ್ಲಿ ಕಂಡ, ವಾಪೀಕೂಪ ತಟಾಕ ನದ ನದಿಗಳನ್ನು, ರಮ್ಯವಾದ ಗುಡ್ಡ, ಬೆಟ್ಟ ಪರ್ವತಗಳನ್ನು ಬಳಸಿ. ಅಲ್ಲಲ್ಲಿಯ ಗ್ರಾಮ ಪಟ್ಟಣಗಳನ್ನುದಾಟಿ, ಪವಿತ್ರವಾದ ನರ್ಮದಾ ತೀರವನ್ನು ಕೆಲವು ದಿವಸಗಳ ನಂತರ ಸುಖವಾಗಿ ತಲ್ಪಿದರು. ನರ್ಮದಾ ನದಿಯಲ್ಲಿ ಮಿಂದು ನಿತ್ಯ ಕರ್ಮಗಳನನ್ನು ಮುಗಿಸಿದ ನಂತರ, ಆ ನದೀ ತೀರದಲ್ಲಿರುವ, ರಮ್ಯವಾದ ಗುರುಕುಲಾಶ್ರಮವಂದು ಶ್ರೀ ಶಂಕರರ ದೃಷ್ಟಿಗೆ ಗೋಚರಿಸಿತು. ಶ್ರೀ ವೈಷ್ಣವ ಸಂಪ್ರದಾಯದ ಶ್ರೀ ಗೋ ೀ ವಿ ಂ ದ ಭಗವತ್ಪಾದಾಚಾರ್ಯರು, ಕೆಲವು ವಟುಗಳಿಗೆ ಶ್ರೀ ವೈಷ್ಣವ ಸಿದ್ಧಾಂತವನ್ನು ಬೋಧಿಸುತ್ತಾ ತಪಸ್ವಿಗಳಾಗಿದ್ದರು. ಇವರು ಶ್ರೀ ಗೌಡಪಾದಾಚಾರ್ಯರ ಪರಮ ಶಿಷ್ಯರು. ಪರಮ ವೈಷ್ಣವಾಚಾರ್ಯರಾದ ಶ್ರೀ ಗೌಡ ಭಗವತ್ಪಾದಾಚಾರ್ಯರು, ಕುರುಕ್ಷೇತ್ರವಾಸಿಗಳು. ಮಹಾ ವಿದ್ವಾಂಸರು ಹಾಗೂ ತಪೋಧನರು. ಇವರು ನರ್ಮದಾವದಿಯ, ರೇವಾ ತೀರದಲ್ಲಿ ಆಶ್ರಮವಂದನ್ನು ಸ್ಥಾಪಿಸಿ, ಶ್ರೀ ವೈಷ್ಣವ ಸಿದ್ಧಾಂತವನ್ನು ಯಶಸ್ವಿಯಾಗಿ ಪ್ರಚಾರ ಮಾಡುತ್ತಿದ್ದರು. ಶ್ರೀ ಗೌಡಪಾದಾಚಾರ್ಯರು ಶ್ರೀ ಶುಕಾಚಾರ್ಯರ ಶಿಷ್ಯರಲ್ಲಿ ಪ್ರತಿಷ್ಠಿತರಾದವರು. ಶ್ರೀ ಶುಕ ಬ್ರಹ್ಮರ ಕರ ಕಂಜಾತರು ಶ್ರೀ ಗೌಡಭಗವತ್ಪಾದಾಚಾರ್ಯರು. ಅಂದಬಳಿಕ, ಶ್ರೀ ಗೌಡಪಾದಾಚಾರ್ಯರು ಶ್ರೀ ಶುಕಾ

ಚಾರ್ಯರ ಕಾಲದಲ್ಲಿದ್ದವರೆಂದು ಸ್ಪಷ್ಟಪಡುತ್ತೆ. ಶ್ರೀ ಶಂಕರರ ಶ್ರೀ ಗುರು ಪ ಪರಾ ಸ್ತೋತ್ರದಿಂದಲೂ ಮೇಲ್ಕಂಡ ವಿಷಯ ದೃಢಪಟ್ಟಿದೆ. ಶ್ರೀ ಅರ್ಜುನ ಮೊಮ್ಮಗ ಪರೀಕ್ಷತ್ ಮಹಾರಾಜನಿಗೆ ಅವನ ಮೋಕ್ಷಾರ್ಥ, ಶ್ರೀ ಶುಕಾಚಾರ್ಯರು ಶ್ರೀ ಮದ್ಭಾಗವತ ಪುರಾಣವನ್ನು ಬೋಧಿಸಿರುವರು ಅಂದ ಬಳಿಕ ಶ್ರೀ ಶು ಚಾರ್ಯರ, ಶಿಷ್ಯ ಶ್ರೀಗೌಡಭಗವತ್ಪಾದಾಚಾರ್ಯರೂ, ಕಲಿಯುಗದ ಆರ ಕಾಲದಲ್ಲಿದ್ದವರೆಂದು ಭಾವಿಸಲಾಗಿದೆ. ಶ್ರೀ ಗೌಡಪಾದರ ಪರಮ ಶಿಷ್ಯ ಶ್ರೀ ಗೋ ವಿಂದ ಭಗವತ್ಪಾದಾಚಾರ್ಯರು. ಇವರು ಕ್ರಿ. ಪೂ. ಐದನೆ ಶತಾಬ್ದಿಯಲ್ಲಿ ಪರಮ ವೈಷ್ಣವ ಆಚಾರ್ಯ ಮಹೋದಯರು. ಇವರು ತಮ್ಮ ಗುರುಕುಲಾಶ್ರ ದಲ್ಲಿ ಕೆಲವು ವಟುಗಳಿಗೆ ಶ್ರೀ ವೈಷ್ಣವ ಸಂಪ್ರದಾಯದ ವಿದ್ಯೆ ಬೋಧಿಸುತ್ತಲಿ ಕಾಲವದು. ಶ್ರೀ ಆದಿ ಶಂಕರರು ಈ ಗುರುಕುಲಾಶ್ರಮವನ್ನು ಕಂಡು ಒಳ ಪ್ರವೇಶಿಸಿದರು. ಅಲ್ಲಿ ನಕ್ಷತ್ರಗಳ ಮಧ್ಯೆ ಪ್ರಜ್ವಲಿಸುವ ಪೂರ್ಣ ಚಂದ್ರನಂತೆ, ವ ಗಳ ಮಧ್ಯೆ ಆಚಾರ್ಯ ಶ್ರೀ ಗೋವಿಂದ ಭಗವತ್ಪಾದರನ್ನು ಸಂದರ್ಶಿಸಿ, ಅವರ ವಂದಿಸಿದರು. ತೇಜಸ್ಸಂಪನ್ನರಾದ ಬಾಲ ಬ್ರಹ್ಮಚಾರಿಯನ್ನು ಕಂಡ ಗುರುಗ ॥ ವತ್ಸ ! ನೀನಾರೆಂದು ॥ ಪ್ರಶ್ನಿಸಿದರು. ತಕ್ಷಣ ಶಂಕರರು ॥ ದಶ ಶ್ಲೋಕ ॥ ಎ ಹತ್ತು ಶ್ಲೋಕಗಳನ್ನು ಪಠಿಸಿ ಸ್ವಾಮಿ, "ಅಯಮಾತ್ಮ ಬ್ರಹ್ಮ" ಎಂದುಸುರಿದದ ಕೇಳಿದ ತಕ್ಷಣ ಶ್ರೀ ಗೋವಿಂದ ಭಗವತ್ಪಾದಾಚಾರ್ಯರು ಆಶ್ಚರ್ಯಚಕಿತ ಮಾ ರಾಗಿ, ಹೊಸನೆ, ಸುಜ್ಞಾನಿಯಾದೀ ತರುಣನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊ ಬೇಕೆಂಬ ಆಸೆಯಾಯಿತು. ಶಂಕರರು ಶಿವತೇಜಸ್ಸಂಪನ್ನರಾಗಿ ತಪೋಧನರಾದ ಶ್ರೀ ಆದಿ ಅಗಸ್ತ್ಯ ಮಹರ್ಷಿಗಳ ಪೂರ್ಣ ಕೃಪಾಶೀರ್ವಾದಗಳಿಂದ ಸಾಕಷ್ಟು ಪ್ರಬು ರಾಗಿದ್ದರು. ಶಿವಾಚಾರ್ಯರ ಘನ ತೇಜಸ್ಸು ಶ್ರೀ ಶಂಕರರ ಮುಖ ಮಂಡಲ ಪ್ರಜ್ವಲಿಸುತ್ತಲಿತ್ತು. ಈ ವಟು ಶಿವಾಂಶ ಸಂಭೂತವಾದ ಶಂಕರನಂತೆ ಯಿರು ದನ್ನು, ಜ್ಞಾನಿಗಳಾದ ಗೋವಿಂದ ಭಗವತ್ಪಾದರ ಚಿತ್ತದಲ್ಲಿ ವೇದ್ಯವಾದರೂ ಸ ವಿವೇಕ ಸಂಪನ್ನನಾದ ಇಂತಪ್ಪ ವಟುವನ್ನು ತಮ್ಮ ಶಿಷ್ಯನನ್ನಾಗಿಸಿಕೊಂಡು, ಪರ ಶ್ರೀ ವೈಷ್ಣವ ಸಿದ್ಧಾಂತವನ್ನು ಬೋಧಿಸಿದರೆ, ಈತನ ಮೂಲಕ ಶ್ರೀ ವೈಷ್ ಸಿದ್ಧಾಂತ ಜಗದಾದ್ಯಂತ ಪ್ರಭಾವಾನ್ವಿತವಾಗಿ ಪ್ರಚಾರವಾಗುತ್ತೆಂಬ ಹಿರಿ ಬಯಕೆ ಅವರನ್ನು ಕಾಡಿಸಿತು. ಶ್ರೀ ವೈಷ್ಣವ ಸಿದ್ಧಾಂತವೆತ್ತ ಅನಾದಿಸಂಸಿದ್ಧವಾ ಶೈವಸಿದ್ಧಾಂತವೆತ್ತ, ಶ್ರೀ ಗೋವಿಂದ ಭಗವತ್ಪಾದರ ಕೃತ್ರಿಮ ತರಳ ಶಂಕರ ಪ್ರಥಮದಲ್ಲಿ ವೇದ್ಯವಾಗಲಿಲ್ಲ.

ಆ ಕಾಲದಲ್ಲಿ ಶ್ರೀ ವೈಷ್ಣವರು, ಶಿವಶಬ್ಧವನ್ನಾಗಲೀ ಶಿವ ದೇವಾಲಯ ಕಡೆ ತಿರುಗಿ ನೋಡುತ್ತಿರಲಿಲ್ಲ. ॥ ಶಂಕರ, ಶಿವ ॥ ಎಂಬ ಶಬ್ಧಗಳನ್ನೂ ಕೇಳಬಾ ದೆಂದು, ಕಿವಿಗಳನ್ನು ಮುಚ್ಚಿಕೊಳ್ಳುತ್ತಿದ್ದರು. ಮತ್ತೂ ಅವರು ಶಿವ ಲಾಂ

ಗಳನ್ನು ಮನ್ನಿಸುತ್ತಿರಲಿಲ್ಲ, ಇಂತಪ್ಪ ಪರಿಸ್ಥಿತಿಯಲ್ಲೂ, ಗೋವಿಂದ ಭಗವತ್ಪಾದಾಚಾರ್ಯರು, ತಮ್ಮ ಮನೋಧರ್ಮಕ್ಕೆ ವಿರೋಧವಾಗಿ, ಶಿವಲಾಂಛನ ಲಾಂಛಿತನಾದ ಶಂಕರ ಕುವರನನ್ನು ತಮ್ಮ ಪರಮ ಶಿಷ್ಯನನ್ನಾಗಿ ಸ್ವೀಕರಿಸಿ, ಶ್ರೀ ವೈಷ್ಣವ ದೀಕ್ಷೆಯನ್ನಿತ್ತು, ಶ್ರೀ ವೈಷ್ಣವ ಸಿದ್ಧಾಂತವನ್ನು ಆ ವಟುವಿಗೆ ಬೋಧಿಸಿದರು. ಬೆಳ್ಳಗಿರುವುದೆಲ್ಲಾ ಹಾಲೆಂದು ತಿಳಿದಿದ್ದ ಮುಗ್ಧ ವಯಸ್ಸಿನಲ್ಲಿ ಶ್ರೀ ಶಂಕರರಿಗೆ ಗೋವಿಂದ ಭಗವತ್ಪಾದರ ವಂಚನೆ ಅರಿವಾಗಲಿಲ್ಲ. ಶ್ರೀ ವಿಷ್ಣು ಸರ್ವೋತ್ತಮತ್ವವನ್ನು ಶಂಕರರಿಗೆ ಸ್ವಲ್ಪಕಾಲ ಭೋಧಿಸಿ ಶ್ರೀ ವೈಷ್ಣವ ಸಂಪ್ರದಾಯಗಳನ್ನು ಅರುಹಿದರು. ಇದರಿಂದಾಗಿ ಶ್ರೀ ಶಂಕರರಿಗೆ ॥ ಶ್ರೀ ವಿಷ್ಣು ಸಹಸ್ರ ನಾಮಂಗಳಿಗೆ ॥ ಶ್ರೀ ವೈಷ್ಣವ ಸಿದ್ಧಾಂತಕ್ಕನುಗುಣವಾಗಿ ವ್ಯಾಖ್ಯಾನ ಮಾಡುವ ಶಕ್ತಿ ಅವರಲ್ಲಿ ಉಂಟಾಗಿರಬೇಕು. ಸ್ವಲ್ಪಕಾಲಾ ನಂತರ ಒಂದು ದಿನ ಪಂಚ ಪಂಚ ಉಷಃ ಕಾಲದಲ್ಲಿ ತಮ್ಮ ಆದಿಗುರು ಶ್ರೀ ಅಗಸ್ತ್ಯರ ಸ್ಮರಣೆಯಿಂದಾಗಿ ತಮ್ಮ ಮುಂದಿನ ಕರ್ತವ್ಯದ ಅರಿವುಂಟಾಯಿತು. ಅಂದೇ ಶ್ರೀ ಗೋವಿಂದ ಭಗವತ್ಪಾದರಲ್ಲಿ ತಾವು ಶ್ರೀ ಕಾಶೀಕ್ಷೇತ್ರಕ್ಕೆ ಪ್ರಯಾಣ ಬೆಳೆಸಿರುವುದರಿಂದ ಗುರುಕುಲಾಶ್ರಮದಿಂದ ಹೊರಡಲು ಅಪ್ಪಣೆ ಪಡೆದು ವಂದಿಸಿ ಅಲ್ಲಿಂದ ಶಿವಸ್ಮರಣೆ ಯೊಂದಿಗೆ ಹೊರಟರು. ಶಂಕರರು ಈ ಮಧ್ಯ ಕಾಲದಲ್ಲಿ ಸರ್ವದಾ ಶಿವಲಾಂಛನ ಲಾಂಛಿತರಾಗಿದ್ದರೇ ವಿನಃ ಒಂದು ದಿವಸವಾದರೂ ಶ್ರೀ ವೈಷ್ಣವ ಲಾಂಛನಗಳನ್ನು ಧರಿಸಲಿಲ್ಲವೆಂದು ಕಂಡುಬರುತ್ತೆ.

ಶ್ರೀ ಶಂಕರರಿಗೆ ಬಾಲ್ಯದಲ್ಲಿ ಅನಿರೀಕ್ಷಿತವಾಗಿ ವೈಷ್ಣವ ಸಂಪ್ರದಾಯದ ಸಂಪರ್ಕವೇರ್ಪಟ್ಟಿದ್ದರಿಂದ, ಈ ತೊಡಕಿನಿಂದಾಗಿ ಅವರು ತಮ್ಮ ಜೀವಿತ ಕಾಲದಲ್ಲಿ ಕೇವಲ ಏಕೇಶ್ವರವಾದಿಗಳಾಗಿರಲು ಸಾಧ್ಯವಾಗಲಿಲ್ಲಿ. ಈ ಕಾರಣದಿಂದ ತಮ್ಮ ಅದ್ವೈತ ಮಠಗಳಲ್ಲಿ–ಪ್ರಧಾನವಾದ ಶಿವೋಪಾಸನೆಯೊಂದಿಗೆ ಶ್ರೀರಾಮ, ಶ್ರೀಕೃಷ್ಣ, ಶ್ರೀ ಮಹಾವಿಷ್ಣು ಹಾಗೂ ದೇವತಾ ಪಂಚಾಯತನ ಪೂಜಾ ಪದ್ಧತಿಯನ್ನು ಅಂದರೆ–

॥ ಆದಿತ್ಯ ಮಂಬಿಕಾಂ ವಿಷ್ಣುಂ । ಗಣನಾಥಂ ಮಹೇಶ್ವರಂ ॥

ಎಂಬುದನ್ನು ಆಚರಣೆಗೆ ತರಬೇಕಾಗಿ ಬಂತು. " ಸರ್ವಂಲಿಂಗೇ ಸ್ಥಾಪಯತಿ " ಎಂಬ ಶಿವಾಗಮೋಕ್ತಿ, " ಈಶಾವಾಸ್ಯ ಮಿದಂ ಸರ್ವಂ " ಎಂಬ ಈಶೋಪನಿಷತ್ತಿನ ತಿರುಳೆನಿಸಿದೆ. ಮೇಲ್ಕಂಡ ಪಂಚಾಯತನದಲ್ಲಿ ಬೆಳಗುವ ದೇವತಾ ಮೂರ್ತಿಗಳೆಲ್ಲಾ, " ತ್ರಯಂಬಕನಾದ ಪರಶಿವನಲ್ಲಿ ಅಂತರ್ಗತವಾಗಿರುವುವೆಂದು ಶ್ರುತಿ ಘಂಟಾಘೋಷದಿಂದ,ಸಮುದ್ರದ ಅಲೆಗಳ ಘೋಷದಂತೆ ಘೋಷಿಸುತ್ತಿರುವಳು. ಇಷ್ಟಾದರೂ ಶ್ರೀ ಆದಿ ಶಂಕರರು ತಮ್ಮ ರಕ್ತಗತವಾದ ಶೈವಾಚಾರ ಶೈವಧರ್ಮ. ಶೈವೋಪಾಸನೆ ಹಾಗೂ ಶಿವಸರ್ವೋತ್ತಮತ್ವ ಯಿತ್ಯಾದಿಗಳನ್ನು ಕಿಂಚಿತ್ತೂ ಬಿಡದೆ ಅನನ್ಯ ಭಕ್ತಿ ಭಾವದಿಂದ

ಪಾಲಿಸಿಕೊಂಡು ಬಂದಿರುವರು. ಇದಕ್ಕೆ ನಿದರ್ಶನವಾಗಿ ಶ್ರೀ ಶಂಕರರು ಶಿವಾನಂ ಲಹರಿಯಲ್ಲಿ ಶಿವನನ್ನು ಭಕ್ತಿ ಭಾವದಿಂದ ಸ್ತುತಿಸುತ್ತಾ–

॥ ಸಹಸ್ರಂ ವರ್ತಂತೇ । ಜಗತಿವಿಭುಧಾಃ । ಕ್ಷುದ್ರ ಫಲದಾಃ ।
ನಮನ್ಯೇ ಸ್ವಪ್ನೇವಾ । ತದನು ಸರಣಂ ತತ್ಕೃತಫಲಂ ॥
ಹರಿಬ್ರಹ್ಮಾದೀನಾಮಪಿ । ನಿಕಟ ಭಾಜಾಮ ಸುಲಭಂ ।
ಚಿರಂ ಯಾಚೇ ಶಂಭೋ । ಶಿವತವ, ಪಾದಾಂಭೋಜ ಭಜನಂ ॥

ಎಂದು ಸ್ತುತಿಸಿ ಶಿವನಲ್ಲಿ ಅಸ್ಖಲಿತ ಮನೋಭಾವದಿಂದ ವರ್ತಿಸಿರುತ್ತಾರೆ. ಈ ಕಾರಣದಿಂದ ಆದಿ ಶ್ರೀ ಶಂಕರಾಚಾರ್ಯರು ತ್ರಿಕಾಲಂಗಳಲ್ಲೂ ಭಕ್ತಿಯಿಂದ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಪೂಜಿಸಿ, ಭಜಿಸಿ ಧ್ಯಾನಾರೂಢರಾಗಿ ಆನಂದಿಸುತ್ತ ಲಿದ್ದರು. ನರ್ಮದಾ ತೀರದಿಂದ ಶ್ರೀ ಶಂಕರರು ಶ್ರೀ ಕಾಶೀ ಕ್ಷೇತ್ರದತ್ತ ಪ್ರಯಾಣ ವನ್ನು, ಶ್ರೀ ಭಗವಾನ್ ಆದಿ ಅಗಸ್ತ್ಯರ ಮತ್ತೂ ಸರ್ವಲೋಕ ಶರಣ್ಯನಾದ ಮಹಾ ದೇವನನ್ನು ಮನದಲ್ಲಿ ಸ್ಮರಿಸುತ್ತಾ ಪಾದಚಾರಿಯಾಗಿ ಮುಂದೆ ಮುಂದೆ ಹೊರಟರು.



## ಅಧ್ಯಾಯ 6

॥ ಯತ್ಕೃಪಾಲೇಶಮಾತ್ರೇಣ । ವಾಂಛಿತಂ ಲಭತೇ ಪುಮಾನ್ ।
ತಂ ವಂದೇ ಗಿರಿಜಾನಾಥಂ । ಪರಬ್ರಹ್ಮ ಶಿವಾಭಿಧಂ ॥

ಶ್ರೀ ಕಾಶೀ ಕ್ಷೇತ್ರದಲ್ಲಿ ಶ್ರೀ ಶಂಕರಾಚಾರ್ಯರು ಪ್ರಸ್ಥಾನತ್ರಯಗಳಿಗೂ ಮತ್ತೂ ಕೆಲವು ಪ್ರಮುಖ ಉಪನಿಷತ್ತುಗಳಿಗೂ ಹಾಗೂ ಶ್ರೀ ಭಗವದ್ಗೀತಾ ಶಾಸ್ತ್ರ ಗಳಿಗೆ ಅದ್ವೈತ ಸಿದ್ಧಾಂತಪರವಾಗಿ ಅಮೋಘವಾದ ಭಾಷ್ಯಾದಿಗಳನ್ನು ರಚಿಸಿದುದು.



ಪವಿತ್ರವಾದ ನರ್ಮದಾ ತೀರವನ್ನು ಬಿಟ್ಟು ಶ್ರೀ ಶಂಕರರು ಕೆಲವು ದಿವಸ ಪ್ರಯಾಣವನ್ನು ಮಾಡಿ ಶ್ರೀ ಕಾಶಿಯನ್ನು ಸೇರಿದರು. ನಿತ್ಯ ಗಂಗಾ ಸ್ನಾನ ಶ್ರೀ ವಿಶಾಲಾಕ್ಷಿ, ಶ್ರೀ ಅನ್ನಪೂರ್ಣೇಶ್ವರೀ ಮತ್ತು ಶ್ರೀ ಕಾಶಿ ವಿಶ್ವನಾಥನ ದರ್ಶನ, ಪೂಜೆ ಸ್ತುತಿ ಮತ್ತು ಧ್ಯಾನದಲ್ಲಿ ಮಗ್ನರಾಗುತ್ತಾ ಆನಂದಿಸಿದರು. ತಾನೊಬ್ಬ ಬ್ರಾಹ್ಮ

ಸನ್ಯಾಸಿಯೆಂಬ ಭಾವನೆ ಅವರಲ್ಲಿತ್ತು. ವಂದು ದಿವಸ ಶ್ರೀ ಶಂಕರರು ಪ್ರಾಥಃಕಾಲಕ್ಕೆ ಮುಂಚಿತವಾಗಿಯೇ ಗಂಗಾಸ್ನಾನ ಮತ್ತು ಪ್ರಾಥರ್ ಅಹ್ನಿಕಾದಿಗಳನ್ನು ಮುಗಿಸಿಕೊಂಡು ಶ್ರೀ ವಿಶ್ವನಾಥನ ದರ್ಶನಕ್ಕಾಗಿ ಮಡಿಯಿಂದ ಶಿವಧ್ಯಾನದಿಂದ ಕಮಂಡಲೋದಕದೊಂದಿಗೆ ವೇದಮಂತ್ರವನ್ನುಚ್ಚರಿಸುತ್ತಾ ರಸ್ತೆಯಲ್ಲಿ ಬರುತ್ತಿದ್ದರು. ಅದೇ ಸಮಯದಲ್ಲಿ ಶ್ರೀ ಶಂಕರರ ಮನಸ್ಸಿನ ಕಳಂಕವನ್ನು ನೀಗಿಸಲು ಸರ್ವೇಶ್ವರನಾದ ಶ್ರೀ ವಿಶ್ವನಾಥನು ಸಂಕಲ್ಪ ಮಾತ್ರೇಣ ಚಂಡಾಲ ರೂಪವನ್ನು ಧರಿಸಿ, ಶ್ರೀ ಶಂಕರರ ಸಮೀಪಕ್ಕೆ ಬರುವುದನ್ನು, ಕಂಡ ಆಚಾರ್ಯರು, ಸರಕ್ಕನೆ ಹಿಂದಿಟ್ಟ ಹೆಜ್ಜೆಯೊಂದಿಗೆ, ಚಂಡಾಲನನ್ನು ದೂರದಿಂದಲೇ " ಗಚ್ಛ ಗಚ್ಛ " ಯೆಂದರು. ಆಗ ಆತ ಸ್ವಾಮಿ, ತಾವು ದೇಹವನ್ನು ನೋಡಿ ದೂರ ಸರಿ ಯೆಂದಿರಾ ಅಥವಾ ದೇಹಿಯನ್ನುದ್ದೇಶಿಸಿ " ಗ್ಛಚ ಗಚ್ಛ " ಎಂದಿರಾ ? ಎಂದು ಪ್ರಶ್ನಿಸಿದನು. ನಿಮ್ಮ ಮತ್ತೂ ನನ್ನ ದೇಹಗಳೆರಡೂ ಪಾಂಚಭೌತಿಕ ಸೃಷ್ಠಿಗೆ ವೊಳಪಟ್ಟಿರುವುದರಿಂದ ವಸ್ತುತಃ ಈ ಎರಡೂ ದೇಹಗಳು ಸಮಾನವೆನಿಸಿವೆ. ಆದ್ದರಿಂದ ದೇಹದೃಷ್ಟ್ಯಾ ಉಚ್ಚ ನೀಚ ಭಾವನೆಗಳಿಗೆಡೆಯಿಲ್ಲವಷ್ಟೆ. ಆತ್ಮನನ್ನುದ್ದೇಶಿಸಿ ಅಂದದ್ದಾದರೆ, ಆತ್ಮ, ಸ್ವಗತ ವಿಗತ ಭೇದರಹಿತಃ । ನಿತ್ಯ ಸತ್ಯ ಶುದ್ದ ಸಿದ್ಧಃ ಬುದ್ಧಃ ಬ್ರಹ್ಮ ಸ್ವರೂಪವುಳ್ಳದ್ದು. " ಮಮಾತ್ಮಾ ಸರ್ವ ಭೂತಾತ್ಮಾ " " ಆತ್ಮ ನ ಗಚ್ಚತಿ ನ ತಿಷ್ಠತಿ " ಇದರಿಂದಾಗಿ ನಮ್ಮಿಬ್ಬರ ಆತ್ಮವಂದೇ ಅಂದ ಬಳಿಕ, ಹೇ ಸನ್ಯಾಸಿ ! ಯಾವುದನ್ನು ಕಂಡು ದೂರ ಸರಿಯೆಂದೆ ? ಎಂಬುದಾಗಿ ಚಂಡಾಲನು ಪ್ರಶ್ನಿಸಿದ, ಸುಜ್ಞಾನಿಗಳೂ ತತ್ವಾನುಭವಿಗಳಾದ ಶ್ರೀ ಶಂಕರರು ತಮ್ಮೆದುರಿಗೆ ವೇಶಧಾರಿಯಾಗಿ ಉತ್ತರಿಸುತ್ತಿರುವ ಪ್ರಭು ಸಾಕ್ಷಾತ್ ಶ್ರೀ ಕಾಶಿ ವಿಶ್ವನಾಥ ಜ್ಯೋತಿರ್ಲಿಂಗದಿಂದ ಆವಿರ್ಭವಿಸಿದ ಶ್ರೀ ಜಗದ್ಗುರು ವಿಶ್ವಾರಾಧ್ಯನೂ ಶ್ರೀವಿಶ್ವನಾಥನೂ ಆದ ಸರ್ವಜ್ಞ ಮೂರ್ತಿಯೆಂದರಿತು ವೊಡನೆ ಶ್ರೀ ಶಂಕರರು ಶರಣಾಗತ ಭಾವದಿಂದ ಎಚ್ಚತ್ತು " ಮನೀಷ ಪಂಚಕ " ಶ್ಲೋಕಗಳಿಂದ ಸ್ತುತಿಸಿ, ಸ್ವಾಮಿಯಲ್ಲಿ ಕ್ಷಮಾಪಣೆಯನ್ನು ಬೇಡಿ, ಅಲ್ಲಿಂದತ್ತ ವಿಶ್ವ ಸಹೋದರತ್ವ ಮತ್ತು ವಿಶ್ವಬಂಧುತ್ವ ಭಾವವನ್ನು ಯಾವ ಜ್ಜೀವವೂ ಆಚರಿಸಿ ಅದನ್ನೇ ಜಗತ್ತಿಗೆ ಬೋಧಿಸಿದರು.

## ಶ್ರೀ ಶಂಕರಾಚಾರ್ಯರ ಮತ್ತು ಶ್ರೀ ಜಗತ್ಪತಿ ಶ್ರೀ ಕಾಶಿ ವಿಶ್ವನಾಥರ ಸಂವಾದ.

॥ ಕದಾಚಿ ಚ್ಛಂಕರಾಚಾರ್ಯ : ಕಾಶೀಂ ಪ್ರತಿ ಪುರೀಂ ಯಯೌ ।
ಚಂಡಾಲ ರೂಪಿಣಂ ದೃಷ್ಟ್ವಾ ಗಚ್ಚ ಗಚ್ಚೇತಿ ಚಾಬ್ರುವೀತ್ ॥

ಅನ್ನಮಯಾದನ್ನಮಯ ಮಥವಾ ಚೈತನ್ಯಮೇವ ಚೈತನ್ಯಾತ್ ।
ಯತಿವರ ದೂರೀ ಕರ್ತುಂ ವಾಂಛಸಿ ಕಿಂ ಬ್ರೂಹಿ ಗಚ್ಛ ಗಚ್ಛೇತಿ ॥
ಪ್ರತ್ಯಗ್ ವಸ್ತುನಿ ನಿಸ್ತರಂಗ ಸಹಜಾನಂದಾವ ಬೋಧಾಂಬುಧೌ ।
ವಿಪ್ರೋಽಯಂ ಶ್ವಪಚೋಽಯ ಮಿತ್ಯಪಿ ಮಹಾರ್ನ್ ಕೋಽಯಂ ವಿಭೇದ ಭ್ರಮ॥

॥ ಕಿಂ ಗಂಗಾಬುನಿ ಬಿಂಬಿತೇಂಬರ ಮಣೌ ಚಂಡಾಲ ವಾಟೀ ಪಯಃ ।
ಪೂರೇ ಚಾಂತರಮಸ್ತಿ ಕಾಂಚನ ಘಟೀ ಮೃತ್ಕುಂ ಭಯೋರ್ವಾಂಬರೇ ॥
ಜಾಗ್ರತ್ ಸ್ವಪ್ನ ಸುಷುಪ್ತಿಷು. ಸ್ಫುಟತರಾ, ಯಾ ಸಂವಿದುಜ್ಜೃಂಭತೇ ।
ಯಾ ಬ್ರಹ್ಮಾದಿ ಪಿಪೀಲಿಕಾಂತ ತನುಷು ಪ್ರೋತಾ ಜಗತ್ ಸಾಕ್ಷಿಣೀ ॥
ಸೈವಾಹಂ ನ ಚ ದೃಶ್ಯ ವಸ್ತ್ವಿತಿ ದೃಢ ಪ್ರಜ್ಞಾಪಿ ಯಸ್ಯಾಸ್ತಿ ಚೇತ್ ।
ಚಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾಮಮ ॥

ಆದಿ ಶ್ರೀ ಶಂಕರಾಚಾರ್ಯರು ಶ್ರೀ ಕಾಶಿ ಕ್ಷೇತ್ರದಲ್ಲಿ ಶಿವ ಸ್ಮರಣೆಯೊಂ ವಂದು ಬೀದಿಯಲ್ಲಿ ನಡೆಯುತ್ತಿದ್ದಾಗ, ಆಕಸ್ಮಿಕವಾಗಿ ಅವರನ್ನು ಸಮೀಪಿಸುವ ಹತ್ತಿರಕ್ಕೆ ಧೈರ್ಯವಾಗಿ ಬರುತ್ತಿರುವ ಚಂಡಾಲನನ್ನು ಕಂಡು. ಆಚಾರ್ಯರು, "ದೂ ಹೋಗು ದೂರ ಸರಿ" ಎಂದು ಹೇಳಿದರು. ಪ್ರಸಿದ್ಧವಾದ ಶ್ರೀ ಕಾಶೀ ಕ್ಷೇ ಅನಾದಿ ಕಾಲದಿಂದಲೂ ಅಖಿಲ ಭಾರತೀಯರ ಪುಣ್ಯಕ್ಷೇತ್ರ ಮತ್ತೂ ಮೋಕ್ಷದಾಯ ಭೂಕೈಲಾಸವೆನಿಸಿದೆ. ಶಂಕರರ ಅಸಹಕಾರದ ಬಿರುನುಡಿಗಳನ್ನು ಕೇಳಿದ ಚಂಡಾಲನ "ಸ್ವಾಮಿ ನನ್ನ ದೇಹ ಅಸ್ಪೃಶ್ಯವೆಂದೋ ಅಥವಾ ನನ್ನ ಆತ್ಮವು ತುಚ್ಛವೆಂದೂ ನೀವು ಏನನ್ನ ನೋಡಿ "ಗಚ್ಛ ಗಚ್ಛ" ಎಂದಿರಿಯೆಂದು ಪ್ರಶ್ನಿಸಿದನು. ಈವ ಶರೀರಗಳು ಅನ್ನಮಯವೆನಿಸಿ ಸಮಾನ ಲಕ್ಷಣಗಳಿಂದ ಕೂಡಿವೆ ಸರಿಯಷ್ಟೆ. ಹಾ ಲ್ಲದೆ ಆತ್ಮವನ್ನುದ್ದೇಶಿಸಿ ಹೇಳುವುದಾದರೆ. ಆತ್ಮವು ಚಿಚ್ಚೈತನ್ಯವಾದುದು. ಅಸ ಅಪೃಥಕ್ ಸಿದ್ಧವಾದ ಪರಾತ್ಪರ ವಸ್ತು. ಅಂತಪ್ಪ ತೇಜೋಮಯಾನಂದವೆನಿ ಅಖಂಡಾತ್ಮ ಸ್ವರೂಪವನ್ನು ವೊಮ್ಮೆ ಇದು ಬ್ರಾಹ್ಮಣವೆಂತಾಗಲಿ ಅಥವಾ ಚಂಡ ಸ್ವರೂಪದ್ದೆಂದು ಭಾವಿಸಿ ದೂರ ಹೋಗೆನ್ನಲು ಸಾಧ್ಯವಿಲ್ಲ. ಎಂತು ಬ್ರಾಹ್ ಮನೆಯ ಅಂಗಳದ ನೀರಿನಲ್ಲಿ ಪ್ರತಿಬಿಂಬಿಸುವ ಸೂರ್ಯನು ಅದೇ ಚಂಡಾಲನ ಗೃಹ ಮನೆಯ ಅಂಗಳದ ನೀರಿನಲ್ಲೂ ಪ್ರತಿಬಿಂಬಿಸುತ್ತಲಿರುವಾಗ, ಬೇರೆ ಬೇರೆಯಾ ಕಂಡರೂ, ವೊಬ್ಬನೇ ಆದ ಸೂರ್ಯನಿರುವನು. ಅದರಂತೆ ಬೇರೆ ಬೇರೆ ಅಂತಃ ಣಗಳಲ್ಲಿ ಕಾಣುವ ಬೇರೆ ಬೇರೆಯಾಗಿ ಕಾಣುವ ಆತ್ಮನೂಸಹ "ಏಕಮೇವಾ ದ್ವಿ ಯಂ ಬ್ರಹ್ಮ" ಎಂದಿರುವಾಗ ಸ್ವಾಮಿನ್, ನೀವು ಏನನ್ನು ನೋಡಿ ಅಸಹ್ಯಗೊ ರೆಂದು ಮತ್ತೊಮ್ಮೆ ಪ್ರಸನ್ನ ಭಾವದಿಂದ ಕೇಳಿದನು. ಚಂಡಾಲನ ಮುಖದಿ

ತತ್ವದ ವಿವರಣೆಯನ್ನು ಶ್ರವಣಮಾಡಿದ ಯತಿ ಪುಂಗವ ದಿಗ್ಭ್ರಮೆಗೊಂಡು ತಮ್ಮೆದು ರಿಗೆ ನಿಂತಿರುವ ಸ್ವರೂಪ ಸಾಕ್ಷಾತ್ ಶ್ರೀ ಕಾಶಿ ವಿಶ್ವನಾಥನೆಂದರಿತು, ತಮ್ಮ ತಪ್ಪನ್ನು ತಿದ್ದಿಕೊಂಡು ಶ್ರೀ ಸ್ವಾಮಿಯಲ್ಲಿ ಅಪರಾಧ ಕ್ಷಮಾಪಣಾ ಸ್ತೋತ್ರಗಳಿಂದ ಸ್ತುತಿಸು ತ್ತಿದ್ದಂತೆಯೇ, ತಮ್ಮೆದುರಿನಲ್ಲಿದ್ದ ರೂಪ ಅಂತರ್ಧಾನವಾಯಿತು. ಮನುಷ್ಯ ಎಷ್ಟೇ ಜ್ಞಾನಿಯಾದರೂ, ಸಂಸ್ಕಾರ ಜನ್ಯ ದೋಷಕ್ಕೆ ಗುರಿಯಾಗಬೇಕಲ್ಲವೇ ? ಗುಣೈಕ ಪಕ್ಷಪಾತಿಗಳಾದ ಆದಿ ಶ್ರೀ ಶಂಕರಾಚಾರ್ಯರು, ಚಂಡಾಲನಲ್ಲಿದ್ದರೂ ಒಳ್ಳೆಯದನ್ನು ಆತ್ಮೀಯವಾಗಿ ಸ್ವೀಕರಿಸಲು ಒಪ್ಪಿ, ಇದು ಒಂದು ಉಪದೇಶವೆಂದು ಭಾವಿಸಿ, ಚತುರ್ಮುಖ ಬ್ರಹ್ಮನೇ ಆದಿಯಾಗಿ ಇರುವೆ ವರೆಗಿಗೂ ಯಿರುವ ಚೈತನ್ಯ ಮಯ ಜೀವಾತ್ಮರಲ್ಲಿ ಭೇದವಿಲ್ಲವೆಂದರಿತು, ತಮ್ಮ ಪಾಲಿಗೆ ಆ ಚಂಡಾಲನಾಗಲಿ ಬ್ರಾಹ್ಮಣನಾಗಲಿ " ನಿಜ ತತ್ವವನ್ನು ಮನಗಂಡಿರುವಾತ, ತನಗೆ ಗುರು ವೆಂದು ಸ್ವೀಕರಿಸುವುದಾಗಿ " ದೃಢ ಭಾವವನ್ನು ಹೊಂದಿದರು.

ಶ್ರೀಮದಾಚಾರ್ಯ ಶಂಕರರು "ಜೀವೋ ಬ್ರಹ್ಮೈವ ನ ಪರಃ" ಎಂದು ಸಾರಿ ರುವರಾದರೂ, ಚಂಡಾಲನ ದೇಹದೊಳಗಿನ ಜೀವಾತ್ಮ ತಮ್ಮಿಂದ ಅಸ್ಪೃಶ್ಯನೆಂದು ದೂರೀಕರಿಸಲು ಹೇಗೆ ಸಾಧ್ಯ ಮತ್ತು ಶೂದ್ರರಿಗೆ ವೇದಾಧ್ಯಯನಾದಿಗಳಲ್ಲಿ ಅಧಿ ಕಾರವಿಲ್ಲವೆಂಬ ಅವರ ಸಿದ್ಧಾಂತ ತಾರತಮ್ಯ ಉಳ್ಳದ್ದಾಗಿದೆ.

ಶ್ರೀ ಮದಾಚಾರ್ಯ ಶಂಕರರು ಶ್ರೀ ಕಾಶಿಯ ತಮ್ಮ ಮಠದಲ್ಲಿ ಪ್ರಸ್ಥಾನ ತ್ರಯಗಳಿಗೆ ಅದ್ವೈತ ಸಿದ್ಧಾಂತಕ್ಕನುಗುಣವಾಗಿ ಭಾಷ್ಯ ರಚನೆಯಲ್ಲಿ ಆಸಕ್ತರಾಗಿರು ವಲ್ಲಿ, ಒಂದು ದಿನ ಪ್ರಾತಃಕಾಲ ತಮಿಳುನಾಡಿನ ಚೋಳ ದೇಶದ ಬ್ರಾಹ್ಮಣ ವಟು ವೊಬ್ಬ, ಆಚಾರ್ಯವರ್ಯರ ದಿವ್ಯ ಅಡಿದಾವರೆಗಳಲ್ಲೆರಗಿ, ಭಕ್ತಿಯಿಂದ " ಭೋಃ ಶ್ರೀ ಗುರುವೇ ! ನನ್ನನ್ನು ಕೃಪೆಯಿಂದ ನಿಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ ಆಶೀರ್ವದಿಸ ಬೇಕೆಂದು ಪ್ರಾರ್ಥಿಸಿದ. ಶ್ರೀಮದಾಚಾರ್ಯರು ಆ ಬ್ರಹ್ಮಚಾರಿಯ ಲಕ್ಷಣ ಗಳನ್ನು ಗುಣಾತಿಶಯಗಳನ್ನು ವಿದ್ಯೆಯನ್ನು ಕೆಲವುಕಾಲ ಶ್ರೀ ಕಾಶಿಯಲ್ಲಿ ಪರೀಕ್ಷಿಸಿ, ಅವನ ಇಂಗಿತವನ್ನೂ ಅರಿತು, ನಂತರ ಒಂದು ಶುಭ ಮುಹೂರ್ತದಲ್ಲಿ ಆ ಬ್ರಾಹ್ಮಣ ವಟುವಿಗೆ ವಿಧಿವತ್ತಾಗಿ ಸನ್ಯಾಸ ದೀಕ್ಷೆಯನ್ನಿತ್ತು " ಸನಂದನ " ಎಂಬ ಹೆಸರನ್ನಿಟ್ಟು ಶಿಷ್ಯನನ್ನಾಗಿ ಸ್ವೀಕರಿಸಿದರು. ಈ ಶಿಷ್ಯನೇ ತದನಂತರ ಶ್ರೀ ಶೃಂಗೇರಿಯಲ್ಲಿ ಶ್ರೀ ಗುರುಸೇವೆಯನ್ನು ಅನನ್ಯ ಭಕ್ತಿ ಭಾವದಿಂದ ಹಗಲಿರುಳು ಮಾಡುತ್ತಿದ್ದನು. ಒಂದು ದಿವಸ ಶಿವಪೂಜೆಗೆ ಪುಷ್ಪಾದಿಗಳನ್ನು ತರಲು ತುಂಗಾ ನದಿಯ ದಕ್ಷಿಣ ದಂಡೆಯಾಚೆ ಶ್ರೀ ನೃಸಿಂಹ ತಪೋ ವನದಲ್ಲಿರುವ, ವಿವಿಧ ಪುಷ್ಪ ಬಿಲ್ವಾದಿಗಳನ್ನು ತರಲು ಗುರುವಿ ನಾಜ್ಞೆಯಂತೆ ಹೋಗಿದ್ದ ಸಮಯವದು. ದೈವಲೀಲೆ ವಿಚಿತ್ರವಷ್ಟೆ. ಆಗ ತುಂಗಾನದಿ

ಯಲ್ಲಿ ದಿಢೀರೆಂದು ಅಲೆಗಳು ರಭಸದಿಂದ ಉಕ್ಕಿ ಪ್ರವಹಿಸಲಾರಂಭಿಸಿತು. ಇವನ್ನು ಕಂಡ ಶಂಕರರು ತಮ್ಮ ಶಿಷ್ಯನನ್ನು " ಸನಂದನಾ ಬೇಗ ಬಾರೆಂದು ಧ್ವನಿಗೈದರು ಗುರುಗಳ ಧ್ವನಿ ಕೇಳಿದೊಡನೆ ಸನಂದನನು ತಕ್ಷಣ ನಿರ್ಭೀತನಾಗಿ ಧುಮ್ಮಿಕ್ಕು ನದಿಯ ಆರ್ಭಟವನ್ನು ಗಮನಿಸದೆ ಶ್ರೀ ಗುರುಪಾದ ಸ್ಮರಣೆಯೊಂದಿಗೆ ಭೂಮಿ ಮೇಲೆ ನಡೆಯುವಂತೆ, ನೀರಿನ ಮೇಲೆ ಹೆಜ್ಜೆಯೂರಿ ಸರಸರನೆ ನಡೆದು ಉತ್ತರ ದಂಡೆಯನ್ನು ಸುಖವಾಗಿ ದಾಟಿ ಬಂದು ಶ್ರೀಶಂಕರಾಚಾರ್ಯರ ಪಾದಾರವಿಂದಗಳ ತಲೆಯೂರಿ ನಮಸ್ಕರಿಸಿದನು. ಶ್ರೀಮದಾಚಾರ್ಯರು ಪರಮಾಶ್ಚರ್ಯದಿ " ವತ್ಸ ನೀನು ಹೇಗೆ ಬಂದೆ, " ಎಂದು ಪ್ರಶ್ನಿಸಲು. ಗುರುವೇ ನಿಮ್ಮ ಶ್ರೀಪಾ ಭಕ್ತಿಯಿಂದ ಬಂದೆ ಎಂದನು. ಅಷ್ಟೇ ಅವನಿಗೆ ಗೊತ್ತು. ಬೇರೆ ಯಾವುದನ್ನು ಸನಂ ನನು ಗಮನಿಸಲಿಲ್ಲ. ಇವನ ಶ್ರೀ ಗುರು ಭಕ್ತಿಯ ಪ್ರಭಾವದಿಂದ, ನದಿಯಮೇ ನಡೆಯುವಾಗ ಹೆಜ್ಜೆ ಹೆಜ್ಜೆಗೂ ಕಮಲಗಳು ಆಸರೆಯನ್ನು ನೀಡಿದವು ಇದನ್ನ ಶ್ರೀ ಶಂಕರರು ತಮ್ಮ ಶಿಷ್ಯನನ್ನು ಅಂದಿನಿಂದ ಮಮತೆಯಿಂದ " ಪದ್ಮಪಾದ' ಎಂದು ಹೆಸರಿಟ್ಟರು ಗುರುಭಕ್ತಿ ಏನನ್ನು ತಾನೇ ಮಾಡಲಾರದು, ಆದ್ದರಿಂದ ನಾ ಸದಾ ಗುರುಭಕ್ತಿ ಪರಾಯಣರಾಗಬೇಕು. " **ಗುರು ಭಕ್ತಿ ಸದಾ ಕುರ್ಯಾತ್"** ಶ್ರೀ ಭಗವತ್ಪಾದ ಜಗ ರೇಣುಕಾಚಾರ್ಯರು **|| ಗುರೋಃ ಕಟಾಕ್ಷ ಸಂಸಿದ್ಧೀ ಕೋವಾ ಲೋಕೇಷು ದುರ್ಲಭಃ ||** ಎಂದಿರುವರು. ಈ ಪವಾಡ ಶ್ರೀ ಶಂಕರ ಶ್ರೀ ಕಾಶಿಯಿಂದ ಹಿಂದಿರುಗಿದ ನಾಲ್ಕಾರು ವರ್ಷಗಳ ನಂತರ ಜರುಗಿದ ವಿಷಯ ಇದರಿಂದಾಗಿ ಶ್ರೀ ಕಾಶಿಯಲ್ಲಿ ಶಂಕರರಿಗೆ ಪ್ರಥಮ ಶಿಷ್ಯನಾದ ಸನಂದನನೇ ನಂ ಪದ್ಮ ಪಾದಾಚಾರ್ಯನೆಂಬ ಹೆಸರನ್ನು ಪಡೆದ ಮಹಾತ್ಮ.

ಶಿವಾಂಶ ಸಂಭೂತರಾದ ಹಾಗೂ ಶ್ರೀ ಆದಿ ಅಗಸ್ತ್ಯ ಮಹರ್ಷಿಗಳ ದಿ ಹಸ್ತಮಸ್ತಕ ಕಟಾಕ್ಷಕ್ಕೆ ಪಾತ್ರರಾದ, ಶ್ರೀ ಶಂಕರಾಚಾರ್ಯರು, ಲೀಲಾಜಾಲವಾ ಬ್ರಹ್ಮಸೂತ್ರಗಳಿಗೂ, ಉಪನಿಷತ್ತುಗಳಿಗೂ, ಭಗವದ್ಗೀತೆಗೂ ಗಂಭೀರವಾದ ಭಾಷ್ಯ ದಿಗಳನ್ನು ರಚಿಸಿ, ಭುವಿಯಲ್ಲಿ ಅದ್ವೈತ ಮತ ಸ್ಥಾಪನಾಚಾರ್ಯರೆಂಬ ಖ್ಯಾ ಯನ್ನು ಪಡೆದರು.

ಉಪನಿಷದ್ ಮಂತ್ರಗಳು ಅಳವರಿಯಲಾರದ ಸಮುದ್ರದಂತೆ, ಬಹ್ವ ಗರ್ಭಿತವಾಗಿ ಕಂಗೊಳಿಸುತ್ತಲಿವೆ. ಯಾರ ಯಾರ ಸುಜ್ಞಾನ ಸುಕೃತದ ಸಂಸ್ಕಾ ಎಷ್ಟೆಷ್ಟು ವಿಜೃಂಭ ಭಾವದಿಂದ ಬಲಿತಿದೆಯೋ ಅಷ್ಟಷ್ಟು ಉನ್ನತದ ಜ್ಞಾನ ಶಿ ವನ್ನು ಮುಟ್ಟಿ ಅರ್ಥೈಸಬಹುದು ಅಲ್ಲಿಗೂ ಕೊನೆಯನ್ನು ವಂತಿಲ್ಲ. ಯಾಕೆಂದರೆ ಪರ ಬ್ರಹ್ಮದ ತತ್ವಗಾಂಭೀರ್ಯ " ಅವ್ಯತಿಷ್ಠದ್ದಶಾಂಗುಲಂ " ಎಂಬ ವೇದವಾಣಿಯ

ಮುಡಿ ಅಡಿಗಳನ್ನು ಮಹಾವಿಷ್ಣು ಬ್ರಹ್ಮಾದಿಗಳಿಗೂ ಅರಿಯಲು ಅಸಖ್ಯವಾಯಿತೆಂದ ಬಳಿಕ, ಕರ್ಮಾಧೀನರಾದ ಮಾನವರು ಎಷ್ಟು ಮಾತ್ರ ಆ ಪರ ತತ್ವವನ್ನು ಅರಿಯಲು ಸಾಧ್ಯ. ಇವರಿಂದಾಗಿ ತ್ರಿ ಮತಾಚಾರ್ಯರಾದ ಆದಿ ಶ್ರೀ ಶಂಕರಾಚಾರ್ಯ, ಶ್ರೀ ರಾಮಾನುಜಾಚಾರ್ಯ ಶ್ರೀಮದ್ ಮಧ್ವಾಚಾರ್ಯ ಇತ್ಯಾದಿ ಅನೇಕ ಉಪನಿಷದ್ ಭಾಷ್ಯಕಾರರು ಮಂದೇ ಮಂತ್ರಕ್ಕೆ ಅವರವರ ಸ್ವಾನುಭೂತಿಗೆ ಗೋಚರವಾದಂತೆ ಭಿನ್ನಾಭಿಪ್ರಾಯಗಳೊಂದಿಗೆ ಭಾ ಷ್ಯ ಗ ಳ ನ್ನು ರಚಿಸಿರುವರು. ಸರ್ವ ಶೃತಿ ಸಮನ್ವಯಾರ್ಥಗಳನ್ನು ತ್ರಿಮತಾಚಾರ್ಯರುಗಳು ಮಾಡಿದಂತೆ ಕಂಡುಬಂದಿಲ್ಲ.

ಕರ್ಮಾತೀತರೂ, ಪ್ರಕೃತಿ ತತ್ವಕ್ಕತೀತರೂ, ಅಯೋನಿಜರೂ, "ಇಚ್ಛಾ ಮಾತ್ರ ಪ್ರಭೋಃ ಸೃಷ್ಟಿಃ" ಎಂಬ ದೈವೀ ಶಕ್ತಿ ಸಂಪನ್ನರೂ, ಸ ರ್ವ ತ ಂ ತ್ರ ಸ್ವತಂತ್ರರೂ, ಹಾಗೂ ಶಿವಲಿಂಗೋದ್ಭವ ಮಂಗಳ ಮೂರ್ತಿಗಳೂ ಮತ್ತೂ ಶಿವ ಪಂಚಾಕ್ಷರೀ ಮಂತ್ರಮಯ ದಿವ್ಯ ದೇಹಧಾರಿಗಳೂ, **ಶ್ರೀ ದಕ್ಷಿಣಾಮೂರ್ತಿ ಸದೃಶರಾದ ಶ್ರೀ ಆದಿ ಜಗದ್ಗುರು ರೇಣುಕಾದಿ ಪಂಚಾಚಾರ್ಯರು**– ಸರ್ವ ಶೃತಿಗಳಿಗೂ, ನಿಗಮಾಗಮಗಳಿಗೂ, ಪ್ರಸ್ಥಾನತ್ರಯಗಳಿಗೂ, ಶಿವ ಸೂತ್ರಗಳಿಗೂ, ಸರ್ವ ಶೃತಿ ಸಮನ್ವಯ ಹಾಗೂ ಸರ್ವಧರ್ಮ ಸಮನ್ವಯಾರ್ಥಗಳನ್ನೊಳಗೊಂಡಂತೆ ದ್ವಾಪರಯುಗದಾದಿಯಲ್ಲೇ, ಶಿ ವಾ ದ್ವೈ ತ ಸಿದ್ಧಾಂತಕ್ಕನುಗುಣವಾಗಿ, ಬಹ್ವರ್ಥ ಗರ್ಭಿತವಾಗಿ ಹಾಗೂ ಸಮೀಚೀನವಾದ ಅರ್ಥ ಗಾಂಭೀರ್ಯದಿಂದ, ಪದಲಾಲಿತ್ಯದೊಂದಿಗೆ, ಉಪಮಾನ ಉಪಮೇಯಗಳೊಂದಿಗೆ ಸಮಸ್ತ ಮಾನವ ಧರ್ಮೋದ್ಧಾರಾರ್ಥ ವಿಶಾಲಾರ್ಥ ಗರ್ಭಿತವಾಗಿ ಭಾಷ್ಯಗಳನ್ನು ರಚಿಸಿ ಧರ್ಮೋದ್ಧಾರ ಕಾರ್ಯವನ್ನೆಸಗಿರುವರೆಂದು ಅನಂತ ಶೃತಿಗಳು ಭೋರ್ಗರೆಯುತ್ತಿವೆ. ಶ್ರೀ ಜ॥ ಪಂಚಾಚಾರ್ಯರನ್ನು ಯುಗಾಂತರಗಳಿಂದಲೂ, ನಿಗಮಾಗಮಗಳು, "ಸದ್ಯೋ ಜಾತಾದಯಃ" ಎಂತಲೂ, "ಶೈವಾಗಮಾಂಬುಜ ಭಾಸ್ಕರರೆಂತಲೂ" ಪರಶಿವನ ಪಂಚ ವ್ಯೂಹ ಮೂರ್ತಿಗಳೆಂತಲೂ, ಮತ್ತೂ ಸ ವೇ ತ್ಯಾ ದಿ ಶೃತಿಗಳಲ್ಲಿ "ಸ ಏಷ ಪಂಚಧಾ" ಎಂತಲೂ ನಿರಂತರ ಸ್ತುತ್ಯರಿರುವರು– ಇವರ ಹೆಸರುಗಳಲ್ಲಿ "ರೇಣುಕ ಭಾಷ್ಯ, ದಾರುಕ ಭಾಷ್ಯ, ಏಕೋ ರಾಮಾರಾಧ್ಯರ ಭಾಷ್ಯ, ಪಂಡಿತಾರಾಧ್ಯರ ಭಾಷ್ಯ ಮತ್ತು ಶ್ರೀ ಜ॥ ಕಾಶಿ ವಿಶ್ವಾರಾಧ್ಯ ಭಾಷ್ಯಾದಿಗಳು ಪ್ರಾಚೀನ ಕಾಲದಲ್ಲಿ ಲೋಕ ಪೂಜ್ಯವೆನಿಸಿ ಪ್ರಮುಖವೆನಿಸಿದ್ದವು. ಈ ಬಗೆಗೆ ಕ್ರಿ. ಶ. 9ನೆ ಶತಮಾನದಲ್ಲಿದ್ದ ಶ್ರೀ ನೀಲಕಂಠ ಶಿವಾಚಾರ್ಯರು ತಮ್ಮ ಶ್ರೀ ನೀಲಕಂಠ ಭಾಷ್ಯದಲ್ಲೂ, 11ನೇ ಶತಮಾನದಲ್ಲಿದ್ದ ಶ್ರೀ ಶೈಲ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜ॥ ಶ್ರೀಪತಿ ಪಂಡಿತರು ತಮ್ಮ "ಶ್ರೀ ಕರಭಾಷ್ಯದಲ್ಲೂ, ಮತ್ತೂ ಕೆಲವು ಪರಮ ತಾ ಚಾ ರ್ಯ ರೂ, ಪಂಡಿತರು ಸಹ ಶ್ರೀ ಜ॥ ರೇಣುಕಾದಿ ಪಂಚಾಚಾರ್ಯರು ರಚಿಸಿದ ಮೇಲುಕ್ತವಾದ ಭಾಷ್ಯಗಳನ್ನು ತಾವು ಆಧಾರವಾಗಿ ಒಪ್ಪಿರುವಂತೆ ಪ್ರಶಂಸಿಸಿರುತ್ತಾರೆ.

ಛಾಂದೋಗ್ಯೋಪನಿಷತ್ತಿನಲ್ಲಿ ॥ ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂ ಬ್ರಹ್ಮ ॥ ಎಂದಿರುವುದು. ಅಂದರೆ ಮೊಟ್ಟ ಮೊದಲು ಜಗದ್ ಸೃಷ್ಟಿಗೆ ಮೊದಲು ಇದ್ದುದು " ಸ ತ್ " ಎಂಬ ಪರತತ್ವವಂದೇಯೆಂದೂ ಅದೇ ಅದ್ವಿತೀಯ ವಾದ ಪರಶಿವ ಬ್ರಹ್ಮ. ಇದರಿಂದಲೇ ಅಖಂಡ ಚರಾ ಬ್ರಹ್ಮಾಂಡಗಳೂ, ಲೀಲಾಜಾಲವಾಗಿ, ಕ್ಷಣಾರ್ಧದಲ್ಲಿ ಪರತತ್ವದ ಸಂಕಲ್ಪದಿ ಪೊಮ್ಮಿಂದೊಮ್ಮೆಲೇ ಸೃಷ್ಟಿಯಾಯಿತೆಂದು ಮೇಲ್ಕಂಡ ಮಂತ್ರಾರ್ಥವಿರುತ್ತ ಇದು ಹೀಗಿರುವಾಗ, ತೈತ್ತಿರಿಯೋಪನಿಷತ್ತಿನ ಮಂತ್ರ, " ಅಸದ್ವಾ ಇದಮ ಆಸೀತ್ । ತತೋವೈಸದ ಜಾಯತ " ಅಂದರೆ ಜಗತ್ಸೃಷ್ಟಿಗೆ ಮೊದಲಿದ್ದು " ಅಸತ್ ". ಇದರಿಂದ ಸತ್ತೆಂಬ ಪರವಸ್ತು ಉದ್ಭವಿಸಿತೆಂದು, ತೈತ್ತಿರೀಯೋಪ ಷತ್ ಬೋಧಿಸುತ್ತಲಿದೆ–ಮೇಲುಕ್ತವಾದ ಮಂತ್ರಾರ್ಥಗಳು ವಿರೋದಾರ್ಥವ ಕೊಡುತ್ತಲಿವೆಯೆಂದು ಭಾಸವಾಗುತ್ತೆ. ಮೇಲ್ಮುಖಕ್ಕೆ ಹೀಗೆ ಕಂಡರೂ, ಅ ರಾರ್ಥವನ್ನು ಸಮನ್ವಯ ಭಾವದಿಂದ ವೀಕ್ಷಿಸಿದಾಗ ಭಿನ್ನಾಭಿಪ್ರಾಯಕ್ಕೆಡೆಯಿ ಉಪನಿಷದ್ ಮಂತ್ರಗಳಿಗೆ ಪ್ರಸ್ಥಾನತ್ರಯಗಳಿಗೆ ಭಾಷ್ಯರಚನೆ ಸಾಮಾನ್ಯವಾದ ಕ ವಲ್ಲ. ಈ ಕಾರಣದಿಂದ ತ್ರಿಮತಾಚಾರ್ಯರು ಶೃತಿ ಮಂತ್ರಗಳಿಂದ ತಮ್ಮ ಸಿದ್ಧಾ ತಕ್ಕನುಗುಣವಾದ ಮಂತ್ರ ಭಾಗಗಳನ್ನು ಏಕಪಕ್ಷೀಯವಾಗಿ ಆರಿಸಿ, ಸ್ವಾನುಭ ಗನುಗುಣವಾಗಿ ಅವರವರು ಭಿನ್ನ ಭಿನ್ನವಾದ ಭಾಷ್ಯಗಳನ್ನು ರಚಿಸಿ, ತಮ್ಮ ಸಿದ್ಧಾ ವನ್ನು ಜಗತ್ತಿನಲ್ಲಿ ಸ್ಥಾಪಿಸಿರುವರು. ಇಂದಿಗೂ ತ್ರಿಮತಾಚಾರ್ಯರ ಸಿದ್ಧಾಂತಗಳ ಸಮರಸವಿಲ್ಲದೆ ಭಿನ್ನಾಚಾರದಿಂದ ಮುಂದುವರಿಯುತ್ತಲಿವೆ. ಉಪನಿಷದಾದಿಗಳ ಸಮನ್ವಯಾರ್ಥ ಬೋಧಕ ಮಂತ್ರಗಳೂ ಇವೆ.

ಶಿವಾದ್ವೈತ ಸಿದ್ಧಾಂತ ಪ್ರತಿಪಾದಕರಾದ ಶ್ರೀ ಆದಿ ಜ॥ ರೇಣುಕಾದಿ ಪ ಚಾರ್ಯರು ಜಗದಾದಿಯಲ್ಲೇ ಶಿವೋಕ್ತಿಯಂತೆ ವೇದ, ವೇದಾಂತ, ಸಿದ್ಧಾಂತಗ ಸಮ್ಮತವಾದ ॥ ಸರ್ವೇಷಾಂ ಹಿತಕಾರಕಂ ॥ ಎಂಬಂತೆ ಸಮಸ್ತ ದೇವ ದಾನವ ಮ ವರಿಗೆ ಅನ್ವಯಿಸುವಂತ, ಸರ್ವಧರ್ಮ ಸರ್ವ ಶೃತಿಗಳಿಗೆ ಸಮನ್ವಯಾರ್ಥ ಗ ವಾದ ಭಾಷ್ಯಾದಿಗಳನ್ನೂ ಹಾಗೂ ವ್ಯಾ ಖ್ಯಾ ನ ಗ ಳ ನ್ನೂ ವಿಪುಲವಾಗಿ ರಚ ಬೋಧಿಸಿ ಜಗತ್ತಿನಲ್ಲಿ ಯುಗಾರಂಭದಲ್ಲಿಯೇ ಸ್ವಚ್ಚಂದವಾಗಿ ಸ್ಥಾಪಿಸಿರುವರು. ಶಿ ದ್ವೈತ ಸಿದ್ಧಾಂತದಲ್ಲಿ ಪೂಜ್ಯ ಪೂಜಕ ಭಾವವೆಂಬ ದ್ವೈತಾಚರಣೆಯಿಂದ ಆರ ವಾದ ಶಿವೋಪಾಸನೆ, ಕ್ರಮೇಣ ಮುಂದುವರಿದು, ವಿಶಿಷ್ಟಾದ್ವೈತದ ತಿರು ಅಂಗಿ ಅಂಗ ಭಾವದಿಂದ ಸಾರೂಪ್ಯ, ಸಾಮೀಪ್ಯದವರವಿಗೂ ವಿಸ್ತರಿಸಿ ಪರಮಾತ್ಮ ಮುಕ್ತ ಜೀವರು ವಂದುಗೂಡಿದಂತೆ ಅಪ್ಪಿಕೊಂಡಿರುವ ಸ್ಥಿತಿ, ಐಕ್ಯಕ್ಕೆ ಭಿನ್ನಪಟ್ಟ ವೀರಶೈವದಲ್ಲಿ ಎದ್ದು ಕಾಣುವ ಪ್ರಾಣಲಿಂಗಿಶರಣ ಸ್ಥಲಗಳಲ್ಲಿ ಕಂಡುಬಂದ

ಅಲ್ಲಿಂದ ಮುಂದುವರಿದ ಲಿಂಗೀಧರ್ಮ ಅದ್ವೈತದ ಸಾಯುಜ್ಯ ಸ್ಥಿತಿಯನ್ನು ಐಕ್ಯ ಸ್ಥಲದಲ್ಲಿ ಒಂದುಗೂಡಿಸಿ ಅಂಗನು ಲಿಂಗದೊಂದಿಗೆ "ಶಿಖಿಕರ್ಪೂರ ಯೋಗವತ್" ಲಿಂಗಾಂಗ ಸಂಗಿಯಾಗಿ, ಲಿಂಗ ಭೋಗೋಪಭೋಗಿಯಾಗಿ, ಸರ್ವಾಂಗ ಲಿಂಗಿಯಾಗಿ ಘನ ಲಿಂಗದಲ್ಲಿ, ನದಿಗಳು ಸಾಗರ ಸಂಗಮದಿಂದ ಸಾಗರವೆನಿಸುವಂತೆ, ಒಂದಾಗಿ ಲಿಂಗಾಂಗ ಸಮರಸ ಸಾಯುಜ್ಯ ಮೋಕ್ಷವನ್ನು ಹೊಂದುತ್ತಾನೆ. ಶಿವಾದ್ವೈತ ಸಿದ್ಧಾಂತದಲ್ಲಿ ತನ್ನ ನೈಜ ಧರ್ಮಕ್ಕೆ ಚ್ಯುತಿಯಿಲ್ಲದೆ ಸರ್ವಧರ್ಮಗಳ ಸಾರ ಸರ್ವಸ್ವ ವನ್ನು ಚಂದೋ ಬದ್ಧವಾಗಿ ಸಮನ್ವಯಗೊಳಿಸುವ ಬೃಹದ್ ಸಿದ್ಧಾಂತವನ್ನು ಭುವ ನಾಚಾರ್ಯರು ಜಗತ್ತಿನಲ್ಲಿ ಸ್ಥಾಪಿಸಿ, ಜನತೆಗೆ ಬೋಧಿಸಿ ಆಚರಿಸಿ, ಮಾರ್ಗದರ್ಶನ ನೀಡಿರುವರು. ಆಸೆಗಾಡಿಯೆನಿಸಿದ ಪರಮ ಶಿವಾದ್ವೈತ ಸಿದ್ಧಾಂತ ದ್ವೈತ, ವಿಶಿಷ್ಟಾ ದ್ವೈತ ಮತ್ತು ಅದ್ವೈತ ಸಿದ್ಧಾಂತಗಳನ್ನು ಸಮೀಚೀನವಾಗಿ ಸಮನ್ವಯಗೊಳಿಸಿ, ಸುಂದರವಾಗಿ ಒಂದು ಗೂಡಿಸುವ ಬೃಹದ್ ಹಾಗೂ ಬಂಧುರವಾದ ಸೇತುವೆ ಯೆನಿಸಿದೆ.

ತೈತ್ತಿರಿಯೋಪನಿಷದ್ ಮಂತ್ರದ " ಅಸದ್ವಾ " ಎಂಬ ಶಬ್ಧಕ್ಕೆ ಅಸತ್ತು, ಆಶಾಶ್ವಿತ, ಅಚಿತ್ ಎಂಬ ಅರ್ಥಯಿಲ್ಲಿ ಗೌಣವಿರುತ್ತೆ. ಅಸದ್ವಾ ಪದಕ್ಕೆ ಅಗೋ ಚರ, ಅದೃಶ್ಯ, ಅವ್ಯಕ್ತ ವೆಂಬ ಅರ್ಥ ಅನ್ವಯಿಸುತ್ತೆ. ಅಂದ ಬಳಿಕ ಅನಂತ ರೆಂಬೆ ಕೊಂಬೆಗಳಿಂದ ಕೂಡಿದ ಬೃಹದ್ ಆಲದ ವೃಕ್ಷ, ಸಣ್ಣ ಬೀಜದಲ್ಲಿ ಕಾಣದೆ ಅಡ ಗಿರುವ ಸೂಕ್ಷ್ಮ ಸ್ಥಿತಿಗೆ ಅಸದ್ವಾ ಎಂಬ ಪದದ ಅರ್ಥವಿರುತ್ತೆ. ಇಂತಪ್ಪ ಅವ್ಯಕ್ತ ಸನಾತನ ಘನತತ್ವದಿಂದ ಮೊದ ಮೊದಲು, " ಸದ. ಜಾಯತೆ " "ಸತ್" ಎಂಬ ಪಾವನವಾದ ತತ್ವ ಆವಿರ್ಭವಿಸಿತು. ಈ ಮಹಾತತ್ವದಿಂದ ಚರಾಚರಾತ್ಮಕ ವಾದಬ್ರಹ್ಮಾಂಡ ಕೋಟಿಗಳು ಉದ್ಭವಿಸಿದವೆಂದು, ಋಗ್ವೇದದ ದಶಮ ಮಂಡಲಾಂ ತರ್ಗತವಾದ ಪುರುಷ ಸೂಕ್ತ, ನಾಸದೀಯ ಸೂಕ್ತಗಳಲ್ಲಿ ಸ್ವಚ್ಛಂದವಾಗಿ ಸ್ಪಷ್ಟೀಕರಿಸ ಲಾಗಿದೆ.

॥ ಉದಿಸಿತಗ್ರದೋಳ್ । ಮನದೆ ಬೀಜದ ರೂಪದಿಂ ।
ಅದು ವರ್ಧಿಸಿದುದು ಸೃಷ್ಟಿಸಲೆಳಸುವ ಕಾಮಂ ॥
ಮೊದಲ ಬಾಂಧವ್ಯ ಮಿಂತು । ಸತ್ತಿಗಸತ್ತಿನೋಳ್ ।
ಹೃದಯದೋಳ್ ಯೋಗಿಗಳ್ ಚಿಂತಿಸಿ ತಿಳಿದರದನು ॥

( ನಾಸದೀಯ ಸೂಕ್ತ ಅ. 1 ಮಂತ್ರ 4 )

॥ ಶಿವಾಭಿಧಂ ಪರಂ ಬ್ರಹ್ಮ । ಜಗನ್ನಿರ್ಮಾತುಮಿಚ್ಛಯಾ । ಸ್ವರೂಪ
ಮಾದಧೇ ಕಿಂಚಿತ್ ಸುಖ ಸ್ಫೂರ್ತಿ ವಿಜೃಂಭಿತಂ ॥

( ಸಿ. ಶಿ. ಅ. 2 ಶ್ಲೋ. 8 )

ಶ್ರೀ ಶೃಂಗೇರಿ ಶಂಕರರಿಗೆ ದತ್ತವಾದ ಶ್ರೀ ಚಂದ್ರಮೌಳಿ ಲಿಂಗ

॥ ಏಕೋ ವಶೀ ಸರ್ವ ಭೂತಾಂತರಾತ್ಮ ।
ಏಕಂ ರೂಪಂ ಬಹುಧಾಯಃ ಕರೋತಿ ।
ತಮಾತ್ಮಸ್ಥಂ ಏನು ಪಶ್ಯಂತಿ ಧೀರಾಃ ।
ಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ ॥

॥ ಏಕಂ ಸತ್ ವಿಪ್ರಾ ಬಹುಧಾವದಂತಿ ॥



## ಅಧ್ಯಾಯ 7

### ಆದಿ ಶ್ರೀ ಶಂಕರಾಚಾರ್ಯರು ಶ್ರೀ ಕಾಶಿಯಲ್ಲಿ ಶ್ರೀ ವೇದವ್ಯಾಸಾ ಚಾರ್ಯರನ್ನು ಸಂದರ್ಶಿಸಿದುದು.

ಪರಮ ಪೂಜ್ಯ ಯತೀಂದ್ರರಾದ ಶ್ರೀ ಶಂಕರಾಚಾರ್ಯರು, ಶ್ರೀ ಕಾಶಿಯ ಆದಿ ಶ್ರೀ ಜ॥ ವಿಶ್ವಾರಾಧ್ಯರ ಆವಿರ್ಭಾವಕ್ಕೆ ಮೂಲ ಸ್ಥಾನವೆನಿಸಿದ ಶ್ರೀ ವಿಶ್ವನಾಥ ದಿವ್ಯ ಸನ್ನಿಧಿಯಲ್ಲಿ ಉಪನಿಷದರ್ಥಗಳನ್ನು ಅದ್ವೈತ ಪರವಾಗಿ ಗಂಭೀರವಾಗಿ ರ ವಾಗ ಮುಂಡಕೋಪನಿಷತ್ತಿನ ಅಧ್ಯಾಯ 3ರ, ಎರಡನೆ ಭಾಗ, ಮಂತ್ರ 10ರಲ್ಲಿ ಕ

॥ ಕ್ರಿಯಾವಂತಃ ಶ್ರೋತ್ರೀಯಾ ಬ್ರಹ್ಮನಿಷ್ಠಾಃ ।
ಸ್ವಯಂ ಜುಹ್ವತ ಏಕರ್ಷಿಂ ಶ್ರದ್ಧಯಂತಃ ॥
ತೇಷಾಮೇ ವೈತಾಂ ಬ್ರಹ್ಮ ವಿದ್ಯಾಂ ವದೇತ ।
ಶಿರೋ ವ್ರತಂ ವಿಧಿವದ್ ಯೈಸ್ತು ಚೀರ್ಣಂ ॥

ಈ ಮಂತ್ರಕ್ಕೆ ವೀರಶೈವಾಚಾರ್ಯ ವರೇಣ್ಯ ಶ್ರೀ ಆದಿ ಜ॥ ರೇಣುಕಾಚಾರ್ಯ ವ್ಯಾಖ್ಯಾನದಂತೆ :-

1. ಕ್ರಿಯಾವಂತ: = ಸ್ವಧರ್ಮಾಚಾರಣೆಯಾದ ಇ ಷ್ಟ ಲಿ ಂ ಗಾ ರಾ ಧ ಪರಾಯಣರೂ ;

2. ಶ್ರೋತ್ರೀಯ = ಬಹು ಶೃತರೂ, ಶಿವಾನುಭಾವಿಗಳೂ, ಸಂಪನ್ನ ವೇದ ವಿದ್ವರರೂ ;

3. ಬ್ರಹ್ಮನಿಷ್ಠಾಃ = ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿಗಳಿಂದ ಇಷ್ಟ ಲಿಂಗರೂಪಿ ಪರಶಿವನಲ್ಲಿ ಅರ್ಥಾತ್ ತನ್ನ ನಿಜೇಷ್ಟಲಿಂಗದಲ್ಲಿ ನಾಟಿದ ಮನೋಭಾವ ವುಳ್ಳ ಸಂಯಮಿಗಳೂ ;

4. ಸ್ವಯಂ ಜುಹ್ವತ ಏಕರ್ಷಿಂ = "ಏಕರ್ಷಿಂ" ಎಂದರೆ, ಜ್ಯೋತಿಷಾಂ ಜ್ಯೋತಿ ಪರಂಜ್ಯೋತಿ ಸ್ವರೂಪಿಯಾದ ಪರಶಿವನನ್ನು ಅವ್ಯಭಿಚಾರಿಣೀ ಭಕ್ತಿ ಭಾವ ದಿಂದ ; "ಸ್ವಯಂ ಜುಹ್ವತ" ಅಂದರೆ, ಸ್ವಾತ್ಮ ಪ್ರೀತಿ ಪುರಸ್ಸರ ಭಾವದಿಂದ, ನವ ವಿಧ ಭಕ್ತಿಗಳಿಂದ ಪೂಜಿಸಿ ಆರಾಧಿಸುವ, ಎಕರ್ಷಿಯೆಂಬ ಹೆಸರಿನಿಂದ ತಾನೇ ತಾನಾಗಿ ನಿರಂತರ ಬೆಳಗುವ, ಜ್ಯೋತಿರ್ಲಿಂಗ – ಆತ್ಮಜ್ಯೋತಿರ್ಲಿಂಗವನ್ನು ಸತತ ಉಪಾಸಿಸುವವನೂ ; ಆದ ಶರಣನೂ, ವೀರಮಾಹೇಶ್ವರನೂ, ಲಿಂಗಾಂಗಿ ಯಾದ ಅತ್ಯಾಶ್ರಮಿ, ಇವರುಗಳು ನಿಜವಾಗಿಯೂ ಶಿವನಿಗೆ ಜ್ಞಾನೀಚ, "ಅತೀವ ಮೇ ಪ್ರಿಯಃ" ಎಂಬ ಭಗವದುಕ್ತಿಯಂತೆ ಅತ್ಯಂತ ಪ್ರಿಯತಮರೆನಿಸಿದ ಶಿರೋವ್ರತರು ಎಂದರ್ಥ.

5. "ಯೈಸ್ತು ವಿಧಿವತ್ । ಶಿರೋ ವ್ರತಂ ಚೀರ್ಣಂ" ಎಂದರೆ ಯಾವ ಶರಣನು ತನ್ನ ಮಸ್ತಕದಲ್ಲಿ ಪರಂಜ್ಯೋತಿ ಸ್ವರೂಪವಾದ, ಜ್ಯೋತಿಷಾಂಜ್ಯೋತಿ ಯೆಂದು ಸದಾ ಬೆಳಗುತ್ತಿರುವ, ಲಿಂಗವು ಶ್ರೀ ಮಹಾ ಗುರುವಿನ ಅಮೃತ ಹಸ್ತ ದಿಂದ, ಸಚ್ಛಿಷ್ಯನ ಕರ ಪೀಠವನ್ನು ವಿಧಿವತ್ತಾಗಿ ಅಲಂಕರಿಸಿ, ಚುಳುಕಾಗಿದೆಯೋ ಮತ್ತು ಆತ್ಮ ಜ್ಯೋತಿಯಾದ ಆ ಲಿಂಗದಲ್ಲಿ ಯಾವಾತ ಪೂಜಾನಂತರ, ಉಜ್ವಲವಾದ ಅಂತಃಕರಣಗಳಿಂದ, ಧ್ಯಾನಾಸಕ್ತನಾಗಿರ್ಪನೋ, ಆತನೇ ನಿಜಕ್ಕೂ "ಶಿರೋವ್ರತ" ನೆನಿಸಿ ಸ್ತುತ್ಯನಿರುವನು.

6. "ತೇಷಾಮೇವ ಏತಾಂ । ಬ್ರಹ್ಮ ವಿದ್ಯಾ ವದೇತ" ಅಂದರೇ ಸರ್ವಾಂಗಲಿಂಗಿಯಾಗಿ, ಶಿವಲಿಂಗ ಭೋಗೋಪ ಭೋಗಿಯಾಗಿ, ತನ್ನೊಳಗಿನ ಏಕೋತ್ತರ ಶತಸ್ಥಲಗಳ ಅರಿವು ಅನುಭವ, ಸ್ವಾನುಭೂತಿಯಿಂದ, ಶ್ರೀ ಗುರು ಕಾರುಣ್ಯ ಸ್ಥಲದಲ್ಲಿ ಸುಭದ್ರವಾಗಿ ನೆಲೆಯೂರಿರುವ ಅತಿವರ್ಣಾಶ್ರಮಿ ಅಥವಾ ಲಿಂಗಾಂಗಿ ಶಿರೋವ್ರತನಿಗೆ, ಲಿಂಗಾಂಗಸಾಮರಸ್ಯ ರೂಪ ಬ್ರಹ್ಮ ವಿದ್ಯೆಯನ್ನು ಬೋಧಿಸಬೇಕು. ಇಂತಲ್ಲದವರಿಗೆ ಬ್ರಹ್ಮವಿದ್ಯೆಯನ್ನು ಬೋಧಿಸಬಾರದೆಂಬುದೇ, ಮೇಲ್ಕಂಡ ಉಪನಿಷದ್ ಮಂತ್ರದ ಶಾಸ್ತ್ರೀಯವಾದ ಅರ್ಥ. ಇದು ಭಗವತ್ಪಾದಾ ಚಾರ್ಯರವರಿಷ್ಮರಾದ ಶ್ರೀ ಆದಿ ಜ॥ ರೇಣುಕಾದಿ ಪಂಚಾಚಾರ್ಯರ ಬೋಧಾಮೃತದ ಸಾರಸರ್ವಸ್ವಃ.

ಆದಿ ಶ್ರೀ ಶಂಕರಾಚಾರ್ಯರು ಮೇಲುಕ್ತವಾದ ಮಂತ್ರವನ್ನು ಅರ್ಥೈಸುವಾ "ಶಿರೋವ್ರತಂ" ಎಂಬುದಕ್ಕೆ, ವ್ಯಾಖ್ಯಾನ ಮಾಡುತ್ತಾ, ತಮ್ಮ ಭಾಷ್ಯದ "ಶಿರೋವ್ರತಂ ಶಿರಸಿ ಅಗ್ನಿಧಾರಣಂ" ಎಂದು ಸ್ಪಷ್ಟವಾಗಿ ಉದಹರಿಸಿರುವರು ಅಂದರೆ ಯಾವ ಯತಿ, ಬ್ರಹ್ಮಚಾರಿ, ಸನ್ಯಾಸಿ ಅಥವಾ ಸಂಯಮಿ ವ್ರತ ಸಂಪನ್ನ ಅಗ್ನಿ (ಹೋಮಾಗ್ನಿ) ಯನ್ನು ಶಿರಸ್ಸಿನಲ್ಲಿ ಧಾರಣ ಮಾಡಿ, ಮಂಡಿಸಿ ವ್ರತಾ ಚರಣದಿಂದ ಧ್ಯಾನಾರೂಢನಾಗಿರ್ಪನೋ ಮತ್ತೂ "ಏಕರ್ಷಿಂ" ಎಂದರೆ ಏಕರ್ಷಿ ನಾಮಕ ಅಗ್ನಿಯಿಂದ ಹೋಮವನ್ನಾಚರಿಸುವ, ಶ್ರದ್ಧಾವಂತನಾದ ಅಧಿಕಾರಿ ಮಾತ್ರ, ಉಪನಿಷದ್ ಪ್ರೋಕ್ತ ಬ್ರಹ್ಮ ವಿದ್ಯೆಯನ್ನು ಬೋಧಿಸಬೇಕೆಂದು ಬೋಧಿ ರುವರು. "ಶಿರಸಿ ಅಗ್ನಿಧಾರಣ ಲಕ್ಷಣಂ" ಎಂಬುದಕ್ಕೆ ಹೋಮಾಗ್ನಿಯನ್ನು ವೇ ಮಂತ್ರೋಚ್ಚಾರಣಾ ಪೂರ್ವಕ ಮಣ್ಣು ಕುಂಡದಲ್ಲಿ ಅಥವಾ ಪಾತ್ರೆಯಲ್ಲಿ ತುಂಬಿ ಅದನ್ನು ಶಿರದಲ್ಲಿರಿಸಿಕೊಂಡು, ಪದ್ಮಾಸನಾಸೀನನಾಗಿ ಮಂಡಿಸಿ, ಗುರುಹರ ಸ್ಮರಣೆ ಗಳೊಂದಿಗೆ ಧ್ಯಾನಾರೂಢನಾಗಿ ವ್ರತಾಚರಣೆಯಿಂದ ಶೋಭಿಸುವ, ಸುಕೃತಿ ಶಿರೋವ್ರತನೆಂದೆನಿಸುವನೆಂದು ಹೇಳಿ, ಇಂತಪ್ಪ ಶಿರೋವ್ರತನಿಗೆ ಬ್ರಹ್ಮ ವಿದ್ಯೆಯನ್ನು ಬೋಧಿಸಬೇಕೆಂಬುದು, ಶ್ರೀ ಶಂಕರಾಚಾರ್ಯರ ಮೇಲುಕ್ತವಾದ ಮುಂಡಕೋಪನಿಷತ್ತಿನ ವ್ಯಾಖ್ಯಾನ.

ತತ್ವಜ್ಞಾನಿಗಳಾದ ಶ್ರೀ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ವಿಧಿವತ್ತಾಗಿ ಆಚರಿಸಿದ, ಹೋಮಕುಂಡದಿಂದ ಜ್ವಲಂತವಾಗಿ ಹೊರಹೊಮ್ಮಿದ, ಏಕರ್ಷಿಯೆಂಬ ಹೆಸರಿನ ಪವಿತ್ರವಾದ ಅಗ್ನಿಯನ್ನು ಶಿರಸ್ಸಿನಲ್ಲಿ ಧೈರ್ಯ ಚಿತ್ತ ಸ್ಥೈರ್ಯಗಳಿಂದ ಧರಿಸಿ, ಶಿವಚಿಂತನೆಯಲ್ಲಿ ಮುಳುಗಿರ್ಪ ಸಂಯಮಿಗೆ ಬ್ರಹ್ಮ ವಿದ್ಯೆಯನ್ನು ಬೋಧಿಸ ಬೇಕೆಂಬುದು, ಶ್ರೀ ಶಂಕರರ ಅಭಿಮತ.

ಆದಿ ಶ್ರೀ ಶಂಕರರು ಶ್ರೀಕಾಶಿಯಲ್ಲಿ ಸುಮಾರು ಹತ್ತು ವರ್ಷಗಳಕಾಲ ಅಖಿಲೋಪನಿಷತ್ತುಗಳಿಗೂ, ಭಗವದ್ಗೀತೆ, ಶ್ರೀ ವ್ಯಾಸೋಕ್ತ ಸೂತ್ರಗಳಿಗೂ, ಪ್ರಸ್ಥಾನತ್ರಯಗಳಿಗೂ, ಅದ್ವೈತಪರವಾಗಿ ತಮ್ಮದೇ ಆದ ಸಿದ್ಧಾಂತವನ್ನು ಗರ್ಭೀಕರಿಸಿಕೊಂಡಿರುವ, ಅದ್ವಿತೀಯವಾದ ಭಾಷ್ಯ ರಚನೆಗಳನ್ನೆಲ್ಲಾ ಗಂಭೀರವಾಗಿ ರಚಿಸಿ ಮುಗಿಸಿದರು. ಶ್ರೀ ಶಂಕರರು ಸುಮಾರು ತಮ್ಮ 5ನೇ ವಯಸ್ಸಿನಲ್ಲಿ ಮನೆ ಯನ್ನು ತ್ಯಜಿಸಿ, ಪರಿವ್ರಾಜಕರಾಗಿ ಹೊರಟರು. ಮಾರ್ಗ ಮಧ್ಯೆ ಶ್ರೀ ಗೋವಿಂದ ಭಗವತ್ಪಾದಾಚಾರ್ಯರ ಶ್ರೀಗುರುಕುಲದಲ್ಲಿ ಒಂದು ವರ್ಷಕಾಲ ಇದ್ದಿರಬಹುದು. ಅಲ್ಲಿಂದ ಹೊರಟು ಶ್ರೀ ಕಾಶಿಯಲ್ಲಿ ಹತ್ತು ವರ್ಷ ಭಾಷ್ಯಾದಿಗಳ ರಚನೆ ಮಾಡಿ ಮುಗಿಸುವ ಹೊತ್ತಿಗೆ ಶಂಕರರಿಗೆ ಸುಮಾರು 16 ವರ್ಷಗಳ ಆಯುಷ್ಯ ಪೂರ್ತಿ ಯಾಗುವ ಸಂಧಿ ಕಾಲವದು ಶಂಕರರಿಗೆ ವೃಷಭಾದ್ರಿಯ ಲಿಂಗರೂಪಿ, ಪರಶಿವನ

ಕೊಟ್ಟ ಆಯುಷ್ಯ ಕೇವಲ ಎಂಟು ವರ್ಷ ಮಾತ್ರ. ತಪೋಧನರಾದ ಭಗವಾನ್ ಶ್ರೀ ಆದಿ ಅಗಸ್ತ್ಯ ಮಹರ್ಷಿಗಳು, ಕಾಲಟಿಯಲ್ಲಿ ಶಂಕರ ಕುಮಾರನನ್ನು ಬೃಹದ್ ಅರಳಿ ವೃಕ್ಷದಡಿಯಲ್ಲಿ ಸಂಧಿಸಿ, ಹಿತೋಪದೇಶದೊಂದಿಗೆ ಹಸ್ತಮಸ್ತಕ ಸಂಯೋಗ ದೀಕ್ಷಾ ಪೂರ್ವಕ, ಕರುಣೆಯಿಂದ ಮತ್ತೆಂಟು ವರ್ಷ ಶಂಕರರಿಗೆ ಆಯುವೃದ್ಧಿಯಾಗುವಂತೆ ಹರಸಿದ್ದರು ಸರಿಯಷ್ಟೆ. ಆಗ ಹದಿನಾರನೇ ವಯಸ್ಸಿನ ಗಡಿಯಲ್ಲಿ ಶ್ರೀ ಕಾಶಿಯಲ್ಲಿದ್ದ ಶ್ರೀ ಶಂಕರ ಯತೀಂದ್ರರಿಗೆ, ಪಂದು ದಿವಸ ಸುಮುಹೂರ್ತದಲ್ಲಿ, ಶ್ರೀ ವೇದವ್ಯಾಸಾ ಚಾರ್ಯರು ಸಂದರ್ಶನವನ್ನಿತ್ತರು. ಈ ಸಮಯಕ್ಕೆ ಶ್ರೀ ಶಂಕರರಿಗೆ 15 ವರ್ಷ ಗಳು ತುಂಬಿ 16ನೇ ವರ್ಷದಲ್ಲಿ ಪಾದಾರ್ಪಣಗೈದಿದ್ದರೆಂದು ಭಾಸವಾಗುತ್ತೆ. " **ಜಿನವಿಜಯ** " ವೆಂಬ ಜೈನ ಧರ್ಮದ ಉದ್ದಾಮ ಗ್ರಂಥದಲ್ಲಿ, ಶ್ರೀ ಆದಿ ಶಂಕರರು ಪ್ರಯಾಗ ಕ್ಷೇತ್ರದಲ್ಲಿ ಸುಪ್ರಸಿದ್ಧ ಕರ್ಮ ಕಾಂಡಿ, ಶ್ರೀ ಕುಮಾರಿಲ ಭಟ್ಟರನ್ನು ಕ್ರಿ.ಪೂ. 494ರಲ್ಲಿ ಸಂಧಿಸಿದುದಾಗಿ ಉಲ್ಲೇಖವಿದೆ ಮತ್ತು ಕುಮಾರಿಲನು ಕ್ರಿ.ಪೂ. 557ರಲ್ಲಿ ಜನಿಸಿದುದಾಗಿ ಕಂಡುಬಂದಿದೆ. ಶ್ರೀ ಶಂಕರರು ಕುಮಾರಿಲ ಭಟ್ಟನನ್ನು ಸಂಧಿಸಿದಾಗ, ಶಂಕರರು 15 ವರ್ಷದವರಿದ್ದರೆಂದು ಜಿನವಿಜಯದಲ್ಲಿ ಅಧಿಕೃತವಾಗಿ ನಿರೂಪಿಸಲಾಗಿದೆ. ಅಂತೂ ಶ್ರೀ ಶಂಕರರು ಶ್ರೀಕಾಶಿ ಕ್ಷೇತ್ರದಲ್ಲಿ ಶ್ರೀ ವೇದವ್ಯಾಸರನ್ನು ಸಂದರ್ಶಿಸಿದಾಗ, ಶಂಕರರಿಗೆ ಸುಮಾರು ಹದಿನಾರು ವರ್ಷಗಳಿದ್ದಿರ ಬೇಕು. ಆಗ ಶಂಕರರು ಅತೀವ ಸಂತೋಷದಿಂದ ಶ್ರೀ ವೇದವ್ಯಾಸಾಚಾರ್ಯರನ್ನು ಭಕ್ತಿಯಿಂದ ನಮಸ್ಕರಿಸಿ, ಅಲ್ಲಿಯುವರವಿಗೆ ಶ್ರೀ ಆದಿ ಅಗಸ್ತ್ಯರ ಕೃಪಾಬಲದಿಂದ ತಾವು ರಚಿಸಿದ್ದ ಸಮಸ್ತ ಭಾಷ್ಯಾದಿ ದಿವ್ಯ ಕೃತಿಗಳನ್ನು ವ್ಯಾಸರಿಗೆ ತೋರಿಸಿದರು.

ಹರ್ಷಿತರಾದ ಶ್ರೀ ವ್ಯಾಸಾಚಾರ್ಯರು, ಶಂಕರರ ಕೃತಿರತ್ನಗಳನ್ನು ಕೂಲಂಕಶ ವಾಗಿ ಸಿಂಹಾವಲೋಕನ ಮಾಡಿ ತಮ್ಮ ಮೆಚ್ಚುಗೆಯುನ್ನು ವ್ಯಕ್ತಪಡಿಸಿ ; " ತರಳಾ! ನೀನೀಗ, ಭಾರತಾದ್ಯಂತ ಸಂಚರಿಸಿ, ಈ ಸಿದ್ಧಾಂತವನ್ನು ಭಾರತೀಯರಲ್ಲಿ ಪ್ರಸಾರ ಮಾಡಬೇಕೆಂದರುಹಿದರು. ಯಾಕೆಂದರೆ, ಭಾಷ್ಯಕರ್ತರೇ ಸ್ವಮುಖದಿಂದ ಜನ ಕೋಟಿಗೆ ವಿವರಿಸಿ ತತ್ವ ಬೋಧೆ ಮಾಡಿದರೆ, ಸತ್ಯಾಂಶ ಸ್ವಚ್ಛವಾಗಿ ಜನಮನದಲ್ಲಿ ಪ್ರಕಾಶಿತವಾಗಿ ಬೆಳಗಿ ಪ್ರಭಾವಾನ್ವಿತವಾಗುವುದೆಂಬ ತಮ್ಮ ಆಶಯವನ್ನು ಶಿಷ್ಯ ಶಂಕರನಿಗೆ ಮನಮುಟ್ಟುವಂತೆ ತಿಳಿಸಿದರು. ಆಗ ಶಂಕರರು ಖಿನ್ನವದನದಿಂದ, ಭೋ ! ಶ್ರೀ ಗುರುವರೇಣ್ಯ – ಪ್ರಚಾರ ಕೈ ಕೊಳ್ಳಲು ನನಗೆ ಆಯುಷ್ಯ ಮುಗಿದಿದೆ. ಶಿವನಿತ್ತ ಆಯುಷ್ಯ ನನಗೆ ಎಂಟು ವರ್ಷಗಳು ಮಾತ್ರ. ನನ್ನ ಭಾಗ್ಯವೋಯೆಂಬಂತೆ ಭಗವಾನ್ ಶ್ರೀ ಅಗಸ್ತ್ಯ ಮಹರ್ಷಿಗಳು ನನ್ನ ಬಾಲ್ಯದಲ್ಲಿ ಕಾಲಟಿಯಲ್ಲಿ ದರ್ಶನವಿತ್ತು, ಪ್ರಸ್ಥಾನತ್ರಯ ಇತ್ಯಾದಿಗಳಿಗೆ ಭಾಷ್ಯರಚನೆ ಮಾಡಲು ಕರುಣೆಯಿಂದ ನನ್ನನ್ನು ಆಶೀರ್ವದಿಸಿ, ಈ ಕಾರ್ಯ ಸುಗಮಗೊಳ್ಳಲು ತಮ್ಮ ಘನ ತಪ : ಪ್ರಭಾವದಿಂದ, ಮತ್ತೆಂಟು ವರ್ಷ ನನ್ನ ಆಯುಷ್ಯ ವೃದ್ಧಿಯಾಗುವಂತೆ ಹರಸಿದರು. ಸದ್ಯ ನಾನು

16 ವರ್ಷದವನು. ಈಗ ದೇಹ ತ್ಯಜಿಸುವ ಕಾಲ ಸನ್ನಿಹಿತವಾಗಿದೆ. ಆದ್ದರಿ ನನ್ನೀ ಕೃತಿಯನ್ನು ಪ್ರಚಾರ ಮಾಡಲು ತಮಗೆ ಆಯುಷ್ಯವಿಲ್ಲವೆಂದರು. ಆಗ ಶ್ರೀ ವೇದ ವ್ಯಾಸರು, ವತ್ಸಾ ! ಚಿಂತಿಸಬೇಡ. ನನ್ನ ಮಹಾಗುರು, ಶ್ರೀ ಹಿಮವ ದಾರ ಪರಮ ವೈರಾಗ್ಯ ಸಿಂಹಾಸನಾಧೀಶ್ವರ ಆದಿ ಜ॥ ಶ್ರೀ ಘಂಟಾಕರ್ಣಶಿವಾಚಾ ಶ್ರೀ ಪಾದ ಸ್ಮರಣೆಯೊಂದಿಗೆ, ನನ್ನ ತಪಸ್ಸನ್ನು ಧಾರೆಯೆರೆದು ನಿನಗೀಗ ಮತ್ತೆ ವರ್ಷಗಳ ಆಯುಷ್ಯ ವೃದ್ಧಿಯಾಗಲೆಂದು ಹರಸಿ ಆಶೀರ್ವದಿಸಿರುತ್ತೇನೆ. ಇದರಿಂ ನೀನು ಮುಂಬರುವ ಹದಿನಾರು ವರ್ಷ, ಭಾರತಾದ್ಯಂತ ಪಾದಚಾರಿಯಾಗಿ ಸಂ ನಿನ್ನ ಭಾಷ್ಯಾರ್ಥಗಳನ್ನು ಸ್ವಮುಖದಿಂದ, ಆಸ್ತಿಕ ವೃಂದಕ್ಕೆ ಬೋಧಿಸಿ ಪ್ರ ಮಾಡುವುದೆಂದರುಹಿ, ಶ್ರೀ ವ್ಯಾಸಾಚಾರ್ಯರು ಅಂತರ್ಧಾನರಾದರು. ದೈ ಲೀಲೆಯ ರಹಸ್ಯವನ್ನು ಕಂಡವರ್ಯ್ಯಾರು ? God's ways are alwa mysterious.

ಶ್ರೀ ಆದಿ ಶಂಕರಾಚಾರ್ಯರು ಶಿವಾನುಗ್ರಹದಿಂದ ಧರ್ಮೋದ್ಧರಣಾ ಭುವಿಯಲ್ಲಿ ಅವತರಿಸಿದ್ದರು. ನಂತರ ಶಿವನು ಶ್ರೀ ಆದಿ ಅಗಸ್ತ್ಯ ಮಹರ್ಷಿ ಮತ್ತು ಶ್ರೀ ವೈಶಂಪಾಯ ಮುನಿಯಾದ ಶ್ರೀ ವ್ಯಾಸರ ರೂಪದಲ್ಲಿ, ಶಂಕರ ದರ್ಶನದಿಂದ ಮಾರ್ಗದರ್ಶನ ನೀಡಿ, ಅನುಗ್ರಹಿಸಲು, ಶಂಕರರು ಮಹರ್ಷಿ ದರ್ಶನಾಶೀರ್ವಾದಗಳ ಪ್ರಭಾವದಿಂದ, ಶೃತಿಗೆ ಅದ್ವಿತೀಯವಾದ ಭಾಷ್ಯಾದಿಗಳ ವಿಪುಲವಾಗಿ ರಚಿಸಿ, ಸರ್ವತ್ರ 'ತೇಜಸ್ಸಂಪನ್ನರಾಗಿ, ಭರದಿಂದ ದೇಹಾಲಸ್ಯದ ಗಮನವೀಯದೆ, ಅಹೋರಾತ್ರಿ ಅದ್ವೈತ ಸಿದ್ಧಾಂತವನ್ನು ಯಶಸ್ವಿಯಾಗಿ ಪ್ರ ಮಾಡಿದರು. ಶ್ರೀ ಶಂಕರರೆಸಗಿದ ಕಾರ್ಯಕ್ಕೆ, ಶಿವನೇ ಭುವನಾಚಾರ್ಯವರ ಆದಿ ಶ್ರೀ ಜ॥ ರೇವಣಸಿದ್ಧ ಮಹಾಯೋಗಿ ಶಿವಾಚಾರ್ಯರ ರೂಪದಲ್ಲಿ ಶಂಕರ ದರ್ಶನವಿತ್ತು ಅನುಗ್ರಹಿಸಿರುವರು. " ಗುರುಸಾಕ್ಷಾತ್ಪರ ಬ್ರಹ್ಮ" ಎಂಬು ಸಂಸ್ಮರಣೀಯ.

ಶ್ರೀ ವೇದವ್ಯಾಸಾಚಾರ್ಯರು ಶ್ರೀ ಹಿಮವತ್ಕೇದಾರ ಪರಮ ವೈ ಸಿಂಹಾಸನಾಧೀಶ್ವರ ಶ್ರೀ ೧೦೦೮ ಆದಿ ಜಗದ್ಗುರು ಶ್ರೀ ಶ್ರೀ ಶ್ರೀ ಘಂಟಾಕ ಶಿವಾಚಾರ್ಯರ ಪ್ರಥಮ ಶಿಷ್ಯರಿರುವರು. ಶ್ರೀ ವ್ಯಾಸ ಕಾಶಿಯಲ್ಲಿ ಶ್ರೀ ವ್ಯಾಸೇ ಗುಡಿಯ ಮಹಾದ್ವಾರದಲ್ಲೇ ಶ್ರೀ ಗುರು ಘಂಟಾಕರ್ಣ ಶಿವಾಚಾರ್ಯರ ಸು ವಿಗ್ರಹ, ಪ್ರಾಚೀನ ಕಾಲದಿಂದಲೂ ವಿರಾಜಿತವಾಗಿದೆ. ಈ ವಿಗ್ರಹವನ್ನು " ವ್ಯಾಸಜೀಕ ಗುರುವೆಂದು" ಭಕ್ತರು ವಂದಿಸಿ ನಂತರ ಗುಡಿಯೊಳಗಿನ ಶ್ರೀ ವ್ಯಾಸೇಶ್ವ ದರ್ಶನ ಮಾಡುತ್ತಾರೆ. ವ್ಯಾಸರು ತಮ್ಮ ಶ್ರೀ ಮಹಾ ಗುರುವಿಗೆ ಅಗ್ರಸ್ಥ ವಿತ್ತಿರುವರು. ಶ್ರೀ ಘಂಟಾಕರ್ಣರನ್ನು ಶ್ರೀ ಜ॥ ಏಕೋರಾಮಾರಾಧ್ಯರ

ಕರೆಯುತ್ತಾರೆ. ಶ್ರೀ ಹಿಮವತ್ಕೇದಾರದಲ್ಲಿ ಇವರ ಮಹಾ ವೈರಾಗ್ಯ ಪೀಠ ಇಂದಿಗೂ, ಚಮೋಲಿ ಜಿಲ್ಲೆಯ ಶ್ರೀಓಖಿ ಮಠ ಎಂಬ ಹೆಸರಿನಲ್ಲಿ ದ್ವಾಪರ ಯುಗ ದಾದಿಯಿಂದ ಪ್ರಕಾಶಿತವಾಗಿದೆ. ಶ್ರೀ ಕೃಷ್ಣನು ದ್ವಾಪರಾಂತ್ಯದಲ್ಲಿ ಶ್ರೀ ಕೇದಾರಕ್ಕೆ ದಯಮಾಡಿಸಿದಾಗ ಶ್ರೀಓಖಿ ಮಠದ ಅಂದಿನ ಪರಮ ವೈರಾಗ್ಯಸಿಂಹಾಸ ನಪತಿಗಳಾಗಿದ್ದ ಆದಿ ಶ್ರೀ ಜ॥ ಉಪಮನ್ಯುಶಿವಾಚಾರ್ಯರನ್ನು ಸಂದರ್ಶಿಸಿ ಅವರ ದಿವ್ಯ ಕೃಪಾಶೀರ್ವಾದಗಳಿಗೆ ಪಾತ್ರನಾಗಿದ್ದಾನೆ, ಶ್ರೀ ವ್ಯಾಸಾಚಾರ್ಯರು ತಮ್ಮ ಶ್ರೀ ಮಹಾಸ್ಕಾಂದ ಪುರಾಣದ ಕಾಶಿ ಖಂಡದಲ್ಲಿ, ತಮ್ಮ ಆಚಾರ್ಯರ ಅವತಾರದ ಮಹಿಮೆಯನ್ನು ಭಕ್ತ್ಯಾ ಉಲ್ಲೇಖಿಸುತ್ತಾ.

॥ ದ್ರಾಕ್ಷಾ ರಾಮಾಖ್ಯ ಸುಕ್ಷೇತ್ರೇ । ರಾಮನಾಥಾಖ್ಯ ಲಿಂಗತಃ ।
ಏಕೋ ರಾಮಸ್ಯ ಜನನಂ । ಆವಾಸಸ್ತು ಹಿಮಾಲಯೇ ॥

ಎಂದು ಸ್ತುತಿಸಿರುವರು.

ತ್ರಿಮತಾಚಾರ್ಯರು, ಅಂದರೆ ಶ್ರೀ ಶಂಕರಾಚಾರ್ಯರೂ, ಶ್ರೀ ರಾಮಾನುಜಾ ಚಾರ್ಯರು ಮತ್ತೂ ಶ್ರೀ ಮನ್ಮಧ್ವಾಚಾರ್ಯರೂ, ಶ್ರೀ ವೇದವ್ಯಾಸಾಚಾರ್ಯರನ್ನು ತಮ್ಮ ಆದಿ ಗುರುವೆಂದು, ಅವರವರು ಭಕ್ತ್ಯಾ ಸ್ತುತಿಸಿರುವರು.



## ಅಧ್ಯಾಯ 8 ಪ್ರಥಮ ಭಾಗ

### ಶ್ರೀ ಶಂಕರರು ಕ್ರಿ.ಪೂ. 494ರಲ್ಲಿ ಪ್ರಯಾಗ ಕ್ಷೇತ್ರದಲ್ಲಿ ಶ್ರೀ ಕುಮಾರಿಲ ಭಟ್ಟರನ್ನೂ ಮಾಹಿಷ್ಮತಿ ನಗರದಲ್ಲಿ ಶ್ರೀ ಮಂಡನ ಮಿಶ್ರರನ್ನು ಸಂದರ್ಶಿಸಿದುದು.

॥ ಪ್ರಾತಃ ಸ್ಮರಾಮಿ ಭವಭೀತಿ ಹರಂ ಸುರೇಶಂ ।
ಗಂಗಾಧರಂ ವೃಷಭ ವಾಹನ ಮಂಬಿಕೇಶಂ ॥
ಖಟ್ವಾಂಗಶೂಲಿ ವರದಾ ಭಯ ಹಸ್ತ ಮೀಶಂ ।
ಸಂಸಾರ ರೋಗಹರ ಮೌಷಧ ಮದ್ವಿತೀಯಂ ॥

॥ ಪ್ರಾತರ್ನಮಾಮಿ ಗಿರೀಶಂ ಗಿರಿಜಾರ್ಧ ದೇಹಂ ।
ಸೃಷ್ಟಿಸ್ಥಿತಿ ಪ್ರಲಯಕಾರಣ ಮಾದಿ ದೇವಂ ॥
ವಿಶ್ವೇಶ್ವರಂ ವಿಜಿತ ವಿಶ್ವ ಮನೋಭಿ ರಾಮಂ ।
ಸಂಸಾರ ರೋಗ ಹರ ಮೌಷಧ ಮದ್ವಿತೀಯಂ ॥

ಶ್ರೀ ಆದಿ ಶಂಕರಾಚಾರ್ಯರು ಶ್ರೀ ಕಾಶಿಯಿಂದ ಉತ್ತರಕ್ಕೆ ಪ್ರಯಾಣ ಮಾಡುವಾಗ ಸುಮಾರು 16 ವರ್ಷಗಳಿರಬೇಕು. ಪ್ರಯಾಗ ಕ್ಷೇತ್ರಕ್ಕೆ ಬಂದಾಗ, ಮೀಮಾಂಸ ಶಾಸ್ತ್ರ ನಿಪುಣ ಶ್ರೀ ಕುಮಾರಿಲ ಭಟ್ಟನನ್ನು ಸಂದರ್ಶಿಸಿದರು. ಈತನ ಶಿಷ್ಯ ಪ್ರಭಾಕರ. ಕುಮಾರಿಲನು ಆಂದ್ರ ದೇಶದ ವಿದ್ವಾಂಸ. ಪ್ರಭಾಕರನಾದರೋ ಕೇರಳ ದೇಶದವನು. ಸ್ವಲ್ಪ ಕಾಲದಲ್ಲೇ ಈ ಗುರುಶಿಷ್ಯರಲ್ಲಿ ಭಿನ್ನಾಭಿಪ್ರಾಯದಿಂದಾಗಿ ಪ್ರಭಾಕರನು ಗುರುವಿನಿಂದ ದೂರಾದನು. ಇವರೀರ್ವರೂ ಶ್ರೀ ಶಂಕರರಿಗಿಂತ ಹಿರಿಯರು. ಆ ಸಮಯದಲ್ಲಿ ಕುಮಾರಿಲ ಭಟ್ಟನು ತಾನು ಭೌದ್ಧ ಸನ್ಯಾಸಿಗಳನ್ನು ನಿಂದಿಸಿದ್ದರಿಂದ, ಆ ಪ್ರಾಯಶ್ಚಿತ್ತಕ್ಕಾಗಿ ಭತ್ತದ ಹೊಟ್ಟನ್ನು ಗುಂಡಿಯಲ್ಲಿ ಕಂಠಪ ರ್ಯಂತರ ತುಂಬಿ ಅದಕ್ಕೆ ಅಗ್ನಿ ಸ್ಪರ್ಶಿಸಿ, ಬೆಂಕಿಗೆ ಆಹುತಿಯಾಗುತ್ತಿದ್ದನು. ಈ ಭೀಕರ ದೃಶ್ಯವನ್ನು ಶಂಕರರು ನೋಡಿ ಮರುಗಿ, ಹೀಗೆ ಮಾಡಿಕೊಳ್ಳಬಾರದೆಂದರು. ಕುಮಾ ರಿಲನು ತನ್ನ ಪಾಪದಿಂದ ಪಾರಾಗಲು, ಇದೊಂದೇ ಮಾರ್ಗವೆಂದನು. ಈಗ ನನ್ನೊ ದಿಗೆ ವಾದ ಮಾಡಲು ಸಾಧ್ಯವಿಲ್ಲವಾದ್ದರಿಂದ, ನನ್ನ ಶಿಷ್ಯ ವಿಶ್ವರೂಪಿ ಮಂಡನಮಿಶ್ರನು ಹತ್ತಿರವಿರುವ ಮಾಹಿಷ್ಮತಿ ನಗರದಲ್ಲಿದ್ದಾನೆ. ಅಲ್ಲಿಗೆ ಹೋಗಿ ವಾದ ಮಾಡುವುದೆಂದು ತಿಳಿಸಿದನು. ಚತುರ್ಮುಖ ಬ್ರಹ್ಮನು ಅವನ ಅರ್ಧಾಂಗಿ ಶಾರದೆ ಇಬ್ಬರೂ ಇಲ್ಲಿ ಮಂಡನಮಿಶ್ರ ಮತ್ತೂ ಉಭಯ ಭಾರತಿ ಎಂಬ ಹೆಸರುಗಳಿಂದ ಪ್ರತಿಷ್ಟಿತರಾಗಿದ್ದರು ಮಂಡನನು ತನ್ನ ಮನೆಯಲ್ಲಿ ಶ್ರಾದ್ಧ ಕಾರ್ಯದ ದೆಶೆಯಿಂದ ಹೋಮವನ್ನು ಬೆಳಸಿ ಋತ್ವಿಕ್ಕುಗಳೊಂದಿಗೆ ಕರ್ಮ ಪ್ರಾಧಾನ್ಯದ ಮಹತ್ವವನ್ನು ಎತ್ತಿಹಿಡಿದು ಬಹು ಸಂಭ್ರಮದಿಂದ ಬ್ರಾಹ್ಮಣ ಗೋಷ್ಠಿಯ ಮಧ್ಯೆ ಯಜ್ಞ ಕಾರ್ಯವನ್ನು ವಿಜೃಂಭಣೆ ಯಿಂದ ಜರುಗಿಸುತ್ತಲಿದ್ದನು. ಅಂದು ಶ್ರೀ ಶಂಕರರು ಮಂಡನಮಿಶ್ರನ ಗೃಹದ ಬಳಿ ಬಂದಾಗ, ಹೊರಗಿನ ಬಾಗಿಲು ಮುಚ್ಚಿತ್ತು. ಶ್ರೀ ಶಂಕರಾಚಾರ್ಯರು ಅಣಿಮಾದಿ ಸಿದ್ಧಿ ಪುರುಷರಾದ್ದರಿಂದ, ಮಂಡನ ಮಿಶ್ರನ ಯಜ್ಞ ಶಾಲೆಯೊಳಗೆ ಪ್ರವೇಶಿಸಿದಾಗ, ಅಲ್ಲಿ ಆರ್ಭಟದಿಂದ ಕರ್ಮಕಾಂಡದ ಕೃತ್ಯಗಳು ತಾಂಡವವಾಡುತ್ತಿತ್ತು. ಒಂದು ಮೂಲೆಯಲ್ಲಿ ಬಂಗಾರದ ಪಂಜರದಲ್ಲಿ ಎರಡು ಸುಂದರವಾದ ಗಿಳಿಗಳು ಶ್ರೀ ಕಂಠ ಧ್ವನಿಯಿಂದ ಮಾತನಾಡುತ್ತಿರುವುದನ್ನು ಕೇಳಿದ ಸನ್ಯಾಸಿ ಶ್ರೀ ಶಂಕರರು, ಅಲ್ಲಿನಿಂತು ಲಾಲಿಸಿದರು. ಆಗ ಒಂದು ಗಿಳಿ ಜಗತ್ತಿನಲ್ಲಿ ಕರ್ಮವೇ ದೊಡ್ಡದೆಂದು ವಾದಿಸಿದರೆ ಇನ್ನೊಂದು ಇಲ್ಲ, ಇಲ್ಲ, ಜ್ಞಾನವೇ ಅತಿ ದೊಡ್ಡದೆಂದು ಸುಂದರವಾಗಿ ವಾದಿಸುತ್ತ ಲಿರುವುದನ್ನು ಕಂಡ ಶ್ರೀ ಶಂಕರರು ಚಕಿತರಾದರು.

ಮಂಡನಮಿಶ್ರರಿಗೂ ಶಂಕರರಿಗೂ ಸ್ವಲ್ಪ ಮಾತುಗಳು ಜರುಗಿದ ನಂತರ, ಇವರೀರ್ವರೂ ವಾದಕ್ಕೆ ಮಂಡಿಸಿದರು. ಈ ವಾದದ ಮಧ್ಯೆ ನ್ಯಾಯ ದರ್ಶಿನಿಯಾಗಿ ಉಭಯ ಭಾರತಿ ನಿಂತಳು, ಆಕೆ ಇವರಿಬ್ಬರ ಕೊರಳಿಗೆ ಎರಡು ಹೂವಿನ ಹಾರ ಹಾಕಿ, ಯಾರ ಹಾರ ಮೊದಲು ಒಣಗುತ್ತೋ ಅವರು ಸೋತಂತೆ ಎಂದು ಗೊತ್ತು ಪಡಿಸಿ ವಾದ ಆರಂಭಿಸಲಾಯಿತು. ಮಂಡನ ವಿಶ್ವರೂಪಿ, ಜಗತ್ತಿನಲ್ಲಿ ಕರ್ಮವೇ ದೊಡ್ಡದು. ಕರ್ಮದಿಂದ "ಉದ್ಯೋಗಿನಂ ಪುರುಷ ಸಿಂಹ ಮುಪೈತಿ ಲಕ್ಷ್ಮೀಃ" ಎಂದು ಪ್ರಚಂಡವಾಗಿ ವಾದಿಸಿದನು. ಕೊನೆಯಲ್ಲಿ ಕಾಯಕದ ಮಹತ್ವವನ್ನು ಸಹಸ್ರಮುಖ ಗಳಿಂದ ವಾದಿಸಿದ ಮಂಡನಮಿಶ್ರನು, " ಗಹನೋ ಕರ್ಮಣಾ ಗತಿಃ । ಎಂದು ಮುಗಿಸಿದನು. ಎಲ್ಲವನ್ನು ಕೇಳಿದ ಶ್ರೀ ಶಂಕರಾಚಾರ್ಯರು ಮಂಡನ ಮಿಶ್ರನನ್ನು ನೋಡಿ ಇಂತೆಂದರು. ಕರ್ಮಕ್ಕಿಂತಲೂ ಶತ ಪಟ್ಟು ಜ್ಞಾನ ಅತಿ ದೊಡ್ಡದು ಕರ್ಮ ಜೀವಾತ್ಮನನ್ನು ಬಂಧನ ಕ್ಕೊಳಪಡಿಸುವುದು. ಇದರಿಂದ ಜೀವನು ಅತಿ ದು:ಖಿ ಯಾಗಿ ಜನನ ಮರಣ ಸೃಂಖಲೆಗಳಿಂದ ಬಂಧಿತನಾಗುವನು. ಈಪಾಶದಿಂದ ಮುಕ್ತ ನಾಗಲು ಸಾಧ್ಯವಿಲ್ಲ. " ಜ್ಞಾನ ಹೀನ: ಪಶು ಸಮಾನ: " ಎಂದಿದೆ ಶ್ರೃತಿ. ಇದನ್ನು ತಿಳಿ. ಆದ್ದರಿಂದ " ನ ಹಿ ಜ್ಞಾನೇನ ಸದೃಶಂ । ಪವಿತ್ರ ಮಿಹ ವಿದ್ಯತೇ " ಎಂದು ತತ್ಸಂಬಂಧವಾದ ವಿಷಯಗಳಿಂದ ಮಂಡನನನ್ನು ಚಕಿತಗೊಳಿಸಿದರು. ಆಗ ಮಂಡನ ಮಿಶ್ರನು

॥ ಯದ್ವತ್ ಫಲಂ ಪುಷ್ಪ ವಿನಾಶಾಯ । ಪುಷ್ಪಂತು ಫಲ ಹೇತವೇ ।
ತದ್ವತ್ ಜ್ಞಾನಂ ಕರ್ಮವಿನಾಶಾಯ । ಕರ್ಮಂತು ಜ್ಞಾನ ಹೇತವೇ ॥

ಪುಷ್ಪವನ್ನು ನುಂಗಿ ಅದರ ಗರ್ಭದಿಂದ ಫಲ ಹೊರ ಬೀಳುತ್ತೆ. ಇಂತಪ್ಪ ಫಲದ ಉತ್ಪತ್ತಿಗೆ ಪುಷ್ಪ ಮೂಲವಲ್ಲವಾ ; ಪುಷ್ಪವಿಲ್ಲವೆಂದರೆ ಕಾಯಿಯೂ ಇಲ್ಲ ಫಲ ( ಹಣ್ಣು ) ಸಹ ಇಲ್ಲವೆಂದು ತಿಳಿ. ಮೊದಲು ಕ್ರಿಯೆಯ ಫಲವಾಗಿ ಗಿಡದಲ್ಲಿ ಮೊಗ್ಗು ಅರಳಿ ಹೂವಾಗುತ್ತೆ. ಇವಿಲ್ಲದೆ ಹೋದರೆ, ಫಲವನ್ನು ಕಾಣಲು ಎಂತು ಸಾಧ್ಯವೆಂದು ಮಂಡನ ಮಿಶ್ರನು ವಾದಿಸಿದನು. ಮುಂದುವರಿದ ವಿಶ್ವ ರೂಪನು ಹೇ ! ಯತಿಯೇ ಕೇಳು ! ಈಶಾವಾಸ್ಯೋಪನಿಷತ್ತು ॥ ಕುರ್ವನ್ನೇ ವೇಹ ಕರ್ಮಾಣಿ । ಜಿಜೀ ವಿಶೇಚ್ಛತಗಂ ಸಮ: ॥ ಎಂದು ಬೋಧಿಸುತ್ತ, ಹೇ ಮಾನವಾ, ಕರ್ಮವನ್ನು ಸತತ ಮಾಡುತ್ತಾ, ಶತಾಯುವಾಗಿ ಬಾಳು ಎಂದು ಬೋಧಿಸುತ್ತಲಿದೆ. ಆದ್ದರಿಂದ ಕರ್ಮ ಜ್ಞಾನಕ್ಕಿಂತಲೂ ದೊಡ್ಡದು. ಇದನ್ನೇ ಗೀತಾಚಾರ್ಯನು, ಎಲೈ ಮಾನವಾ ॥ ಕರ್ಮಣ್ಯೇ ವಾಧಿಕಾ ರಸ್ತೇ । ಮಾ ಫಲೇಷು ಕದಾಚನ ॥ ಎಂದು ಉಗ್ಗಡಿಸಿರುವರು ಆದ್ದರಿಂದ ಜಗತ್ತಿನಲ್ಲಿ ಕರ್ಮವೇ ದೊಡ್ಡದೆಂದು ಮಂಢನ ಮಿಶ್ರನು ಶಂಕರರೊಂದಿಗೆ ವಾದಿಸಿದನು. ಆಗ ಶ್ರೀ ಶಂಕರರು.

॥ ನಿಷ್ಕಾಮಂ ನಿಯತ ಸ್ವಧರ್ಮಚರಿತಂ । ಯತ್ಕರ್ಮಯೋ ಗಾಭಿದಂ ।
ತದ್ದೂರೇತ್ಯ ಫಲ ॥ ಯದೌಪನಿಷದ್ ಜ್ಞಾನಂ ಪುನಃ ಸ್ತತ್ವತಃ ॥

ತತ್ವವ್ಯಕ್ತತಯಾ । ಸುದುರ್ಗಮ ತಮಂ । ಚಿತ್ತಸ್ಯ ತಸ್ಮಾದ್ವಿಭೋ ।
ತ್ವತ್ತ್ರೇಮಾತ್ಮಕ ಭಕ್ತಿ ರೇವ ಸತತಂ । ಸ್ವಾಧೀಯಸೀ ಶ್ರೇಯಸೀ ॥

ಕರ್ಮಕ್ಕೆ ಮೊದಲಿಲ್ಲ ಕೊನೆಯು ಇಲ್ಲ, ಎಷ್ಟು ಮಾಡಿದರು ಮುಗಿಯುವ ಕಾಯಕವಿದು. ಮಾಡಿದಷ್ಟು ಕರ್ಮ ಹಿಗುತ್ತಲೇ ಇರುವುದು. ಅನಂತವಾಗಿ ಬೆಳೆದು ಜೀವಾತ್ಮನನ್ನು ಅಗಣಿತ ಅಜ್ಞಾನ ಮಯ ಹೃದ್ಗ್ರಂಥಿಗಳಿಂದ ತೊಡಕಿನಲ್ಲಿ ಸಿಗಿಸುವುದು. " ಯತ್ಕರ್ಮ ಯೋಗಾಭಿಧಂ । ತದ್ದೂರೇತ್ಯ ಫಲ ". ಒಂದು ಬೀಜವನ್ನು ಹದವಾದ ಭೂಮಿಯಲ್ಲಿ ಬಿತ್ತಿದರೆ ಅದು ಫಲ ಕೊಡಲು ಸಾಕಷ್ಟು ಕಾಲಾವಕಾಶಬೇಕು. ಅದರಂತೆಯೇ ಒಂದು ಕರ್ಮ ಫಲವನ್ನು ಕೊಡಬೇಕಾದರೆ, ದೂರದ ಕಾಲ ಬೇಕಾಗುತ್ತೆ. ಜ್ಞಾನ ಹಾಗಲ್ಲ. ಜ್ಞಾನದಿಂದೇರ್ಪಡುವ ಫಲ ಅದೊಂದು ಮುಕ್ತಾ ಫಲ ॥ ಜ್ಞಾನಾಗ್ನಿದಗ್ಧ ಸರ್ವ ಕರ್ಮಾಣಿ । ಭಸ್ಮಸಾತ್ಕುರುತೇ ರ್ಜುನಾ ॥ ಎಂಬುದಾಗಿ ಗೀತಾಚಾರ್ಯನು ಬೋಧಿಸಿರುವನು, ಸಂಚಿತ, ಆಗಾಮಿ ಮತ್ತೂ ಪ್ರಾರಬ್ಧ ಎಂಬ ಸಮಸ್ತ ಕರ್ಮಗಳೂ ಶಿವಾಗ್ನಿಯಿಂದ ಬೂದಿಯಾಗಿ, ಪುನರ್ ಚೈತನ್ಯವನ್ನು ಕಳೆದುಕೊಂಡು ಸುಟ್ಟಬೀಜದಂತೆ ನಿಸ್ತೇಜನವಾಗುವುವು. ಅಗ್ನಿ ಅಗ್ನಿಯನ್ನೇ ಸುಡಲಾರದು. ಶಿವಜ್ಞಾನಾಗ್ನಿ ಪಾಪಕೋಟಿಗಳನ್ನು ಸುಟ್ಟು ಬೂದಿ ಮಾಡುತ್ತೆ. ಇದರಿಂದ ಬದ್ಧ ಜೀವನು ಮುಕ್ತನಾಗಿ, ಮುಮುಕ್ಷುವೆನಿಸಿ, ಶ್ರೀ ಗು ರು ಕೃ ಪೆ ಯಿ ಂ ದ ಮೋಕ್ಷಾರ್ಹನೆನಿಸುವನು. ॥ ಜ್ಞಾನೀಚ ಅತೀವ ಮೇ ಪ್ರಿಯಃ ॥ ಆಚಾರ ಸಂಪನನ್ನಾದ ಆತ್ಮ ಜ್ಞಾನಿ ನನಗೆ ಅತ್ಯಂತ ಪ್ರಿಯತಮ ನೆಂದು ಭಗವಂತನ ಆಶ್ವಾಸನೆ ಇದೆ ಎಂಬುದಾಗಿ ತತ್ವಜ್ಞಾನಿ ಶ್ರೀ ಶಂಕರಾಚಾರ್ಯರು ಮಂಡನ ಮಿಶ್ರನಿಗೆ ಸುಜ್ಞಾನ ಬೋಧೆಯನ್ನು, ಶ್ರೀ ಬೃಹಸ್ಪತ್ಯಾಚಾರ್ಯರಂತೆ ಸುದೀರ್ಘವಾಗಿ ವಾದಿಸಿ ಬೋಧಿಸುತ್ತಿದಂತೆ, ವಿಶ್ವರೂಪಿ ಮಂಡನನು ಒಪ್ಪಿಕೊಂಡನು ಅಷ್ಟರಲ್ಲೇ ಶ್ರೀ ಉಭಯ ಭಾರತಿ, ನಾನು ನನ್ನ ಪತಿಯಲ್ಲಿ ಅರ್ಧಾಂಗಿ, ನಿನಗೆ ಅರ್ಧ ಜಯ ಮಾತ್ರ ಉಂಟಾಗಿದೆ. ಈಗ ನನ್ನೊಂದಿಗೆ ವಾದ ಮಾಡಿ ಜಯಿಸಿದರೆ ಆಗ ಮಾತ್ರ ನೀನು ಜಯಿಸಿದವನೆಂದು ಹೇಳಬೇಕು. ಆದ್ದರಿಂದ ಈಗ ನನ್ನೊಂದಿಗೆ ವಾದಕ್ಕೆ ಮಂಡಿಸೆಂದಳು. ಶ್ರೀ ವಿದ್ಯಾ ಭಾರತಿಯೊಂದಿಗೆ ಆದಿ ಶ್ರೀ ಶಂಕರಾ ಚಾರ್ಯರುವಾದಿಸಿದರು. ಆಗ ದೇವಿ ಅನೇಕ ಜಟಿಲವಾದ ವಿಷಯಗಳನ್ನು ಶ್ರೀ ಶಂಕರರ ಮುಂದಿಟ್ಟು ಇವುಗಳ ಬಗೆಗೆ ವಿದ್ಯಾಭಾರತಿ ವಿವರಣೆ ಕೇಳಿದಳು. ಶ್ರೀ ಸರಸ್ವತಿಯೊಂದಿಗೆ ವಾದ ಸಾಮಾನ್ಯವಾದುದಲ್ಲ. ಆದರೆ ಶಿವಾಂಶ ಸಂಭೂತರಾದ ಆದಿ ಶ್ರೀ ಶಂಕರಾಚಾರ್ಯರಿಗೆ ಈಕೆಯ ಪ್ರಶ್ನೆಗಳು ತೊಡಕಾಗಿರಲಿಲ್ಲ. ಅವುಗಳನ್ನು

ಕ್ರಮವಾಗಿ ಉತ್ತರಿಸುತ್ತಾ, ದೇವೀ ! ಬಾಹ್ಯಾಭ್ಯಂತರವಾದ ಎಲ್ಲಾ ಕರ್ಮಗಳಲ್ಲಿ ಜ್ಞಾನಕ್ಕೆ ಸದಾ ಆದ್ಯತೆ ಇದೆ ಎಂದು ತಿಳಿ. ಪಾಂಚ ಭೌತಿಕ ಕರ್ಮಗಳು ತ್ರಿಗುಣಾತ್ಮಕವಾದ್ದರಿಂದ ಅಶುದ್ಧವೆನಿಸಿ ಕಾಮ ಸಂಕಲ್ಪವುಳ್ಳವುಗಳಾಗಿವೆ. ಕೃಪಣರು ಫಲಾಭಿಲಾಷೆಗಳಿಂದ ಕೂಡಿ ಮುಮ್ಮಲಗಳಲ್ಲಿ ತೊಳಗುತ್ತಲಿರುವರು. ಕರ್ಮಭೂಮಿಯೆನಿಸಿ ಕ್ರಿಯಾ ವಿಶಿಷ್ಟವಾದೀ ಲೋಕವಲ್ಲಿ ಎಲ್ಲವೂ ದುಃಖ ಮಯ ಹಾಗೂ ನಶ್ವರವೆನಿಸಿರುವುದು ತೋರ್ವಿಕೆಗೆ ಸುಖದಂತೆ ಕಂಡರೂ ಅದು ಅಂತ್ಯದಲ್ಲಿ ದುಃಖದ ಮಡುವಿನಲ್ಲಿ ತಳ್ಳುವುದು ॥ ಸುಖ ಮಿಚ್ಛಂತಿ ಸರ್ವೇಹಿ । ತಚ್ಚ ದ್ಧರ್ಮ ಸಮುದ್ಭವಂ॥ ನಿಜವಾದ ಸುಖ ಧರ್ಮದ ಹೃದಯದಲ್ಲಿ ಹುದುಗಿದೆ ಎಂದ ಆಚಾರ್ಯರು ॥ ಪರೀಕ್ಷ್ಯ ಲೋಕಾ । ಕರ್ಮ ಚಿತಾ ಬ್ರಹ್ಮಣೋ । ನಿರ್ವೇದ ಮಾಯಾನ್ನಾಸ್ತ್ಯ ಕೃತಃ ಕೃತೇನ ॥ ( ಮುಂಡಕೋಪನಿಷತ್ ಕ್ರ.ಸಂ. 12, ಭಾಗ 2 ) ಅಂದರೆ ಕ್ಷರ ವೆನಿಸಿದ ಈ ಜಗತ್ತಿನ ಕರ್ಮಗಳು ಅಕ್ಷರನೆನಿಸಿದಪರಶಿವ ಬ್ರಹ್ಮದೆಡೆಗೆ ಕೊಂಡೊಯ್ಯಲಾರವು ಯಾಕೆಂದರೆ ॥ ಯದ್ಯತ್ ಸವಿಶೇಷಂ । ತತ್ತದ್ ಘಟಾದಿ ವತ್ ನಶ್ಯತಿ ॥ ಅಂದ ಬಳಿಕ ಅಸ್ಥಿರವಾದ ಲೋಕದ ಕ್ಷಣಿಕ ಸಂಪತ್ತುಗಳಿಂದ ಸ್ಥಿರವೂ ಅಕ್ಷರವೂ ಎನಿಸಿದ ಕೂಟಸ್ಥನನ್ನು ಕಾಣಲು ಸಾಧ್ಯವೆನಿಸದು. ಏಕೆಂದರೆ ॥ ಸತ್ಯಂ ಜ್ಞಾನ ಮನಂತಂ ಬ್ರಹ್ಮ । ವಿಜ್ಞಾನ ಮಾನಂದಂ ಬ್ರಹ್ಮ ॥ ಇಂತಪ್ಪ ಪರಬ್ರಹ್ಮನ ಸಾಕ್ಷಾತ್ಕಾರದಿಂದ " ನ ಚ ಪುನರಾವರ್ತತೇ ನ ಚ ಪುನರಾವರ್ತತೇ ", ಎಂಬ ಕೈವಲ್ಯಧಾಮವನ್ನು ಶ್ರೀ ಗುರುವಿನ ಅನುಗ್ರಹದಿಂದ ಪಡೆಯಬಹುದು.

ಆತ್ಮ ಜ್ಞಾನದಿಂದ ನಿರತಿಶಯಾನಂದ ಪ್ರಾಪ್ತಿಯಾಗುವುದು, ಪರಬ್ರಹ್ಮವು " ದೇವಿ ಕೇಳು, ! ॥ ಅಶಬ್ಧಂ, ಅಸ್ಪರ್ಶಂ, ಅರೂಪಂ, ಅವ್ಯಯಂ । ತಥಾ ಅರಸಂ, ನಿತ್ಯಂ, ಅಗಂಧ ವಚ್ಚಯತ್ । ಅನಾದಿ ಅನಂತಂ ಮಹತಾ ಪರಂ ಧೃವಂ ॥ ( ಕಠೋಪನಿಷತ್ ) ಎಂಬುದಾಗಿ ಶಿವಾಂಶ ಸಂಭೂತರಾದ ಶ್ರೀ ಶಂಕರರು ವಿವರಿಸಿ, ದೇವಿ, ॥ ಜ್ಞಾನಂ ಬ್ರಹ್ಮ । ಜ್ಞಾನಂ ಮೋಕ್ಷಕಾರಣಂ ॥ ಎಂದು ಉಭಯ ಭಾರತಿಯ ಪ್ರಶ್ನೆಗಳಿಗೆ ಸೂಕ್ತ ಉತ್ತರ ವಿತ್ತರು. ಇಹಲೋಕ ಮತ್ತು ಸ್ವರ್ಗಾದಿಗಳೂ ಸಹ ನಶ್ವರವಿರುವುವು,

॥ ತದ್ಯತೇಹ ಕರ್ಮಚಿತೋ ಲೋಕಃ ಕ್ಷೀಯತೇ ।
ಏವ ಮೇ ವಾಮುತ್ರ ಪುಣ್ಯ ಚಿತೋ ಲೋಕಃ ಕ್ಷೀಯತೇ ॥

ಎಂದು ಉತ್ತರಿಸಿದರು. ಆಗ ಉಭಯ ಭಾರತಿಗೆ ಶಂಕರ ಯತಿಯನ್ನು ಸೋಲಿಸಲು ಸಾಧ್ಯವಾಗಲಿಲ್ಲ. ತಕ್ಷಣ ದೇವಿಯು ಕಾಮ ಶಾಸ್ತ್ರದ ಬಗೆಗೆ ನಾಲ್ಕಾರು ಪ್ರಶ್ನೆಗಳನ್ನು ಹಾಕಿ ಶಂಕರರನ್ನು ವಾದದಲ್ಲಿ ಸೋಲಿಸಲು ಪಾದಿಸಲು ಯತ್ನಿಸಿದಳು.

ಬಾಲ ಬ್ರಹ್ಮಚಾರಿಯಾದ ಯತಿವರರು ಪಾದಿಸಲು ದಿಕ್ಕು ತೋರದೇ ಸ್ವಲ್ಪ ಯೋಚ್ಚಿ ಆ ಪ್ರಶ್ನೆಗಳಿಗೆ ಉತ್ತರವೀಯಲು, ಶ್ರೀ ಉಭಯ ಭಾರತಿಯಿಂದ ಒಂದು ತಿಂಗಳು ಅವಕಾಶ ಪಡೆದರು.

॥ ದ್ವಿತೀಯ ಭಾಗ ॥

## ಶ್ರೀ ಶಂಕರರ ಪರಕಾಯ ಪ್ರವೇಶ

ಶ್ರೀ ಶಂಕರರು ತಮ್ಮ ಆತ್ಮ ಗೆಳೆಯ ಶ್ರೀ ಚಿತ್ಸುಕಾಚಾರ್ಯ ಮತ್ತೂ ಶ್ರೀ ಸನಂದನ ಇವರಲ್ಲಿ ಮಾತನಾಡುತ್ತಿರುವಾಗ, ಅಮರಕನೆಂಬ ಕಾಶಿರಾಜನು ಆಗ ಅಸುನೀಗಿದ ವಿಷಯ ಜ್ಞಾನ ಯೋಗದಿಂದ ಅರಿವಾಗಲು, ಇಬ್ಬರಿಗೂ ತಮ್ಮ ದೇಹ ವನ್ನು ಆ ಕ್ಷಣದಿಂದ ಒಂದು ತಿಂಗಳ ಕಾಲ ಸುಭದ್ರವಾಗಿ ಹಗಲಿರುಳು ಎವೆಯಿಕ್ಕದೆ ರಕ್ಷಿಸಬೇಕೆಂದರುಹಿ, ಕ್ಷಣಾರ್ಧದಲ್ಲಿ ತಮ್ಮ ದೇಹದಿಂದ ಅಗಲಿ, ಅಮರಕನ ದೇಹದಲ್ಲಿ ಪರಕಾಯ ಪ್ರವೇಶ ಮಾಡಿದರು. ॥ ಅಣಿಮಾ ಮಹಿಮಾಚೈವ । ಗರಿಮಾ ಲಘಿಮಾ ತಥಾ । ಪ್ರಾಪ್ತಿಃ ಪ್ರಾಕಾಮ್ಯಂ ಈಶತ್ವಂ ವಿಶಿಷ್ಟತ್ವಂ ಚಾಷ್ಟ ಭೂತಯಃ ॥ ಎಂಬ ಅಣಿಮಾದಿ ವಿದ್ಯೆಯಲ್ಲಿ ಸಿದ್ಧಿ ಪಡೆದವರು, ಲೀಲಾಜಾಲವಾಗಿ ಪರಕಾಯ ಪ್ರವೇಶ ವನ್ನು ಮಾಡುವರು, ಶಂಕರಾಚಾರ್ಯರು ಅಮರಕ ಮಹಾ ರಾಜನ ದೇಹದೊಳ ಪ್ರವೇಶಿಸಿದೊಡನೆ ರಾಜ ಕಳೆಯಿಂದ ಕೂಡಿದ ಶರೀರ ಸ್ವಲ್ಪ ಚಲಿಸಿದ ಹಾಗೆ ತೋರಿ ನಿದ್ರೆಯಿಂದ ಮೇಲೆದ್ದಂತೆ ಎದ್ದು ಕುಳಿತನು. ಆಗ ರಾಣಿ ವಾಸದವರಿಗೂ, ಪುರ ಜನರಿಗೂ ಆಶ್ಚರ್ಯವುಂಟಾಗಿ, ದೈವವಶಾತ್ ಮಹಾರಾಜರು ಪುನಃ ಬದುಕಿ ರೆಂದು ಸಂತೋಷಿಸಿದರು.

ಇತ್ತ ಅಂತಃಪುರದಲ್ಲಿ ರಾಣಿವಾಸದವರು ರಾಜನಿಗೆ ಮಂಗಳ ಸ್ನಾನ ಮಾಡಿ ದಿವ್ಯದುಕೂಲಗಳಿಂದ ಅಲಂಕೃತಗೊಳಿಸಿ, ರಾಜ ಭೋಜನವನ್ನು ಏರ್ಪಡಿಸಿದರು. ಇಂತಪ್ಪ ರಾಜಭೋಗದಲ್ಲಿ ಶಂಕರರು ತಮ್ಮ ಪೂರ್ವದ ವೃತ್ತಾಂತವನ್ನು ಪೂರ್ಣ ಮರೆತವರಾಗಿ ರಾಣಿಯೊಂದಿಗೆ ಆನಂದದಿಂದಿದ್ದರು. ಕೆಲವು ಸಮಯಗಳು ಮಹಾರಾಣಿಯೊಂದಿಗೆ ಸರಸವಾಗಿ ಮಾತನಾಡುತ್ತಾ ಹಲವಾರು ದಿವಸಗಳು ಉಭಯ ಭಾರತಿ ಹಾಕಿದ ಕಾಮ ಶಾಸ್ತ್ರದ ಪ್ರವರಗಳನ್ನು ರಾಣಿಯಲ್ಲಿ ತಿಳಿಸಿ, ಬಗ್ಗೆ ಎಲ್ಲಾ ರಹಸ್ಯಗಳನ್ನೂ ಒಂದೊಂದಾಗಿ ಗ್ರಹಿಸಿ, ಪೂರ್ಣ ತಿಳಿದುಕೊಂಡರು. ಆದರೆ ತಾನೇನು ; ರಾಜಭೋಜನ, ರಾಜಭೋಗ, ಮಹಾರಾಜರ ವಿಲಾಸ, ಇತ್ಯಾದಿ ಗಳಲ್ಲಿ ಸುಖಿಸುತ್ತಾ, ಶಂಕರರು ತಮ್ಮ ಪೂರ್ವದ ಉದ್ದೇಶವನ್ನು ಮರೆತುಬಿಟ್ಟಿದ್ದರು.

ಇನ್ನೇನು ಒಂದು ತಿಂಗಳು ಮುಗಿಯುವ ಗಡ ಸಮೀಪಿಸಿತು. ಪ್ರಾಜ್ಞಳಾದ ಮಹಾ ರಾಣಿ ರಾಜ ದೇಹದಲ್ಲಿ ತನ್ನ ಪೂರ್ವಪತಿಯಿಲ್ಲ. ಯಾರೋ ಮಹಾ ಜ್ಞಾನಿ ಪ್ರವೇಶಿಸಿರಬೇಕೆಂದು, ಮಾತುಕತೆಗಳಿಂದ ಅರಿತಳು.

ಇತ್ತ ಸನಂದನರು, ದಿನಗಳನ್ನು ಲೆಕ್ಕ ಹಾಕುತ್ತಾ ಇನ್ನೇನು 4, 5 ದಿನಗಳಿವೆ ಎಂಬ ವೇಳೆಯರಿತು, ಶಂಕರರನ್ನು ಎಚ್ಚರಗೊಳಿಸಲು ಕಾಶಿನಗರದ ಕೊತವಾಲನ ಮಗನ ರೂಪದಿಂದ ಬಂದು ; ಒಂದು ದಿನ ಉಷಃ ಕಾಲಕ್ಕೆ ಮುಂಚಿತವಾಗಿಯೇ ಅರಮನೆಯ ರಾಜರ ಶಯ್ಯಾ ಗೃಹಕ್ಕೆ ಸಮಾಪದ ಕಿಟಕಿಯೊಂದರ ಬಳಿ ನಿಂತು, ಸಣ್ಣ ಶಬ್ದದಿಂದ ಟಂ ಟಂ ಎಂದು ಟಂಕಾಬಾರಿಸಿ ಒಂದು ಶ್ಲೋಕವನ್ನು ಶಂಕರರನ್ನು ಎಚ್ಚರಿಸಲು ಪ್ರಥಮ ಯಾಮದಲ್ಲಿ ಉಚ್ಚರಿಸಿದರು. ( ಉಷಃಕಾಲದಲ್ಲಿ )

ಪ್ರಥಮ ದಿವಸ : ॥ ಆಶಯಾ ಬದ್ಧತೇ ಲೋಕೇ ।
ಕರ್ಮಣಾ ಬಹು ಚಿಂತೆಯಾ । ಆಯುಃ ಕ್ಷೀಣಂ ನ ಜಾನಾತಿ ।
ತಸ್ಮಾತ್ ಜಾಗ್ರುತ ಜಾಗ್ರುತಃ ॥ ॥ ೧ ॥

ದ್ವಿತೀಯ ದಿವಸದ ಉಷಃಕಾಲಕ್ಕೆ ಮುಂಚಿತವಾಗಿಯೇ ಆ ಸ್ಥಳಕ್ಕೆ ಬಂದು
। ಮಾತಾನಾಸ್ತಿ ಪಿತಾನಾಸ್ತಿ । ನಾಸ್ತಿ ಬಂಧು ಸ್ಸಹೋದರಃ ।
ಅರ್ಥಂನಾಸ್ತಿ ಗೃಹಂ ನಾಸ್ತಿ । ತಸ್ಮಾತ್ ಜಾಗ್ರುತ ಜಾಗ್ರುತಃ ॥ ಎಂದೂ॥ ೨ ॥

ತೃತೀಯ ದಿನದ ಉಷಃಕಾಲದಲ್ಲಿ ವೇಶಧಾರಿ ರೂಪಿನ ಸುನಂದನನು ಬಂದು
। ಜನ್ಮ ದುಃಖಂ ಜಾಯಾ ದುಃಖಂ । ಜರಾ ದುಃಖ ಪುನಃ ಪುನಃ ।
ಸಂಸಾರಂ ಸಾಗರಂ ದುಃಖಂ । ತಸ್ಮಾತ್ ಜಾಗ್ರುತ ಜಾಗ್ರುತಃ ॥ ॥ ೩ ॥

ಚತುರ್ಥ ದಿನದ ಉಷಃಕಾಲದಲ್ಲಿ ಬಂದ ಶಂಕರರ ಶಿಷ್ಯ ರಾಜ ಭೋಗಲ್ಲಿದ್ದದ ಆಚಾರ್ಯರು ಮೈಮರೆತಿರುವರೆಂದು ಚಿಂತಿಸಿ ಅಂದು
॥ ಕ್ಷಣ ಚಿತ್ತಂ ಕ್ಷಣ ವಿತ್ತಂ । ಕ್ಷಣಂ ಜೀವಿತ ಮಾವಯೋಃ ।
ಯಮಸ್ಯ ಕರುಣಂ ನಾಸ್ತಿ । ತಸ್ಮಾತ್ ಜಾಗ್ರುತ ಜಾಗ್ರುತಃ ॥ ॥ ೪ ॥

ಎಂಬುದಾಗಿ ಎಚ್ಚರಿಸುತ್ತಿರಲು, ರಾಜದೇಹದಲ್ಲಿ ರಾಜಭೋಗದಲ್ಲಿದ್ದ ಶಂಕರರರು ಈಶಾಜ್ಞೆಯಂತೆ ಎಚ್ಚೆತ್ತು, ತಕ್ಷಣ ಆ ದೇಹವನ್ನು ವಿಸರ್ಜಿಸಿ, ತಮ್ಮ ನಿಜ ದೇಹದಲ್ಲಿ ಪುನಃ ಪ್ರವೇಶಿಸಿದರು.

ಸನಂದನರು 4 ದಿವಸಗಳು ಶ್ರೀ ಕಾಶಿಗೆ ಬಂದ ವೇಳೆಯಲ್ಲಿ ಶ್ರೀಮದಾಚಾರ್ಯರು

ದೇಹವನ್ನು ಶ್ರೀ ಚಿತ್ಸುಕಾಚಾರ್ಯರು ಕಣ್ಣಲ್ಲಿಕಣ್ಣಿಟ್ಟುಕೊಂಡು ನೋಡಿಕೊಳ್ಳುತ್ತಿದ್ದರು. ಶ್ರೀ ಶಂಕರಾಚಾರ್ಯರು ಮಾರನೆ ದಿವಸ, ಶ್ರೀ ಉಭಯ ಭಾರತಿಯೊ... ತಮ್ಮ ಮುಂದಿನ ವಾದವನ್ನು ಪ್ರಾರಂಭಿಸಲು ಕರೆಯಿತ್ತರು. ಉಭಯ ಭಾ... ಯವರ ಕಾಮ ಶಾಸ್ತ್ರದಲ್ಲಿನ ನಾಲ್ಕು ಪ್ರಶ್ನೆಗಳಿಗೆ ಕೂಲಂಕಷವಾಗಿ ಅಕಳಂಕ ಭಾ... ದಿಂದ ಉತ್ತರವೀಯುತ್ತಾ.

ದೇವೀ, ಕಾಮಾದಿ ಅರಿಷಡ್ವರ್ಗಗಳು, ಮನಸ್ಸಿನ ಮೇಲೆ, ಪರಿಣಾಮ... ಯಾಗಿ ಘಾಸಿಗೊಳಿಸುವುವು. ಮನಸ್ಸಿಗೆ ಪರಮ ಶತೃ ಕಾಮ, ಚಿತ್ತಕ್ಕೆ ... ಮೋಹ, ಬುದ್ಧಿಗೆ ಶತೃ ಕ್ರೋಧ, ಅಹಂಕಾರಕ್ಕೆ ಶತೃ ಲೋಭ. ಆದ್ದರಿ... ಕೇವಲ ಲೌಕಿಕ ವ್ಯವಹಾರದಲ್ಲಿ ತಲ್ಲೀನರಾಗಿರುವ ಕಾರ್ಮಿಕರು, ನಾನಾ ಉದ್ಯ... ಗಳಲ್ಲಿ ಪ್ರತಿಷ್ಠಿತರಾದ ಜನ ಈ ದುಷ್ಟ ಚತುಷ್ಟಯಂಗಳಿಗೆ, ಗುಲಾಮರಾಗಿ ದುಃ... ಕ್ಕೀಡಾಗುತ್ತಲಿರುವರು. ಬಾಹ್ಯೇಂದ್ರಿಯಂಗಳ ನಿಗ್ರಹ ನಿಜವಾದ ನಿಗ್ರಹ... ಕಾರಣ ಬಾಹ್ಯೇಂದ್ರಿಯಗಳು ಅಂತರೇಂದ್ರಿಯಗಳಿಗೆ ಸರ್ವದಾ ಅಧೀನವಿರುವ... ಅಂತರೇಂದ್ರಿಯಂಗಳು ಪೂರ್ಣ ನಿಗ್ರಹವಾದರೆ, ಬಾಹ್ಯೇಂದ್ರಿಯಂಗಳು ತಾವಾಗಿ... ನಿಗ್ರಹವಾಗುವುವು.

ಕಾಮಶ್ಚ ಕ್ರೋಧಶ್ಚ । ದೇಹೇ ತಿಷ್ಠಂತಿ ತಸ್ಕರಾಃ ।
ಜ್ಞಾನ ರತ್ನಾಪಹಾರೇಣ । ತಸ್ಮತ್ ಜಾಗ್ರುತ ಜಾಗ್ರುತಃ ॥

ಬಲಿಷ್ಠರೂ, ಪಟಿಂಗರೂ, ದುರುಳರೂ ಆದ ಕಾಮಕ್ರೋಧಾದಿ ಚತುಷ... ಮಹಾ ಪಾಪಿಗಳು, ಮಾನವ ದೇಹದಲ್ಲಿ ಅನಾದಿಕಾಲದಿಂದ ನೆಲಸಿರುವರು. ಷ... ದುಷ್ಟ ಪ್ರಭಾವವನ್ನು ಆಶಾತುರರಾದ ಮಾನವರ ದೇಹದ ಮೇಲೆ ಬೀರುತ್ತಿರುವ... ಹೆಬ್ಬುಲಿ ಹಿಡಿತಕ್ಕೆ ಸಿಕ್ಕಿಬಿದ್ದ ಬಡು ಪಶುವಿನಂತೆ ಕಾಮಾದಿಗಳಲ್ಲಿ ಮಾನವನ ... ಯಾಗಿದೆ. ಗುಣತ್ರಯಂಗಳು, ಮೇಲ್ಕಂಡ ದುರ್ಗುಣಗಳಿಗೆ ತವರುಮನೆಯ... ಸತ್ವ, ರಜಸ್ಸು, ಮತ್ತು ತಮೋಗುಣಗಳು ಭುವನತ್ರಯಂಗಳನ್ನು ಆಡಿಸುತ್ತಿರುವ... ಮಾನವನು ಎಷ್ಟು ಮಾತ್ರದವನು. ಆಸ್ವತಂತ್ರರೂ, ಜಿತೇಂದ್ರಿಯರಲ್ಲದ ಕರ್ಮ... **॥ ಬುದ್ಧಿಃ ಕರ್ಮಾನುಸಾರಿಣೀ ॥** ಎಂಬಂತೆ, ವಿಷಯಾದಿಗಳಲ್ಲಿ ಆಸಕ್ತರಾಗಿ... ಇದ್ದರೂ ಸಹ ದುಃಖಕ್ಕೀಡಾಗುತ್ತಿರುವರು. ಯಾಕೆಂದರೆ **॥ ಸತತ ಸಂಪತ್ತು ದುಃಖಕ್ಕೆ ಕಾರಣ ॥** ಎನಿಸಿರುವುದು, ಅಂದ ಬಳಿಕ **॥ ಅಶಾಂತಸ್ಯ ಕು... ಸುಖಂ ॥** ರಜೋಗುಣ ತಮೋಗುಣಗಳು ಅತ್ಯಂತ ಪಾಪ ಭೂ ಯಿಷ್ಟವಾದವು... ತಮೋಗುಣದೊಂದಿಗೆ ರಜಸ್ಸು ಸೇರಿದರೆ, ಕೀಚಕ, ಜರಾಸಂಧಾದಿಗಳು ಒಂದುಗೂ... ವಂತೆಯಾಗುವುದು. ರಜಸ್ಸು ಸತ್ವದೊಂದಿಗೆ ಕೂಡಿದರೆ ಜ್ಞಾನ, ಧರ್ಮ ಮಾ...

ಗಳನ್ನು ಕ್ರಮೇಣ ವೃದ್ಧಿ ಗೋಳಿಸಬಹುದು. ತಮಸ್ಸು ಏಕಾಂಗಿಯಾಗಿ ನಿಂತರೆ ಅಸಮರ್ಥವಾಗುವುದು. ಅಂತೂ ಈ ತ್ರಿಗುಣಗಳು ಯಾವಾಗಲೂ ಒಂದರ ಲ್ಲೊಂದು ಹಾಸು ಹೊಕ್ಕಾಗಿರುವುವು. ಗೀತಾಚಾರ್ಯನು ॥ ಕಾಮ ಏಷ ಕ್ರೋಧ ಏಷ । ರಜೋ ಗುಣ ಸಮುದ್ಭವಃ । ಮಹಾಶನೋ ಮ ಹಾಪಾಪ್ಮಾ । ವಿದ್ಧ್ಯೇನ ಮಿಹ ವೈರಿಣಂ ॥ ಎಂದು ವರ್ಣಿಸಿದ್ದಾರೆ. ಅಂದರೆ ರಜೋಗುಣವೆಂಬ ತಾಯಿಯ ಗರ್ಭದಲ್ಲಿ, ಕಾಮ, ಕ್ರೋಧ ಎಂಬ ಇಬ್ಬರು ಅವಳಿ ಹೆಣ್ಣು ಮಕ್ಕಳು ಉದಿಸಿವರು. ಇವರು ಮಂಥರೆ ಮತ್ತೂ ದುಶ್ಶಳೆಯರಿದ್ದ ಹಾಗೆ, ಗುಣತ್ರಯಂಗಳು ದೇಹತ್ರಯಂಗಳನ್ನು ಆವರಿಸಿರುವುವು. ದೇಹತ್ರಯಂ ಗಳಲ್ಲೂ ಸತ್ವ ರಜೋಗುಣಗಳ ಪ್ರಾಬಲ್ಯ ಹೆಚ್ಚಾದರೆ ಭಕ್ತಿ, ಜ್ಞಾನಾದಿಗಳು ಪ್ರಬಲ ಗೊಳ್ಳುವುವು. ಆಗ ತಮಸ್ಸು ವಿಷದ ಹಲ್ಲನ್ನು ಕಿತ್ತ ನಾಗ ಸರ್ಪದಂತೆ ಸಾಧುವಾಗಿ ನಿಲ್ಲುವುದು. ಸತ್ವಗುಣ ಹಾಲಿನಂತೆ ಶುಭ್ರ, ಧಾವಳ್ಯವಿರುತ್ತೆ. ರಜಸ್ ಕ್ರಿಯಾ ಪ್ರಧಾನವಾದದ್ದು, ಬಣ್ಣ ರಕ್ತದಂತೆ ಕೆಂಪು, ಶಕ್ತಿಮಯ, ಚೈತನ್ಯಮಯ, ಜಗತ್ತಿನ ಎಲ್ಲಾ ಕ್ರಿಯೆಗಳಿಗೂ ರಜೋಗುಣ ಅತ್ಯಂತ ಪ್ರಧಾನವಾದ ಪ್ರೇರಕ ಶಕ್ತಿ ಎನಿಸಿದೆ. ತಮಸ್ಸು ಕಪ್ಪು, ಅಜ್ಞಾನಾಂಧಕಾರದಿಂದಿರುತ್ತೆ. ಲೋಕದ ಜನರು ವಿಶೇಷತಃ ರಜೋತಮೋಗುಣಗಳಿಂದ ಆವೃತರಾಗಿ ಎಲ್ಲಾ ವ್ಯವಹಾರಗಳನ್ನೂ ಆಶಾತುರ ಭಾವನೆಯಿಂದ ಮಾಡುತ್ತಾ, ದುಃಖಕ್ಕೀಡಾಗುವರು. ॥ದುಃಖಸ್ಯಾನಂತರಂ ಸುಖಂ। ಸುಖಸ್ಯಾನಂತರಂ ದುಃಖಂ । ಚಕ್ರವತ್ ಪರಿವರ್ತಂತೇ । ಸುಖಾನಿ ಚ ದುಃಖಾ ನಿಚ ॥ ಕಾಮ, ಅತ್ಯಂತ ನೀಚ ಗುಣವುಳ್ಳದ್ದು. ಕ್ರೋಧ ಇದಕ್ಕಿಂತಲೂ ಭಯೋತ್ಪಾದಕವಾದುದು. ಈ ಎರಡು ಗುಣಗಳನ್ನು ವರ್ಣಿಸುವಾಗ ॥ ಮಹಾ ಶನಾ ಮಹಾ ಪಾಪ್ಮಾ । ವಿದ್ಧ್ಯೇನ ಮಿಹಾ ವೈರಿಣಂ ॥ ಎಂದು ಗೀತಾಚಾರ್ಯರು ಎಚ್ಚರಿಸಿದ್ದಾರೆ. ರಜೋಗುಣವೆಂಬ ತಾಯಿಯ ಮಕ್ಕಳಾದ ಕಾಮ ಕ್ರೋಧಗಳು ನರಕದ ಮನೆಯ ಹೆಬ್ಬಾಗಿಲುಗಳು ಮತ್ತು ಮಾನವರಿಂದ ಅಜೇಯರಾದ ಮಹಾ ಭೀಕರ ಶತೃಗಳೆಂದು ವರ್ಣಿಸಿದ್ದಾರೆ. ತ್ರಿಗುಣಗಳಿಂದ ಪ್ರತಿಷ್ಠಿತರಾದವರಿಗೆ ॥ ಕುತಃ ಸುಖಂ ॥ ಸುಖವೆಲ್ಲಿದೆ. ತ್ರಿಗುಣಗಳು ಯಾವಾಗಲೂ ಕೂಡಿಯೇ ಇರುವುವು. ನಮ್ಮ ಜೀವಿತದಲ್ಲಿ ಸತ್ವ, ರಜಸ್ಸು, ತಮೋಗುಣಗಳನ್ನು, ಊಟಕ್ಕೆ ಉಪ್ಪನ್ನು ನಿತ್ಯವೂ ಉಪಯೋಗಿಸುವಂತೆ ಬಳಸಿಕೊಳ್ಳಬೇಕು. ರಜೋಗುಣವನ್ನು ಆದಷ್ಟೂ ಸತ್ವಗುಣದೊಂದಿಗೆ ಕೂಡಿಸಿದಾಗ ಮಾನವನಲ್ಲಿ ಸತ್ಯ, ಧರ್ಮ ಇತ್ಯಾದಿ ದೈವೀ ಸಂಪತ್ ಭರಿತವಾದ ಕಲ್ಯಾಣ ಗುಣಗಳು ಕ್ರಮೇಣ ಸಂವರ್ಧಿಸುವುವು. ಕೇವಲ ಸ್ಥೂಲದೇಹದಲ್ಲಿ ಮಾತ್ರವಲ್ಲ, ಸೂಕ್ಷ್ಮ ಮತ್ತೂ ಕಾರಣ ದೇಹಗಳಲ್ಲೂ ಸತ್ವ ಪ್ರಧಾನವಾಗಿ ಮಿಳಿತವಾದಲ್ಲಿ ಆ ಮಾನವ ಸುಜ್ಞಾನಿಯೆನಿಸಿ ದೇವ ಮಾನವನ ಎತ್ತರ ಕ್ಕೇರಿ, ನಿಜಾನಂದದಲ್ಲಿ ರಮಿಸುವನು. ಆಗ ತಮೋಗುಣ ಶಕ್ತಿಗುಂದಿ, ಬಲಿಷ್ಠವಾದ

ಅಂಶಗಳೊಂದಿಗೆ ಸಹಕರಿಸುವುದು. ನಿತ್ಯದ ಜೀವನದಲ್ಲಿ ದೇಹತ್ರಯ
ತ್ರಯಂಗಳು ಎಷ್ಟು ಪ್ರಮಾಣದಲ್ಲಿ ವರ್ಧಿಸುತ್ತಲಿವೆಯೆಂಬುವನ್ನು
ಪ್ರವರ್ಧಿಸಬೇಕು. ಆಸುರೀಗುಣಗಳನ್ನು ಕಾಲಿನಿಂದ ಮೆಟ್ಟಿ ಅವುಗಳ
ಕ್ಕಿಳಿಯುವಂತೆ ತುಳಿಯಬೇಕು. ದೈವೀ ಮಾನವನಿಗೆ ಇದು ಸಾಧ್ಯ,
ಗಳನ್ನು ನಿರ್ನಾಮಗೊಳಿಸಬೇಕಾದರೆ, ಶ್ರೀ ಕೃಷ್ಣಸ್ವಾಮಿ ಒಂದು
ಉಪಾಯವನ್ನು ಬೋಧಿಸುತ್ತಾ ॥ ಅಸಂಘ ಶಸ್ತ್ರೇಣ । ದೃಢೇ
ಆಸುರೀಗುಣಗಳ ಸಂಘ, ಸಂಪರ್ಕ, ಚಿಂತನೆಗಳನ್ನು ಸಂಪೂರ್ಣ
ದೂರೀಕರಿಸುವಂಥ, ಅವುಗಳ ಸಂಘರಹಿತವಾದ ॥ ಅಸಂಘ ॥ ವೆ
ಕತ್ತಿಯಿಂದ ಅಥವಾ ಕೊಡಲಿ ಪೆಟ್ಟಿನಿಂದ ಅವುಗಳ ದುಷ್ಟ ಬೇರು
ತುಂಡುಗೊಳಿಸಬೇಕೆಂದು ಎಚ್ಚರಿಸಿ ; ॥ ನಿಸ್ತ್ರೈ ಗುಣ್ಯೋ ಭವ ॥
ನಾಗಿ ಶುದ್ಧ ಸ್ಫಟಿಕದಂತ ಅಂತಃಕರಣವುಳ್ಳವನಾಗಿ ಬಾಳಬೇಕು.
ವಾದೀ ಮಾನವ ಶರೀರವನ್ನು ಧರಿಸಿರುವಾಗಲೇ, " ಗಾಳಿ ಬಂದಾಗ
ಎಂಬಂತೆ ಜಾಗರೂಕನಾಗಿ ಅಖಿಲ ಕಲ್ಯಾಣ ಗುಣಗಣ ವಿಶಿಷ್ಟನಾಗಿ
ಸಂಪನ್ನನಾಗಿ ಬಾಳಿ ಜೀವನದಲ್ಲಿ ಬೆಳಕನ್ನೂ ನಿಜಾನಂದವನ್ನೂ
ಕಂಡನುಭವಿಸಬೇಕಾಗಿದೆ. ಇಂತಪ್ಪ ಉನ್ನತದ ಸಾಧನೆಗಾಗಿಯೇ,
ನಾದ ಪರಮಾತ್ಮನು ದುರ್ಲಭವಾದ ಮಾನವ ಶರೀರವನ್ನು ಅನುಗ್ರ
ಗಿರುವ ದೇಹಿ ಅಂದರೆ ಜೀವಾತ್ಮನನ್ನು ॥ ಕ್ಷಣ ಭಂಗುರಃ ॥
ಇರಿಸಿರುತ್ತಾನೆ. ನೀರ್ಗುಳ್ಳೆಯಂತೆ ಅಸ್ಥಿರವಾದ ಕಾಲಾವಧಿಯ
ನಾಗಿ " Catch the time by fore lock " ಎಂಬ
ರಂಗವನ್ನು ಬೆಳಗಿಸುವ ಸ್ವಾತ್ಮ ಅಂದರೆ ಸ್ವಸ್ವರೂಪದರ್ಶನವನ್ನು
ಭವ " ತೃಪ್ತರಾಗಬೇಕಾಗಿದೆ ಎಂದು ಶಂಕರರು ವಿದ್ಯಾ ಭಾರತಿಗೆ
ಆದರೆ ಜಗತ್ತಿನಲ್ಲಿ ಮಾನವರು ಅಸತ್ತಿನ ಕಡೆ ಮುಖ ಮಾಡಿ ವಿನಾ
ಧಾವಿಸುತ್ತಲಿರುವರು. ನಿರ್ಭಾಗ್ಯರಾದ ಪತಿತರಿವರು, ಸಿರಿತನ,
ಗಳಲ್ಲಿ ಬೀಗಿ, ಮುಂಬರುವುದನ್ನರಿಯದವರಿವರು.

॥ ಯವ್ವನಂ ಧನಸಂಪತ್ತಿ । ಪ್ರಭುತ್ವ ಮವಿವೇಕತಾ
ಏಕೈಕಮಪ್ಯನರ್ಥಾಯ । ಕಿಂ ಯತ್ರ ಚತುಷ್ಟಯ

ಯವ್ವನವೆಂಬುವ ಘೋರ ದಂಡಕಾರಣ್ಯದಲ್ಲಿ ಮದಿಸ
ದಾಡುತ್ತಾ ; ಪಿತ್ರಾರ್ಜಿತ ಅಥವಾ ಪೂರ್ವಾರ್ಜಿತ ಪುಣ್ಯ ವಿಶೇಷ
ಸಂಪತ್ತನ್ನು " ಶಿವನಿತ್ತ ಭಿಕ್ಷೆ " ಯಂದರಿಯದೆ, ದುರ್ಮ
ನಾಗಿ, " ಮೂಜಗ ವಂ ಪುಲ್ಗೆಣಿಸಿಪ್ಪಂ ". ಇದರೊಂದಿ

ಶ್ರೀ ಶೃಂಗೇರಿ ಶಂಕರರಿಗೆ ದತ್ತವಾದ ಶ್ರೀ ಚಂದ್ರಮೌಳಿ ಲಿಂಗ

ಸೇರಿದಾಗ, ಇವುಗಳ ಕ್ಷಣಿಕತೆಯನ್ನರಿಯದೆ, ಚೇಳಿಗೆ
ಂವ, ಪ್ರಭುತ್ವವೂ ಕೈ ಸೇರಿದಾಗ, ಇವುಗಳ ಕ್ಷಣಿಕತೆಯನ್ನರಿಯದೆ, ಚೇಳಿಗೆ
ಟ್ಟಾಧಿಕಾರ ವಹಿಸಿದಂತೆ ಸಜ್ಜನರಿಗೆ ಪೀಡಿತನಾಗಿ, ಸ್ವಪ್ರತಿಭೆ ಪ್ರತಿಷ್ಠೆಗಳಿಂದ
ಶಾತುರನಾಗಿರ್ಪಂ. ಸಾಲದ್ದಕ್ಕೆ, " ಅವಿವೇಕತಾಂ " ಅವಿವೇಕವನ್ನೂ ಸಹ
ಡ್ಯಗೂಡಿಸಿಕೊಂಡಿದ್ದರೆ. ಮಹಿಷಾಸುರನಂತೆ ಬಾಳಬೇಕಾಗುವುದು. ಮೇಲುಕ್ತ
ವಾದ ಒಂದೊಂದು ಗುಣವೇ ಮನುಷ್ಯನ ಬಾಳನ್ನು ಹದಗೆಡಿಸಿ ಸರ್ವನಾಶ ಮಾಡು
ವಷ್ಟು ಪ್ರಭಾವವುಳ್ಳದ್ದಾಗಿರುವಾಗ, ಇನ್ನೂ ನಾಲ್ಕೂ ಪ್ರಚಂಡ ಗುಣಗಳ ಪ್ರಭಾವಕ್ಕೆ
ತುತ್ತಾದ ಬಡಪಾಯಿ ಮಾನವನ ಗತಿಯೇನು.

॥ ಕುರಂಗ ಮಾತಂಗ ಪತಂಗ ಭೃಂಗಾ ।
ಮೀನಾಹತಾಃ ಪಂಚಭಿರೇವ ಪಂಚಾ ॥

ಕೋಮಲವೂ ಚೈತನ್ಯಮಯವೂ ಆದ ಜಿಂಕೆ, ಗಾನರಸಕ್ಕೆ ಮನಸೋತು ಬಲೆ
ಯಲ್ಲಿ ಸಿಕ್ಕಿಬಿದ್ದು ಬಳಲುವುದು. ಮದಿಸಿದ ಆನೆ ಹಸುರೆಂದು ಮೋಸ ಹೋಗಿ
ಅಘಾನವಾದ ಹಳ್ಳದಲ್ಲಿ ಬಿದ್ದು ಪರಿತಪಿಸುವುದು. ಪಾಪ ! ಪ್ರಕಾಶದಿಂದ ಬೆಳಗು
ತ್ತಿರುವ ದೀಪವನ್ನು ಕಂಡ ಪತಂಗ, ಚಿಟ್ಟೆ; ಅದು ಹಣ್ಣೆಂದು ಭಾವಿಸಿ, ಮಿಣುಗುವ
ರೆಕ್ಕೆಗಳಿಂದ ಹಾರಿ ಸ್ಪರ್ಶಿಸುತ್ತಲೇ! ಸುಟ್ಟ ರೆಕ್ಕೆಗಳುದರಲು, ಆ ಚಿಟ್ಟೆ ಕ್ಷಣಾರ್ಧದಲ್ಲಿ
ನೆಲಕ್ಕುರುಳಿ ಸಾಯುವುದು. ಭೃಂಗ, ದುಂಬಿ ಸೂರ್ಯೋದಯಕ್ಕೆ ಮೊದಲೇ ಅರಳು
ತ್ತಿರುವ ಪುಷ್ಪದ ಮಕರಂಧವನ್ನು ಹ್ರೀಂಕಾರ ಧ್ವನಿಯಿಂದ ಝೇಂಕರಿಸಿ ಕುಡಿಯುವ
ಆಸಕ್ತಿಯಿಂದ ಮಕರಂದವನ್ನು ಪಾನಮಾಡುತ್ತಾ, ಆ ಪರಾಗಗಳಿಂದ ಅಮೃತವಾಗಿ
ಅದರಲ್ಲೇ ಮೋಹವಶಾತ್ ಬಿದ್ದು ಪಾರಾಗುವ ಗತಿ ಇಲ್ಲದೆ ಅಲ್ಲೇ ಸಿಕ್ಕಿ
ಸಾಯುವುದು. ॥ ಮೀನಾ ಹತಾಃ । ಪಂಚಭಿರೇವ ಪಂಚಾ ॥ ಬೆಸ್ತರವ ಬೀಸಿ
ರುವ ಗಾಳದಲ್ಲಿನ ಒಂದು ತುಂಡು ಆಹಾರದ ನಾಲಿಗೆ ರುಚಿಗಾಗಿ, ಮೀನು ತಾನಿರುವ
ನೀರಿನಲ್ಲೇ ಸಿಕ್ಕಿ ನರಳಿ ಸಾಯುವುದು. ಹೀಗೆ ಒಂದೊಂದು ಪ್ರಾಣಿ ತನ್ನ ಒಂದು
ಇಂದ್ರಿಯ ಸುಖಕ್ಕಾಗಿ ಆಶಿಸಿ ಮೋಹವಶಾತ್ ದುಃಖಕ್ಕೀಡಾಗಿ ನಾಶವಾಗಿರುವಾಗ,
ಪಂಚೇಂದ್ರಿಯಗಳ ಚಪಲಕ್ಕೆ ಸಿಕ್ಕಿಬಿದ್ದಿರುವ ಮಾನವ, ಕಾಮುಖನಾಗಿ ಪಂಚ ಕಾಮಾ
ಗ್ನಿಯಿಂದ ದಹಿಸಲ್ಪಟ್ಟು, ಕಾಮಾಗ್ನಿಯ. ಉರಿಯುವ ಸಪ್ತ ನಾಲಿಗೆಗಳಿಂದ ಬೆಂದು
ಬೂದಿಯಾಗಿ, ಕುಂಭೀಪಾಕಾದಿ ಘೋರ ನರಕಕ್ಕೆ ಮಾನವ ಗುರಿಯಾಗಿ ನಾಶವಾಗುವ
ನೆಂದು ವಿವರಿಸಿದರು.

ಲೋಕದಲ್ಲಿ ಕನಕ, ಕಾಂಚನ, ಕಾಮಿನಿಗಳ ಬಲೆಗೆ ಬೀಳದೆ ಇರುವ ಮಾನವರಿಲ್ಲ
ವೆಂದರೆ ತಪ್ಪಾಗದು. ಪರ್ಣಶಾಲೆಗಳಲ್ಲಿ ತಪಸ್ಸನ್ನಾಚರಿಸುತ್ತಿರುವ ಮಹರ್ಷಿಗಳೂ
ಹಣ್ಣು, ಹಾಲು, ಹಸುರೆಲೆ, ನೀರು, ಕೆಲವು ಸಂದರ್ಭದಲ್ಲಿ ಕೇವಲ ಗಾಳಿ ಸೇವಿಸುತ್ತಾ

ಅರಣ್ಯದ ಮಧ್ಯೆ ತಪಶ್ಚರ್ಯದಲ್ಲಿದ್ದ ವಿಭಾಂಡಕ, ಋಷ್ಯ ಶೃಂಗಾದಿ ಯತಿಗಳನ್ನು ಕಾಮಿನಿ ಕನಕ ಕಾಂಚನಾದಿಗಳು ಬೆರಗುಗೊಳಿಸಿದವೆಂದ ಬಳಿಕ, ಷಡ್ರಸೋಪೇತನ್ನಾ ಹಂಸ ತಲ್ಪತೊಲಿಕೆಯಲ್ಲಿ ಭೋಗಿಸುವ ಮಾನವನ ಗತಿ ಏನು ?

॥ ನ ಜಾತು ಕಾಮಃ ಕಾಮಾನಾಂ । ಉಪ ಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣ ವರ್ತ್ಮ್ಯೇವ । ಭೂಯ ಏವಾಭಿ ವರ್ಧತೇ ॥

ಉರಿಯುತ್ತಿರುವ ಹೋಮಾಗ್ನಿಯನ್ನು ಆರಿಸುವುದಕ್ಕಾಗಿ ನೂರಾರು ಕೊಡ ತುಪ್ಪವನ್ನು ಸುರಿದರೆ–ಸುರಿದಷ್ಟು ಕಾಲ, ಆ ಅಗ್ನಿ ಮತ್ತಷ್ಟು ತನ್ನ ಉರಿಯುವ ನಾಲಿಗೆಗಳನ್ನು ಚಾಚಿ ಧಗಧಗ ಆರ್ಭಟದಿಂದ ವ್ಯಾಪಕವಾಗಿ ಉರಿಯುವುದು ಹೊರತು ಆರುವಂತಿಲ್ಲ. ಅದರಂತೆ, ಸ್ತ್ರೀ ವಿಷಯಕ ಕಾಮೇಚ್ಛೆಯನ್ನು ನೂರು ವರುಷ ಕಾಲ ಯಥೇಷ್ಟವಾಗಿ ಅನುಭವಿಸಿಯೇ, ಕಾಮದ ಸೊಕ್ಕನ್ನು ಅಡಗಿಸಿ ನಾಶ ಗೊಳಿಸುವೆನೆಂದು ಪ್ರತಿಜ್ಞೆ ಮಾಡಿದಷ್ಟು, ನೂರು ವರ್ಷಗಳ ವೃದ್ಧಾಪ್ಯದಿಂದ ಶಿಥಿಲ ವಾದ ಇವನ ಬಡವಾದ ಅಂಗಗಳ ಮೇಲೆ, ಆನೆಯ ಕುಂಭಸ್ಥಳವನ್ನು ಕಂಡ ಸಿಂಹ ಹಾರುವಂತೆ, ಕಾಮವೆಂಬ ಮದೋನ್ಮತ್ತವಾದ ಸಿಂಹವು ವೃದ್ಧನ ಮೇಲೆ ಬಿದ್ದು ತನ್ನ ಪ್ರತಾಪವನ್ನು ಹೆಚ್ಚು ಹೆಚ್ಚಾಗಿ ಬೀರುತ್ತಿರುವಾಗ, ಅಸಹಾಯಕನಾದ ವೃದ್ಧನು, ಕಾಮವನ್ನು ಅನುಭವಿಸಿಯೇ ಅನಂಗನಾದ ಕಾಮನನ್ನು ನಾಶ ಮಾಡಲು ಸಾಧ್ಯವಾ ?.

ಆದ್ದರಿಂದ ಹೇ ದೇವಿ, ಶ್ರೀ ಕೃಷ್ಣ ಪರಮಾತ್ಮನು ಗೀತೆಯಲ್ಲಿ ಬೋಧಿಸಿರುವಂತೆ ॥ ಅಸಂಘ ಶಸ್ತ್ರೇಣ ಧೃಢೇನ ಛಿತ್ವಾ ॥ ಜ್ಞಾನಪೂರ್ವಕ ಅಸಂಘವೆಂಬ ಹರಿತವಾದ ಕೊಡಲಿಯಿಂದ, ಕಾಮ ಭಾವದ ಬೇರುಗಳನ್ನು ಕಡಿದು ಛಿಂದಿ, ಛಿಂದಿ, ತುಂಡು ಮಾಡಿ ನುಚ್ಚು ನೂರುಗೊಳಿಸಿ ನಾಶಮಾಡಬೇಕು. ಅಥವಾ ಯೋಗ ಮಾರ್ಗದಿಂದ ॥ ಚಿತ್ತ ವೃತ್ತಿ ನಿರೋಧಃ ಯೋಗಃ । ಯಾವ ಚಿತ್ತ ವೃತ್ತಿ? ॥ ಸ್ತ್ರೀ ವಿಷಯಕ ಚಿತ್ತ ವೃತ್ತಿ ನಿರೋಧಃ ಯೋಗಃ ॥ ಇದೂ ಸಾಧ್ಯವಿಲ್ಲವಾದರೆ ಆಗ ವಿವಿಧ ಚಿತ್ತ ವೃತ್ತಿ ಗಳನ್ನು ಸದಾ ಕಾಲ, ಶಿವ ಭಾವವುಳ್ಳ ಶುದ್ಧ ಚಿತ್ತವೃತ್ತಿಗಳನ್ನು ಶಿವಪರವಾಗಿ ಪರಿವ ರ್ತನೆಗೊಳಿಸಿದಾಗ ಮಾತ್ರ ಅನಂಗನಾದ ಕಾಮನನ್ನು ಅನಾಯಾಸವಾಗಿ ನಾಶಗೊಳಿಸ ಬಹುದಂತಾಗುವುದೆಂದು ಶ್ರೀ ಆದಿ ಶಂಕರರು ಶ್ರೀ ಉಭಯ ಭಾರತಿಯ ಕಾಮ ಶಾಸ್ತ್ರ ದಲ್ಲಿನ ಪ್ರಶ್ನೆಗಳಿಗೆ ಕೂಲಂಕಶವಾಗಿ ದಿಟ್ಟತನದಿಂದ ಉತ್ತರಿಸಿದರು.

ಈ ವಾದ ಜರುಗುತ್ತಿರುವುದು ಸಾಮಾನ್ಯರ ಮಧ್ಯೆಯಲ್ಲ ಶ್ರೀ ಉಭಯ ಭಾರತಿ ಸಾಕ್ಷಾತ್ ಆಧ್ಯಾತ್ಮ ವಿದ್ಯಾಸ್ವರೂಪಿಣಿ, ಆದಿ ಶ್ರೀ ಶಂಕರಾಚಾರ್ಯರಾದರೋ

ಸಾಕ್ಷಾತ್ ಶಿವಾಂಶ ಸಂಭೂತರು. ವಾದಿಸುವ ಈರ್ವರೂ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡಿರುವರು. ಆದರೂ ಕಾಮ ಶಾಸ್ತ್ರದ ಪ್ರಶ್ನೆಗಳನ್ನು ಶ್ರೀ ದೇವಿಯು ಹಾಕಲು ಕಾರಣವೇನೆಂದರೆ ಜಗತ್ತಿನಲ್ಲಿ ಮಾನವರು, ಕನಕ, ಕಾಂಚನ, ಕಾಮಿನಿಯರ ಕಾಮದ ಬಲೆಗೆ ಸಿಕ್ಕಿಬಿದ್ದು ಬುದ್ಧಿನಾಶದಿಂದ ಪ್ರಣಶ್ಯತಿ ನಾಶವಾಗುತ್ತಲಿರುವರು. ಇದಕ್ಕೆ ಪರಿಹಾರ ಹಾಗೂ ಜಗತ್ತಿನ ಉದ್ಧಾರಾರ್ಥ ದೇವಿಯು ತತ್ವಜ್ಞಾನಿಗಳಾದ ಶ್ರೀ ಶಂಕರಾಚಾರ್ಯರ ಶ್ರೀ ಮುಖದಿಂದ ಜಗತ್ತಿಗೆ ಉಪದೇಶ ರೂಪದಲ್ಲಿ ಅವರಿಂದ ಬೋಧಾಮೃತವು, ಭಾನುಕೋಟಿ ಪ್ರಕಾಶಮಾನವಾಗಿ ಹೊರಬೀಳಲೆಂಬ ಸದಿಚ್ಛೆ ಯಿಂದ, ಆಚಾರ್ಯರಲ್ಲಿ ಉಭಯ ಭಾರತಿ ಭಕ್ತಿಯಿಂದ ಪ್ರಶ್ನಿಸಿದ ಕಾಮ ಶಾಸ್ತ್ರಕ್ಕೆ ಶ್ರೀಮದಾಚಾರ್ಯ ಶಂಕರರು, ನೀಡಿದ ಸುಜ್ಞಾನಾಮೃತದ ಸುದೀರ್ಘವಾದ ಮಹಾ ವ್ಯಾಖ್ಯಾನವನ್ನು ಕೇಳಿದ ಉಭಯ ಭಾರತಿ ತಲೆಬಾಗಿ ಯತಿ ಶ್ರೇಷ್ಠರನ್ನು ಭಕ್ತಿಯಿಂದ ವಂದಿಸಿ ವಾದದಲ್ಲಿ ತನ್ನ ಸೋಲನ್ನು ಒಪ್ಪಿಕೊಂಡಳು.

ಆಗ ಶ್ರೀ ಮಂಡನ ಮಿಶ್ರನನ್ನು ಆಚಾರ್ಯರು ತಮ್ಮ ಎರಡನೇ ಶಿಷ್ಯನನ್ನಾಗಿ ಸ್ವೀಕರಿಸಲು ಆತನಿಗೆ ಸನ್ಯಾಸ ದೀಕ್ಷೆಯನ್ನಿತ್ತು ಸುರೇಶ್ವರಾಚಾರ್ಯನೆಂಬ ಹೆಸರನ್ನಿತ್ತು ಆಶೀರ್ವದಿಸಿ ದಿಗ್ವಿಜಯಿಗಳಾದರು.

ಉಭಯ ಭಾರತಿ ಎಲ್ಲವನ್ನೂ ಸಾವಧಾನ ಚಿತ್ತದಿಂದ ಕೇಳಿ ಶಂಕರರಿಗೆ ಶರಣಾಗತಳಾದಳು. ನಂತರ ಆಕೆ ಸತ್ಯ ಲೋಕಕ್ಕೆ ತೆರಳಿದಳು.

॥ ಮನುಷ್ಯಾಣಾಂ ಹಿತಂ ಧರ್ಮಂ । ವರ್ತಮಾನೇ ಕಲೌ ಯುಗೇ ॥



## ಅಧ್ಯಾಯ 9

### ಸಾಹಿತಿಗಳು ರಚಿಸುವ ಕೃತಿಗಳ ಬಗ್ಗೆ
### ಭಾರತದ ಘನ ಸರ್ಕಾರದ ಆಶಯ.

ಆಧುನಿಕ ವಿವಿಧ ಕ್ಷೇತ್ರಗಳಲ್ಲಿ ರಸಪತ್ತರವಾಗಿ ಪ್ರಮಿಸುವ ಸಾಹಿತಿಗಳಿಗೆ ಘನ ಸರ್ಕಾರದವರು ಅಮೂಲ್ಯವಾದ ಸೂಚನೆಯೊಂದನ್ನು ಕೊಟ್ಟಿರುವರು. ಅದೇ ನೆಂದರೆ, ಸಾಮಾನ್ಯ ಜನ ಸಮುದಾಯವನ್ನು ಧರ್ಮ, ಸತ್ಯ, ನೀತಿ, ಕಾಯಕದಲ್ಲಿ

ಕಟಿ ಪ್ರದೇಶವಂತಿರುವುದು, ಭೂ ಲೋಕ, ನರಕ ಸ್ವರ್ಗಗಳಿಗೆ ಮಹಾದ್ವಾರವೆನಿಸಿರುವುದು. ಈ ಲೋಕದಿಂದ ಜೀವಾತ್ಮರುಗಳು ಅವರವರ ಪಾಪ, ಪುಣ್ಯಾನುಸಾರ ಅನೇಕ ನರಕಗಳಿಗೂ, ಸ್ವರ್ಗಾದಿ ಲೋಕಗಳಿಗೂ ತೆರಳಿ ಅಲ್ಲಿ ಕ್ರೂರ ಕ್ರಮರ್ಮಕ್ಕೆ ತಕ್ಕ ಘೋರ ಯಾತನೆಯನ್ನು ಸಾವಿರಾರು ವರ್ಷ ಅಪಾರ ದುಃಖ, ಹಿಂಸೆಗಳನ್ನು ಅನುಭವಿಸಲೇ ಬೇಕಾಗುವುದು, ಏಕೆಂದರೆ ॥ ಯಮಸ್ಯ ಕರುಣಂ ನಾಸ್ತಿ ॥. ಪುಣ್ಯ ಜೀವಿಗಳು ಸ್ವರ್ಗಾದಿ ಲೋಕಗಳಲ್ಲಿ ಸುಖಿಸಿ, ಅನಂತ ಕಾಲಾನಂತರ ॥ ಕ್ಷೀಣೇ ಪುಣ್ಯೇ । ಮರ್ತ್ಯ ಲೋಕಂ ವಿಶಂತಿ ॥ ಪುನರಪಿ ಭೂ ಲೋಕದಲ್ಲಿ ಜನಿಸಿ, ಶ್ರೀ ಗುರು ಕರುಣೆಯಿಂದ ಶಿವಜ್ಞಾನ, ಶಿವಪೂಜೆ, ಶಿವವ್ರತ, ಶಿವಮಂತ್ರ ಜಪ ಮತ್ತೂ ನಿರಂತರ ಶಿವಧ್ಯಾನ ದಲ್ಲಿ ರಮಿಸುತ್ತಾ, ಲೌಕಿಕ ಕಾರ್ಯಭಾರಗಳನ್ನು ಸರಳತೆ, ಜಾಣ್ಮೆ, ನಿರ್ವಂಚನೆ ಯಿಂದ ಕೂಡಿ, ಶಿವನ ನೇತೃತ್ವದಲ್ಲಿ ತಾನು ತನ್ನ ಪಾಲಿನ ಕರ್ತವ್ಯವನ್ನು ನಿರ್ಮೋಹ ಭಾವದಿಂದ ನೆರವೇರಿಸಿ ತಾನು ಕೈ ಕೊಂಡ ಉದ್ಯೋಗ, ಕೃಷಿ, ಕಾರ್ಮಿಕ ರಂಗದಲ್ಲಿ ಸತತ ದುಡಿದು ಶ್ರೀಮಂತನೂ ಧೀಮಂತನೂ ಆಗಿ, ದಾನ ಧರ್ಮ, ಪರೋಪಕಾರ ಗಳನ್ನೆಸಗುತ್ತಾ, ಜನಸೇವೆಯೇ ಈಶಸೇವೆ ಎಂದು ತ್ರಿಕರಣ ಶುದ್ಧಿಪೂರ್ವಕ ಯಾವ ಜೀವವು ಕಾಯಕವನ್ನು ಕೈಗೊಂಡಿರಬೇಕು. ಏಕೆಂದರೆ ಇದು ಕರ್ಮ ಭೂಮಿ ಮತ್ತು ಧರ್ಮ ಕ್ಷೇತ್ರವೆನಿಸಿದೆ. ಇದು ಕರ್ತಾರನ ಕಮ್ಮಟಿ. ಈ ಲೋಕವನ್ನು ಹಾಗೂ ಮಾನವ ದೇಹ ಬಿಟ್ಟರೆ, ಮತ್ತಿನ್ಯಾವ ಲೋಕದಲ್ಲೂ ಹೊಸ ಕರ್ಮಾಚರಣೆಗೆ ಕಿಂಚಿತ್ತೂ ಸ್ಥಳವಿಲ್ಲ. ಇದನ್ನು ಈಗಲೇ ಅರಿತು ಮಾನವ ಕೃತ ಕೃತ್ಯನಾಗಬೇಕು. ಮಿಂಚಿ ಹೋದ ಮೇಲೆ ಚಿಂತಿಸಿ ಫಲವಿಲ್ಲ. ಸಾಮಾಜಿಕ, ರಾಜಕೀಯ, ಧಾರ್ಮಿಕ ಕ್ಷೇತ್ರಗಳಲ್ಲಿ ಮೈಯೆಲ್ಲಾ ಕಣ್ಣಾಗಿ ನಿಸ್ವಾರ್ಥತೆಯಿಂದ ದುಡಿಯಬೇಕು.

॥ ಆತ್ಮಾನಂ ರಥಿನಂ ವಿದ್ಧಿ । ಶರೀರಂ ರಥ ಮೇವಚ ॥
ಬುದ್ಧಿಂತು ಸಾರಥಿಂ ವಿದ್ಧಿ । ಮನಃ ಪ್ರಗ್ರಹ ಮೇವಚ ॥
ಇಂದ್ರಿಯಾಣಿ ಹಯಾಣ್ಯಾ ಹುಃ । ವಿಷಯಾ‌ಸ್ತೇಷು ಗೋಚರಾಃ ॥

ಎಲೆ ಮಾನವ ! ಶರೀರ ಒಂದು ದಿವ್ಯ ರಥ. ಜೀವಾತ್ಮ ಈ ರಥದಲ್ಲಿ ಅಲಂಕೃತನಾಗಿ ಮಂಡಿಸಿರುವ ಸ್ವಾಮಿ. ಪಂಚ ಜ್ಞಾನೇಂದ್ರಿಯಗಳು ಈ ರಥವನ್ನು ಎಳೆಯುವ ಮದಿಸಿದ ಪಂಚ ವರ್ಣದ ಕುದುರೆಗಳೆಂದು ಚೆನ್ನಾಗಿ ಅರಿತು ಬಾಳುವವನಾಗು.

ಮನಸ್ಸೆ ಈ ಐದು ಅಶ್ವಗಳನ್ನು ಬಿಗಿಯಾಗಿ ಹಿಡಿದಿರುವ ಲಗಾಮೆಂದು ತಿಳಿ. ಈ ಕುದುರೆಗಳು ರಥವನ್ನು ಸಾಗಿಸುವ ಹೆದ್ದಾರಿಗಳು ಐದು ಇವೆ. ಶಬ್ದ, ಸ್ಪರ್ಶ ರೂಪ, ರಸ ಮತ್ತೂ ಗಂಧ, ಈ ಐದು ಮಾರ್ಗದಲ್ಲಿ ರಥವು ಸದಾ ಓಡುತ್ತಲಿದೆ.

ಈ ಮಹಾ ರಥವ ಸಾರಥಿ ಬುದ್ಧಿ, ಇವನ ಕೈಯ್ಯಲ್ಲಿ ಲಗಾಮುಗಳಿವೆ. ಸಾರಥಿ ರಥ ಓಡಿಸುವಾಗ ಲಗಾಮನ್ನು ಸಡಿಲಿಸಿದರೆ ಪ್ರಚಂಡವಾದೀ ಕುದುರೆಗಳು ರಥವನ್ನು ಹಳ್ಳದಲ್ಲಿ ಕೆಡವೀ ರಥಿಕನಾದ ಆತ್ಮನಿಗೆ ಅಪಾರ ಹಾನಿ ಮಾಡುವುವು. ಆದ್ದರಿಂದ, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಅಂತರಂಗ ಚತುಷ್ಟಯ ಸಂಪನ್ನನಾಗಿ ಮಾನವ ಬಾಳಬೇಕು, ದುಡಿಯಬೇಕು, ಉಣ್ಣಬೇಕು, ನಂಬಿದವರನ್ನೂ ಆಶ್ರಯಿಸಿದವರನ್ನೂ ಸಂತುಷ್ಟಿಗೊಳಿಸಿ, ಹರಗುರು ಸೇವೆಗಳಿಂದ ಧನ್ಯನೆನಿಸಬೇಕು. ತನ್ನಂತೆಯೇ ಮಕ್ಕಳನ್ನೂ ಸಾಕಿ ಸಲುಹಬೇಕು. ಸ್ತ್ರೀ ಜನಗಳಲ್ಲಿ ಮಾತೃಭಾವ, ಪೂಜ್ಯತೆ ಇತ್ಯಾದಿ ಗೌರವದಿಂದಿರಬೇಕು. ಯಾಕೆಂದರೆ ॥ ಯತ್ರ ನಾರ್ಯಸ್ತು ಪೂಜ್ಯಂತೇ । ತತ್ರ ರಮಂತೇ ಸರ್ವದೇವತಾಃ ॥ ಎಂದಿವೆ ವೇದ. ಮಾನವರ ಶ್ರೇಯಸ್ಸು ಪ್ರೇಯಸ್ಸುಗಳು ಸ್ತ್ರೀ ಸಹಜವಾದ ಸ್ವಾತಂತ್ರ್ಯದಲ್ಲಿ ಅಡಗಿವೆ. ಅವಳಿಂದ ಇವನ ಎಲ್ಲಾ ಕಲ್ಯಾಣ, ಅಭ್ಯುದಯ, ಸಂತಾನಾಭಿವೃದ್ಧಿ, ಧರ್ಮಾಭಿವೃದ್ಧಿ, ಹೆಚ್ಚೇನು; ಧರ್ಮ ಪತ್ನಿಯೇ ಈತನಿಗೆ ಸ್ವರ್ಗಕ್ಕೆ ದಾರಿ. ವೇದ ಇವಳನ್ನು ॥ ಗೃಹಿಣೀ ಗೃಹ ಮುಚ್ಯತೇ ॥ ಎಂದು ಹರಸಿ, ಈಕೆ ಕುಟುಂಬದ ವಿಶಾಲ ಕ್ಷೇತ್ರದಲ್ಲಿ ॥ ರಾಜ್ಞೀ ಭವ ॥ ಮಹಾ ರಾಣಿಯೆಂದು ಸ್ತುತಿಸಿದೆ.

ಈ ಕಾರಣದಿಂದ ಶಿವನು ಶಕ್ತಿಸ್ವರೂಪಿಣಿಯರಾದ ಧರ್ಮಪತ್ನಿದ್ವಯರನ್ನು ಎಡತೊಡೆಯ ಮೇಲೂ, ತನ್ನ ಶಿರಸ್ಸಿನ ಜಟಾ ಭಾರದಲ್ಲೂ, ಶ್ರೀ ಮಹಾ ವಿಷ್ಣು ತನ್ನ ಶ್ರೀವಕ್ಷ ಸ್ಥಳದಲ್ಲೂ ಕುಳ್ಳಿರಿಸಿ ಪೂಜಿಸಿ ಆನಂದಿಸುವಾಗ, ಚತುರ್ಮುಖ ಬ್ರಹ್ಮನು ತನ್ನ ಅರ್ಧಾಂಗಿ ಶ್ರೀ ಶಾರದಾಂಬೆಯನ್ನು ತನ್ನ ಜಿಹ್ವ ( ನಾಲಿಗೆಯೆಂಬ ) ಸಿಂಹಾಸನಾಗ್ರದಲ್ಲಿ ಕುಳ್ಳಿರಿಸಿ, ಸದಾ ಗೌರವಿಸುತ್ತಲಿದ್ದಾರೆಂದ ಬಳಿಕ, ಬಡ ಮಾನವರಲ್ಲಿ ಬಹುಪಾಲು ಗಂಡಸರು ಅಬಲೆಯರಾದ ಸ್ತ್ರೀ ಸಮುದಾಯದವರೊಂದಿಗೆ ವಿಶೇಷತಃ ತಂ, ತಮ್ಮ ಧರ್ಮ ಪತ್ನಿಯರೊಂದಿಗೂ ಇಂದು ಯಾವ ರೀತಿ ವರ್ತಿಸುತ್ತಲಿದ್ದಾರೋ, ಅದಕ್ಕನುಗುಣವಾಗಿ ಅವರು ಪ್ರತಿಫಲವನ್ನು ಹೊಂದುತ್ತಲಿದ್ದಾರೆ. ಪತ್ನೀ ಕೇವಲ ಆಳಲ್ಲ. ॥ ಬುದ್ಧಿಃ ಕರ್ಮಾನು ಸಾರಿಣೀ ॥ ಎಂದಿದೆ ಸಚ್ಛಾಸ್ತ್ರ ಆದ್ದರಿಂದ. ಗಂಡನು ಪತ್ನಿಯನ್ನು ಸದಾ ತನ್ನ ಸೇವಕಳೆಂದು ನೆನೆಯಬಾರದು. ॥ ಕಾರ್ಯೇಷು ದಾಸಿ । ಕರಣೇಚ ಮಂತ್ರಿ । ರೂಪೇಚ ಲಕ್ಷ್ಮೀ । ಕ್ಷಮಯಾ ಧರಿತ್ರೀ । ಭೋಜ್ಯೇಷು ಮಾತಾ । ಶಯನೇಚ ವೇಶ್ಯಾ । ಷಡ್ಗುಣ್ಯ ಯುಕ್ತಾ ಕುಲ ಧರ್ಮ ಪತ್ನೀ ॥ ಈ ಅರ್ಥ ಸ್ಪಷ್ಟವಿರುವುದು ಪತಿಯು ಆ ಆಕಾಲಕ್ಕೆ ತಕ್ಕಂತೆ ತನ್ನ ಅರ್ಧಾಂಗಿಯಲ್ಲಿ ಗೌರವ ಯುತನಾಗಿ ನಡೆದುಕೊಳ್ಳಬೇಕು. ಎಲ್ಲಾ ಸಂದರ್ಭಗಳಲ್ಲೂ ಸತಿಪತಿಗಳು ಪ್ರೇಮ್ಮನದಿಂದ ಕೂಡಿ ಹರ್ಷದಿಂದ ತಮ್ಮ ಬಾಳನ್ನು ಆದರ್ಶ ರೀತಿಯಲ್ಲಿ ಬೆಳಗಿಸಬೇಕು. ತನ್ನ ಹೆಂಡತಿ

ಪತಿವ್ರತೆಯಾಗಿರಬೇಕೆಂದು ಆಶಿಸುವಂತೆ, ತಾನೂ ಏಕಪತ್ನೀ ವ್ರತಶೀಲನಾಗಿ ವೃಷ ಕಾಯ ಮನೋ ಬುದ್ಧಿವುಳ್ಳವನಾಗಿರಬೇಕು.

## ಮ ಹಿ ಳೆ

ಹೆಣ್ಣಾಗಿ ಹುಟ್ಟಿದ ಮೇಲೆ ಆಕೆಯ ಜವಾಬುದಾರಿಕೆ ಗಂಡಸಿಗಿಂತಲೂ ಹತ್ತು ಪಟ್ಟು ಅಧಿಕವಿರುತ್ತೆ. ಹೆಣ್ಣು ಸಂಸಾರದ ಕಣ್ಣು. ಕಸವನ್ನು ರಸವಾಗಿ ಮಾಡುವ ಜಾಣ್ಮೆಯುಳ್ಳವಳು. ॥ ಗುರು ದೈವಂ ವಿದ್ಯಾರ್ಥಿಗೆ ತರುಣಿಗೆ ಪತಿ ದೈವಂ ॥ ಎಂದರಿತು ಬಾಳಬೇಕು. ॥ ಕಾಂತಾ ನ ದುರ್ಭಾಷಿಣೀ। ಆಕೆಯ ಬಾಯಲ್ಲಿ ಕೆಟ್ಟ ನುಡಿ ಬರಬಾರದು, ಮಾತಿಗೆ ಮುಂಚೆ ಅಳಬಾರದು ಅನಾವಶ್ಯಕವಾಗಿ ಪದೆ ಪದೇ ಅನ್ಯರ ಗೃಹಗಳಿಗೆ ಪ್ರವೇಶಿಸಬಾರದು. ಅತಿ ಹಾಸ್ಯದ ಮಾತುಗಳನ್ನಾಡಬಾರದು. ಸುಳ್ಳು, ಕಳ್ಳತನ ಎಂದೂ ಆಡಬಾರದು ಮಾಡಬಾರದು. ॥ಕುಲ ವೆಣ್ಣಿಂ ಗೆಣೆಯಾವುದೈ॥ ಸತ್ಕುಲದಲ್ಲಿ ಹುಟ್ಟಿ ಶೀಲವಂತಳೂ, ಪತಿ ವ್ರತೆಯೂ ಆಗಿರುವಲ್ಲಿ ಅವಳಿಗೆ ಸಮಾನರು ಬೇರೆ ಯಾರೂ ಇಲ್ಲ. ಹೆಣ್ಣು ಉಭಯ ಕುಲದ ದೀಪ. ತವರು ಮನೆಯ ವಂಶದ ಕೀರ್ತಿ ಮತ್ತೂ ಗಂಡನ ಮನೆಯ ವಂಶದ ಕೀರ್ತಿಗಳನ್ನು ಎತ್ತಿಹಿಡಿದು ಜ್ಯೋತಿಯಂತೆ ಬೆಳಗಬೇಕು. ಧರ್ಮಾಭ್ಯುದಯಕ್ಕೆ ಅವಳೇ ಅಧಿಕಾರಿ ಹಾಗೂ ಸರ್ವತ್ರ ಮಂಗಳಾಂಗಿಯೆನಿಸಿರುವಳು. ಹೆಂಡತಿಯನ್ನು ಕಳೆದುಕೊಂಡವನು, ಎಷ್ಟೇ ಶ್ರೀಮಂತನಾಗಿರಲಿ, ಧೀಮಂತನಾಗಿರಲಿ, ಅವನಿಗೆ ಪೂಜ್ಯ ಸ್ಥಾನವಿರುವುದಿಲ್ಲ. ಕಾರಣ ಮಂಗಳಾಂಗಿಯನ್ನು ಕಳೆದುಕೊಂಡ ದೌರ್ಭಾಗ್ಯನವನು. ಸಮಾಜದಲ್ಲಿ ಧಾರ್ಮಿಕ ಕ್ಷೇತ್ರದಲ್ಲಿ ಹೆಚ್ಚೇನು ರಾಜಕೀಯ ಕ್ಷೇತ್ರದಲ್ಲೂ ತ್ರೇತಾ ಯುಗದಿಂದಲೂ ಹೆಣ್ಣಿನ ಸ್ಥಾನ ಮಾನಗಳು ಉನ್ನತವೆನಿಸಿ ಸ್ತುತ್ಯಾರ್ಹವೆನಿಸಿದೆ. ಹೆಣ್ಣಿನ ಮೇಲೆ ದೌರ್ಜನ್ಯವನ್ನು ಅತಿಯಾಗಿ ನಡೆಸಿದರೆ, ಆ ನಗರ ಅಷ್ಟೇ ಅಲ್ಲ, ಆ ರಾಜ್ಯ ಏಕೆ ಆ ರಾಷ್ಟ್ರವೇ ಅವನತಿಗೆ ಗುರಿಯಾಗುವುದು. ಇತ್ಯಾದಿ ಕಾರಣಗಳಿಂದ ಜಗತ್ತಿನಲ್ಲಿ ಮಹಿಳಾ ಸೌಹಾರ್ದತೇ, ಸಹಿಷ್ಣುತಾ ಭಾವದಿಂದ ಉಜ್ವಲವಾಗಿ ಬೆಳೆಯಬೇಕು. ಬೆಳೆದಷ್ಟು ಲೋಕಕ್ಕೆ ಕಲ್ಯಾಣ ಉಂಟಾಗುವುದು. ಆಕೆ ಅನ್ನಪೂರ್ಣೇಶ್ವರಿಯಾಗಿ, ಶಾಂತಿ ತೃಪ್ತಿಗಳಿಗೆ ಆಗರವಾಗಿ ಪರಿಶೋಭಿಸುವಳು. ಆರರಿವುಗಳುಳ್ಳ ಮಾನವರು ತಮ್ಮ ಕರ್ತವ್ಯವನ್ನರಿತು ಬಾಳಿ ಕೀರ್ತಿ ಶೇಷರಾಗಿ ದೀರ್ಘಕಾಲ ಸುಖವಾಗಿ ಸಕಲರಲ್ಲೂ ಸೌಹಾರ್ಧ ಭಾವದಿಂದ, ಸಾಧು ಸಜ್ಜನರು ಸೈ ಎನ್ನುವಂತೆ ಬಾಳಬೇಕು ॥ ಸಾಧೋ ಸಂಘ ಮುಪಾಸತೇಹಿ ಸತತಂ ॥ ಸಜ್ಜನರ ಸಂಘ ಹೆಜ್ಜೇನು ಮೆದ್ದಂತೆ ಇರುತ್ತೆ. ॥ ಸಜ್ಜನರು ಸತ್ತರೆ ನಿರ್ಜರರು ಮರುಗುವರು । ದುರ್ಜನರು ಸತ್ತರೆ ಮೈ ಮೇಲಿನ ಕಜ್ಜಿ ಹೋದಂತೆ ಸರ್ವಜ್ಞ ॥.

॥ ಜೀರ್ವ ಭದ್ರಾಣಿ ಪಶ್ಯತಿ । ಏತಿ, ಜೀವಂತ ಮಾನಂದೋ ನರಂ ।
ವರ್ಷ ಶತಾ ದಪಿ ॥

**॥ ಜೈ ಹಿಂದ್ ! ವಂದೇ ಮಾತರಂ ! ವಂದೇ ರೇಣುಕಂ ॥**



## ಅಧ್ಯಾಯ 10

॥ ಸೂಕ್ಷ್ಮಾಯ ಶುಚಯೇ ತಸ್ಮೈ । ನಮೋ ವಾಕ್ತತ್ವ ತಂತವೇ ।
ವಿಚಿತ್ರೋ ಯಸ್ಯ ವಿನ್ಯಾಸೋ । ವಿಧಧಾತಿ ಜಗತ್ಪಟಂ ॥

॥ ದೇವೀ ಪ್ರಸನ್ನಾರ್ತಿ ಹರೇ ಪ್ರಸೀದ । ಪ್ರಸೀದ ಮಾತರ್ಜಗತೋಽಖಿಲಸ್ಯ ।
ಪ್ರಸೀದ ವಿಶ್ವೇಶ್ವರೀ ಪಾಹಿ ವಿಶ್ವಂ ತ್ವಮೀಶ್ವರೀ ದೇವೀ ಚರಾಚರಸ್ಯ ॥

॥ ಪ್ರಾತರ್ಭಜಾಮಿ ಶಿವಮೇಕ ಮನಂತ ಮಾದ್ಯಂ ।
ವೇದಾಂತ ವೇದ್ಯಮನಘಾಂ । ಪುರುಷಂ ಮಹಾಂತಂ ॥

॥ ನಾಮಾದಿ ಭೇದ ರಹಿತಂ ಷಡ್ಭಾವಶೂನ್ಯಂ ।
ಸಂಸಾರ ರೋಗ ಹರ ಮೌಷಧ ಮದ್ವಿತೀಯಂ ॥

### ಶ್ರೀ ಶಂಕರರು ಶ್ರೀ ಉಭಯ ಭಾರತಿ ಸರಸ್ವತಿ ದೇವಿಯನ್ನು ತಮ್ಮ ಅದ್ವೈತ ಮಠದ ಅಧಿಷ್ಠಾನ ದೇವತೆಯಾಗಿ ಸದಾ ಪ್ರಸನ್ನ ಭಾವದಿಂದ ಮೈದೋರಿ ರಕ್ಷಿಸಬೇಕೆಂದು ಪ್ರಾರ್ಥಿಸಿದುದು.

ಶ್ರೀ ಮಂಡನ ಮಿಶ್ರರನ್ನು ಮಾಹಿಷ್ಮತಿ ನಗರದಲ್ಲಿ ಶ್ರೀ ಶಂಕರಾಚಾರ್ಯರು ತಮ್ಮ ದ್ವಿತೀಯ ಶಿಷ್ಯನನ್ನಾಗಿ ಸ್ವೀಕರಿಸಿ, ಶ್ರೀ ಸುರೇಶ್ವರಾಚಾರ್ಯರೆಂಬ ಹೆಸರನ್ನಿತ್ತರು. ನಂತರ ಸಾಕ್ಷಾತ್ ಸರಸ್ವತಿಯೊಂದಿಗೆ ತಾವೂ ಇದುವರವಿಗೂ ಸಂಭಾಷಣೆ ಮಾಡಿದುದು ತಮ್ಮ ಭಾಗ್ಯವೆಂದು ಸಂತೋಷಿಸಿ, ಶ್ರೀ ಉಭಯ ಭಾರತಿ ವಿದ್ಯಾ ಮಾತೆಯನ್ನು ಭಕ್ತಿಯಿಂದ ಸ್ತುತಿಸುತ್ತಾ ॥ ವಾಣೀ ವೀಣಾ ಪಾಣೆ । ಪನ್ನಗವೇಣೆ ॥ ನತಗೀರ್ವಾಣೆ ಸುಗುಣ ಶ್ರೇಣೆ । ಬೊಮ್ಮನ ರಾಣೆ ಮಂಗಳ ಸರಣೆ ಕಲ್ಯಾಣೀ ॥ ಎಂಬುದಾಗಿ ಸಂಕೀರ್ತಿಸಿ, ಶ್ರೀ ವಿದ್ಯಾಂಬೆಯನ್ನು ದೇವೀ ! ನಾನು ಸ್ಥಾಪಿಸಲಿರುವ

ಅದ್ವೈತ ಮಠಗಳಲ್ಲಿ ನೀನು ಕೃಪೆದೋರಿ ಅಧಿಷ್ಠಾನ ದೇವತೆಯಾಗಿ ನಲಿದೊಲಿದು ಪ್ರಸನ್ನ ಭಾವದಿಂದ ಸದಾ ನೆಲಸಿ ನಮ್ಮನ್ನು ಅನವರತ ರಕ್ಷಿಸಬೇಕೆಂದು ಭಕ್ತಿ ಪೂರ್ವಕ ಪ್ರಾರ್ಥಿಸಿದರು. ಯತಿವರ್ಯರ ಪ್ರಾರ್ಥನೆಯಿಂದ ಸಂಪ್ರೀತಳಾದ ಉಭಯ ಭಾರತಿ ಸರಸ್ವತಿಯು ಹಸನ್ಮುಖದಿಂದ ॥ ತಥಾಸ್ತು ॥ ಎಂದು ಹರಸಿ, ಪೊಡ ನೀಲಾಂಬರದಿಂದ ಶೋಭಿತವಾದ ನಭೋ ಮಂಡಲದಲ್ಲಿ ಅಂತರ್ಧಾನಳಾದಳು.

## ಶ್ರೀ ಶಂಕರಾಚಾರ್ಯರು ಕಾಶ್ಮೀರಿಗೆ ಪ್ರಯಾಣ ಬೆಳಸಿದುದು.

ಶ್ರೀ ಆದಿ ಶಂಕರರು ತಮ್ಮ ಆದಿ ಗುರು ಶ್ರೀ ಅಗಸ್ತ್ಯ ಮಹರ್ಷಿಗಳನ್ನು ಹಾಗೂ ಶ್ರೀ ವೇದ ವ್ಯಾಸಾಚಾರ್ಯ ಗುರುಗಳು ತಮಗೆ ಸಕಾಲದಲ್ಲಿ ದರ್ಶನವಿತ್ತು ಸೂಕ್ತ ಮಾರ್ಗದರ್ಶನ ನೀಡಿ, ಹಸ್ತಮಸ್ತಕ ಸಂಯೋಗ ದೀಕ್ಷೆಯಿಂದ ಕಟಾಕ್ಷಿಸಿ ಪ್ರಭಾವದಿಂದ ಅಡಿಗಡಿಗೆ ಪುಳುಕಾಂಕಿತರಾಗುತ್ತಾ ಶ್ರೀ ಗುರುದ್ವಯರನ್ನು ಸ್ಮರಿಸಿ ಮಾನಸಿಕವಾಗಿ ವಂದಿಸುತ್ತಲಿದ್ದರು. ಶ್ರೀಮದಾಚಾರ್ಯರಲ್ಲಿ ಶಂಕರರಿಗೆ ಎಂಥ ಗುರುಭಕ್ತಿ ಗಾಢವಾಗಿತ್ತೆಂಬುದು ಇದರಿಂದ ವೇದ್ಯವಾಗುತ್ತೆ. ಶ್ರೀ ವ್ಯಾಸರ ಉಪ ದೇಶದಂತೆ ತಾವು ಹೋದ ಕಡೆಗಳೆಲ್ಲೆಲ್ಲಾ ತಾವು ರಚಿಸಿರುವ ಭಾಷ್ಯಾದಿಗಳ ಸಾರ ವನ್ನು ಭಕ್ತಕೋಟಿಗೆ ವಿವರವಾಗಿ ಬೋಧಿಸುತ್ತಲಿದ್ದರು.

ಶ್ರೀ ಶಂಕರರು ಶ್ರೀ ವಿದ್ಯಾಂಬೆಯಿಂದ ಅನುಗ್ರಹೀತರಾದಬಳಿಕ ಶ್ರೀ ದೇವಿ ಯನ್ನು ಸ್ಮರಿಸುತ್ತಾ ಮಾಹಿಷ್ಮತಿ ನಗರದಿಂದ ಹೊರಟು, ಕೆಲವು ದಿನಗಳ ನಂತ ನೇಪಾಳಕ್ಕೆ ಬಂದರು. ಇಲ್ಲಿ ಪ್ರಸಿದ್ಧವೆನಿಸಿದ ಜಗತ್ಪತಿ ಶ್ರೀ ಪಶುಪತಿನಾಥನ ದಿವ್ಯ ಸಂದರ್ಶನ ಹಾಗೂ ಪೂಜಾನುಷ್ಠಾನಗಳಿಂದ ಆನಂದಿಸಿದರು. ನೇಪಾಳದಲ್ಲಿಯ ಪದ್ಧತಿ ಪ್ರಕಾರ ನಾನಾ ಕಡೆಗಳಲ್ಲಿ ಪಾದಚಾರಿಯಾಗಿ ಸಂಚರಿಸುತ್ತಾ ತಾವು ರಚಿಸಿದ ಪರಮ ಅದ್ವೈತ ಸಿದ್ಧಾಂತವನ್ನು, ಆಸ್ತಿಕ ವೃಂದದವರ ಮಧ್ಯೆ ಹೃದಯಂಗಮವಾಗಿ ವಿವಿಧ ರೀತಿಯಲ್ಲಿ ಬೋಧಿಸಿದರು, ಕೆಲವು ಕಾಲಾನಂತರ, ಶ್ರೀ ಪಶುಪತಿನಾಥನ ಸ್ಮರಣೆಯೊಂದಿಗೆ ನೇಪಾಳದಿಂದ ಕಾ ಶ್ಮೀ ರ ದೇಶಕ್ಕೆ ದಯಮಾಡಿಸಿದರು. ಇಲ್ಲಿ ಕೆಲವು ಕಾಲ ಅಲ್ಲಲ್ಲೇ ಪಾದಚಾರಿಗಳಾಗಿ ಸಂಚರಿಸುತ್ತಾ, ಅದ್ವೈತ ಸಿದ್ಧಾಂತದ ತಿರುಳನ್ನು ಸುಲಿದ ಬಾಳೆಯ ಹಣ್ಣಿನಂದದಿ ಜನತೆಗೆ ವಿವರಿಸಿ ಬೋಧಿಸುತ್ತಾ ಆಸ್ತಿಕ ರನ್ನು ವೈದಿಕ ಮಾರ್ಗದತ್ತ ಆಕರ್ಷಿಸಿದರು. ಈ ಜಗತ್ತು ನೋಡುತ್ತಿದ್ದಂತೆ ನಮ್ಮ ಕಣ್ಣೆದುರಿಗೆ, " ದೃಷ್ಟನಷ್ಟ " ವಾಗುತ್ತಲಿದೆ ಎಂಬ ವಿವರ್ತ ವಾದವನ್ನು ವಿವರಿ ಸಿದರು. ॥ ಬ್ರಹ್ಮಸತ್ಯಂ ಜಗನ್ಮಿಥ್ಯಾ । ಜೀವೋ ಬ್ರಹ್ಮೈವ ನ ಪರಃ ॥ ಎಂದು

ತಮ್ಮ ಘ ನ ತ ತ್ವ ವ ನ್ನು ವಿಶಾಲವಾಗಿ ಬೋಧಿಸಿದರು. ಜಗತ್ತು ಜಾಯತೇ, ವರ್ಧತೇ, ಅಪಕ್ಷೀಯತೇ, ಪರಿಣಮತೇ ಮತ್ತು ವಿನಶ್ಯತಿ ಎಂಬ ಷಡ್ಭಾವವಿಕಾರದಿಂದ ಕೂಡಿದೆ. ಇವೆಲ್ಲಾ ಮಾಯೆಯ ಆಟ ಅವಿದ್ಯಾ ರೂಪ ಅಸ್ತಿತ್ವವಿಲ್ಲದ ತೋರ್ವಿಕೆ ॥ ಸರ್ವಂ ಶಿವಮಯಂ । ರೇ ರೇ ಸರ್ವಂ ಬ್ರಹ್ಮಮಯಂ ॥ ಬ್ರಹ್ಮದ ವಿನಃ ಭೇರೇನು ಇಲ್ಲ ಎಂಬುದು ಶ್ರೀ ಶಂಕರರು ಬೋಧಿಸಿದ ಅದ್ವೈತವಿದು. ಕಾಶ್ಮೀರ ದೇಶದಲ್ಲಿ ವ್ಯಾಪಕವಾಗಿ ಸಂಚರಿಸುತ್ತಾ, ಆಚಾರ್ಯರು ಇಲ್ಲಿಯ ರಮಣೀಯವಾದ ಉತ್ತರದ ಹಿಮಾಲಯದ ಸೆರಗೆನಿಸಿದ ಶಾರದಿ ಎಂಬ ಗ್ರಾಮಕ್ಕೆ ಬಂದರು. ಇಲ್ಲಿ ಬಹು ಪುರಾತನ ಕಾಲದಿಂದ ಪ್ರಸಿದ್ಧವಾದ ಶ್ರೀ ಶಾರದಾಂಬೆಯ ದೇವಾಲಯವನ್ನು ಪ್ರವೇಶಿಸಿದರು. ಇಲ್ಲಿ ಅನಾದಿ ಕಾಲದಿಂದ ವಿರಾಜಿಸುವ ಶ್ರೀ ವಿದ್ಯಾಂಬೆ ಶಾರದಾದೇವಿಯ ಮನಮೋಹಕವಾದ ಸುಂದರ ವಿಗ್ರಹವಂದನ್ನು ಸಂದರ್ಶಿಸಿ ಚಕಿತರಾದರು. ಕೆಲವು ದಿನ ಇಲ್ಲಿದ್ದು ದೇವಿ ಉಪಾಸನೆಯಲ್ಲಿ ಮೈ ಮರೆತ್ತಿದ್ದರು. ಈ ಗುಡಿಯ ವಂದೆಡೆಯಲ್ಲಿ, ಅಧ್ಯಾತ್ಮ ವಿದ್ಯಾಮಯಳಾದ ಶ್ರೀ ಶಾರದಾದೇವಿಯು ಆರೋಹಣಂಗೈದು ವಿರಾಜಿಸುತ್ತಲಿದ್ದ ದಿವ್ಯ " ಸರ್ವಜ್ಞ ಸಿಂಹಾಸನ " ವಂದನ್ನು ಕಂಡು ಪರಮಾನಂದಭರಿತರಾದರು. ಕಾಶ್ಮೀರಿನ ಶ್ರೀ ಶಾರದಾ ದೇವಸ್ಥಾನದ ಮಹಾ ಪಂಡಿತರೊಂದಿಗೆ ವಾದಿಸಿ, ಅವರ ಸಂದೇಹಗಳನ್ನೆಲ್ಲಾ ಸೌಮ್ಯ ರೀತಿಯಲ್ಲಿ ಪರಿಹರಿಸಿ ಅಲ್ಲಿ ಅನೇಕ ವಿದ್ವನ್ಮಣಿಗಳನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಕೆಲವು ದಿವಸಗಳ ನಂತರ, ಪರಮ ಪೂಜ್ಯ ಶ್ರೀ ಆದಿ ಶಂಕರಾಚಾರ್ಯರು ಅಲ್ಲಿಯ ಅನೇಕ ಭಕ್ತರ ಮತ್ತೂ ಶಿಷ್ಯರ ಕೋರಿಕೆಯಂತೆ ಮೇಲುಕ್ತವಾದ, " ಮಹಿಮಾನ್ವಿತ ಸರ್ವಜ್ಞ ಸಿಂಹಾಸನ " ವನ್ನೇರಿ, ಸಹಸ್ರಾರು ಜನರಿಗೆ ದರ್ಶನಾಶೀರ್ವಾದಗಳನ್ನಿತ್ತು ಅನುಗ್ರಹಿಸಿದರು. ನಂತರ ಕಾಶ್ಮೀರದಲ್ಲಿ ಕಂಡ ಶ್ರೀ ಶಾರದಾದೇವಿಯ ವಿಗ್ರಹವಂವನ್ನು ತಮ್ಮೊಂದಿಗೆ ತೆಗೆದುಕೊಂಡು ಶ್ರೀ ಶ ಂ ಕ ರ ರು, ಅಲ್ಲಿಂದ ದಕ್ಷಿಣಾಭಿಮುಖವಾಗಿ ಹಿಂತಿರುಗಿ ಕರ್ನಾಟಕವತ್ತ ತಮ್ಮ ಪ್ರಯಾಣವನ್ನು ಶಿಷ್ಯರೊಂದಿಗೆ ಬೆಳೆಸಿದರು.



## ನಾಸ್ತಿತತ್ವಂ ಗುರೋಃ ಪರಂ

## ಅಧ್ಯಾಯ 11

॥ ಬಹಿಸ್ತಿಮಿರ ವಿಚ್ಛೇತ್ತಾ । ಭಾನುರೇಷ ಪ್ರಕೀರ್ತಿತಃ ।
ಬಹಿರಂತಸ್ತಮಶ್ಛೇದೀ ವಿಭು ರ್ದೇಶಿಕ ಭಾಸ್ಕರಃ ॥
(ಸಿ. ಶಿ. ಅ. 15 ಶ್ಲೋ. 27)

ಸೂರ್ಯೋದಯದಿಂದ ಜಗತ್ತನ್ನಾವರಿಸಿರುವ ಕತ್ತಲು ಮಾಯವಾಗಿ, ಎಲ್ಲೆಲ್ಲೂ ಬೆಳಕೇ ಬೆಳಕು. ದಿನಮಣಿಯ ಪ್ರಕಾಶ ಕೇವಲ ದೃಶ್ಯ ಪ್ರಪಂಚದ ಅಂಧಕಾರವನ್ನು ಮಾತ್ರ ಹೋಗಲಾಡಿಸಬಲ್ಲದು. ಆದರೆ " **ವಿಭು ರ್ದೇಶಿಕಭಾಸ್ಕರಃ** " ಶ್ರೀ ಮಹಾ ಗುರುವೆಂಬ ದೇಶಿಕ, ಚಿದಾದಿತ್ಯನು ಅಂತರಂಗದ ಅಂತಃಕರಣ ಚತುಷ್ಟಯಗಳನ್ನು ಮತ್ತೂ ಬಾಹ್ಯೇಂದ್ರಿಯಾದಿಗಳಿಂದ ಕೂಡಿರುವ ಇಂದ್ರಿಯಗಳಿಂದ ಜಗತ್ತನ್ನರಿಯಲು ಸಹಾಯಕವಾಗಿರುವ ಜ್ಞಾನಜ್ಯೋತಿಯನ್ನು ಹೃದಯದಲ್ಲಿ ಬೆಳಗುವಂತೆ ಮಾಡಿ ಶಿಷ್ಯನನ್ನು ಅಜ್ಞಾನಂಧಕಾರದ ನಿದ್ರೆಯಿಂದ ಎಚ್ಚರಗೊಳಿಸಿ ಶಿಷ್ಯನನ್ನು ಪ್ರಜ್ಞಾನಾನಂದ ಘನಮಯನೆನಿಸಿ, ಅರಿವು ಮಯನನ್ನಾಗಿಸುವನು ಶ್ರೀ ಗುರು, ಶ್ರೀ ಗುರುವಿನ ಕರುಣೆ ಸೀಮಾತೀತವೆನಿಸಿದೆ. ಇದು ಕಾರಣ ಶೃತಿದೇವಿ, **॥ ನ ಗುರೋರಧಿಕಂ । ನ ಗುರೋರಧಿಕಂ ॥** ಎಂದು ಒಂಭತ್ತು ಸಾರಿ ಉಚ್ಚ ಧ್ವನಿಯಿಂದ ಘೋಶಿಸುತ್ತಲಿದ್ದಾಳೆ.

### ॥ ಶ್ರೀ ಗುರು ಭಕ್ತಿಂ ಸದಾ ಕುರ್ಯಾತ್ ॥

**ಶ್ರೀ ಆದಿ ಶಂಕರಾಚಾರ್ಯರು ಉತ್ತರ ಭಾರತದ ದಿಗ್ವಿಜಯವನ್ನು ಪೂರ್ಣಗೊಳಿಸಿ ಅಲ್ಲಿಂದ, ಕರ್ನಾಟಕದತ್ತ ಹಿಂತಿರುಗಿದರು :**

ಶ್ರೀ ಆದಿ ಶಂಕರಾಚಾರ್ಯರು ದಕ್ಷಿಣ ಭಾರತದ, ಕಣ್ಮಣಿಯಂತೆ ಪ್ರಕಾಶಿಸಿ, ಕಸ್ತೂರಿ ತಿಲಕದಂತೆ ಘಮ ಘಮಿಪ ಕರ್ನಾಟಕ ದೇಶದೊಳಗೆ, ಮುದದಿಂದ ಮುಂದೆ ಮುಂದೆ ಅಡಿಗಳನ್ನಿಡುತ್ತಾ, ಶ್ರೀ ವೃಷ ಭಾಚಲೇಶ್ವರನನ್ನೂ. ಶ್ರೀ ಕಾಶಿ ವಿಶ್ವನಾಥನನ್ನು ಮತ್ತು ಪಶುಪತಿನಾಥನ ಸ್ಮರಣೆಯೊಂದಿಗೆ ಕೂ ಡ ಲಿ ಎಂಬ ಪವಿತ್ರವಾದ ತುಂಗೇ, ಭದ್ರಾ ನದಿಗಳ ಸಂಗಮ ಕ್ಷೇತ್ರದ ಕಡೆಗೆ ಬರುತ್ತಲೇ ಅವರ ಮ ನ ಸ್ಸಿಗೆ

ಪರಮಶಾಂತಿಯುಂಟಾಯಿತು. ಸಹ್ಯಾದ್ರಿ ಪರ್ವತಗಳ ಮಧ್ಯೆ ಜನ್ಮತಾಳಿದ ಜೀವಂತ ನದಿಗಳಾದ ತುಂಗೇ ಭದ್ರೆಯೆಂಬ ಸಾಧ್ವೀ ಮಣಿಗಳಾದ ಅಕ್ಕತಂಗಿಯರು ಬೇರೆ ಬೇರೆ ದಿಕ್ಕುಗಳಲ್ಲಿ ಸ್ವಲ್ಪ ದೂರ ಪ್ರವಹಿಸಿ, ಗಿರಿಗಹ್ವರಗಳನ್ನು ಬಳಸಿ, ಜೋಗ್ಗರೆದು ಧುಮ್ಮಿಕ್ಕಿ ನಾಲ್ಕು ದಿಕ್ಕುಗಳಲ್ಲಿ ತಮ್ಮ ಪವಿತ್ರವಾದ ಗಂಗೆಯನ್ನು ಚಿಮ್ಮಿಕ್ಕಿ, ಅನೇಕ ಸಹಸ್ರಾರು ಎಕರೆ ಭೂಮಿಯನ್ನು ಫಲವತ್ತಾಗಿಸಿ, ಕೃಷಿಗೂ, ಜನ ಜಾನುವಾರುಗಳಿಗೂ ನಿರಂತರ ಉಪಯುಕ್ತವಾಗಿ ಹರಿದು, ಕೂಡಲಿಯೆಂಬ ತಪೋಕ್ಷೇತ್ರದಲ್ಲಿ ತುಂಗೆ – ಭದ್ರಾ ನದಿಗಳು ಶಾಂತವಾಗಿ ಸಂಗಮಗೊಂಡು, ತುಂಗಭದ್ರಾಯೆಂಬ ಪವಿತ್ರಾಭಿದಾನದಿಂದ ಗಂಭೀರ ಭಾವದೊಂದಿಗೆ ॥ ನ ದೀನಾಂ ಸಾಗರೋ ಗತಿಃ ॥ ತಮ್ಮೊಡೆಯನೊಂದಿಗೆ ಕೂಡಿಕೊಳ್ಳಲು ಮನೋಹರವಾಗಿ ವೇಗದಿಂದ ಪ್ರವಹಿಸುತ್ತಲಿವೆ. ಆದಿ ಶ್ರೀ ಶಂಕರರು ಶಿವ ಪ್ರೇರಣೆಯಂತೆ ಶ್ರೀ ಕೂಡಲಿ ಕ್ಷೇತ್ರದಲ್ಲಿನ ಪ್ರಕೃತಿ ಸೌಂದರ್ಯಗಳಿಗೆ ಮನಸೋತು ಒಂದು ಮಠವನ್ನು ಪ್ರಥಮ ಭಾರಿಗೆ ಸ್ಥಾಪಿಸಿ, ತಮ್ಮ ವಾಸ್ತವ್ಯವನ್ನು ಹೂಡಿದರು. ತದನಂತರ ಶ್ರೀ ಶಂಕರರು ಶ್ರೀ ಶೃಂಗೇರಿಯಲ್ಲಿ ಎರಡನೆ ಮಠವನ್ನು ಸ್ಥಾಪಿಸಿದರು. ಈ ಮಠದ ಶ್ರೀ ಗುರು ಪರಂಪರೆ ಅಂದಿನಿಂದಲೂ ಪರಂಪರಾನುಗತವಾಗಿ ಬಂದಿರುವಂತೆ ಶ್ರೀ ಕೂಡಲಿ ಮಠದ ಶ್ರೀ ಗುರು ಪರಂಪರೆ ಆದಿ ಶಂಕರರ ಕಾಲದಿಂದಲೂ ಪ್ರತ್ಯೇಕವಾಗಿ ಉಳಿದು ಬೆಳೆದು ಬಂದಿದೆ. ಅಷ್ಟೇ ಅಲ್ಲ, ಶಂಕರರು ನಂತರ ಸ್ಥಾಪಿಸಿದ ಮಥುರಾ, ಬದ್ರಿ, ಪೂರೀ ಮಠಗಳ ಹಾಗೂ ಶ್ರೀ ಶಿವಕಂಚಿ ಕಾಮಕೋಟಿ ಮಠಗಳಲ್ಲಿನ ಶ್ರೀ ಗುರು ಪರಂಪರೆ ಕ್ರಿ. ಪೂ. ಕಾಲದಿಂದಲೂ ಅಲಾಹಿದಿಯಾಗಿ ಅವರವರ ಶ್ರೀ ಮಠಗಳಲ್ಲಿ ಆದಿ ಶ್ರೀ ಶಂಕರರನ್ನೇ ಮೊದಲುಮಾಡಿ, ಆ ಆ ಪೀಠಗಳ ಶ್ರೀಗುರು ಪರಂಪರೆಗಳು ಅನೂಚಾನವಾಗಿ, ಪ್ರತ್ಯೇಕ ಪ್ರತ್ಯೇಕವಾಗಿ ಉಳಿದು ಬೆಳೆದು ಬಂದಿವೆ. ಹೊಳೆ ನರಸೀಪುರದ ಆಧ್ಯಾತ್ಮ ಪ್ರಕಾಶ ಕಾರ್ಯಾಲಯದ ಸಂಸ್ಥಾಪಕರಾದ, ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ಕೂಡಲಿ ಮಠದ ಪ್ರಾಚೀನ ಸಂಪ್ರದಾಯಕ್ಕೆ ಸೇರಿದವರೆಂದು ನನ್ನಲ್ಲಿ ಹೇಳಿ, ಶ್ರೀ ಕೂಡಲಿ ಮಠವೇ ಶಂಕರರು ಸ್ಥಾಪಿಸಿದ ಪ್ರಥಮ ಮಠ, ತುಂಗಾ ತೀರದ ಶೃಂಗೇರಿಮಠ ನಂತರ ಬಂದದ್ದೆಂದೂ ತಿಳಿಸಿದರು.

ಶ್ರೀ ಶಂಕರಾಚಾರ್ಯರು ದಕ್ಷಿಣ ಭಾರತದ ಗೋಕರ್ಣ, ಮಹಾಬಲೇಶ್ವರ, ಮತ್ತೂ ಮೂಕಾಂಬಿಕಾ ಕ್ಷೇತ್ರಗಳಲ್ಲಿ ಸಂಚರಿಸುತ್ತಿರುವಾಗ, ಒಂದು ದಿವಸ, ಬ್ರಾಹ್ಮಣ ದಂಪತಿಗಳು, ತಮ್ಮ ಮಗ ಕಡು ದಡ್ಡನನ್ನು ಕರತಂದು ಶ್ರೀ ಶಂಕರರ ಪಾದದಲ್ಲಿ ಕೆಡವಿ, ಇವನನ್ನು ಕಾಪಾಡಬೇಕೆಂದು ಪ್ರಾರ್ಥಿಸಿದರು. ಆಚಾರ್ಯರು ಆ ತರುಣನನ್ನು ವೀಕ್ಷಿಸಿ, ನೀನಾರೆಂದು ಪ್ರಶ್ನಿಸಿದರು. ಆಗ ಶಿವನ ಕೃಪೆಯೋ ಅಥವಾ ಶ್ರೀ ಗುರುವಿನ ಕಟಾಕ್ಷವೋ ಏನೋ ಯೆಂಬಂತೆ ತಕ್ಷಣ ಬಾಯ್ದೆರೆದು ಹನ್ನೆ

ರಡು ಸಂಸ್ಕೃತ ಶ್ಲೋಕಗಳನ್ನುಚ್ಚರಿಸಿ ತಾನು ಪರಮಾತ್ಮಸ್ವರೂಪಿಯಾದ ಆತ್ಮನೆಂದು ಸ್ಪಷ್ಟ ವಾಣಿಯಿಂದ ಉತ್ತರಿಸಿ, ನಮಸ್ಕರಿಸಿ ಮೌನದಿಂದ ಬದ್ಧಾಂಜಲಿ ಪುಟನಾಗಿ ನಿಂತನು. ಶ್ರೀ ಮದಾಚಾರ್ಯರು ಆ ಬ್ರಹ್ಮಚಾರಿ ಪಠಿಸಿದ ಶ್ಲೋಕಾರ್ಥಗಳು ಸುಲಿದ ಬಾಳೆಯ ಹಣ್ಣಿನಂದದಿ, ಮತ್ತು ಅಂಗೈಯೊಳಗಿನ ನೆಲ್ಲಿಕಾಯಿ ಕಾಣುವಂತೆ ಆ ಶ್ಲೋಕಾರ್ಥಗಳು ಗಂಭೀರವಾಗಿ ವೇದ್ಯವಿದ್ದುದರಿಂದ, ಆ ವಟುವಿಗೆ ಹಸ್ತಾ ಮಲಕನೆಂದು ನಾಮಕರಣ ಮಾಡಿ, ಸನ್ಯಾಸ ದೀಕ್ಷಾಪೂರ್ವಕ ಅವನನ್ನು ಮೂರನೆ ಶಿಷ್ಯನನ್ನಾಗಿ ಆಚಾರ್ಯ ಶ್ರೀ ಶಂಕರರು ಸ್ವೀಕರಿಸಿದರು. ನಾಲ್ಕನೆ ಶಿಷ್ಯ ಆನಂದಗಿರಿ ಈತ ವಿದ್ಯಾವಂತನಲ್ಲ. ಶ್ರೀಶೃಂಗೇರಿ ಮಠದಲ್ಲಿ ದೀರ್ಘ ಕಾಲದಿಂದ, ಶ್ರದ್ಧಾಭಕ್ತಿ, ನಿಷ್ಕಾಮಭಕ್ತಿ, ಅವಧಾನ ಭಕ್ತಿಗಳಿಂದ, ಶ್ರೀಗುರು ಶಂಕರಾಚಾರ್ಯರ ಎಲ್ಲಾ ಸೇವೆ ಯನ್ನು ಶ್ರೀ ಮಠದಲ್ಲಿ ಮಾಡುತ್ತಾ, ಆಚಾರ್ಯರ ಪ್ರೀತಿಗೆ ಪಾತ್ರನಾಗಿದ್ದುದರಿಂದ, ಶ್ರೀ ಮದಾಚಾರ್ಯ ಶಂಕರರು ಆನಂದಗಿರಿಯನ್ನು ತಾವಾಗಿಯೇ ನಾಲ್ಕನೇ ಶಿಷ್ಯನ ನ್ನಾಗಿ, ಸನ್ಯಾಸದೀಕ್ಷಾ ಪೂರ್ವಕ ಸ್ವೀಕರಿಸಿ ಸಂತೋಷಿಸಿದರು.

## ದ್ವಿ ತೀ ಯ ಭಾ ಗ

## ಶ್ರೀ ಶಂಕರಾಚಾರ್ಯರು ಶ್ರೀ ಶೃಂಗೇರಿಯಲ್ಲಿ, "ಶೃಂಗೇರಿ ಮಠವನ್ನು" ಸ್ಥಾಪಿಸಿದುದು.

ಶ್ರೀ ಕೂಡಲಿ ಮಠದಲ್ಲಿ ಶಂಕರಾಚಾರ್ಯರು ಇದ್ದುಕೊಂಡಿರುವಾಗ ಒಂದು ದಿವಸ, ಸಂಧ್ಯಾಕಾಲಕ್ಕೆ ಮೊದಲು ತಮ್ಮ ಗೆಳೆಯ ಶ್ರೀ ಚಿತ್ಸುಕಾಚಾರ್ಯರೊಡನೆ ತುಂಗಾ ತೀರದಲ್ಲಿ ವಿಹಾರಾರ್ಥ ಅಡ್ಡಾಡುತ್ತಿರುವಾಗ, ಒಂದೆಡೆಯಲ್ಲಿ, ಇಳಿಬಿಸಿಲಿನ ತಾಪಕ್ಕೆ ಬಳಲಿ ಗರ್ಭಿಣಿಯಾದ ಒಂದು ಕಪ್ಪೆಗೆ ಪ್ರಸವವೇದನೆಯಿಂದ ಪರಿತಪಿಸುತ್ತಿರು ವುದನ್ನು ಕಂಡ ಘಟಸರ್ಪ ಒಂದು–ಆಶ್ಚರ್ಯ ದೈವಲೀಲೆಯ ಮರ್ಮವನ್ನು ಕಂಡವ ರಾರು !– ತನ್ನ ಹೆಡೆಯನ್ನು ಅರಳಿಸಿ ಕೊಡೆಯಿಂತೆ ಆ ಕಪ್ಪೆಗೆ ನೆರಳಿತ್ತು, ಅದರ ಸುಖ ಪ್ರಸವಕ್ಕಾಗಿ ನೆರೆ ನಿಂದ ಅದೃಶ್ಯವನ್ನು ಶ್ರೀ ಶಂಕರಾಚಾರ್ಯರು ಕಣ್ತುಂಬ ನೋಡಿ, ಅಹಹಾ ! ಇದೇನಾಶ್ಚರ್ಯ ಆಜನ್ಮಬದ್ಧ ದ್ವೇಶವನ್ನು ಮರೆತು, ಸೌಜನ್ಯ ಭಾವದಿಂದ ಸರ್ಪ ವರ್ತಿಸಿರುವುದನ್ನು ಕಂಡು, ಈ ಸ್ಥಳದ ಮಹಾತ್ಮೆಯೆ ಇದಕ್ಕೆ ಕಾರಣವೆಂದರಿತರು. ಅನೇಕ ಋಷಿ ಮಹರ್ಷಿಗಳು ತಪಸ್ಸು ಮಾಡಿದ ಸ್ಥಳವಾದ್ದ ರಿಂದ, ಈ ಪ್ರಶಾಂತ ವಾತಾವರಣದಲ್ಲಿ, ತುಂಗಾತೀರದಲ್ಲಿ ಆಶ್ರಮವನ್ನು ಸ್ಥಾಪಿಸ ಬೇಕೆಂದು ಶ್ರೀ ಆದಿ ಶಂಕರರು ಸಂಕಲ್ಪಿಸಿದರು. ಗಿರಿ ಗಹ್ವರಗಳಿಂದ ಆವೃತವಾ

ನೈಸರ್ಗಿಕ ಸೌಂದರ್ಯಾತಿಶಯಗಳಿಂದ ಮೆರೆಯುವ ಈ ಪುಣ್ಯ ಪ್ರದೇಶದಲ್ಲಿ ತ್ರೇತಾಯುಗದಲ್ಲಿ, ಶ್ರೀ ವಿಭಾಂಡಕ ಮಹರ್ಷಿಗಳ ಪುತ್ರ ಶ್ರೀ ಋಷ್ಯ ಶೃಂಗಮಹರ್ಷಿಗಳು ತಪಸ್ಸನ್ನಾಚರಿಸಿದ ಕಾರಣ ಇದನ್ನು ಅಂದಿನಿಂದಲೂ ಋಷ್ಯ ಶೃಂಗಗಿರಿಯೆಂದು ವ್ಯಾಪಕವಾಗಿ ಪ್ರಸಿದ್ಧಿ ಇರುವುದು. ಶ್ರೀ ಋಷ್ಯ ಶೃಂಗಮಹರ್ಷಿಗಳು ಸದಾ ಅಸಂಪ್ರಜ್ಞಾತ ಸಮಾಧಿ ಯೋಗದಲ್ಲಿ ನಿರತರಾಗಿರುತ್ತಿದ್ದರು. ಬರಬರುತ್ತಾ "ಶೃಂಗ ಗಿರಿ" ಎಂಬ ಶಬ್ದವು "ಶೃಂಗೇರಿ" ಎಂದು ಜನವಾಡಿಕೆಯಿಂದ ಕರೆಯಲಾಯಿತು.

ಆದಿ ಶ್ರೀ ಶಂಕರರು ಮನಸ್ಸು ಮಾಡಿದ್ದೆ ತಡ, ಕೂಡಲೆ ಆ ಸ್ಥಳದಲ್ಲಿ ಪವಿತ್ರವಾದ ತುಂಗಾ ತೀರದಲ್ಲಿ, ಬಂಧುರವೂ ಸುಂದರವೂ ಆದ ಮಠ ಸ್ಥಾಪಿಸಿ ಶ್ರೀ ಶಾರದಾಂಬೆಯನ್ನು ಭಕ್ತ್ಯಾಪ್ರಾರ್ಥಿಸಿ, ತಮ್ಮ ಶ್ರೀ ಅದ್ವೈತ ಮಠದ ಅಧಿಷ್ಠಾನ ದೇವತೆಯಾಗಿ ಸರ್ವದಾ ನೆಲಸಿ, ತಮಗೆ ಮಾರ್ಗದರ್ಶನ ನೀಡಬೇಕೆಂದು ಪ್ರಾರ್ಥಿಸಿದರು. ಶ್ರೀ ಶಂಕರಾಚಾರ್ಯರು ಒಂದು ಭವ್ಯ ಬಂಡೆಯ ಮೇಲೆ ಶ್ರೀ ಚಕ್ರ ವನ್ನು ರಚಿಸಿ ಪೂಜಿಸಿ ಶ್ರೀ ಶಾರದಾಂಬೆಯ ದಿವ್ಯ ವಿಗ್ರಹವನ್ನು ಅದರ ಮೇಲೆ ಸ್ಥಾಪಿಸಿ, ಶ್ರೀ ಕಲ್ಯಾಣಿಯೆನಿಸಿದ ಮಂಗಳ ಸರಣಿಯನ್ನು ವಿವಿಧೋಪಚಾರಗಳಿಂದ ವಿಧಿವತ್ತಾಗಿ ಪೂಜಿಸಿ ಸ್ತುತಿಸಿ ಶ್ರೀ ವಿದ್ಯಾಂಬೆಯನ್ನು. ಸದಾ ಪ್ರಸನ್ನ ಭಾವದಿಂದ ಬೆಳಗಿ, ಅನವರತ ತಮ್ಮನ್ನೂ ಹಾಗೂ ತಮ್ಮ ಸಂಸ್ಥಾನದ ಶ್ರೇಯಸ್ಸನ್ನು ಉದ್ದೀಪನಗೊಳಿಸಬೇಕೆಂದು ಭಕ್ತ್ಯಾ ಪ್ರಾರ್ಥಿಸಿದರು. ಶ್ರೀ ಮದಾಚಾರ್ಯವರ್ಯರ ಅಭೀಷ್ಟದಂತೆ ವೀಣಾಪಾಣಿ ಅವರಿಗೆ ಒಲಿದು ನಲಿದಳು. ಇದರಿಂದಾಗಿ ಶ್ರೀ ಶಂಕರರು ತಮ್ಮ ನೂತನ ಶ್ರೀ ಶೃಂಗೇರಿ ಮಠವನ್ನು ಅಂದಿನಿಂದ "ಶ್ರೀ ಶಾರದಾ ಪೀಠ" ವೆಂದು ಕರೆಯಲು ಪ್ರಖ್ಯಾತಿಯಾಯಿತು. ಇಂತಪ್ಪ ಶುಭ ಸಮಯದಲ್ಲಿ ಶ್ರೀ ಶಂಕರರು ತಮ್ಮ ಆದಿಗಾದಿ ಗುರುವೆನಿಸಿ, ದಿವ್ಯಾನುಗ್ರಹ ಬಲದಿಂದ ತಮಗೆ ಮತ್ತೆಂಟು ವರ್ಷಗಳು ಆಯು ವೃದ್ಧಿಗೊಳಿಸಿ ಹೃತ್ಪೂರ್ವಕ ಹರಸಿದ, ಕುಂಭ ಸಂಭವರಾದ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳನ್ನೂ, ಶ್ರೀ ವೇದವ್ಯಾಸಾಚಾರ್ಯರನ್ನೂ ಹಾಗೂ ಶ್ರೀ ಗೋವಿಂದ ಭಗವತ್ಪಾದಾಚಾರ್ಯರನ್ನೂ ಸ್ಮರಿಸಿ ವಂದಿಸಿದರು. ಈ ಹೊತ್ತಿಗೆ ಶ್ರೀ ಆದಿ ಶಂಕರಾಚಾರ್ಯರು ಸುಮಾರು 19 ವರ್ಷಗಳ ಆಯುಷ್ಯದ ಪರಿವ್ರಾಜಕಾಚಾರ್ಯರೆನಿಸಿ ಕೀರ್ತಿಶೇಷರಾಗಿದ್ದರು. ಅಂದಬಳಿಕ ಶ್ರೀ ಆದಿ ಶಂಕರಾಚಾರ್ಯರು ಶ್ರೀ ಶೃಂಗೇರಿ ನೂತನ ಶ್ರೀ ಶಾರದಾ ಪೀಠವನ್ನು ಸುಮಾರು ಕ್ರಿ. ಪೂ. 490ರಲ್ಲಿ ಸ್ಥಾಪಿಸಿದರೆಂದು ಕಂಡುಬರುತ್ತೆ.

## ತೃತೀಯ ಭಾಗ

# ಶ್ರೀ ಆದಿ ಶಂಕರರಿಂದ ಚತುರ್ದಿಕ್ಕುಗಳಲ್ಲಿ ಚತುರಾಮ್ನಾಯ ಮಠಗಳ ಸ್ಥಾಪನೆ ಮತ್ತೂ ಅದ್ವೈತ ಸಿದ್ಧಾಂತದ ಪ್ರಚಾರ ಹಾಗೂ ಆ ಮಠ ಸ್ಥಾಪನೆ.

ಅಪರೂಪವಾದ ಮಾನವ ದೇಹ, ನೀರ್ಗುಳ್ಳೆಯಂತೆ ಕ್ಷಣಭಂಗುರವೆಂಬುದನ್ನು ಮನಗಂಡಿದ್ದ ಆಚಾರ್ಯ ಶಂಕರರು, ಕಾಲ ವಿಳಂಬ ಮಾಡದೆ ಆಸೇತು ಸೀತಾಚಲ ಪರ್ಯಂತ ಎರಡು ಸಾರಿ ಪಾದಚಾರಿಗಳಾಗಿ ಸಂಚರಿಸಿ, ಅಲ್ಲಲ್ಲಿನ ಪರಮ ಆಸ್ತಿಕ ವೃಂದಕ್ಕೆ, ತಾವು ಶಿವಾರ್ಪಿತ ಮನೋಭಾವದಿಂದ ರಚಿಸಿದ ಪ್ರಸ್ಥಾನತ್ರಯಗಳ ಭಾಷ್ಯಾರ್ಥಗಳನ್ನೂ, ಮತ್ತಿತರ ಉಪನಿಷದ್ ಹಾಗೂ ಭಗವದ್ಗೀತಾ ಶಾಸ್ತ್ರಾರ್ಥ ಗಳನ್ನೂ, ಮನಂಬುಗುವಂತೆ ಉಪದೇಶಿಸುತ್ತಾ ಹೋದ ಕಡೆಗಳಲ್ಲೆಲ್ಲಾ ಭಕ್ತಿ ಜ್ಞಾನ ವೈರಾಗ್ಯಗಳ ಅವಶ್ಯಕತೆಯನ್ನು ಒತ್ತಿ ಪ್ರತಿಪಾದಿಸಿದರು. ॥ ಪೂಜಾ ಜ್ಞಾನಂ ತಪೋ ಯಜ್ಞಂ । ನ ತ್ಯಾಜ್ಯಂ ಮನೀಷಣಃ ॥ ಮನುಷ್ಯನು ನಿತ್ಯವೂ ಸಂಧ್ಯಾ ಕಾಲಗಳಲ್ಲಿ ಅವರವರ ಇಷ್ಟ ದೇವತಾರಾಧನೆ, ಜ್ಞಾನ, ತಪಸ್ಸು, ಧ್ಯಾನ, ಯಜ್ಞಾದಿ ಗಳನ್ನು ತ್ಯಜಿಸದೆ, ನಿರಂತರ ಭಕ್ತ್ಯಾ, ಆಚರಿಸುತ್ತಲಿರಬೇಕೆಂದು ಶಂಕರರು ಸಾರಿದರು ॥ ಕರ್ಮಣ್ಯೇ ವಾಧಿಕಾರಸ್ತೇ । ಮಾ ಫಲೇಷು ಕದಾಚನ ॥ ಕರ್ಮವನ್ನೆಸಗಲು ನಮಗೆ ಅಧಿಕಾರವಿದೆಯಷ್ಟೇವಿನಃ, ಅದರ ಫಲಾಫಲಗಳನ್ನು ನಿರೀಕ್ಷಿಸುವ ಸ್ವಾತಂತ್ರ್ಯ ನಮಗೆ ಇಲ್ಲ. ಯಾಕೆಂದರೆ ಕೊಡುವ ಕರ್ತ ಬೇರೆ ಇರುವಾಗ ಆ ಬಗೆಗೆ ಚಿಂತಿಸುವುದು ಬೇಡ ಎಂಬುದು ಆಚಾರ್ಯರ ಸಿದ್ಧಾಂತ. ಗೀತಾಚಾರ್ಯರು ॥ ಕೃಪಣಃ ಫಲ ಹೇತವಃ ॥ ಎಂದು ಕಟುವಾಗಿ ಎಚ್ಚರಿಸಿರುವರು. ಸ್ವಾತ್ಮನಿ, ಶ್ರೀ ಶಂಕರರು ಆತ್ಮೋಪಾಸಕರು. " ಸರ್ವಂ ಶಿವ ಮಯಂ ಜಗತ್ – ಸರ್ವಂ ಖಲ್ವಿದಂ ಬ್ರಹ್ಮ-ಸೋಹಂ " ಎಂದು ಆಧ್ಯಾತ್ಮಿಕವಾಗಿ ಮಾನಸಿಕ ಪೂಜೆಯಲ್ಲೆ ಅವರು ಬಹಳವಾಗಿ ಮಗ್ನರಾಗಿರುತ್ತಿದ್ದರು. ತಮ್ಮ ಸ್ವಾನುಭೂತಿಯಲ್ಲಿ ಅರಿತ ತತ್ವವನ್ನೇ ತಮ್ಮ ನಾಲ್ಕು ಜನ ಶಿಷ್ಯರಿಗೆ ಶ್ರೀ ಮಠದಲ್ಲಿ ನಿತ್ಯ ಸಂಧ್ಯಾ ಕಾಲಗಳಲ್ಲಿ ತಪ್ಪದೆ ಪಾಠ ಪ್ರವಚನ, ವೇದಾಧ್ಯಯನಾದಿಗಳನ್ನು ವಿಧಿವತ್ತಾಗಿ ಬೋಧಿಸುತ್ತಲಿದ್ದರು. ಅಲ್ಲಲ್ಲಿ ಆಗಾಗ ಸಂಚರಿಸುತ್ತಾ ಅದ್ವೈತದ ತಿರುಳನ್ನು ಜನತೆಗೆ ಬೋಧಿಸುತ್ತಲಿದ್ದರು. ಬ್ರಹ್ಮಾತ್ಮ ವಿದ್ಯಾ ಬೋಧೆ ಜನತೆಯಲ್ಲಿ ಅವ್ಯಾಹತವಾಗಿ ಮುಂದುವರಿಯಲು, ಭಾರತದ ನಾಲ್ಕು ದಿಕ್ಕುಗಳಲ್ಲೂ ಚತುರಾಮ್ನಾಯ ಮಠಗಳನ್ನು ಸ್ಥಾಪಿಸಿ ತಮ್ಮ ನಾಲ್ಕು ಶಿಷ್ಯರನ್ನು ನಾಲ್ಕು ಮಠಗಳಿಗೆ ವಿಧಿವತ್ತಾಗಿ ಅಧಿಪತಿಗಳನ್ನಾಗಿ ಮಾಡಿದರು.

1. ಪೂರ್ವ ದಿಕ್ಕಿನ ಶ್ರೀ ಪೂರಿಜಗನ್ನಾಥದಲ್ಲಿ ಶ್ರೀ ಗೋವರ್ಧನ ಮಠವನ್ನು ಸ್ಥಾಪಿಸಿ, ಹಸ್ತಾಮಲಕಾಚಾರ್ಯರನ್ನು ಅಧಿಪತಿಗಳನ್ನಾಗಿ ಮಾಡಿದರು, ಈ ಪೀಠಕ್ಕೆ ಅಥರ್ವಣವೇದವೇ ಮೂಲಾಧಾರ.

2. ಪಶ್ಚಿಮದ ಶ್ರೀದ್ವಾರಕಾ ಮಠ, ಇದು ಋಗ್ವೇದ ಪ್ರಧಾನವಾದುದು. ಶ್ರೀ ಪದ್ಮಪಾದಾಚಾರ್ಯರು ಇದರ ಅಧಿಪತಿಗಳು.

3. ಉತ್ತರದಲ್ಲಿನ ಮಠ ಬದ್ರಿ ಮಠ, ಇದು ಸಾಮವೇದ ಪ್ರಧಾನವಾದುದು ಶ್ರೀ ತೋಟಕಾಚಾರ್ಯರು ಈ ಮಠದ ಅಧಿಪತಿಗಳು.

4. ದಕ್ಷಿಣದ ಶ್ರೀ ಶೃಂಗೇರಿ ಮಠ, ಯಜುರ್ವೇದ ಪ್ರಧಾನವಾದುದು ಈ ಮಠದ ಅಧಿಪತಿಗಳು ಶ್ರೀ ಸುರೇಶ್ವರಾಚಾರ್ಯರು. ಶ್ರೀ ಶೃಂಗೇರಿ ಮಠ ದಕ್ಷಿಣಾಮ್ನಾಯ ಮಠವೆಂದೂ, ಮತ್ತೂ ವ್ಯಾಖ್ಯಾನ ಪೀಠವೆಂದೂ ವಿಖ್ಯಾತವಾಗಿದೆ.

## ಚತುರ್ಥ ಭಾಗ

॥ ರತ್ನೈಃ ಕಲ್ಪಿತ ಮಾಸನಂ । ಹಿಮ ಜಲೈಃ ಸ್ನಾನಂ ಚ ದಿವ್ಯಾಂಬರಂ ॥
ನಾ ನಾ ರತ್ನ ವಿಭೂಷಿತಂ । ಮೃಗ ಮದಾ ಮೋದಾಂಕಿತಂ ಚಂದನಂ ॥
ಜಾತೀ ಚಂಪಕ ಬಿಲ್ವ ಪತ್ರ । ರಚಿತಂ ಪುಷ್ಪಂಚ ದೂಪಂ ತಥಾ ॥
ದೀಪಂ ದೇವ ದಯಾನಿಧೇ । ಪಶುಪತೇ ಹೃತ್ಕಲ್ಪಿತಂ ಗೃಹ್ಯತಾಂ ॥

॥ ಆತ್ಮಾತ್ವಂ ಗಿರಿಜಾ ಮತಿಃ । ಸಹಚರಾಃ ಪ್ರಾಣಾ ಶ್ಶರೀರಂ ಗೃಹಂ ॥
ಪೂಜಾತೇ ವಿಷಯೋಪ ಭೋಗ । ರಚನಾ ನಿದ್ರಾ ಸಮಾಧಿ ಸ್ಥಿತಿಃ ॥
ಸಂಚಾರಃ ಪದಯೋಃ ಪ್ರದಕ್ಷಿಣ । ವಿಧಿಃ ಸ್ತೋತ್ರಾಣಿ ಸರ್ವಾಗಿರೋ ॥
ಯದ್ಯತ್ಕರ್ಮ ಕರೋಮಿ ತತ್ತದ ಖಿಲಂ ಶಂಭೋತವಾರಾಧನಂ ॥

ಶ್ರೀ ಆದಿ ಶಂಕರಾಚಾರ್ಯರ ದಿನನಿತ್ಯದ ಮಾನಸಿಕ ಪೂಜೆ ಇದಾಗಿತ್ತು. ॥ ತ್ವಮೇವಾಹಂ ॥ ಎಂಬುದು ಶ್ರೀ ಶಂಕರರ ಪರಮ ಗುರಿ. ಇಂತಪ್ಪ ಮಾನಸಿಕ ನಿತ್ಯಾರಾಧನೆಯು ವಿನಃ ಶ್ರೀ ಶಂಕರರು ಆದಿಯಲ್ಲಿ ಶ್ರೀ ರತ್ನ ಗರ್ಭ ಗಣಪತಿಯನ್ನೂ ಮತ್ತೂ ಶ್ರೀ ಚಂದ್ರ ಮೌಳಿ ಲಿಂಗಾರಾಧನೆಗಳ ಆಚರಣೆಗಳನ್ನು ಅರಿಯರು. ಆಗ ಇಂಥಾ ಪದ್ಧತಿ ಅಂದರೆ ತನಗನ್ಯವಾದ ದೈವಾರಾಧನೆಯ ಅವಶ್ಯಕತೆ ಅವರಿಗೆ ಕಂಡು ಬರಲಿಲ್ಲ. ತಾನೇ ಶಿವನೆಂಬ ಭಾವ ಬಲಿತಿರುವಾಗ ಅನ್ಯ ದೈವವೆಲ್ಲಿಯದು ?

ಶ್ರೀ ಆದಿ ಜಗದ್ಗುರು ರೇವಣ ಸಿದ್ಧರಿಂದ ಬೋಧಿತರಾದ ಬಳಿಕ, ಆ ಮಹಾಚಾರ್ಯ ರಿಂದ ನೇರವಾಗಿ ಅನುಗ್ರಹೀತರಾದ ನಂತರ ॥ ಶ್ರೀ ಮಹಾ ಗುರುವಿನಾಜ್ಞೆ । ಶಿವನಾಜ್ಞೆಯೆಂದರಿತು ॥ ಶ್ರೀ ರತ್ನಗರ್ಭ ಗಣಪತಿ ಮತ್ತೂ ಶ್ರೀ ಚಂದ್ರಮೌಳಿ ಲಿಂಗಾರಾಧನೆಗಳನ್ನು ಕೈಕೊಂಡುದಾಗಿ ಕಂಡುಬರುತ್ತೆ.

## ಶ್ರೀ ಶೃಂಗೇರಿ ಮಠದಲ್ಲಿ, ಶ್ರೀ ಸುರೇಶ್ವರಾಚಾರ್ಯರಾದಿ ತಮ್ಮ ನಾಲ್ಕು ಶಿಷ್ಯರಿಗೆ ಪಾಠ ಪ್ರವಚನಗಳನ್ನು ನಿತ್ಯ ನಡೆಸಿದುದು.

ತುಂಗಾ ತೀರದ ಶ್ರೀ ಶೃಂಗೇರಿ ಕ್ಷೇತ್ರ, ಪರಮ ಪವಿತ್ರವಾಗಿರುವುದರೊಂದಿಗೆ ಅತೀವ ರಮಣೀಯು ಹಾಗೂ ಪ್ರಶಾಂತವಾದ ದಿವ್ಯ ತಪೋ ಭೂಮಿ, ಶ್ರೀ ಮಠವಲ್ಲಿ ಆಚಾರ್ಯರಿಂದ ಸ್ಥಾಪಿತವಾದ ಗುರುಕುಲಾಶ್ರಮವಿತ್ತು. ಇದರ ಸುತ್ತಲೂ ಫಲ, ವಿವಿಧ ಹೂವುಗಳಿಂದ ಭರಿತವಾದ ಉದ್ಯಾನ ರಾರಾಜಿಸುತ್ತಲಿತ್ತು. ಎತ್ತ ನೋಡಿ ದರೂ ಹಸರು ಹುಲ್ಲಿನ ಪ್ರದೇಶ ಕಣ್ಮನಂಗಳಿಗೆ ಆಕರ್ಷಣೀಯುವಾಗಿತ್ತು. ಮನೋ ನಿಗ್ರಹಕ್ಕೆ ಯೋಗ್ಯ ಸ್ಥಳವಾಗಿತ್ತು. ಒಂದು ವಿಶಾಲವಾದ ಆಲದ ವೃಕ್ಷದಡಿ, ಉನ್ನತಾಸನದಲ್ಲಿ ಉತ್ತರಾಭಿಮುಖವಾಗಿ ಶ್ರೀ ಶಂಕರರು ಮಂಡಿಸಿ, ಪಾಠಪ್ರವಚ ನಾದಿಗಳನ್ನು ಶಿಷ್ಯರಿಗೆ ಬೋಧಿಸುತ್ತಲಿದ್ದರು. ಗುರುಗಳೆದುರಲ್ಲಿ ನಾಲ್ಕು ಶಿಷ್ಯರು ಹಚ್ಚ ಹಸರು ಹುಲ್ಲಿನ ತಡಿಯ ಮೇಲೆ ಪದ್ಮಾಸನಾಸೀನರಾಗಿ ಕುಳಿತು ಏಕಾಗ್ರತೆ ಯಿಂದ ಪಾಠಗಳನ್ನು ಶ್ರವಣ ಮಾಡುತ್ತಿದ್ದರು. ಈ ಶ್ರೀ ಗುರು ಶಿಷ್ಯರ ದೃಶ್ಯ ಅತೀವ ಆನಂದವನ್ನು ನೀಡುವಂತಿತ್ತು. ಋಗಾದಿ ನಾಲ್ಕು ವೇದಗಳು, ನಾಲ್ಕು ಶಿಷ್ಯರಾಗಿ ಭುವಿಗಿಳಿದು ಬಂದು ಆಚಾರ್ಯ ಶ್ರೀ ಶಂಕರರ ದಿವ್ಯ ಅಡಿದಾವರೆಗಳಲ್ಲಿ ಮಂಡಿಸಿ ಪಾಠಗಳನ್ನು ಶ್ರವಣ ಮಾಡುತ್ತಲಿರುವುದಾಗಿ ಭಾಸವಾಗುತ್ತಿತ್ತು.

## ಆನಂದ ಗಿರಿ ಶ್ರೀ ತೋಟಕಾಚಾರ್ಯರಾದುದು.

ಒಂದು ದಿವಸ ಶ್ರೀ ಸುರೇಶ್ವರ, ಪದ್ಮಪಾದ ಮತ್ತೂ ಹಸ್ತಾಮಲಕರು ಅಂದಿನ ಪಾಠ ಪ್ರಾರಂಭಕ್ಕಾಗಿ ಸಿದ್ಧರಾಗಿದ್ದರು. ಆಗ ವೇಳೆಯೂ ಆಗಿತ್ತು. ಆದರ ಆಚಾರ್ಯರು ಸುಮ್ಮನೆ ಕುಳಿತಿದ್ದುದನ್ನು ಕಂಡ ಪದ್ಮಪಾದರು, ಭೋ ! ಗುರುವೇ ಪಾಠವನ್ನು ಪ್ರಾರಂಭಿಸೋಣವಾಗಲೆಂದು ಪ್ರಾರ್ಥಿಸಿದರು. ಆಗ ಶ್ರೀ ಗುರುಗಳು ಗಿರಿ ಬರಲಿ ಎಂದರು. ಅದಕ್ಕೆ ಪದ್ಮಪಾದರು, ಗೋಡೆ ಮೇಲಿನ ಚಿತ್ರಕ್ಕೆ ಪಾಠ ಹೇಳುವುದೂ ಗಿರಿಗೆ ಹೇಳುವುದೂ ಒಂದೇ ಎಂದು ಗೊಣಗುಟ್ಟಿದರು. ಆಗ ಶ್ರೀ ಶಂಕರರು ಪದ್ಮ ಪಾದನ ಅಹಂಭಾವವನ್ನಡಗಿಸಲು, ತಕ್ಷಣ, ಮಾನಸಿಕವಾಗಿ ಆನಂದಗಿರಿಗೆ ಎಲ್ಲಾ

ಉಪನಿಷದ್ವಿದ್ಯೆ ತಕ್ಷಣ ಮನಗಾಣುವಂತಾಗಲೆಂದು ಹೃತ್ಪೂರ್ವಕ ಹರಸಿದರು. ಶ್ರೀ ಗುರು ಕರುಣೆ ಎಣೆಯಿಲ್ಲದುದಲ್ಲವಾ : ॥ ಮುಕ್ಕಣ್ಣೀಶ್ವರನ ತೋರಿ ಕೊಡಬಲ್ಲ ಶ್ರೀಗುರು॥ ಆ ವೇಳೆಯಲ್ಲಿ ಗಿರಿ ತುಂಗಾ ನದಿಯಲ್ಲಿ ತನ್ನ ಗುರುಗಳ ವಸ್ತ್ರಗಳನ್ನು ಹಿಂಡಿ ಅವಸರ, ಅವಸರದಿಂದ ಮಡಿ ಮಾಡುತ್ತಲಿದ್ದ. ಆಗ ಗಿರಿಗೆ ಆಕಸ್ಮಿಕವಾಗಿ ಶ್ರೀ ಗುರು ಕಟಾಕ್ಷದಿಂದ ಅವನ ಅಂತರಂಗದಲ್ಲಿ ಚಟಾರೆಂದು ಜಾಜ್ವಲ್ಯಮಾನ ವಾದ ದಿವ್ಯ ತೇಜಸ್ಸು ಹೊಳೆಯಿತು. ತಕ್ಷಣವೇ ಗುರುವಿನ ಅನುಗ್ರಹ ಬಲದಿಂದ ಎಲ್ಲಾ ಉಪನಿಷದ್ವಿದ್ಯೆಗಳು ಕರತಲಾಮಲಕವಾಗಿ ವೇದ್ಯವಾಯಿತು. ಸಂಧ್ಯಾ ಪಾಠಕ್ಕೆ ಹೊತ್ತಾಯಿತೆಂದು ಗಿರಿ ಸರಸರನೆ ಗುರುವಿನತ್ತ ಬರುತ್ತಾ ತೋಟಕ ವೃತ್ತದಲ್ಲಿ ಉಪನಿಷದ್ ಮಂತ್ರಗಳನ್ನು ಹ್ರೀಂಕಾರ ಧ್ವನಿಯಿಂದ ಝೇಂಕರಿಸುತ್ತಾ ಬಂದು, ಶ್ರೀ ಗುರುಗಳ ಪಾದದಲ್ಲೆರಗಿದನು. ಇದನ್ನು ಕಂಡು ಚಕಿತರಾದ ಪದ್ಮಪಾದರಿಗೆ ಅರಿವಾಯಿತು. ಗುರುಗಳಲ್ಲಿ ಕ್ಷಮಾಪಣೆ ಬೇಡಿದರು. ತೋಟಕ ವೃತ್ತದಲ್ಲಿ ಮಂತ್ರಗಳನ್ನು ಪಠಿಸಿದ್ದರಿಂದ, ಮಹಾಚಾರ್ಯರು, ಗಿರಿಯನ್ನು ಅಂದಿನಿಂದ ಶ್ರೀ ತೋಟಕಾಚಾರ್ಯರೆಂಬ ಹೆಸರಿನಿಂದ ಕರೆದು ತಮ್ಮ ನೆಚ್ಚಿನ ಶಿಷ್ಯನನ್ನು ಆಶೀರ್ವದಿಸಿದರು.

॥ ನೀ ನ್ಯಾಕೋ ನಿನ್ನ ಹಂಗ್ಯಾಕೋ ।
ನಿನ್ನ ನಾಮದ ಬಲವೊಂದಿದ್ದರೆ ಸಾಕೋ ॥

॥ ಗುರೋಃ ಕಟಾಕ್ಷ ವೇಧೇನ । ಕೋವಾ ಲೋಕೇಷು ದುರ್ಲಭಃ ॥

( ಸಿದ್ಧಾಂತ ಶಿಖಾಮಣಿ )

॥ ಶ್ರೀ ಗುರೋ ರನುಗ್ರಹೇಣೈವ ।
ಪುಮಾನ್ ಪೂರ್ಣಃ ಪ್ರಜಾಯತೇ ॥



## ಅಧ್ಯಾಯ 12

**ಶ್ರೀ ಶಂಕರರ, ತಾಯಿ ಆರ್ಯಾಂಬೆ ಮರಣ ಶೈಯ್ಯೆಯಲ್ಲಿ ಪುತ್ರನನ್ನು ಸ್ಮರಿಸಿ " ಶಂಕರಾ " ಎಂದು ದುಃಖಿಸಿದುದನ್ನು ಅಂತರಂಗದಲ್ಲಿ ಮನಗಂಡ, ಶಂಕರರು ತಕ್ಷಣ ಕಾಲಟಿಗೆ ಧಾವಿಸಿದುದು.**

॥ ಮೃತ್ಯುಂಜಯಸ್ಯ ಭಕ್ತಾನಾಂ । ಮೃತ್ಯು ಭೀತಿ ಕುತೋ ಭವೇತ್ ॥
ತಸ್ಮಿನ್ ಮೃತ್ಯು ನಿರಾಸಾರ್ಥಂ । ಮೃತ್ಯುಂಜಯ ಮುಪಾಸ್ಮ ಹೇ ।
ಹರ ಮೃತ್ಯುಂಜಯ ಮುಪಾಸ್ಮ ಹೇ ॥

ಒಂದು ದಿವಸ ಪ್ರಾಥಃಕಾಲದಲ್ಲಿ, ಶ್ರೀಮದಾಚಾರ್ಯ ಭಗವತ್ಪಾದರು ದಶೋಪನಿಷತ್ತಿನ ಸಾರಾಂಶವನ್ನು ಸಂಗ್ರಹವಾಗಿ ಪ್ರತಿಪಾದಿಸುತ್ತಾ, ಕಠೋಪನಿಷತ್ತಿನ ನಚಿಕೇತೋಪಾಖ್ಯಾನವನ್ನು ಪ್ರಧಾನವಾಗಿ ಪ್ರವಚನ ಮಾಡುತ್ತಿರುವಾಗ ; " ಶಂಕರಾ ಶಂಕರಾ " ಎಂಬ ತಮ್ಮ ತಾಯಿಯ ಆಕ್ರಂಧನ ಧ್ವನಿ ಕೇಳಲಾರಂಭಿಸಿತು. ಒಡನೆ ತಟಸ್ಥ ಭಾವದಿಂದ ಅಂತರ್ಮುಖಿಗಳಾಗಲು, ತಮ್ಮ ಪೂಜ್ಯ ಮಾತಾ ಆರ್ಯಾಂಬೆ ಪ್ರಾಣೋತ್ಕ್ರಮಣ ಸ್ಥಿತಿಯಲ್ಲಿರುವುದು ಗೋಚರವಾಯಿತು. ಆಗ ಆಚಾರ್ಯರು ಶಿಷ್ಯರಿಗೆ ಅಂದಿನ ಪಾಠಗಳನ್ನು ಮನನ ಮಾಡುತ್ತಿರುವಂತೆ ಆಜ್ಞಾಪಿಸಿ ; ತಮ್ಮ ಶಿವಯೋಗ ಶಕ್ತಿಯಿಂದ ಕಾಲಟಿಗೆ ಕ್ಷಣಾರ್ಧದಲ್ಲಿ ಧಾವಿಸಿ, ಮರಣ ಶೈಯ್ಯೆಯಲ್ಲಿ ಪರಿತಪಿಸುತ್ತಲಿದ್ದ ತಾಯಿಯ ಕಾಲುಗಳ ಬಳಿನಿಂತು, ದುಃಖತಪ್ತರಾಗಿ **" ಅಮ್ಮಾ ! ನಾನು ಶಂಕರ ಬಂದಿದ್ದೇನೆಂದರು "** ಮಗನ ಧ್ವನಿಯನ್ನು ಕೇಳಿದ ಆರ್ಯಾಂಬೆ ಸ್ವಲ್ಪ ಸಂತೈಸಿಕೊಂಡು ಮೆಲ್ಲನೆ ಕಣ್ ತೆರೆದು, ಮಗನ ಮುದ್ದು ಮುಖವನ್ನು ದಿಟ್ಟಿಸಿ ನೋಡಿ, **" ಮಗನೇ ಬಂದೆಯಾ "**, ಎಂದು ಪಿಸುಗುಟ್ಟುತ್ತಿರುವಲ್ಲಿ ಕಂಠ ಪ್ರದೇಶವು ಕಫಪಾತಗಳ ಉಪಟಳದಿಂದ ಮತ್ತೇನನ್ನೂ ನುಡಿಯಲು ಆರ್ಯಾಂಬೆಗೆ ಸಾಧ್ಯವಾಗಲಿಲ್ಲ. ಅಷ್ಟರೊಳಗೆ ಆಕೆಯ ನೋಟ, ಶ್ರವಣ ಶಕ್ತಿ ಮತ್ತೂ ಯೆಲ್ಲವು ಕುಗ್ಗಿ ಮೇಲುಬ್ಬಸವಿರುವುದನ್ನು ಶಂಕರರು ತಮ್ಮ ಕಣ್ ಕಂಬನಿಗಳಿಂದ ತುಂಬಿದ ಜಡ ದೃಷ್ಟಿಯಿಂದ ಪೂಜ್ಯ ಮಾತೆಯ ಮುಖವನ್ನು ನೋಡಿ, ವಂದಿಸಿ ತಾಯಿಗೆ ಶಿವಲೋಕ ಪ್ರಾಪ್ತಿಯಾಗುವಂತೆ ಶಿವನನ್ನು ಭಕ್ತಿ ಧ್ಯಾನಿಸಿದರು.

**ಕು ಪುತ್ರೋ ಜಾಯೇತ । ಕ್ವಚಿದಪಿ ಕು ಮಾತಾ ನ ಭವತಿ ।** ಎಂಬುದು ಶಂಕರರ ಪವಿತ್ರವಾದ ಭಾವನೆ, ಆಗ ನಿಂತ ಸ್ಥಳವಲ್ಲೇ ಧ್ಯಾನಾರೂಢರಾಗಿ

॥ ಕೃತ್ವಾ ತದೈವ ಶಿವ ವಿಷ್ಣು ಭುಜಂಗ ಮುಖ್ಯ ।
ಸ್ತೋತ್ರಾಣ್ಯ ಶುಶ್ರುವವಯುಂ ಪ್ರಣಯಾನ್ಮನೀಷೀ ॥
ತತ್ರೋದಿತಂ ವಿಮಲ ಚೇತಸಿ ಚಿಂತಯಂತೀ ।
ಯೋಗೀಶವದ್ಗತಿ ಮವಿಂದತ ಯೋಗಿ ಮಾತಾ ॥

( ಗುರುವಂಶ ಕಾವ್ಯ ಅ 2 ಶ್ಲೋ 64 )

ತಮ್ಮ ತಾಯಿಗೆ ಶಿವಲೋಕ ಪ್ರಾಪ್ತಿಗಾಗಿ ಶಿವನನ್ನು ಮೊದಲು ಸ್ತುತಿಸಿದರು. ತಕ್ಷಣ ಶಿವಲೋಕದಿಂದ ವಿಭೂತಿ, ರುದ್ರಾಕ್ಷಿ, ರುಂಡಮಾಲಾಧರರೂ ನಾಗಾಭರಣ ವಿಭೂಷಿತರೂ, ಗಜ ಚರ್ಮಾಂಬರಧಾರಿಗಳೂ, ತ್ರಿಶೂಲ, ಡಮರುಗ ಜಟಾವಲ್ಕಲ ವಿಭೂಷಿತರಾದ ಶಿವ ಕಿಂಕರರು ಆರ್ಯಾಂಬೆಯ ಕಣ್ಮನಂಗಳಿಗೆ ಕಾಣುತ್ತಲೇ, ಅವರ ವೇಶ ಭೂಷಣಗಳನ್ನು ನೋಡಿ ಹೆದರಿಕೆಯಿಂದ ಬೆವರಿದ ಮುಖಭಾವಗಳಿಂದ ಅರಿತ ಸೂಕ್ಷ್ಮಮತಿ ಯತಿವರ್ಯರು, ಶಿವದೂತರ ದೃಶ್ಯ ಆಕೆಗೆ ಭೀತಿಯುಂಟು ಮಾಡಿದೆ ಎಂದು ಮತ್ತೊಂದು ಮಂತ್ರದಿಂದ ಶಿವದೂತರು ಕಣ್ಮರೆಯಾಗಲು, ಶಂಕರರು ಶ್ರೀ ಮಹಾ ವಿಷ್ಣು ಪರವಾದ ಭುಜಂಗ ಸ್ತೋತ್ರವನ್ನು ಸ್ತುತಿಸಿ, ತಾಯಿಯನ್ನು ಶ್ರೀ ವೈಕುಂಟಕ್ಕೆ ಕಳುಹಿಸಲು ಅಣಿಯಾದರು.

ಆಗ ಲಕ್ಷ್ಮೀನಾರಾಯಣರ ಕಡೆಯ, ವಿಷ್ಣು ದೂತರು, ನಿತ್ಯ ಸೂರ್ಯ ನಾರಾಯಣರಂತೆ ಬೆಳಗುತ್ತಾ, ಶೃಂಗಾರಾನ್ವಿತ ಹಸನ್ಮುಖರಾಗಿ, ಕಟಕ ಕುಂಡಲ ಕಿರೀಟ ಧಾರಿಗಳಾಗಿ, ಕಂಠದೊಳ್ ವನಮಾಲಾ ವಿಭೂಷಿತರಾಗಿ, ಮನೋಹರ ಪೀತಾಂಬರ ಧಾರಿಗಳಾಗಿ ಹಾಗೂ ಹಾರಕೇಯೂರಾದಿ ಮಘ ಮಘಿಪ ವನಮಾಲಾ ವಿಭೂಷಿತರಾಗಿ, ಕರದೊಳ್ ಶಂಖ, ಚಕ್ರ ಗಧಾಪಾಣಿಗಳಾಗಿ, ನೀಲಮೇಘ ಶ್ಯಾಮಳ ಕೋಮಲಾಂಗರಾಗಿ, ಮಂದಹಾಸವನ್ನು ಬೀರುವ, ಮಹಾ ವಿಷ್ಣು ದೂತರು, ಆರ್ಯಾಂಬೆಯ ಅಂತರಂಗದ ದೃಷ್ಟಿಗೆ ಗೋಚರಿಸಲು, ಆಕೆ ಆಗ ನಗು ಮುಖದ ಮಂದಹಾಸದಿಂದ ಹರ್ಷಿತಳಾಗಿರುವ ಮುಖ ಚಿಹ್ನೆಗಳನ್ನು ಶಂಕರರು ಮನಗಂಡು, ತಾಯಿಯನ್ನು ಶ್ರೀ ವೈಕುಂಟಕ್ಕೆ ಕೊಂಡೊಯ್ಯಲು ಪ್ರಾರ್ಥಿಸಿದರು. ಶ್ರೀ ಆದಿ ಶಂಕರಾಚಾರ್ಯರರಂಥಾ ಶಿವ ತತ್ವಜ್ಞಾನಿ " ನ ಭೂತೋ ನ ಭವಿಷ್ಯತಿ " ಮತ್ತೊಬ್ಬ ಈ ಭುವಿಯಲ್ಲಿ ಹುಟ್ಟಲಿಕ್ಕಿಲ್ಲವೆಂದು ಹೇಳಿದರೆ, ಸುಳ್ಳಾಗಲಿಕ್ಕಿಲ್ಲ.

ಪೂಜ್ಯ ಶ್ರೀ ಮಾತಾ ಆರ್ಯಾಂಬೆಯ ಜೀವಕಳೆ, ಪಾರ್ಥಿವ ಶರೀರವನ್ನು ತ್ಯಜಿಸುತ್ತಲೇ, ಶ್ರೀ ವಿಷ್ಣು ದೂತರು ತಾವು ತಂದಿದ್ದ ಹವಳ, ಮುತ್ತು ಮತ್ತು

ನವರತ್ನಗಳಿಂದ ವಿಭೂಷಿತವಾಗಿದ್ದ "ಮುತ್ತಿನ ಪಲ್ಲಕ್ಕಿಯಲ್ಲಿ" ಭಾಗ್ಯವತಿ ಆರ್ಯಾಂಬೆಯ ಚಿ ಜ್ಯೋತಿಯಿಂದ ಬೆಳಗುವ ಸೂಕ್ಷ್ಮ ಶರೀರವನ್ನು ಪ್ರಣವಮಯ ದೇಹದೊಂದಿಗೆ ಅಲಂಕೃತಗೊಳಿಸಿರುವ ಮುತ್ತಿನ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ, ಅಲಂಕೃತ ಗೊಳಿಸಿ, ವೇದ ಮಂತ್ರೋಚ್ಚಾರಣೆಗಳಿಂದಲೂ ಹಾಗೂ ಪಲ್ಲಕ್ಕಿಯ ಇಕ್ಕೆಡೆಗಳಲ್ಲಿ ಶ್ವೇತ ಛತ್ರಿ ಚಾಮರಗಳನ್ನು ಬೀಸುತ್ತಾ, ಮಲ್ಲಿಗೆ, ಜಾಜಿ, ಸಂಪಿಗೆ, ರೋಜಾ. ತುಳಸಿ ದಳಗಳನ್ನು ವರ್ಷಿಸುತ್ತಾ ರಾಜ ಮಾರ್ಗಮಧ್ಯಕ್ಕೂ ಮಂಗಳ ವಾದ್ಯದ ವಿಜೃಂಭಣೆ ಯಿಂದ ಕರೆದೊಯಿದು, ವೈಕುಂಠದಲ್ಲಿ ಶ್ರೀ ಮಹಾಲಕ್ಷ್ಮೀನಾರಾಯಣರ ಸನ್ನಿಧಿಯ ಘನ ತರವಾದ ಹಾಗೂ ಪ್ರಣವ ಮಯ ಮಣಿಮಂಟಪದೆದುರಿನಲ್ಲಿ ಪಲ್ಲಕ್ಕಿಯನ್ನು ಅಷ್ಟಾಕ್ಷರೀ ಮಹಾ ಮಂತ್ರ, "ಓಂ ನಮೋ ನಾರಾಯಣಾಯ" ಎಂಬ ಜಯ ಘೋಷವನ್ನು ಹರ್ಷೋದ್ಗಾರದಿಂದ ಮಾಡುತ್ತಾ ಮೆಲ್ಲಗೆ ಇಳಿಸಿದರು. ಆರ್ಯಾಂಬೆಯ ಭಾಗ್ಯಕ್ಕೆಣೆಯುಂಟೇ ? ಅಲ್ಪಾಯುವಾದ ಸತ್ಪುತ್ರ ರತ್ನನನ್ನು ಪಡೆದ ತಾಯಿಗೆ ಸದ್ಗತಿಯಾಯಿತು. **ಓಂ ನಮಃ ಶಿವಾಯ । ಶಿವಾಯ ನಮಃ ಓಂ ॥.**

ಇತ್ತ ಕಳೇಬರದ ಅಂತ್ಯ ಸಂಸ್ಕಾರವನ್ನು ಶಂಕರರೇ, ತಮ್ಮ ಪವಿತ್ರವಾದ ಏಕೈಕ ಹಸ್ತಗಳಿಂದ ನೆರವೇರಿಸಲು ಪ್ರತಿಜ್ಞೆ ಮಾಡಿದರು. ಕಾಲಟಿಯ ನಂಬೂದ್ರಿ ಬ್ರಾಹ್ಮಣರು ಇವರೊಂದಿಗೆ ಅಂತ್ಯ ಕ್ರಿಯೆಯಲ್ಲಿ ಸಹಕರಿಸಲಿಲ್ಲ. ಕಾರಣ ಸನ್ಯಾಸಿ ಈ ಕಾರ್ಯವನ್ನು ಮಾಡಬಾರದೆಂಬುದು ಅವರ ನಿರ್ಣಯ. ಆದರೂ ಶಂಕರ ಯತಿರಾಟ್, ಬಾಳೆಯ ಪಟ್ಟೆಗಳಿಂದ ಚಿತೆಯನ್ನು ಸೊಗಸಾಗಿ ಸಿದ್ಧಪಡಿಸಿ, ತಮ್ಮ ಬಾಲ್ಯದ ಆತ್ಮ ಗೆಳೆಯ ಶ್ರೀ ಚಿತ್ಸುಕಾಚಾರ್ಯರೊಂದಿಗೆ ಇಬ್ಬರು ಶವವನ್ನು ಆ ಚಿತೆಯ ಮೇಲೆ ಮಲಗಿಸಿದರು. ಹಸಿ ಬಾಳೆಯ ಪಟ್ಟೆಗಳು ಉರಿಯುವುದು ತಾನೆ ಹೇಗೆ ? ತತ್ವ ಜ್ಞಾನಿ ಶ್ರೀ ಶಂಕರರು ಯಜ್ಞೇಶ್ವರನನ್ನು ಧ್ಯಾನಿಸಿ ಹಸ್ತಗಳನ್ನುಜ್ಜಿ ಅಗ್ನಿಯನ್ನುಂಟು ಮಾಡಿ ಚಿತೆಗಿಟ್ಟರು. ಸ್ವಲ್ಪ ಹೊತ್ತಿನೊಳಗಾಗಿ ಮಾತೆಯ ಅಸ್ತಿ ಪಂಜರಗಳೆಲ್ಲವೂ ಬೂದಿಯಾಯಿತು. ಚಿತೆಯಲ್ಲಿನ ಬೂದಿಯನ್ನು ಶಂಕರರು ಭಕ್ತಿ ಯಿಂದ ತೆಗೆದು ಪೂರ್ಣಾ ನದಿಯಲ್ಲಿ ಬಿಟ್ಟು. ಸ್ವಲ್ಪ ಭಾಗವನ್ನು ತ್ರಿವೇಣಿ ಸಂಗಮ ದಲ್ಲೂ ವಿಸರ್ಜಿಸಿ ಮಾತೃ ಋಣದಿಂದ ಮುಕ್ತರಾದರು.

ಇಲ್ಲಿ ಒಂದು ವಿಷಯ ಗಮನಾರ್ಹವಾಗಿದೆ, "ಚಿತೆ" ಶವವನ್ನು ಸುಟ್ಟು ಬೂದಿ ಮಾಡುತ್ತದೆ. ಇದರಂತೆ "ಚಿಂತೆ" ಎಂಬ ಅಗ್ನಿ ಮಂದಿದೆ. ಈ ಚಿಂತಾಗ್ನಿ ಬದುಕ್ಕಿರುವ ಮನುಷ್ಯನನ್ನು ಸಾಯಗೊಡದೆ ಸುಟ್ಟು, ಅವನ ಅಂಗಾಂಗ ಗಳನ್ನೆಲ್ಲಾ ನಿಶ್ಶಕ್ತಿಗೊಳಿಸಿ, ಕಾಂತಿ ಹೀನನನ್ನಾಗಿ ಮಾಡಿ, ಯುವಕನನ್ನೂ ಸಹ ವೃದ್ಧನನ್ನಾಗಿಸಿಬಿಡುವುದು.

**॥ ಚಿಂತಾ ಯೊಶ್ಚ ಚಿತಾಯೊಶ್ಚ । ಬಿಂದು ಮಾತ್ರಂ ವಿಶಿಷ್ಯ ತೇ ।
ಚಿತಾ ದಹತಿ ನಿರ್ಜೀವಂ । ಚಿಂತಾ ದಹತಿ ಜೀವನಂ ॥**

ಚಿತೆ – ಚಿಂತೆ ಈ ಎರಡು ಶಬ್ದಗಳು ಒಂದೇ ಆದರೂ, ಚಿಂತೆ ಎಂಬ ಶಬ್ದದಲ್ಲಿ ಬಿಂದು ( ಸೊನ್ನೆ ) ಮಾತ್ರ ಜಾಸ್ತಿ ಇದೆ. ಕಾರ್ಯ ರೂಪದಲ್ಲಿ ನೋಡುವಾಗ ಚಿತೆ ಸತ್ತ ಹೆಣವನ್ನು ಸುಟ್ಟು ಬೂದಿ ಮಾಡಿದರೆ, ಚಿಂತೆಯೆಂಬ ಆರದ ಅಗ್ನಿ ಬದುಕಿರುವ ಮನುಷ್ಯನನ್ನೇ ದಹಿಸಿ ನಿರ್ವೀರ್ಯನನ್ನಾಗಿಸುತ್ತದೆ. ಆದ್ದರಿಂದ **" ಚಿತಾಗ್ನಿಗಿಂತ ಚಿಂತಾಗ್ನಿ ಭಯಂಕರವಾದುದು ".**

**" ಚಿಂತೆಯೇ ಮುಪ್ಪು । ಸಂತೋಷವೇ ಯೌವ್ವನ "**



**॥ ಭಕ್ತಿಃ ಶೈವೀ ಮಹಾ ಘೋರ । ಸಂಸಾರ ಭಯಹಾರಿಣೀಂ ॥**

॥ ಸರ್ವೇ ಶಿವ ಜ್ಞಾನ ಯೋಗೇನ । ಸರ್ವ ಕಾರಣ ಕಾರಣಂ ।
ಪಶ್ಯಂತಿ ಹೃದಯೇ ಲಿಂಗಂ । ಪರಮಾನಂದ ಲಕ್ಷಣಂ ॥

॥ ಲಿಂಗಂ ಸತ್ಯಂ ನಿಷ್ಕಲಂ ಬ್ರಹ್ಮ ರೂಪಂ ।
ಧಾರ್ಯಂ ಪೂಜ್ಯಂ ಹೃದಯೇ ಜ್ಯೋತಿರಾದ್ಯಂ ॥

ಅಂತರ್ಲಿಂಗಂ ಜ್ಯೋತಿಷಾ ಸಂವಿಭಾತಂ ।
ಬಾಹ್ಯ ಲಿಂಗಂ ಹೃದಯೇ ಸನ್ನಿವಿಷ್ಟಂ ॥

( ಶ್ರೀ ಸಿದ್ಧಾಂತ ಶಿಖಾಮಣಿ )

## ಅಧ್ಯಾಯ 13

## ಶ್ರೀ ಆದಿ ಶಂಕರಾಚಾರ್ಯರು ಭಯಂಕರವಾದ ಭಗಂದರ ವ್ಯಾಧಿಯಿಂದ ಪೀಡಿತರಾದುದು.

ಶ್ರೀ ಆದಿ ಶಂಕರರು ತಮ್ಮ ಪೂಜ್ಯ ಮಾತೆಯ ಅಂತ್ಯ ಸಂಸ್ಕಾರಗಳನ್ನು ಮುಗಿಸಿ ಕಾಲಟಿಯಿಂದ ಶ್ರೀ ಶೃಂಗೇರಿ ಮಠಕ್ಕೆ ಹಿಂದಿರುಗಿ, ಶಿಷ್ಯರು ಅಧ್ಯಯನ

ಮಾಡುತ್ತಿದ್ದ ವಿಧಾನವನ್ನು ಕಂಡು ಹರ್ಷಿಸಿದರು. ಶ್ರೀ ಸುರೇಶ್ವರಾದಿ ನಾಲ್ಕು ಜನ ಶಿಷ್ಯರು, ಆಚಾರ್ಯ ಶ್ರೀ ಶಂಕರರು ಬೋಧಿಸಿದ ಅದ್ವೈತ ಸಿದ್ಧಾಂತದ ಜಟಿಲವಾದ ಪ್ರಕ್ರಿಯೆಗಳನ್ನು ಕುರಿತು ಚರ್ಚಿಸುತ್ತಾ, ಅವುಗಳ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲುತ್ತಾ ಜ್ಞಾನಾರ್ಜನೆಯಲ್ಲಿ, ಚತುರ್ವೇದ ಮಂತ್ರಗಳ ಉಚ್ಛಾರಣೆಯಲ್ಲಿ ಒಬ್ಬರನ್ನೊಬ್ಬರು ಮೀರಿಸುವಂಥಾ ಘನಪಾಠಿಗಳಾಗುತ್ತಾ, ಆಚಾರ ವಿಚಾರ, ಇಂದ್ರಿಯಗಳ ನಿಗ್ರಹ, ಗುರು ಸೇವೆ ಮತ್ತೂ ಸ್ವಯಂ ಪಾಕಾದಿಗಳನ್ನು ಸಿದ್ಧಪಡಿಸಿ ಹಿತಮಿತವಾಗಿ ಉಂಬುವ, ವಿಧಾನಗಳು ಇತರರಿಗೆ ಆದರ್ಶವೆನಿಸಿದ್ದವು. ಇವರು ನಿತ್ಯ ಉಷಃಕಾಲದಲ್ಲೇ ಶ್ರೀ ಗುರು ಸ್ಮರಣೆಯೊಂದಿಗೆ ಎದ್ದು ವಂದಿಸಿ, ಶೌಚಾದಿ ಗಳನ್ನು ಮುಗಿಸಿ, ಅಷ್ಟಾಂಗ ಯೋಗಾಭ್ಯಾಸಗಳನ್ನು ಸ್ವಲ್ಪ ಸ್ವಲ್ಪ ವಿಧಿವತ್ತಾಗಿ ಆಚರಿಸಿ, ವೇದ ಮಂತ್ರಗಳ ಪಠನೆಯನ್ನು ಕ್ರಮವರಿತು ಸುಶ್ರಾವ್ಯವಾಗಿ ಪಠಿಸಿ, ನಿತ್ಯ ಕಂಠಪಾಠಗೊಳಿಸಿಕೊಳ್ಳುವುದರಲ್ಲಿ ಸ ಹ ಜ ವಾ ದ ಆಸಕ್ತಿಯಿಂದ ಕೂಡಿದ್ದರು. ಸೂರ್ಯೋದಯದೊಳಗಾಗಿ ಸ್ನಾನಾದಿಗಳನ್ನು ಮುಗಿಸಿ ವೈದಿಕವಾದ ನಿತ್ಯಾಹ್ನಿಕಾದಿ ಗಳನ್ನು ಪೂರೈಸಿ, ದಾಹ ಶಾನ್ತಿಗೊಳಿಸಿಕೊಂಡ ನಂತರ, ಪ್ರಾಥಃಕಾಲ 7–8 ಗಂಟೆಗೆ ಶ್ರೀ ಗುರು ಮುಖದಿಂದ ವೇದೋಪನಿಷದಾದಿಗಳ ಪಾಠ ಪ್ರವಚನಗಳ ಶ್ರವಣಾರ್ಥ ನಿಯಮಿತವಾದ, ಆಶ್ರಮದ ಹೊರಾಂಗಣದ ಹಸರು ಹುಲ್ಲು ಹಾಸಿದ ವೇದಿಕೆಯ ಮೇಲೆ ಈ ನಾಲ್ಕು ಶಿಷ್ಯರು ವಿಧೇಯ ಭಾವದಿಂದ, ವಿದ್ಯಾರ್ಜನಾತುರರಾಗಿ, ಮಹಾ ಅಶ್ವತ್ಥ ವೃಕ್ಷದಡಿಯಲ್ಲಿ ಪದ್ಮಾಸನಾಸೀನರಾಗಿ, ಅಂದು ಶ್ರೀ ಗುರು ಮುಖದಿಂದ ಹೊರಬೀಳಲಿರುವ ಉಪನಿಷದ್ಭಾಷ್ಯಾರ್ಥಗಳ ಬಗೆಗೆ ಆಳವಾಗಿ ಚಿಂತಿಸುತ್ತಿರುವಷ್ಟ ರಲ್ಲಿ, ಶ್ರೀ ಶಂಕರಾಚಾರ್ಯರು ಸಕಾಲದಲ್ಲಿ ಆಗಮಿಸಿ ಆ ವೃಕ್ಷದಡಿ ಇರುವ ಉನ್ನತಾ ಸನದಲ್ಲಿ ಮಂಡಿಸಿ, ಶ್ರೀ ದಕ್ಷಿಣಾ ಮೂರ್ತಿ ಸ್ತೋತ್ರದೊಂದಿಗೆ ಪ್ರವಚನವನ್ನು ಆರಂಭಿಸುತ್ತಲಿದ್ದರು.

ಪ್ರತಿನಿತ್ಯವೂ ಗೊತ್ತಾದ ದಿನಗಳಲ್ಲಿನ, ದ್ವಿಸಂಧ್ಯಾ ಕಾಲಗಳಲ್ಲಿ ನಿಗಮಾಗಮ ಗಳ ಬಗ್ಗೆ ಅನುಕ್ರಮವಾಗಿ, ಅದ್ವೈತ ಸಿದ್ಧಾಂತಕ್ಕೊಳಪಟ್ಟ ರೀತಿಯಲ್ಲಿ ಪಾಠ ಪ್ರವಚನಗಳು ತಪ್ಪದೆ ಪರಮಾಚಾರ್ಯರ ಶ್ರೀ ಮುಖದಿಂದ ಪ್ರೇಮ ಪೂರಿತ ಭಾವ ದಿಂದ ಮುಂದುವರಿಯುತ್ತಲಿತ್ತು. ಇಂತಪ್ಪ ಶ್ರೇಷ್ಠ ವಿಧಾನದಿಂದಾಗಿ, ಶ್ರೀ ಶಂಕರಾ ಚಾರ್ಯರ ದಿವ್ಯ ಕೃಪಾ ಪೋಷಣೆ ಹಾಗೂ ವಿಚಕ್ಷಣೆಯಿಂದಾಗಿ ಕ್ರಮೇಣ, ಶ್ರೀ ಸುರೇಶ್ವರಾಚಾರ್ಯರು, ಶ್ರೀ ಪದ್ಮಪಾದರು, ಶ್ರೀ ಹಸ್ತಾಮಲಕರೂ ಮತ್ತೂ ಶ್ರೀ ತೋಟಕಾಚಾರ್ಯರು ವಿದ್ಯೆ ಅಂದರೆ ಅಧ್ಯಾತ್ಮ ವಿದ್ಯೆಯಲ್ಲಿ ಒಬ್ಬೊಬ್ಬರೂ ಹಿಮವದ್ಗಿರಿಯ ಉತ್ತುಂಗ ಶ್ರೀ ಗೌರೀ ಶಂಕರ ಶಿಖರದೆತ್ತರವನ್ನು ಮೀರುವಷ್ಟು ಘನ ವಿದ್ಯಾವಂತರೂ; ಶಿವಾನುಭವಿಗಳೂ ಹಾಗೂ ಆಚಾರ ಸಂಪನ್ನರೂ ಆಗಿ, ತಮ್ಮ ಶ್ರೀ ಗುರುವಿನ ಆಜ್ಞಾನುಸಾರ ನಡೆದುಕೊಳ್ಳುತ್ತಾ, ಆಚಾರ್ಯ ಶಂಕರರು ಆಚರಿಸಿ

ತೋರಿಸಿ ಬೋಧಿಸಿದ, ಶ್ರೀ ಆದಿ ಜಗದ್ಗುರು ಶ್ರೀ ದಕ್ಷಿಣಾ ಮೂರ್ತಿ ಸದೃಶರಾದ ರೇವಣ ಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರಿಂದ ಅನುಗ್ರಹೀತವಾದ ಶ್ರೀ ರತ್ನ ಗರ್ಭಗಣಪತಿ ಮತ್ತೂ ಶ್ರೀ ಚಂದ್ರಮೌಳಿ ಲಿಂಗ ಪೂಜಾರಾಧನೆಗಳಿಂದ, ಚತುರಾಮ್ನಾಯ ಮಠಾಧಿಪತಿಗಳಾದ ಶ್ರೀ ಸುರೇಶ್ವರಾಚಾರ್ಯಾದಿ ಆಚಾರ್ಯರು ತಮ್ಮ ಪರಮಾಚಾರ್ಯ ಶಂಕರರಷ್ಟೇ ಸುಜ್ಞಾನಿಗಳಾಗಿ ವಿರಾಜಿಸಿದರು. ಶ್ರೀ ಆದಿ ಜ॥ ರೇವಣಸಿದ್ಧರು ಶ್ರೀ ದಕ್ಷಿಣಾ ಮೂರ್ತಿ ಸದೃಶರೆಂಬ ಬಗೆಗೆ.

॥ ಶ್ರೀ ಕಂಠಾಸನ ವಾರಿ ಜನ್ಮ ಜನಿತಾ । ಶ್ರೀ ಕಂಠ ದೇಹೋಪಮಾ ।
ಭೂ ಕೈಲಾಸ ಹಿಮಾಲಯಾದಿ ವಿಲಸ । ಚ್ಛ್ರೀ ಪೀಠ ಸಂಸ್ಥಾಪಕಾ ।
ಸಾನಂದಾದಿ ಯ ಮೀಂದ್ರ ವಂದ್ಯ ಚರಣಾ । ಚಕ್ರೇಶ ಸಂಪೂಜಿತಾ ।
ಪಂಚಾಚಾರ್ಯ ಜಗದ್ಗುರೂ ಗಣವರಾ ವಂದೇ ದಯಾ ಸಾಗರಾ ॥

ಆದಿ ಶ್ರೀ ಶಂಕರರು ॥ **ಯದ್ದೃಷ್ಟಂ – ತನ್ನಷ್ಟಂ** ॥ ಎಂದು ಅಂದರೆ ದೃಶ್ಯ ಪ್ರಪಂಚ ಮಿಥ್ಯೆಯಾದ್ದರಿಂದ, ಕಣ್ಣೆದುರಿಗೆ ನಷ್ಟವಾಗುವುದೆಂದು ಬೋಧಿಸುತ್ತ ಲಿದ್ದರು.

ಈ ಪ್ರಕಾರವಾಗಿ ಅದ್ವೈತ ಸಿದ್ಧಾಂತವನ್ನು ಶ್ರೀ ಶಂಕರಾಚಾರ್ಯರು ಸರ್ವತ್ರ ಅಹರ್ನಿಶಗಳಲ್ಲೂ ಪಾದರಸದಂತೆ ಶ್ರಮಿಸುತ್ತಾ ಪ್ರಚಾರ, ಬೋಧೆ ಹಾಗೂ ಜನ ಸ್ತೋಮವನ್ನು ವೈದಿಕ ಧರ್ಮಾಚಾರಣೆಗಳತ್ತ ಆಕರ್ಶಿಸುತ್ತಲಿದ್ದರು. ಆ ಕಾಲದಲ್ಲಿ ಅವೈದಿಕರಾದ ಬೌದ್ಧ, ಜೈನ, ಚಾರ್ವಾಕ, ಕಾಪಾಲಿಕರು ಎಲ್ಲೆಲ್ಲೂ ತುಂಬಿ ಜನತೆ ಯನ್ನು ಅವೈದಿಕ ಮಾರ್ಗದತ್ತ ಕೊಂಡೊಯ್ಯುತ್ತಿದ್ದರು. ಇವರು ಶ್ರೀ ಶಂಕರಾ ಚಾರ್ಯರ ವೈದಿಕ ಮಾರ್ಗಕ್ಕೆ ಕುಠಾರಪ್ರಾಯರಾಗಿ, ಆದಿ ಶ್ರೀ ಶಂಕರರಿಗೆ ಆಪತ್ತನ್ನುಂಟು ಮಾಡಲು ಹೊಂಚು ಹಾಕುತ್ತಲಿದ್ದರು.

## ॥ ದುಷ್ಟಂ ದೂರೇತ ವರ್ಜಯೇತ್ ॥

ಒಂದು ದಿವಸ ಶ್ರೀ ಮದಾಚಾರ್ಯ ಶಂಕರರು, ಸಮಾದಿ ಯೋಗದೆಲ್ಲಿರಲು ದ್ಯುಕ್ತರಾಗುತ್ತಿರುವ ಸಮಯದಲ್ಲಿ, ಒಬ್ಬ ದೂರ್ತಕಾಪಾಲಿಕನು, ಶಂಕರರ ಎದು ರಿಗೆ ಬಂದು ನಿಂತು, ನಿಮ್ಮ ಶಿರಸ್ಸನ್ನು ಕತ್ತರಿಸಿ ಕೊಂಡೊಯ್ಯಲು ತಾನು ಬಂದಿ ರುವುದಾಗಿ ನುಡಿದನು. ಇದನ್ನು ಕೇಳಿದ ಆಚಾರ್ಯರು ಕಿಂಚಿತ್ತೂ ಗಾಬರಿಗೊಳ್ಳದೆ, " ಅಪ್ಪಾ ನಾನು ಶಿವ ಯೋಗದ ಸಮಾದಿಯಲ್ಲಿರುವಾಗ, ನಿನ್ನಿಚ್ಛೆಯನ್ನು ಪೂರ್ತಿಗೊಳಿಸಿಕೋ " ಎಂದು ತಕ್ಷಣ " ಅಸಂಪ್ರಜಾ ತ ಸಮಾದಿ ಯೋಗ

ವಲ್ಲಿ " ಶ್ರೀ ಶಂಕರರು ನಿರತರಾದರು. ಇದೇ ಸಮಯವೆಂದು ಆ ದುಷ್ಟ, ಹರಿತ ವಾದ ಕೊಡಲಿಯನ್ನು ಯತಿಯ ಕುತ್ತಿಗೆಗೆ ಸರಿಯಾಗಿ ಗುರಿಯಿಟ್ಟು ಮೇಲೆತ್ತಿ ಹಿಡಿಯುವುದರಷ್ಟರಲ್ಲಿ, " ದೈವೇಚ್ಛೆ ಬಲೀ ಯಸೀ " ಅವನ ಕಣ್ಮನಂಗಳ ಮುಂದೆ ಅತ್ಯಂತ ಭೀಕರವಾದ ಕರಾಳ ದೃಶ್ಯವು ಭೂಮ್ಯಾಕಾಶಗಳಿಗೆ ಒಂದೇ ಆಗಿ, ಕಾಪಾಲಿಕನನ್ನು ಕೋರೆ ಹಲ್ಲುಗಳಿಂದ ತುಂಡು ಮಾಡಿ ತಿನ್ನುವಂತೆ, ದೃಶ್ಯವನ್ನು ಕಂಡು, ಕಾಪಾಲಿಕನು ತನ್ನ ಆತ್ಮ ರಕ್ಷಣೆಗಾಗಿ, ಶ್ರೀ ಶಂಕರರನ್ನು ವಂದಿಸಿ, ಅಲ್ಲಿಂದ ಪರಾರಿಯಾದನು. ಸಮಾದಿ ಯೋಗವಲ್ಲಿದ್ದ ಶ್ರೀ ಶಂಕರರಿಗೆ ಇದಾವುದೂ ಗೋಚರ ವಾಗದೆ ಪರಮ ಶಾಂತ ಮೂರ್ತಿಗಳಾಗಿಯೇ ಇದ್ದರು.

ಸ್ವಲ್ಪ ಕಾಲಾನಂತರ ವಿರೋಧಿಗಳು ಶ್ರೀ ಶಂಕರರ ಎದುರಿಗೆ ಬರದೆ, ಬಲವಾದ ಯಾವುದೋ ದುಷ್ಟ ಮಾಂತ್ರಿಕನಿಂದ ಮಾಟ ಮಾಡಿಸಿಬಿಟ್ಟರು. ಇದು ಕ್ರಮೇಣ ಶಂಕರರ ದೇಹವಲ್ಲಿ ಸೇರಿ ಅವರಿಗೆ ಅರಿಯದ ರೀತಿಯಲ್ಲಿ ಉಪದ್ರವ ಮಾಡಲು ಆರಂಭಿಸಿತು. ಇಂದರಿಂದಾಗಿ ಶಂಕರರಿಗೆ, **ಭಗಂದರ ವ್ಯಾಧಿ** ಕಾಣಿಸಿಕೊಂಡಿತು. ಕೂತ ಸ್ಥಳದಲ್ಲೇ ರಕ್ತ ಶ್ರಾವ ತಾನಾಗಿಯೇ ಆಗುತ್ತಿತ್ತು. ಯಾವ ವೈದ್ಯೋಪಚಾರ ಗಳೂ ಪ್ರಯೋಜವಕ್ಕೆ ಬರಲಿಲ್ಲ. ಆಚಾರ್ಯರು ದಿನೇ ದಿನೇ ಕೃಷ್ಣ ಪಕ್ಷದ ಚಂದ್ರ ನಂತೆ ಕೃಶರಾಗುತ್ತಾ ಕಾಂತಿ ಹೀನರಾಧರು. ದೇಹದಲ್ಲಿ ನಿಶ್ಶಕ್ತಿ ತಲೆಹಾಕಿತು. ರಕ್ತವೇ ಪ್ರಾಣ, ರಕ್ತವಿಲ್ಲವೆಂದರೆ ಆ ದೇಹ, ಶವಕ್ಕೆ ಸಮಾನವಲ್ಲವೆ. ಆಚಾರ್ಯರ ಕಾರ್ಯಚಟುವಟಿಕೆಗಳು ಕುಂಠಿತವಾದವು. ಈಗ ಮಾಡುವುದೇನು ? ಶ್ರೀ **ಪದ್ಮಪಾದರು** ತಮ್ಮ ಆಚಾರ್ಯರನ್ನು ಈ ಗಂಢಾಂತರದಿಂದ ಉಳಿಸಿಕೊಳ್ಳಲು ತಕ್ಷಣ ಸಮಾದಿ ಯೋಗದಲ್ಲಿ ಕುಳಿತು ತಮ್ಮ ಇಷ್ಟ ದೇವತೆ **ಶ್ರೀ ಮಹಾ ಉಗ್ರ ನರಸಿಂಹಸ್ವಾಮಿಯನ್ನು** ಧ್ಯಾನಿಸಿದರು. ಸ್ವಾಮಿ ಪ್ರತ್ಯಕ್ಷರಾಗಲು, ಶ್ರೀ **ನರಸಿಂಹಸ್ವಾಮಿಯ ದಿವ್ಯಾನುಗ್ರಹದಿಂದ,** ಆ ತಕ್ಷಣವೇ ಆ ಮಾಟ, ಶಂಕರರ ದೇಹದಿಂದ ಉಚ್ಚಾಟನೆ ಹೊಂದಿಬಿಟ್ಟೋಡಿತು. ನಂತರ ಶಂಕರರು ಕ್ರಮೇಣ ಚೇತರಿಸಿಕೊಂಡು, ಸ್ವಲ್ಪ ದಿನಗಳೊಳಗಾಗಿ ಮುಂಚಿನಂತೆ ಪ್ರಕಾಶಿತರಾದರು.

॥ ಶಿವಂ ಶಾಂತಂ ॥



॥ ವಂದೇ ಶಂಭು ಮುಮಾ ಪತಿಂ । ಸುರಗುರುಂ ವಂದೇ ಜಗತ್ಕಾರಣಂ ॥
ವಂದೇ ಪನ್ನಗ ಭೂಷಣಂ ಮೃಗ । ಧರಂ ವಂದೇ ಪಶೂನಾಂ ಪತಿಂ ॥
ವಂದೇ ಸೂರ್ಯ ಶಶಾಂಕ ವಹ್ನಿ । ನಯನಂ ವಂದೇ ಮುಕುಂದ ಪ್ರಿಯಂ ॥
ವಂದೇ ಭಕ್ತ ಜನಾಶ್ರಯಿಂಚ । ವರದಂ ವಂದೇ ಶಿವಂ ಶಂಕರಂ ॥
॥ ವಂದೇ ಸತ್ಪುರುಷಾ ಲೋಕೇ । ಗುಣಗ್ರಹಣ ತತ್ಪರಾ ॥
ರಾಜ ಹಂಸಾನಿವ ಜಲಾತ್ । ಕ್ಷೀರ ಗ್ರಹಣ ಕೋವಿದಾ ॥

## ಅಧ್ಯಾಯ 14

### ಶ್ರೀ ಶಂಕರರು ತಮ್ಮ ನಾಲ್ಕು ಪ್ರಮುಖ ಶಿಷ್ಯರನ್ನು ಶ್ರೀ ಚತುರಾಮ್ನಾಯ ಮಠಗಳಿಗೆ ಅಧಿಪತಿಗಳನ್ನಾಗಿ ವಿಧಿವತ್ತಾಗಿ ಪೀಠಾರೋಹಣಗೊಳಿಸಿ ನಂತರ ತಾವು ವಿಶ್ರಾಂತಿಗಾಗಿ ಶ್ರೀಶೈಲಕ್ಕೆ ತೆರಳಲು ಬಯಸಿದುದು.

ಶ್ರೀ ಶಂಕರಾಚಾರ್ಯರು ತಮ್ಮ ನಾಲ್ಕು ಜನ ಶಿಷ್ಯರೊಂದಿಗೆ ಭಾರತಾದ್ಯಂತ ಕಾಲ್ನಡಿಗೆಯಲ್ಲಿ ಸಂಚರಿಸುತ್ತಾ, ಅಲ್ಲಲ್ಲಿಯ ಭಕ್ತ ಸ್ತೋಮವನ್ನು ಅವರವರ ಮನೋ ಧರ್ಮಕ್ಕನುಗುಣವಾಗಿ, ಭಕ್ತಿ ಜ್ಞಾನ ಕ್ರಿಯಾ ಯೋಗಗಳನ್ನು ಸುಲಭ ನುಡಿಗಳಿಂದ ಅಡಿಗಡಿಗೆ ಬೋಧಿಸುತ್ತಾ ಆಸ್ತಿಕರನ್ನಾಗಿ, ಅನೇಕರನ್ನು ವೈದಿಕ ಧರ್ಮಾನುಯಾಯಿ ಗಳನ್ನಾಗಿ ಮಾಡಿದರು. ಆಚಾರ್ಯರು ಶಂಕರನ ಅಂಶ ಸ್ವರೂಪಿಗಳು. ಶಿವಲಾಂಛನ ಲಾಂಛಿತರು, ಸದಾ ಆತ್ಮ ಪೂಜೆ ಹಾಗೂ ಶಿವಪಂಚಾಕ್ಷರೀ ಮೂಲ ಮಹಾಮಂತ್ರ ಜಪಾನುಷ್ಠಾನ ಉದ್ಯೋಗಪರರು. ಭಗವಾನ್ ಶ್ರೀ ಆದಿ ಅಗಸ್ತ್ಯ ಮಹರ್ಷಿಗಳ ಕಟಾಕ್ಷ ದೀಕ್ಷೆಯಿಂದ, ಅಡಿಗಡಿಗೆ ಅಂತರ್ಮುಖಿಗಳಾತ್ತಾ ಸಮಾಧಿ ಯೋಗದಲ್ಲಿ ತಲ್ಲೀನರಾಗುತ್ತಿದ್ದರು. " ತ್ವಮೇವಾಹಂ " ಎಂಬ ಅದ್ವೈತ ಸಿದ್ಧಾಂತದ ತಿರು ಳನ್ನು ಮನಗಂಡು, ಸರ್ವರಿಗೂ ಇದನ್ನೇ ಬೋಧಿಸುತ್ತಾ, " ಶಿವೋಹಂ " ಭಾವ ವನ್ನು ಪೂರ್ಣ ಮೈಗೂಡಿಸಿಕೊಂಡಿದ್ದರು. ಈ ರೀತಿ ಸತತ ಶಿವೋಪಾಸನೆಯಲ್ಲೇ ನಿರತರಾಗಿದ್ದ ಶಂಕರರು ; ತಾವು ಕಾಲಟಿಯಿಂದ ಶ್ರೀ ಕಾಶಿಗೆ ಹೋಗುತ್ತಿದ್ದ ಮಾರ್ಗದಲ್ಲಿ ನರ್ಮದಾ ನದಿ ತೀರದಲ್ಲಿ ಒಂದು ದಿವಸ ವಿಶ್ರಮಿಸಿಕೊಳ್ಳುತ್ತಿದ್ದಾಗ, ಅನತಿ ದೂರದಲ್ಲಿ ಒಂದು ಗುರುಕುಲಾಶ್ರಮವನ್ನು ಕಂಡರು. ನರ್ಮದಾ ನದಿಗೆ " ರೇವಾ ", ಎಂಬ ಉಪನದಿ ಸಂಗಮವಾಗುವ ತೀರದಲ್ಲಿ ಈ ಆಶ್ರಮವನ್ನು ಕಂಡು ಆಕಸ್ಮಿಕವಾಗಿ ಒಳಗೆ ಪ್ರವೇಶಿಸಿದರು. ಅಲ್ಲಿ ದ್ವಾದಶ ನಾಮಧಾರಿಗಳಾದ ಶ್ರೀ ವೈಷ್ಣವ ಆಚಾರ್ಯ ಗೋವಿಂದ ಭಗವತ್ಪಾದರು, ಶಿಷ್ಯರಿಗೆ ಪರಮ ವಿಶಿಷ್ಟಾದ್ವೈತದ ಸಾರವನ್ನು ಬೋಧಿಸುತ್ತಲಿದ್ದರು. ಅವರ ದೃಷ್ಟಿ ಶ್ರೀ ಶಂಕರ ಯತಿಗಳ ಮೇಲೆ

ದಲ್ಲಿ " ಶ್ರೀ ಶಂಕರರು ನಿರತರಾದರು. ಇದೇ ಸಮಯವೆಂದು ಆ ದುಷ್ಟ, ಹರಿತ ವಾದ ಕೊಡಲಿಯನ್ನು ಯತಿಯ ಕುತ್ತಿಗೆಗೆ ಸರಿಯಾಗಿ ಗುರಿಯಿಟ್ಟು ಮೇಲೆತ್ತಿ ಹಿಡಿಯುವುದರಷ್ಟರಲ್ಲಿ, " ದೈವೇಚ್ಛೆ ಬಲೀ ಯಸೀ " ಅವನ ಕಣ್ಮನಂಗಳ ಮುಂದೆ ಅತ್ಯಂತ ಭೀಕರವಾದ ಕರಾಳ ದೃಶ್ಯವು ಭೂಮ್ಯಾಕಾಶಗಳಿಗೆ ಒಂದೇ ಅಗ್ನಿ, ಕಾಪಾಲಿಕನನ್ನು ಕೋರೆ ಹಲ್ಲುಗಳಿಂದ ತುಂಡು ಮಾಡಿ ತಿನ್ನುವಂತೆ, ದೃಶ್ಯವನ್ನು ಕಂಡು, ಕಾಪಾಲಿಕನು ತನ್ನ ಆತ್ಮ ರಕ್ಷಣೆಗಾಗಿ, ಶ್ರೀ ಶಂಕರರನ್ನು ವಂದಿಸಿ, ಅಲ್ಲಿಂದ ಪರಾರಿಯಾದನು. ಸಮಾದಿ ಯೋಗದಲ್ಲಿದ್ದ ಶ್ರೀ ಶಂಕರರಿಗೆ ಇದಾವುವೂ ಗೋಚರ ವಾಗದೆ ಪರಮ ಶಾಂತ ಮೂರ್ತಿಗಳಾಗಿಯೇ ಇದ್ದರು.

ಸ್ವಲ್ಪ ಕಾಲಾನಂತರ ವಿರೋಧಿಗಳು ಶ್ರೀ ಶಂಕರರ ಎದುರಿಗೆ ಬರದೆ, ಬಲವಾದ ಯಾವುದೋ ದುಷ್ಟ ಮಾಂತ್ರಿಕನಿಂದ ಮಾಟ ಮಾಡಿಸಿಬಿಟ್ಟರು. ಇದು ಕ್ರಮೇಣ ಶಂಕರರ ದೇಹದಲ್ಲಿ ಸೇರಿ ಅವರಿಗೆ ಅರಿಯದ ರೀತಿಯಲ್ಲಿ ಉಪದ್ರವ ಮಾಡಲು ಆರಂಭಿಸಿತು. ಇಂದರಿಂದಾಗಿ ಶಂಕರರಿಗೆ, **ಭಗಂದರ ವ್ಯಾಧಿ** ಕಾಣಿಸಿಕೊಂಡಿತು. ಕೂತ ಸ್ಥಳದಲ್ಲೇ ರಕ್ತ ಶ್ರಾವ ತಾನಾಗಿಯೇ ಆಗುತ್ತಿತ್ತು. ಯಾವ ವೈದ್ಯೋಪಚಾರ ಗಳೂ ಪ್ರಯೋಜವಕ್ಕೆ ಬರಲಿಲ್ಲ. ಆಚಾರ್ಯರು ದಿನೇ ದಿನೇ ಕೃಷ್ಣ ಪಕ್ಷದ ಚಂದ್ರ ನಂತೆ ಕೃಶರಾಗುತ್ತಾ ಕಾಂತಿ ಹೀನರಾಧರು. ದೇಹದಲ್ಲಿ ನಿಶ್ಶಕ್ತಿ ತಲೆಹಾಕಿತು. ರಕ್ತವೇ ಪ್ರಾಣ, ರಕ್ತವಿಲ್ಲವೆಂದರೆ ಆ ದೇಹ, ಶವಕ್ಕೆ ಸಮಾನವಲ್ಲವೆ. ಆಚಾರ್ಯರ ಕಾರ್ಯಚಟುವಟಿಕೆಗಳು ಕುಂಠಿತವಾದವು. ಈಗ ಮಾಡುವುದೇನು ? **ಶ್ರೀ ಪದ್ಮಪಾದರು** ತಮ್ಮ ಆಚಾರ್ಯರನ್ನು ಈ ಗಂಢಾಂತರದಿಂದ ಉಳಿಸಿಕೊಳ್ಳಲು ತಕ್ಷಣ ಸಮಾದಿ ಯೋಗದಲ್ಲಿ ಕುಳಿತು ತಮ್ಮ ಇಷ್ಟ ದೇವತೆ **ಶ್ರೀ ಮಹಾ ಉಗ್ರ ನರಸಿಂಹಸ್ವಾಮಿಯನ್ನು** ಧ್ಯಾನಿಸಿದರು. ಸ್ವಾಮಿ ಪ್ರತ್ಯಕ್ಷರಾಗಲು, **ಶ್ರೀ ನರಸಿಂಹಸ್ವಾಮಿಯ ದಿವ್ಯಾನುಗ್ರಹದಿಂದ,** ಆ ತಕ್ಷಣವೇ ಆ ಮಾಟ, ಶಂಕರರ ದೇಹದಿಂದ ಉಚ್ಚಾಟನೆ ಹೊಂದಿಬಿಟ್ಟೋಡಿತು. ನಂತರ ಶಂಕರರು ಕ್ರಮೇಣ ಚೇತರಿಸಿಕೊಂಡು, ಸ್ವಲ್ಪ ದಿನಗಳೊಳಗಾಗಿ ಮುಂಚಿನಂತೆ ಪ್ರಕಾಶಿತರಾದರು.

॥ ಶಿವಂ . ಶಾಂತಂ ॥



॥ ವಂದೇ ಶಂಭು ಮುಮಾ ಪತಿಂ । ಸುರಗುರುಂ ವಂದೇ ಜಗತ್ಕಾರಣಂ ॥
ವಂದೇ ಪನ್ನಗ ಭೂಷಣಂ ಮೃಗ । ಧರಂ ವಂದೇ ಪಶೂನಾಂ ಪತಿಂ ॥
ವಂದೇ ಸೂರ್ಯ ಶಶಾಂಕ ವಹ್ನಿ । ನಯನಂ ವಂದೇ ಮುಕುಂದ ಪ್ರಿಯಂ ॥
ವಂದೇ ಭಕ್ತ ಜನಾಶ್ರಯಿಂಚ । ವರದಂ ವಂದೇ ಶಿವಂ ಶಂಕರಂ ॥
॥ ವಂದೇ ಸತ್ಪುರುಷಾನ್ ಲೋಕೇ । ಗುಣಗ್ರಹಣ ತತ್ಪರಾನ್ ॥
ರಾಜ ಹಂಸಾನಿವ ಜಲಾತ್ । ಕ್ಷೀರ ಗ್ರಹಣ ಕೋವಿದಾನ್ ॥

## ಅಧ್ಯಾಯ 14

**ಶ್ರೀ ಶಂಕರರು ತಮ್ಮ ನಾಲ್ಕು ಪ್ರಮುಖ ಶಿಷ್ಯರನ್ನು ಶ್ರೀ ಚತುರಾಮ್ನಾಯ ಮಠಗಳಿಗೆ ಅಧಿಪತಿಗಳನ್ನಾಗಿ ವಿಧಿವತ್ತಾಗಿ ಪೀಠಾರೋಹಣಗೊಳಿಸಿ ನಂತರ ತಾವು ವಿಶ್ರಾಂತಿಗಾಗಿ ಶ್ರೀಶೈಲಕ್ಕೆ ತೆರಳಲು ಬಯಸಿದುದು.**

ಶ್ರೀ ಶಂಕರಾಚಾರ್ಯರು ತಮ್ಮ ನಾಲ್ಕು ಜನ ಶಿಷ್ಯರೊಂದಿಗೆ ಭಾರತಾದ್ಯಂತ ಕಾಲ್ನಡಿಗೆಯಲ್ಲಿ ಸಂಚರಿಸುತ್ತಾ, ಅಲ್ಲಲ್ಲಿಯ ಭಕ್ತ ಸ್ತೋಮವನ್ನು ಅವರವರ ಮನೋ ಧರ್ಮಕ್ಕನುಗುಣವಾಗಿ, ಭಕ್ತಿ ಜ್ಞಾನ ಕ್ರಿಯಾ ಯೋಗಗಳನ್ನು ಸುಲಭ ನುಡಿಗಳಿಂದ ಅಡಿಗಡಿಗೆ ಬೋಧಿಸುತ್ತಾ ಆಸ್ತಿಕರನ್ನಾಗಿ, ಅನೇಕರನ್ನು ವೈದಿಕ ಧರ್ಮಾನುಯಾಯಿ ಗಳನ್ನಾಗಿ ಮಾಡಿದರು. ಆಚಾರ್ಯರು ಶಂಕರನ ಅಂಶ ಸ್ವರೂಪಿಗಳು. ಶಿವಲಾಂಛನ ಲಾಂಛಿತರು, ಸದಾ ಆತ್ಮ ಪೂಜೆ ಹಾಗೂ ಶಿವಪಂಚಾಕ್ಷರೀ ಮೂಲ ಮಹಾಮಂತ್ರ ಜಪಾನುಷ್ಠಾನ ಉದ್ಯೋಗಪರರು. ಭಗವಾನ್ ಶ್ರೀ ಆದಿ ಅಗಸ್ತ್ಯ ಮಹರ್ಷಿಗಳ ಕಟಾಕ್ಷ ದೀಕ್ಷೆಯಿಂದ, ಅಡಿಗಡಿಗೆ ಅಂತರ್ಮುಖಿಗಳಾತ್ತಾ ಸಮಾಧಿ ಯೋಗದಲ್ಲಿ ತಲ್ಲೀನರಾಗುತ್ತಿದ್ದರು. " ತ್ವಮೇವಾಹಂ " ಎಂಬ ಅದ್ವೈತ ಸಿದ್ಧಾಂತದ ತಿರು ಳನ್ನು ಮನಗಂಡು, ಸರ್ವರಿಗೂ ಇದನ್ನೇ ಬೋಧಿಸುತ್ತಾ, " ಶಿವೋಹಂ " ಭಾವ ವನ್ನು ಪೂರ್ಣ ಮೈಗೂಡಿಸಿಕೊಂಡಿದ್ದರು. ಈ ರೀತಿ ಸತತ ಶಿವೋಪಾಸನೆಯಲ್ಲೇ ನಿರತರಾಗಿದ್ದ ಶಂಕರರು ; ತಾವು ಕಾಲಟಿಯಿಂದ ಶ್ರೀ ಕಾಶಿಗೆ ಹೋಗುತ್ತಿದ್ದ ಮಾರ್ಗದಲ್ಲಿ ನರ್ಮದಾ ನದಿ ತೀರದಲ್ಲಿ ಒಂದು ದಿವಸ ವಿಶ್ರಮಿಸಿಕೊಳ್ಳುತ್ತಿದ್ದಾಗ, ಅನತಿ ದೂರದಲ್ಲಿ ಒಂದು ಗುರುಕುಲಾಶ್ರಮವನ್ನು ಕಂಡರು. ನರ್ಮದಾ ನದಿಗೆ " ರೇವಾ ", ಎಂಬ ಉಪನದಿ ಸಂಗಮವಾಗುವ ತೀರದಲ್ಲಿ ಈ ಆಶ್ರಮವನ್ನು ಕಂಡು ಆಕಸ್ಮಿಕವಾಗಿ ಒಳಗೆ ಪ್ರವೇಶಿಸಿದರು. ಅಲ್ಲಿ ದ್ವಾದಶ ನಾಮಧಾರಿಗಳಾದ ಶ್ರೀ ವೈಷ್ಣವ ಆಚಾರ್ಯ ಗೋವಿಂದ ಭಗವತ್ಪಾದರು, ಶಿಷ್ಯರಿಗೆ ಪರಮ ವಿಶಿಷ್ಟಾದ್ವೈತದ ಸಾರವನ್ನು ಬೋಧಿಸುತ್ತಲಿದ್ದರು. ಅವರ ದೃಷ್ಟಿ ಶ್ರೀ ಶಂಕರ ಯತಿಗಳ ಮೇಲೆ

ಬಿತ್ತು. ಶಂಕರರು ಆ, ಆಶ್ರಮದ ಗುರು ಗೋವಿಂದ ಭಗವತ್ಪಾದಾಚಾರ್ಯರನ್ನು ವಂದಿಸಿದರು.

ಕೂಡಲೇ ಶ್ರೀ ವೈಷ್ಣವಾಚಾರ್ಯರು " ನೀ ನಾರೆಂದು " ಪ್ರಶ್ನಿಸಿದಾಗ, ಶ್ರೀ ಶಂಕರರು, " ಅಯಮಾತ್ಮ ಬ್ರಹ್ಮ-ಅಹಂ ಬ್ರಹ್ಮಾಸ್ಮಿ " ಎಂದು ತಕ್ಷಣ ಉತ್ತರಿಸಿವರು. ಸುಮಾರು ಐದು ವರ್ಷದ ಬ್ರಹ್ಮಚಾರಿ ವಟು ಉಜ್ವಲವಾದ ಮುಖ ಕಾಂತಿಯಿಂದ, ಶ್ರೀಕಂಠ ಧ್ವನಿಯಿಂದ ನಿರ್ಭಯವಾಗಿ ತಾನಾರೆಂಬುದನ್ನು ಶೃತಪಡಿಸಿದ್ದನ್ನು ಕಂಡು ಈತನ ಮೂಲಕ " ಶ್ರೀ ವೈಷ್ಣವ " ಸಿದ್ಧಾಂತವನ್ನು ಪ್ರಚಾರಗೊಳಿಸುವಂತೆ ಮಾಡಬೇಕೆಂದು ಆಶಿಸಿ, ಶಂಕರರನ್ನು ತಮ್ಮ ಆಶ್ರಮದಲ್ಲಿಟ್ಟು ಕೊಂಡು ಕೆಲವು ಕಾಲ ಉಪಚರಿಸಿ, ಶ್ರೀ ವೈಷ್ಣವ ಸಿದ್ಧಾಂತವನ್ನು ಉಪದೇಶಿಸಿದರು ಇದರಿಂದಾಗಿ ಶ್ರೀ ಶಂಕರರ ಏಕೀಶ್ವರ ಮನೋಭಾವಕ್ಕೆ ಕೊಡಲಿ ಪೆಟ್ಟು ಬಿದ್ದಂತಾ ಯಿತು, ಶಂಕರರು ಎಳೆಯ ವಯಸ್ಸಿನಲ್ಲೇ ಆಕಸ್ಮಿಕವಾಗಿ ಮಾರ್ಗ ಮಧ್ಯೆ ಕಂಡ ವೈಷ್ಣವ ಸಂಪ್ರದಾಯದ ಗುರುಕುಲದಲ್ಲಿ ಶ್ರೀ ಗೋವಿಂದ ಭಗವತ್ಪಾದರ ಪ್ರಭಾವಕ್ಕೆ ತಾತ್ಕಾಲಿಕವಾಗಿ ಒಳಗಾದುದರಿಂದ, " ವಾಸುದೇವಃ ಸ್ಸರ್ವಮಿತಿ " ಎಂದು ಶಂಕರರು ಒಪ್ಪಬೇಕಾಯಿತು. ಈ ಚಿಕ್ಕ ವಯಸ್ಸಿನಲ್ಲಿ ಶ್ರೀ ವೈಷ್ಣವ ಸಿದ್ಧಾಂತಕ್ಕೆ ಶಂಕರರು ಮನಸ್ಸು ಕೊಟ್ಟಿದ್ದರಿಂದ, ತದನಂತರ ತಮ್ಮ ಶೈವ ಸಂಪ್ರದಾಯದ ಅದ್ವೈತ ಮಠಗಳಲ್ಲಿ ಶ್ರೀ ವಿಷ್ಣು, ಶ್ರೀ ರಾಮ, ಶ್ರೀ ಕೃಷ್ಣ ಪೂಜೆಗಳನ್ನೂ ಸಹ ಅನಿವಾರ್ಯವಾಗಿ ಮಾಡಬೇಕಾಗಿ ಬಂತು. ಶ್ರೀ ವಿಷ್ಣು ಸಹಸ್ರನಾಮಕ್ಕೆ ವ್ಯಾಖ್ಯಾನ ವನ್ನೂ ಶ್ರೀ ಶಂಕರರು ರಚಿಸಿರುತ್ತಾರೆ. ಶ್ರೀ ವೈಷ್ಣವ ಸಂಪ್ರದಾಯದ ಕೆಲವು ಆಚರಣೆಗಳನ್ನು, ಶ್ರೀ ಗೋವಿಂದ ಭಗವತ್ಪಾದರ ಪ್ರಭಾವಕ್ಕೊಳಗಾಗಿ ಅನುಸರಿಸಿ ದರೂ, ಶಂಕರರು ತಮ್ಮ ಆಜನ್ಮ ಸಿದ್ಧವಾದ ಶಿವಲಾಂಛನ, ಶಿವಪೂಜೆ, ಶಿವ ಮಂತ್ರ, ಜಪಗಳನ್ನು ಬಿಡದೆ ಮಾಡುತ್ತಾ, ಶ್ರೀ ಆದಿ ಗುರು ಅಗಸ್ತ್ಯ ಮಹರ್ಷಿಗಳ ಉಪದೇಶದಿಂದ ಪ್ರಜ್ಞಾವಂತರಾಗಿದ್ದುದರಿಂದ, ತಕ್ಷಣ ಎಚ್ಚೆತ್ತು, ಶ್ರೀ ಅಗಸ್ತ್ಯರು ಬೋಧಿಸಿದ ಉಪದೇಶವನ್ನು ಕಾರ್ಯಗತಗೊಳಿಸಲು ಮನದಲ್ಲಿ ನಿಶ್ಚೈಸಿ, ಶ್ರೀ ಗೋವಿಂದ ಭಗವತ್ಪಾದಾಚಾರ್ಯರಿಂದ ಅಪ್ಪಣೆ ಪಡೆದು ಅಲ್ಲಿಂದ ಶ್ರೀಕಾಶಿ ಕ್ಷೇತ್ರ ದತ್ತ ಪ್ರಯಾಣ ಬೆಳಸಿದರು.

ಶ್ರೀ ಶಂಕರರ ಮಠಗಳಲ್ಲಿ ಶ್ರೀ ರತ್ನಗರ್ಭ ಗಣಪತಿ, ಶ್ರೀ ವಿದ್ಯಾಂಬೆಯಾದ ಶಾರದಾದೇವಿಯ ಪೂಜೆ, ಶ್ರೀ ಚಂದ್ರಮೌಳಿ ಲಿಂಗದ ಪೂಜೆ, ಇವುಗಳೊಡನೆ ಶ್ರೀ ವಿಷ್ಣು, ಸತ್ಯನಾರಾಯಣ, ಶ್ರೀ ರಾಮ, ಶ್ರೀ ಕೃಷ್ಣ, ಶ್ರೀ ದೇವಿ ಇತ್ಯಾದಿ ಪೂಜಾದಿಗಳೂ ಅನುಷ್ಠಾನಕ್ಕೆ ತರಬೇಕಾಗಿ ಬಂತು. " ಬ್ರಹ್ಮ ಸಕಲವಲ್ಲ, ಕೇವಲ ನಿಷ್ಕಲ " ವೆಂದು ಸಾರಿದ ಶ್ರೀ ಶಂಕರಾಚಾರ್ಯರು ಸಕಲೋಪಾಸನೆ ಮತ್ತೂ

ಅನೇಕ ದೇವತೋಪಾಸನೆಗಳನ್ನು ॥ ಏಕಂ ಸತ್ ವಿಪ್ರಾಃ ಬಹುಧಾ ವದಂತಿ ॥ ಎಂಬ ಉಪನಿಷದ್ ಮಂತ್ರದ ಆಧಾರವನ್ನು ಕೈಕೊಂಡಿರುವರು. ಏನೇ ಇರಲಿ ಏನನ್ನೇ ಅನುಸರಿಸಲಿ. ಪೂರ್ಣ ಪ್ರಜ್ಞರಾದ ಆಚಾರ್ಯ ಶಂಕರರು ಯಾವ ಜ್ಞೀವವೂ ಪರಮೋತ್ಕೃಷ್ಟವಾದ, ಸಾಯುಜ್ಯ ಮೋಕ್ಷಪ್ರದವೆನಿಸಿದ, ಶಿವಲಾಂಛನಲಾಂಛಿತರಾಗಿ ಸದಾ ಶ್ರೀ ಚಂದ್ರಮೌಳಿ ಲಿಂಗಾರಾಧನೆ, ಧ್ಯಾನಾದಿಗಳನ್ನು ದಿನವಹಿ ತ್ರಿಕಾಲಂಗಳಲ್ಲೂ ಅನನ್ಯ ಭಕ್ತಿಭಾವದಿಂದ ಆಚರಿಸುತ್ತಾ, ಭಕ್ತಸ್ತೋಮವನ್ನುದ್ದೇಶಿಸಿ, " ಶ್ರೀ ಚಂದ್ರ ಮೌಳೀಶ್ವರನು " ನಿಮ್ಮ ನಮ್ಮೆಲ್ಲರಿಗೂ ಸದಾ ಸನ್ಮಂಗಳವನ್ನಿತ್ತು ಕರುಣೆಯಿಂದ ಕಾಪಾಡುವನೆಂದು ಆಶೀರ್ವಾದ ಮಾಡುವ ಘನ ಸಂಪ್ರದಾಯ ಆದಿ ಶ್ರೀ ಶಂಕರಾ ಚಾರ್ಯರಿಂದ ಪ್ರಾರಂಭವಾದುದು, ಆ ಚಂದ್ರಾರ್ಕಪರ್ಯಂತರ ಜರುಗುವ ಅಮೋಘಕರವಾದ ಏಕೈಕ ಪೂಜ್ಯ ಸಂಪ್ರದಾಯವೆನಿಸಿದೆ.

ಇದಕ್ಕೆ ಕಾರಣ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಆದಿ ಶ್ರೀ ಜಗದ್ಗುರು ಕೈಲಾಸನಾಥ, ಶಿವಲಿಂಗೋದ್ಭವ ಜಗನ್ ಮಂಗಳ ಮೂರ್ತಿ ರೇವಣ ಸಿದ್ಧರು, **ಶ್ರೀ ಚಂದ್ರಮೌಳಿ ಲಿಂಗವನ್ನು** ಆದಿ ಶ್ರೀ ಶಂಕರಾಚಾರ್ಯರಿಗೆ ಅನುಗ್ರಹಿಸುವಾಗ ಅದರಲ್ಲಿ ಪರಶಿವನು ಶಿವ ಶಕ್ತಿ ಸಂಪುಟದಿಂದ ಸತತ ಅವಿನಾ ಭಾವ ಸಂಬಂಧದಿಂದ ಸಹಜವಾಗಿ ರಾರಾಜಿಸುವ ಮಹದಂಶವನ್ನು, ಗಂಭೀರವಾಗಿ ಉಪದೇಶಿಸಿ ಆಶೀರ್ವದಿಸಿರುವುದರಿಂದ, ಶ್ರೀ ಶಂಕರರು ಪರಮಾಚಾರ್ಯರ ಆದೇಶಕ್ಕೆ ಶರಣಾಗಿರುವರು. ಇದು ಸತ್ಯವಿರುತ್ತೆ, ಇಲ್ಲಿ ಅಪಾರ್ಥಕ್ಕೆ ಸ್ಥಳವಿಲ್ಲ **" ತದೇ ತತ್ ಸತ್ಯಂ ".**

ಶ್ರೀ ಶಂಕರಾಚಾರ್ಯರು ತಮ್ಮ ನಾಲ್ಕು ಜನ ಶಿಷ್ಯರೊಂದಿಗೆ ಭಾರತಾದ್ಯಂತ ಸಂಚರಿಸಿ, ಅದ್ವೈತ ಮತವನ್ನು ಸ್ಥಾಪಿಸಿ, ಧರ್ಮ ಪ್ರಚಾರಕಾರ್ಯಾರ್ಥ ನಾಲ್ಕು ದಿಕ್ಕುಗಳಲ್ಲಿ ಚತುರಾಮ್ನಾಯ ಮಠಗಳನ್ನು ಸ್ಥಾಪಿಸಿದರು. ನಂತರ ಆದಿ ಶ್ರೀ ಶಂಕರಾಚಾರ್ಯರು :-

1) ಪೂರ್ವ ದಿಕ್ಕಿನಲ್ಲಿ ಪೂರಿ ಜಗನ್ನಾಥ ಕ್ಷೇತ್ರದಲ್ಲಿ ಋಗ್ವೇದ ಕ್ಕನುಗುಣ ವಾದ ಶ್ರೀ ಗೋವರ್ಧನ ಮಠವನ್ನು ಸ್ಥಾಪಿಸಿ ; " ಅಹಂ ಬ್ರಹ್ಮಾಸ್ಮಿ " ಎಂಬ ಋಗ್ವೇದದ ಮಹಾ ವಾಕ್ಯದ ಆಧಾರವುಳ್ಳ ಈ ಮಠಕ್ಕೆ ಶ್ರೀ ಹಸ್ತಾಮಲಕಾ ಚಾರ್ಯರನ್ನು ಅಧಿಪತಿಗಳನ್ನಾಗಿ ಮಾಡಿದರು.

2) ಪಶ್ಚಿಮ ದಿಕ್ಕಿನಲ್ಲಿ, ಶ್ರೀ ಮಥುರಾನಗರದಲ್ಲಿ ಸಾಮವೇದ ಕ್ಕನುಗುಣ ವಾದ ಮಥುರಾ ಮಠವನ್ನು ಸ್ಥಾಪಿಸಿ, " ತತ್ವಮಸಿ " ಎಂಬ ಸಾಮವೇದಾಂತರ್ಗತ

ಪಾದ ಮಹಾ ವಾಕ್ಯದ ತಳಹದಿಯುಳ್ಳ, ಈ ಮಠಕ್ಕೆ ಶ್ರೀ ಪದ್ಮಪಾದಾಚಾರ್ಯರನ್ನು ಅಧಿಪತಿಗಳನ್ನಾಗಿ ಮಾಡಿದರು.

3) ಉತ್ತರ ದಿಕ್ಕಿನಲ್ಲಿ ಹಿಮಾಲಯದ ಕಟಿ ಪ್ರದೇಶವಾದ ಬದರಿಯಲ್ಲಿ ಅಥರ್ವಣ ವೇದ ಕ್ಕನುಗುಣವಾಗಿ ಬದ್ರಿ ಮಠವನ್ನು ಸ್ಥಾಪಿಸಿ, "ಪ್ರಜ್ಞಾನಂ ಬ್ರಂಹ್ಮ" ಎಂಬ ಅಥರ್ವಣ ವೇದದ ಮಹಾ ವಾಕ್ಯದ ಅಸ್ತಿತ್ವದಿಂದ ರಾರಾಜಿಸುವ ಈ ಬದರೀ ಮಠಕ್ಕೆ ಶ್ರೀ ತೋಟಕಾಚಾರ್ಯರನ್ನು ಅಧಿಪತಿಗಳನ್ನಾಗಿ ಮಾಡಿದರು. ನಂತರ.

4) ದಕ್ಷಿಣ ದಿಕ್ಕಿನಲ್ಲಿ ತುಂಗಾ ತೀರದ ಶ್ರೀ ಶೃಂಗೇರಿಯಲ್ಲಿ ಯಜುರ್ವೇದಕ್ಕನು ಗುಣವಾದ ಶ್ರೀ ಶಾರದಾ ಮಠವನ್ನು ಸ್ಥಾಪಿಸಿ, "ಅಯಮಾತ್ಮ ಬ್ರಹ್ಮ" ಎಂಬ ಯಜುರ್ವೇದಾಂತಾರ್ಗತವಾದ ಮಹಾ ವಾಕ್ಯದ ನೆಲಗಟ್ಟಿನ ಮೇಲೆ ಸ್ಥಾಪಿಸಿದ ಶ್ರೀ ಶೃಂಗೇರಿ ಮಠಕ್ಕೆ ಶ್ರೀ ಸುರೇಶ್ವರಾಚಾರ್ಯರನ್ನು ಅಧಿಪತಿಗಳನ್ನಾಗಿ ಮಾಡಿ ಸಂತೋಷಿಸಿದರು.

ಶ್ರೀ ಶೃಂಗೇರಿ ಶ್ರೀ ಶಾರದಾ ಪೀಠಕ್ಕೆ ತಾವು ಮೊದಲು ಸ್ಥಾಪಿಸಿ ಅಧಿಪತಿಗಳಾಗಿದ್ದುದರಿಂದ, ಈ ಪೀಠವು ದಕ್ಷಿಣಾಮ್ನಾಯ ಪೀಠವೆಂದು ಪ್ರಸಿದ್ಧಿಪಡೆದಿರುತ್ತೆ. ಮತ್ತೂ ಈ ಪೀಠವು ಸನಾತನ ಧರ್ಮ ವ್ಯಾಖ್ಯಾನ ಪೀಠವೆಂದೂ ಸರ್ವತ್ರ ವಿಖ್ಯಾತವಾಗಿದೆ.

ತಾವು ಉದ್ದೇಶಿಸಿದ ಎಲ್ಲಾ ಕಾರ್ಯಗಳನ್ನು ಶ್ರೀ ಆದಿ ಶಂಕರಾಚಾರ್ಯರು ಸುಮಾರು ಕಿ. ಪೂ. 487 ಸರಹದ್ದಿನಲ್ಲಿ ಪೂರ್ಣಗೊಳಿಸಿ, ರಚಿಸಬೇಕಾದ ಎಲ್ಲಾ ಕೃತಿಗಳನ್ನೂ ಬರೆದು ಮುಗಿಸಿ, ಅಲ್ಲಿಂದ ಮುಂದೆ ವಿಶ್ರಾಂತಿಗಾಗಿ ಶ್ರೀಶೈಲಕ್ಕೆ ನಿಶ್ಚಿಂತೆಯಿಂದ ಪ್ರಯಾಣ ಮಾಡಿದರು.



॥ ಪಂಚಾಸ್ಯ ವದನೋದ್ಭೂತಾ೯ । ಪಂಚತತ್ವಾಧಿನಾಯಕಾ೯ ।
ಪಂಚ ಬ್ರಹ್ಮ ಮಯಾ ನೌಮಿ । ಪಂಚಾಚಾರ್ಯಾನ್ ಜಗದ್ಗುರೂ೯ ॥

॥ ಪಂಚಾನನ ತನೂದ್ಭೂತಾ೯ । ಪಂಚಾಕ್ಷರ ಮಸೂಪಮಾ೯ ।
ಪಂಚ ಸೂತ್ರ ಕೃತೋ ವಂದೇ । ಪಂಚಾಚಾರ್ಯಾನ್ ಜಗದ್ಗುರೂ೯ ॥

( ಶಿವಾಗಮ )

## ಅಧ್ಯಾಯ 15

### ಆದಿ ಶ್ರೀಶಂಕರಾಚಾರ್ಯರು ಶ್ರೀ ಭ್ರಮರಾಂಬಾ ಸಮೇತ ಶ್ರೀ ಮಲ್ಲಿಕಾರ್ಜುನನ ದಿವ್ಯ ಸಂದರ್ಶನಾರ್ಥ ಶ್ರೀಶೈಲ ಕ್ಷೇತ್ರಕ್ಕೆ ಆಗಮಿಸಿದುದು

ಸುಜ್ಞಾನಿಗಳೂ ಅಷ್ಟಾಂಗ ಯೋಗ ನಿಷ್ಣಾಗರಿಷ್ಠರೂ, ಬ್ರಹ್ಮಾದ್ವೈತಿಗಳೂ ಮತ್ತು ಮಹಾ ತತ್ವಜ್ಞಾನಿಗಳೂ ಆದ ಶ್ರೀ ಆದಿ ಶಂಕರಾಚಾರ್ಯರು, ತಮ್ಮ ನೆಚ್ಚಿನ ನಾಲ್ಕು ಶಿಷ್ಯರುಗಳನ್ನು ಚತುರಾಮ್ನಾಯ ಮಠಗಳಿಗೆ ಅಧ್ಯಕ್ಷರನ್ನಾಗಿ ಮಾಡಿ ಅವರಿಗೆ ಮುಂದಿನ ಮಾರ್ಗದರ್ಶನವನ್ನೂ ನೀಡಿ, ಶ್ರೀ ಮದಾಚಾರ್ಯರು ಶ್ರೀ ಶೃಂಗೇರಿ ಮಠದಲ್ಲಿ ಕೆಲವು ಕಾಲ ಇದ್ದು, ಅಲ್ಲಿಂದ ಶ್ರೀಶೈಲ ಕ್ಷೇತ್ರಕ್ಕೆ ಪ್ರಯಾಣ ಹೊರಡಲು ಸಿದ್ಧರಾದರು.

ಒಂದು ಶುಭ ಮುಹೂರ್ತದಲ್ಲಿ ಮಿತ್ರ ಶ್ರೀ ಚಿತ್ಸುಖಾಚಾರ್ಯರೊಂದಿಗೆ ಶ್ರೀ ಶಂಕರರು ಶ್ರೀಶೈಲ ಕ್ಷೇತ್ರಕ್ಕೆ ಬಂದು ಸೇರಿದರು. ಯುಗ ಯುಗಾಂತರಗಳಿಂದ ಶ್ರೀ ಶೈಲ ಕ್ಷೇತ್ರ ಸಾಕ್ಷಾತ್ ಭೂಕೈಲಾಸವೆಂದು ಸ್ತುತ್ಯವಿರುತ್ತೆ. ಜಗದಾದಿ ಶ್ರೀ ಪರಮ ಜಗದ್ಗುರು ಶಿವ ಲಿಂಗೋದ್ಭವ ಮಂತ್ರಮಯ ದಿವ್ಯ ದೇಹಧಾರಿಗಳಾದ ಶ್ರೀ ಪಂಚಾಚಾರ್ಯರುಗಳಲ್ಲಿ ನಾಲ್ಕನೆಯವರೂ, ಸದಾಶಿವನ " ವ " ಕಾರಮಯ ಮೂಲ ಬೀಜಾಕ್ಷರ ಮಂತ್ರ ಸ್ವರೂಪವೆನಿಸಿದ ತತ್ಪುರುಷ ಮುಖ ಸಂಜಾತರೂ, ಅಥರ್ವಣ ವೇದ ಮಂತ್ರಕ್ಕಧಿಪತಿಗಳೂ ಹಾಗೂ ವಾಯು ತತ್ವಕ್ಕೊಡೆಯರೂ, ಶೈವಾಗಮಾಂಬುಜ ಭಾಸ್ಕರರೂ ಆಗಿ ರಾರಾಜಿಸುವ ಶ್ರೀ ಗಿರಿಮಲ್ಲಿಕಾರ್ಜುನ ಜ್ಯೋತಿರ್ಲಿಂಗ ಸಂಭವರಾದ ಶ್ರೀ ಆದಿ ಜಗದ್ಗುರು ಪಂಡಿತಾರಾಧ್ಯದೇಶಿಕೇಂದ್ರ ಶಿವಾಚಾರ್ಯರು, ಶ್ರೀ ಭ್ರಮರಾಂಬಾ ಮಲ್ಲಿಕಾರ್ಜುನರ ದೇವಾಲಯಗಳ ಪವಿತ್ರ ಆವರಣದಲ್ಲೇ ಬಲ ಭಾಗದ ಉನ್ನತ ಸ್ಥಾನದಲ್ಲಿ ತಮ್ಮ ಶ್ರೀ ಸೂರ್ಯಸಿಂಹಾಸನ ಮಹಾ ಪೀಠವನ್ನು ಸ್ಥಾಪಿಸಿ, ಶಿವ ತತ್ವಜ್ಞಾನ ಘನ ಮಯರೆನಿಸಿದ ಶ್ರೀ ಸಾನಂದಾದಿ

ಮುನೀಂದ್ರರಿಂದ ಸಂಪೂಜ್ಯರೂ, ವಂದ್ಯರೂ ಆಗಿ ಜಗತ್ತಿಗೆ ಶಿವಾದ್ವೈತ ಸಿದ್ಧಾಂತ ವನ್ನು ಪ್ರತಿಪಾದಿಸುತ್ತಾ ವಿರಾಜಮಾನರಾಗಿರುವುದು, ಸಂಸ್ಮರಣೀಯವಿರುತ್ತೆ. ಶ್ರೀಶೈಲ ಶ್ರೀ ಗಿರಿರಾಜ ಸೂರ್ಯಸಿಂಹಾಸನಾಧೀಶ್ವರರೂ, ಶ್ರೀಗಿರಿ ಮಲ್ಲಿಕಾರ್ಜುನನ ಅಪರಾವತಾರಿಗಳೂ ಆದ ಶ್ರೀ ಆದಿ ಜ॥ ಪಂಡಿತಾರಾಧ್ಯ ಶಿವಾಚಾರ್ಯರ ಹಾಗೂ ಶ್ರೀಶೈಲ ಕ್ಷೇತ್ರದ ಮಹಿಮೆಯನ್ನು, ಶ್ರೀ ವೇದವ್ಯಾಸಾಚಾರ್ಯರು ತಮ್ಮಿಂದ ರಚಿತ ವಾಗಿರುವ, ಮಹಾಸ್ಕಾಂದಾಂತರ್ಗತ ಕಾಶಿ ಖಂಡದಲ್ಲಿ ವರ್ಣಿಸುತ್ತಾ :—

॥ ತಸ್ಮಿನ್ ಶ್ರೀ ಪರ್ವತೇ ರಮ್ಯೇ । ಸಂಸಾರಮಯ ಭೇಷಜೇ ।
ಆಸ್ತೇಲಿಂಗಾಂಗ ಸಂಬಂಧೀ । ಸನಂದಾಹ್ವಯೋ ಮುನಿಃ ॥

ಇತ್ಯಾದಿ ಶ್ಲೋಕಗಳಿಂದ ಶ್ರೀ ಜ॥ ಪಂಡಿತಾರಾಧ್ಯರ ಹಾಗೂ ಶ್ರೀಶೈಲ ಕ್ಷೇತ್ರ ನಾಥನ ಮಹಿಮೆಗಳನ್ನು ಅಸದೃಶ ಭಕ್ತಿಭಾವದಿಂದ ಸ್ತುತಿಸಿರುವರು. ಶ್ರೀ ಸಾನಂದ ಮುನೀಂದ್ರರು ಶ್ರೀ ಆದಿ ಜ॥ ಪಂಡಿತಾರಾಧ್ಯರ ಪ್ರಥಮ ಶಿಷ್ಯರಿರುವರು. ಶ್ರೀ ಆದಿ ಶಂಕರಾಚಾರ್ಯರು ಶ್ರೀಶೈಲದ ಶ್ರೀ ಮಲ್ಲಿಕಾರ್ಜುನ ದೇವಾಲಯದ ಗೋಪುರ ವನ್ನು ಸಂದರ್ಶಿಸಿದೊಡನೆ ॥ **ಶ್ರೀಶೈಲ ಶಿಖರೇ ದೃಷ್ಟೇ । ಪುನರ್ಜನ್ಮ ನ ವಿನ್ಯತೇ** ॥ ಎಂದು ಸ್ತುತಿಸಿರುತ್ತಾರೆ. ಶ್ರೀ ಉಮಾಲಿಂಗಿತನಾದ ಶ್ರೀಗಿರಿ ಮಲ್ಲಿಕಾರ್ಜುನನನ್ನು ಒಮ್ಮೆ ಸಂದರ್ಶಿಸಿ, ಸೇವಿಸಬೇಕೆಂದು ಶಂಕರರು ನುಡಿದಿರುತ್ತಾರೆ ಶೃತಿಗಳಲ್ಲಿ ॥ **ಶ್ರೀಶೈಲ ದರ್ಶನಾನ್ಮುಕ್ತಿಃ** ॥ ಎಂದು ಪ್ರಶಂಶಿಸಲಾಗಿದೆ. ಶ್ರೀಶೈಲ ಕ್ಷೇತ್ರದ ಬಗ್ಗೆ ಗ್ರಂಥಗಳಲ್ಲಿ ಪ್ರಸ್ತಾಪಿಸುತ್ತಾ, ॥ **ಸುಪ್ರಭಾ ದೇವಿಯೊಡೆಯನ। ಶಿಲಾದನ ಸುತರು। ವಿಪ್ರವಂದ್ಯರು ವೀರಶೈವರವರು। ಸುಪ್ರಸಿದ್ಧ ಪರ್ವತೇಶನೆ ಗಿರಿಯಾದ** ॥ ಎಂದು ವರ್ಣಿಸಲಾಗಿದೆ. ಬಹು ಪೂರ್ವದಲ್ಲಿ ಶ್ರೀ ಸುಪ್ರಭಾದೇವಿ ಮತ್ತೂ ಶಿಲಾದ ಮುನಿ, ಇವರಿಗೆ ಇಬ್ಬರು ಗಂಡು ಮಕ್ಕಳಿದ್ದರು. ತಪಸ್ವಿಗಳಾದ ಮಾತಾ ಪಿತೃಗಳ ಉದರದಲ್ಲಿ ಹುಟ್ಟಿದ ನಂದಿ ಮತ್ತು ಪರ್ವತರೆಂಬ ಇಬ್ಬರು ಮಕ್ಕಳು ಬಾಲ್ಯದಿಂದಲೇ ಶ್ರೀ ಮಲ್ಲಿಕಾರ್ಜುನನ ಭಕ್ತರಾಗಿ ತಪಸ್ಸನ್ನಾಚರಿಸಿ, ಶಿವನ ಪ್ರೀತಿಗೊಳಗಾದರು. ಶಿವನು ಇವರ ಭಕ್ತಿಗೆ ಮೆಚ್ಚಿ ವರವನ್ನು ಕೇಳಿರೆಂದ ಆಜ್ಞಾಪಿ ಸಿದನು. ಆಗ ಅವರು ಸದಾ ಶಿವಸಂಬಂಧವುಳ್ಳವರಾಗಿರಲು ಇಚ್ಛಿಸಿ, ಆ ಪ್ರದೇಶ ವೆಲ್ಲಾ ತಾವೇ ಪರ್ವತವಾಗಿ ನಿಲ್ಲುವೆವು, ನೀವು ಶ್ರೀ ಭ್ರಮರಾಂಬಾ ಸಮೇತರಾಗಿ ನಮ್ಮ ಶಿರದ ಮೇಲೆ ಕಾಲೂರಿ ಪ್ರಸನ್ನ ಭಾವದಿಂದ ಮಂಡಿಸಿ ಪೂಜೆಗೊಳ್ಳಬೇಕೆಂದು ಪ್ರಾರ್ಥಿಸಿಕೊಂಡರು. ಶಿವನು ಭಕ್ತರ ಅಭೀಷ್ಟಕ್ಕೆ ಮಣಿದು, ಅಂದಿನಿಂದ ಶ್ರೀಗಿರಿ ಮಲ್ಲಿಕಾರ್ಜುನ ಪರ್ವತಲಿಂಗವೆಂಬ ಹೆಸರನ್ನು ಹೊಂದಿ, ಶ್ರೀಶೈಲದಲ್ಲಿ ಸುಪ್ರಸನ್ನ ನಾಗಿಹನು, ಶ್ರೀ ಪರ್ವತೇಶನು ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದು ಪ್ರಮುಖ ಲಿಂಗವೆನಿಸಿ ಪ್ರಸಿದ್ಧನಾಗಿಹನು. ಇದು ಕೃಷ್ಣಾನದಿತೀರದಲ್ಲಿ ಸುಮಾರು 800

ಅಡಿಗಳ ಎತ್ತರದಲ್ಲಿ ಸ್ಥಾಪಿತವಾಗಿರುವುದು. ಇಲ್ಲಿ ಕೃಷ್ಣಾ ನದಿಯು ಬೃಹದಾಕಾರ ವಾವ ಕೊಳ್ಳುವಾಗಿ, ಶ್ರೀ ದೇವಾಲಯದ ಪಕ್ಕದಲ್ಲೇ ರಮ್ಯವಾಗಿ ಪ್ರವಹಿಸುತ್ತಲಿದೆ. ಇದನ್ನು ಪಾತಾಳ ಗಂಗೆಯೆಂದು ಕರೆಯುತ್ತಾರೆ. ಭಕ್ತರು ಪಾತಾಳ ಗಂಗೆಯಲ್ಲಿ ಮಿಂದು ಪಾತಾಳ ಗಂಗೋದಕವನ್ನು ಗಿಂಡಿಯಲ್ಲಿ ತಂದು ಶ್ರೀಗಿರಿ ಮಲ್ಲಿಕಾರ್ಜುನನ ಮಸ್ತಕದ ಮೇಲೆರೆದು ಅಭಿಷೇಕವನ್ನು ಮಾಡಿ, ಸ್ವಾಮಿಯ ದರ್ಶನ ಸ್ಪರ್ಶನಗಳಿಂದ ಪಾಪದೂರರಾಗಿ, ಕೃತಾರ್ಥರಾಗುತ್ತಿರುವರು. ಶ್ರೀ ಸೀತಾರಾಮರೂ, ಶ್ರೀ ದ್ರೌಪತಿ ಸಮೇತರಾದ ಪಂಚ ಪಾಂಡವರೂ, ಮತ್ತೂ ಅಸಖ್ಯಾಂತರಾದ, ದೇವ, ದಾನವ, ಮಾನವಾದಿಗಳು ಶ್ರೀ ಬ್ರಮರಾಂಬಾ ಸಮೇತನಾದ ಗಿರಿ ಮಲ್ಲಿಕಾರ್ಜುನ ನನ್ನು ಭಕ್ತಿ ಪೂರ್ವಕ ಭಜಿಸಿ, ಸೇವಿಸಿ, ತಂ ತಮ್ಮ ಇಷ್ಟಾರ್ಥಗಳನ್ನು ಪಡೆದು ಧನ್ಯರೆನಿಸಿರುವರು.

ಇಂತಪ್ಪ ಪರಾತ್ಪರ ಪರಂಧಾಮವೆನಿಸಿದ ಶ್ರೀಶೈಲ ಸುಕ್ಷೇತ್ರಕ್ಕೆ ಆದಿ ಶ್ರೀ ಶಂಕರಾಚಾರ್ಯರು ತಮ್ಮ ಆತ್ಮೀಯ ಗೆಳೆಯ ಶ್ರೀ ಚಿತ್ಸುಕಾಚಾರ್ಯರೊಂದಿಗೆ ಬಂದು, ಶ್ರೀ ಬ್ರಮರಾಂಬಾ ಸಮೇತನಾದ ಶ್ರೀಗಿರಿ ಮಲ್ಲಿಕಾರ್ಜುನನ ದರ್ಶನ ಪಡೆದು ಸಂತುಷ್ಟ ಭಾವದಿಂದ, ಈ ದಿವ್ಯ ಕ್ಷೇತ್ರದಲ್ಲಿ ಕೆಲವು ದಿವಸಗಳು ನೆಲಸಿದರು ಕೆಲವು ಕಾಲ ಈ ಕ್ಷೇತ್ರದಲ್ಲಿದ್ದು ನಿತ್ಯವೂ ಶ್ರೀ ಪರ್ವತ ಲಿಂಗದ ದರ್ಶನ, ಪೂಜಾ ಧ್ಯಾನಾದಿಗಳಿಂದ ಪ್ರಪುಲ್ಲಿತ ಭಾವವುಳ್ಳವರಾಗಿ ಶಿವಾರಾಧನೆಯಲ್ಲಿ ನಿರಂತರವಾಗಿ ಮುಳುಗಿದ್ದರು. ತತ್ಪರಿಣಾಮವಾಗಿ ಇಲ್ಲಿ ಕೆಲ ಕಾಲ ತಪಸ್ಸನ್ನಾಚರಿಸಲು ಸಂಕಲ್ಪ ಮಾಡಿದರು. ಶ್ರೀಶೈಲ ದೇವಾಲಯಕ್ಕೆ ಪೂರ್ವ ದಿಕ್ಕಿನ ಒಂದು ಉನ್ನತವಾದ ಗಿರಿ ಧಾಮದಲ್ಲಿ ತಪಸ್ಸಿಗಾಗಿ ಪವಿತ್ರ ಸ್ಥಳವೊಂದನ್ನು ಗೊತ್ತುಪಡಿಸಿಕೊಂಡರು, ಆ ಸ್ಥಳ ರಮ್ಯವಾದ ವಾತಾವರಣದಿಂದ ತಪಸ್ಸಿಗೆ ಯೋಗ್ಯವಾದ, ಪ್ರಕೃತಿಸೌಂದರ್ಯ ಗಳಿಂದಲೂ, ಪವಿತ್ರವಾದ ಜಲ ಪ್ರವಾಹ ಝುರಿಯಿಂದ ಸುತ್ತಲ್ಪಟ್ಟು, ಸಣ ಉದ್ಯಾನವನರಾಜಿಗಳಿಂದ ಬಹು ನೆಮ್ಮದಿಯಿಂದ ಕೂಡಿದ ನಿರ್ಜನ ಪ್ರದೇಶವಾಗಿತ್ತು. ಶ್ರೀಮದಾಚಾರ್ಯರು ಅಲ್ಲಿಯ ಸೊಬಗಿನ ವಾತಾವರಣದಲ್ಲಿ ಒಂದು ಉನ್ನತಾಸನದ ಮೇಲೆ, ದರ್ಭಾಸನವನ್ನು ಹಾಕಿ, ಮಹಾ ವೃಕ್ಷದಡಿಯಲ್ಲಿ, ಶ್ರೀ ಗಿರಿ ಬ್ರಮರಾಂಬಾ ಸಮೇತನಾದ ಶ್ರೀ ಮಲ್ಲಿಕಾರ್ಜುನ ದೇವಾಲಯಾಭಿಮುಖವಾಗಿ, ಶ್ರೀ ಪಂಚ ಕಲಸ ಗಳನ್ನು ದರ್ಶಿಸುತ್ತಾ, ಶ್ರೀ ಮಹಾ ದೇವನ ಸ್ಮರಣೆಯೊಂದಿಗೆ ಅಂತರ್ಮುಖಿಗಳಾಗಿ, ಮಾನಸಿಕ ಆತ್ಮ ಪೂಜೆಯಲ್ಲಿ ಮಗ್ನರಾದರು. ಬ್ರಹ್ಮಚರ್ಯ, ತಪಶ್ಚರ್ಯ, ಅಷ್ಟಾಂಗ ಯೋಗಗಳಲ್ಲಿ ಪೂರ್ಣ ಸಿದ್ಧಿಪಡೆದಿದ್ದ, ಶ್ರೀ ಶಂಕರಾಚಾರ್ಯರು, ಸಮಾದಿ ಯೋಗದ ಕೇಂದ್ರವೆನಿಸಿದ ತುರಿಯಾವಸ್ಥೆಯಲ್ಲಿ ರಂಜಿತರಾಗಿ ಆನಂದೋ ಬ್ರಹ್ಮವಾಗಿ ವಿರಾಜಿತರಾಗಿದ್ದರು. ಇದು ಅದ್ವೈತ ಅಥವಾ ಕೇವಲಾದ್ವೈತದ, ಅನಿರ್ವಚನೀಯವಾದ ಮುಕ್ತಾವಸ್ಥೆ ಎನ್ನಬಹುದು.

ಶ್ರೀ ಶಂಕರರ ಭಕ್ತಿ, ಜ್ಞಾನ, ತಪ್ಪಶ್ಚರ್ಯಗಳ ಮತ್ತು ಅವರ ಭಾಷ್ಯಾದಿ ಕೃತಿಗಳ ಫಲರೂಪದಲ್ಲಿ ಸಾಕ್ಷಾತ್ ಶ್ರೀಗಿರಿ ಮಲ್ಲಿಕಾರ್ಜುನನು ಒಂದು ದಿವಸ ಶ್ರೀ ಶಂಕರರು ಪದ್ಮಾಸನಾಸೀನರಾಗಿ ಆತ್ಮಾನು ಸಂಧಾನದಲ್ಲಿ ಪರವಶರಾಗಿದ್ದಾಗ, ಅಶರೀರವಾಣಿಯೊಂದು ಆಚಾರ್ಯರಿಗೆ ದಿವ್ಯ ಸಂದೇಶವನ್ನಿತ್ತಂತೆ ಕೇಳಿಸಿತು.

" ವತ್ಸಾ ! ಶಂಕರಾ ! ನಿನ್ನ ತಪಶ್ಚರ್ಯಕ್ಕೂ ಹಾಗೂ ನೀನೆಸಗಿರುವ ಅದ್ವಿತೀಯ ಪ್ರಸ್ಥಾನ ತ್ರಯಗಳ ಭಾಷ್ಯಾದಿಗಳೂ, ಶೃತ್ಯರ್ಥಗರ್ಭಿತವಾದ ಬ್ರಹ್ಮಾದ್ವೈತದ ಧರ್ಮ ವ್ಯಾಖ್ಯಾನ, ಉಪದೇಶ, ಪ್ರವಚನಾದಿ ಅಖಂಡ ಪ್ರಚಾರ ಭಾರತಾದ್ಯಂತ ಮಾಡಿರುವುದು, ಲೋಕೋದ್ಧಾರ, ಸನಾತನ ಧರ್ಮೋದ್ಧಾರ ಕಾರ್ಯವನ್ನು ಪ್ರಭಾವಿತವಾಗಿ ಮಾಡಿರುವುದು, ಸಂತೋಷದ ವಿಷಯವಿರುತ್ತೆ. ಇದಕ್ಕಾಗಿ ನಿನಗೆ ನಾವು ಸನ್ಮಾನಿಸಿ, ಯೋಗ್ಯ ರೀತಿಯಲ್ಲಿ ಹರಸಲು ಸಂಕಲ್ಪ ಮಾಡಿರುತ್ತೇವೆ. ಆದ್ದರಿಂದ ಯತಿವರ್ಯ ಭದ್ರಾ ತೀರ ಪ್ರವಿರಾಜಮಾನ ಭದ್ರತರ ಶ್ರೀಮದ್ರಂಭಾಪುರೀ ವೀರ ಸಿಂಹಾಸನದ ಮಹಾ ಜ॥ ಪೀಠಕ್ಕೆ ತ್ವರಿತವಾಗಿ ನೀನು ಬರುವುದು. ನಿನ್ನ ಆಗಮನಕ್ಕಾಗಿ ನಾವು ಅಲ್ಲಿ ಸುಪ್ರಸನ್ನರಾಗಿ ನಿರೀಕ್ಷಿಸುತ್ತಲಿರುವೆವೆಂದು ಅಶರೀರವಾಣಿ ಘೋಷಿಸಿತು." ಶಿವಾಂಶ ಸಂಭೂತರಾದ ಆಚಾರ್ಯ ಶ್ರೀ ಶಂಕರರಿಗೆ ಶಿವ ಲಿಂಗೋದ್ಭವ ಸರ್ವ ಮಂಗಳ ಮೂರ್ತಿ ಸಾಕ್ಷಾತ್ ಕೈಲಾಸನಾಥನೇ ಶ್ರೀ ಆದಿ ಜಗದ್ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರ ರೂಪದಲ್ಲಿ ಪ್ರತ್ಯಕ್ಷವಾಗಿ, ಶಂಕರರೊಂದಿಗೆ ಆತ್ಮೀಯ ಭಾವದಿಂದ ಸಂಭಾಷಿಸಿ, ಹೃತ್ಪೂರ್ವಕ ಅನುಗ್ರಹಿಸಲಿಕ್ಕಾಗಿ ಮಹಾ ದೇವನು ಮಹಾ ಗುರು ರೂಪದಲ್ಲಿ ಪ್ರಸನ್ನನಾಗಿರುವಾಗ, ಶ್ರೀ ಶಂಕರಾ ಚಾರ್ಯರ ಭಾಗ್ಯಕ್ಕೆಣೆಯುಂಟೆ ?

ಧ್ಯಾನ ಯೋಗದಲ್ಲಿದ್ದ ಶ್ರೀ ಶಂಕರರು ಈ ದೇವ ವಾಣಿಯನ್ನು ಶ್ರವಣ ಮಾಡುತ್ತಲೇ " ಇದೇನಿದು ಮಂಗಳ ರವ " ಎಂದು ಕಣ್ ತೆರೆದು ಸುತ್ತಲೂ ನೋಡಿದರು. ಎಲ್ಲವೂ ಆ ನಿರ್ಜನ ಪವಿತ್ರ ಸ್ಥಳದ ಸುತ್ತಲೂ ಸ್ತಬ್ಧವಾಗಿತ್ತು. ಆಗ ಸ್ವಲ್ಪ ಚಿಂತಿಸಿ, ಓ ಹೋ ! ಇದು ಶ್ರೀಗಿರಿ ಮಲ್ಲಿಕಾರ್ಜುನನ ಶುಭ ಸಂದೇಶವಿರುತ್ತದೆಂದು ಮನಸ್ಸಿನಲ್ಲಿ ನಿರ್ಧರಿಸಿ, ತಕ್ಷಣ ಆ ತಪೋ ಭೂಮಿಯಿಂದ ಹೊರಟು ಆಕಾಶಗಾಮಿಗಳಾಗಿ, ಶಿವ ಸ್ಮರಣೆಯೊಂದಿಗೆ, ಶ್ರೀಮದ್ರಂಭಾಪುರೀ ಆದಿ ಜ॥ ಸಾರ್ವಭೌಮರ, ವೀರ ಸಿಂಹಾಸನ ಮಹಾ ಪೀಠದತ್ತ ಪ್ರಯಾಣ ವನ್ನು ಹರ್ಷಚಿತ್ತದಿಂದ ಬೆಳಸಿದರು.

ಈ ವಿಷಯ ಶ್ರೀ ಚಿತ್ಸುಕಾಚಾರ್ಯ ವಿರಚಿತ, ಆದಿ ಬೃಹದ್ ಶಂಕರ ವಿಜಯದ ಕ್ರಿ. ಪೂ. ಐದನೇ ಶತಮಾನದಲ್ಲಿ ವಿರಚಿತವಾದ, ತಾಳೆಗರಿಗಳ ಹಸ್ತಾಕ್ಷರಲಿಪಿಗಳ ಮೂಲ ಗ್ರಂಥದಲ್ಲಿ ಕಾಣಬಹುದೆಂದು ಭಾವಿಸಲಾಗಿದೆ. ಯಾಕೆಂದರೆ ಶಿವಾಚಾರ್ಯ ಕುಲ ಸಂಜಾತರೂ, ಆಚಾರ ವಿಭೂಷಿತರೂ ಹಾಗೂ ಮಹಾ ಸಂಸ್ಕೃತ ವಿದ್ವಾಂಸರೂ ಮತ್ತೂ ಪ್ರಾಚೀನ ಆಧ್ಯಾತ್ಮಿಕ ಮಹಾ ಗ್ರಂಥರಾಶಿ ಸಂಶೋಧಕರೂ, ಶ್ರೀ ಶಿವಯೋಗಿ ಶಿವಾಚಾರ್ಯರ ಆತ್ಮಜರೂ ಆದ ಶ್ರೀ ಸಿದ್ಧನಾಥ ಶಿವಾಚಾರ್ಯ ವಿರಚಿತ ಪ್ರಾಚೀನ ಸಂಸ್ಕೃತ ರೇಣುಕ ವಿಜಯ ಮಹಾ ಪುರಾಣದಲ್ಲಿ ಮೇಲುಕ್ತವಾದ ಸತ್ಯಾಂಶ ಸಾಕಷ್ಟು ಬೆಳಕಿಗೆ ಬಂದಿದೆ. ಇವುಗಳ ಆಧಾರದ ಮೇಲೆ ಹಾಗೂ ಶ್ರೀ ಗುರುವಂಶ ಕಾವ್ಯ ಇತ್ಯಾದಿ ಮೂಲ ಭೂತ ಮಹಾ ಗ್ರಂಥಾಧಾರಗಳ ಸಾರವನ್ನು ಹೃದಯಂಗಮವಾಗಿ ಮಸಗಂಡ ನಂಜನಗೂಡಿನ, ಆಸ್ಥಾನ ವಿದ್ವಾನ್ ಕರ್ಣಾಟಕ ಕವಿ ಕಂಠೀರವ ವೇ॥ ಬ್ರ॥ ಶ್ರೀ ಶ್ರೀಕಂಠ ಶಾಸ್ತ್ರಿಗಳು ಸ್ವಾತ್ಮ ಪ್ರೀತಿ ಪುರಸ್ಸರ ಭಾವದಿಂದ ತಮ್ಮಿಂದ ವಿದ್ವತ್ಪೂರ್ಣ ಶೈಲಿಯಲ್ಲಿ ರಚಿತವಾಗಿರುವ ಕನ್ನಡ ರೇಣುಕಾ ವಿಜಯ ಪುರಾಣದಲ್ಲೂ ಮಹಾ ಪ್ರಾಜ್ಞರಾದ ಶಾಸ್ತ್ರಿಗಳು ಸತ್ಯಾಂಶಗಳನ್ನೇ ನಿರ್ವಂಚನೆಯಿಂದ ದಿಟ್ಟತನದಿಂದ ಪ್ರತಿಪಾದಿಸಿರುವರು.

ನಿರ್ಮಲವಾದ ಮನಸ್ಸಿನಿಂದ ಓದಬೇಕು.



॥ ಶಾಂತಂ ಪದ್ಮಾಸನಸ್ಥಂ । ಶಶಧರ ಮಕುಟಂ ।
ಪಂಚವಕ್ತ್ರಂ ತ್ರಿಣೇತ್ರಂ । ಶೂಲಂ ವಜ್ರಂಚ ಖಡ್ಗಂ ॥

ಪರಶು ಮಭಯದಂ । ದಕ್ಷ ಭಾಗೇ ವಹಂತಂ ।
ನಾಗಂ ಪಾಶಂಚ ಘಂಟಾಂ । ಪ್ರಳಯ ಹುತವಹಂ ॥

ಸಾಂಕುಶಂ ವಾಮ ಭಾಗೇ । ನಾನಾಲಂಕಾರ ದೀಪ್ತಂ ।
ಸ್ಫಟಿಕ ಮಣಿನಿಭಂ । ಪಾರ್ವತೀಶಂ ನಮಾಮಿ ॥

॥ ಹೃತ್ಪದ್ಮಂ ಶಿವ ಧರ್ಮ ಕಂದ ಸಹಿತಂ ।
ಸುಜ್ಞಾನ ನಾಳಂ ತಥಾ ॥ ನಿತ್ಯೈಶ್ವರ್ಯ ದಳಾಷ್ಟಕಂ ।
ಶಶಿನಿಭಂ ವೈರಾಗ್ಯ ಸತ್ಕರ್ಣಿಕಂ ॥

ಶ್ರೀ ರುದ್ರೇಶ್ವರ ಕೇಸರಾನ್ವಿತ ಮಿದಂ ।
ಸಂಚಿಂತ್ಯ ತನ್ಮಧ್ಯಮೇ । ಸೂರ್ಯೇಂದೂಜ್ವಲ
ವಹ್ನಿ ಮಂಡಲ ಗತಂ । ಧ್ಯಾಯೇ ಶಿವಂ ಚಿನ್ಮಯಂ ॥

## ಅಧ್ಯಾಯ 16

### ಶ್ರೀಶೈಲ ಗಿರಿಮಲ್ಲಿಕಾರ್ಜುನನ ದಿವ್ಯ ಆದೇಶದಂತೆ ಶ್ರೀ ಆದಿ ಶಂಕರಾಚಾರ್ಯರು ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ, ಆದಿ ಶ್ರೀ ಜಗದ್ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರನ್ನು ಸಂದರ್ಶಿಸಿದುದು.

ಶ್ರೀಶೈಲಗಿರಿಯ ಉನ್ನತ ಶಿಖರದ ಪ್ರಶಾಂತ ವಾತಾವರಣದಲ್ಲಿ, ಆದಿ ಶ್ರೀ ಶಂಕರಾಚಾರ್ಯರು ಅಂತರ್ಮುಖಿಗಳಾಗಿ, ಸ್ವಸ್ವರೂಪಾನು ಸಂಧಾನದಲ್ಲಿ ಗಾಢವಾಗಿ ಧ್ಯಾನಾಸಕ್ತರಾಗಿದ್ದ ಮಂಗಳ ಸನ್ನಿವೇಶವದು. ಈ ಹೊತ್ತಿಗೆ ಶ್ರೀಮದಾಚಾರ್ಯರು ತಾವು ಶ್ರೀ ಆದಿ ಅಗಸ್ತ್ಯ ಮಹರ್ಷಿಗಳ ಹಿತೋಪದೇಶದಂತೆ ಆಗಮಾಮ್ನಾಯಾದಿಗಳಿಗೆ, ಪ್ರಸ್ಥಾನ ತ್ರಯಗಳಿಗೆ, ಶ್ರೀಮದ್ಭಗವದ್ಗೀತೆ ಇತ್ಯಾದಿಗಳಿಗೆ ಅನಂತ, ಅಪಾರ ಭಾಷ್ಯಾದಿಗಳನ್ನು ಗಂಭೀರವಾಗಿ ರಚಿಸಿ, ಕೃತಿ ರಚನೆಗಳಿಗೆ ಮಂಗಳವನ್ನಾಡಿ, " ಓಂ ತತ್ಸತ್ " ಎಂದು ಪೂರ್ಣ ಸಮಾಪ್ತಿಗೊಳಿಸಿದ ಸಮಯವದು. ಮತ್ತೂ ಶ್ರೀ ಹಿಮವತ್ಕೇದಾರ ಪರಮ ವೈರಾಗ್ಯಸಿಂಹಾಸನಾಧೀಶ್ವರ ಜಗದಾದಿ ಪರಮ ಜಗದ್ಗುರು, ಶ್ರೀದ್ರಾಕ್ಷಾರಾಮ ಸುಕ್ಷೇತ್ರ ಪ್ರವಿರಾಜ ಮಾನ (ಶ್ರೀ ಭೀಮನಾಥ ಲಿಂಗ) ಶ್ರೀ ರಾಮನಾಥ ಜ್ಯೋತಿರ್ಲಿಂಗ ಮುಖ ಸಂಭೂತರಾದ ಶ್ರೀ ಶ್ರೀ ಶ್ರೀ ಘಂಟಾಕರ್ಣ ದೇಶಿಕೇಂದ್ರ ಶಿವಾಚಾರ್ಯರ ಪ್ರಥಮ ಶಿಷ್ಯ, ಶ್ರೀ ವೇದವ್ಯಾಸಾಚಾರ್ಯರ ಹಿತೋಪದೇಶದಂತೆ ಶ್ರೀ ಆದಿ ಶಂಕರಾಚಾರ್ಯರು, ಧರ್ಮ ಕ್ಷೇತ್ರವೆಂದು ಪೆಸರ್ಗೊಂಡು ಜಗದ್ವಿಖ್ಯಾತವಾಗಿರುವ ಭಾರತದ, ಆಸೇತು ಸೀತಾಚಲಪರ್ಯಂತರ ಪಾದಚಾರಿಗಳಾಗಿ ಸಂಚರಿಸಿ, ಸರ್ವತ್ರ ಆಸ್ತಿಕ ಜನಸ್ತೋಮಂಗಳಿಗೆ ಅಲ್ಲಲ್ಲಿ ಅದ್ವೈತ ಸಿದ್ಧಾಂತದ ಘನತಿರುಳನ್ನು, ತಾವು ಪ್ರಸ್ಥಾನ ತ್ರಯಗಳಿಗೆ ರಚಿಸಿರುವ ಭಾಷ್ಯಾರ್ಥಗಳ ಸಾರಾಂಶವನ್ನು ಸರಳವಾಗಿ ಬೋಧಿಸಿ ಜನಸಾಮಾನ್ಯರಿಗೆ ॥ ಭಜಗೋವಿಂದಂ ಭಜಗೋವಿಂದಂ। ಭಜಗೋವಿದಂ ಮೂಢಮತೇ ॥ ನಹಿ ನಹಿ ರಕ್ಷತಿ ಡುಗ್ಕೃಂ ಕರಣೇ । ಭಜಗೋವಿಂದಂ ॥ ಎಂದು ಉಪದೇಶಿಸುತ್ತಾ, ತಾವು ಹೋದ ಕಡೆಗಳಲ್ಲೆಲ್ಲಾ ಆತ್ಮಾರಾಮರಾಗಿ, ಸಸ್ವರೂಪಾನು ಸಂಧಾನದಲ್ಲಿ ತನ್ಮಯರಾಗಿರುತ್ತಿದ್ದ ಕಾಲವದು. ಆಗ ಶ್ರೀ ಆದಿ ಶಂಕರರು

ಪ್ರಾಯಶಃ 23, 24 ವರ್ಷಗಳ ಆಯುಷ್ಯದವರಾಗಿದ್ದಿರಬೇಕು. ಶ್ರೀಮದಾಚಾರ್ಯ ಶಂಕರರು ಸದಾ ಶಿವ ಪಂಚಾಕ್ಷರೀ ಮೂಲ ಮಹಾ ಮಂತ್ರ ಜಪೋದ್ಯೋಗಿಗಳಾಗಿ, ಮಾನಸಿಕ ಪೂಜಾಲೋಲರಾಗಿ ಕೇವಲ ಆತ್ಮಾನು ಸಂಧಾನದಲ್ಲಿ ತನ್ಮಯರಾಗಿದ್ದ ಕಾಲವದು. ಆಗ ಶ್ರೀಗಿರಿ ಮಲ್ಲಿಕಾರ್ಜುನನ ಅಶರೀರವಾಣಿಯ ಆದೇಶಕ್ಕೆ ಮಣಿದು ಶ್ರೀಶೈಲ ಕ್ಷೇತ್ರದಿಂದ ಹೊರಮಟ್ಟು, ಶ್ರೀ ಶಂಕರರು ಆಕಾಶ ಮಾರ್ಗವಾಗಿ, ಮಲಯಾಚಲದ ಮಧ್ಯೆ ಕಂಗೊಳಿಸುವ ಭದ್ರಾ ತೀರ ಪ್ರವಿರಾಜಮಾನ ಭದ್ರತರ ಶ್ರೀಮದ್ರಂಭಾಪುರೀ ದಿವ್ಯ ಕ್ಷೇತ್ರದಲ್ಲಿ ಅನಾದಿಕಾಲದಿಂದ ವಿರಾಜಿಸುವ, ಪರಮ ಪರತರವೆನಿಸಿದ ಶ್ರೀ ವೀರಸಿಂಹಾಸನಾಧೀಶ್ವರ ಶ್ರೀ ಆದಿ ಜ॥ ರೇವಣಸಿದ್ಧರನ್ನು ಕಾಣುವ ತವಕದಿಂದ, ಶ್ರೀಮದ್ರಂಭಾಪುರಿಗೆ ಆಗಮಿಸಿದರು. ಮಹಾ ತತ್ವಜ್ಞಾನಿಗಳಾದ ಆಚಾರ್ಯ ಶಂಕರರು, ಶಿವಲಿಂಗೋದ್ಭವ ಮಂಗಳ ಮೂರ್ತಿ ಆದಿ ಶ್ರೀ ಜ॥ ಸಾರ್ವಭೌಮ ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರನ್ನು ಪ್ರಥಮ ಭಾರಿಗೆ ಸಂದರ್ಶಿಸಿದೊಡನೆ, ಪುಳುಕಾಂಕಿತ ವದನಾರವಿಂದದಿಂದ ಮಹಾಚಾರ್ಯರನ್ನು ಭಕ್ತ್ಯಾ ವೀಕ್ಷಿಸಿದೊಡನೆ, ವೀರ ಸಿಂಹಾಸನಾಧೀಶ್ವರರು, ಅಪ್ರಾಕೃತ ಮಂಗಳ ದಿವ್ಯ ಪರಶಿವನ ಅಪರಾವತಾರಿಗಳು, ಅಯೋನಿಜರೂ ಹಾಗೂ ಸ್ವೇಚ್ಛಾರಾಜಿತ ಸರ್ವ ತಂತ್ರ ಸ್ವತಂತ್ರ ಪರಂಜ್ಯೋತಿ ಸ್ವರೂಪಿಗಳೆಂದು ಅವರ ಶುದ್ಧಾಂತಃಕರಣಗಳಲ್ಲಿ ವೇದ್ಯವಾದ ತಕ್ಷಣವೇ, ಅನನ್ಯ ಭಕ್ತಿ ಭಾವದಿಂದ ಶ್ರೀ ಆದಿ ಶಂಕರಾಚಾರ್ಯರು, ಮಹಾಚಾರ್ಯರ ಶ್ರೀಪಾದಾರವಿಂದಂಗಳಲ್ಲಿ ಶರಣಾಗತಿ ಭಾವದಿಂದ ಅನಂತ ಪ್ರಣಾಮಂಗಳನ್ನು ಸಲ್ಲಿಸಿ, ಬದ್ಧಾಂಜಲಿಪುಟರಾಗಿ ; " ಭೋ ಶ್ರೀ ಗುರುವರೇಣ್ಯ! ಇಂದು ತಮ್ಮ ದಿವ್ಯ ದರ್ಶನದಿಂದ ನಾನು ಧನ್ಯನಾದೆನು. ಶ್ರೀಗಿರಿ ಮಲ್ಲಿಕಾರ್ಜುನನ ಆಜ್ಞಾನುಸಾರ ಇಲ್ಲಿಗೆ ಬಂದು ಪರಮಾಚಾರ್ಯರನ್ನು ಸಂದರ್ಶಿಸಿದ್ದು ನನ್ನ ಸುಕೃತದ ಫಲವೆಂದು ವಿನಯ ಪೂರ್ವಕ ನಿವೇದಿಸಿಕೊಂಡರು. ಆ ಸಂದರ್ಭದಲ್ಲಿ ತತ್ವವೇತ್ತರಾದ ಆದಿ ಶ್ರೀ ಶಂಕರಾಚಾರ್ಯರ, ಊರ್ಧ್ವ ಮನೋಮಂಡಲದ ವ್ಯಾಪ್ತಿ ಸುಜ್ಞಾನ ದೀಪ್ತಿಯ ಔನ್ನತಿಯ ನಿಲುವನ್ನು ಅರಿಯಲು ಇತರರಿಂದ ಹೇಗೆ ಸಾಧ್ಯವಾದೀತು. ?

ಆಗ, ದಯಾಸಾಗರ ಸ್ವರೂಪಿಗಳಾದ ಶ್ರೀ ಆದಿ ಜ॥ ರೇವಣಸಿದ್ಧರು, ಶಂಕರರ ನಿಜ ಭಕ್ತಿಭಾವಕ್ಕೆ ಸಂಪ್ರೀತರಾಗಿ, " ವತ್ಸಾ ! ನೀನಾರೆಂದು ವಿಚಾರಿಸಿದರು. ಆದಿ ಶ್ರೀ ಶಂಕರಾಚಾರ್ಯರು, " ಅಪ್ರತ್ಯಕ್ಷೋ ಮಹಾ ದೇವಃ । ಪ್ರತ್ಯಕ್ಷಂ ಶ್ರೀ ಗುರು ರೂಪಿಣಃ " ಎಂಬ ಸತ್ಯವನ್ನರಿತ ಮಹಾನುಭಾವರಾದ್ದರಿಂದ, ಮಹಾಚಾರ್ಯರಲ್ಲಿ ದೇಹದೃಷ್ಟ್ಯಾ ಎಲ್ಲವನ್ನೂ ನಿರ್ವಂಚನೆಯಿಂದ ನಿವೇದಿಸಿಕೊಂಡು, ಭಗವಾನ್ ಶ್ರೀ ಅಗಸ್ತ್ಯರನ್ನು ಸ್ಮರಿಸಿ ಮೌನ ಮುದ್ರೆಯಿಂದ ವಿರಾಜಿಸಿದರು.

ಶ್ರೀ ಆದಿ ಜ॥ ರೇವಣಸಿದ್ಧರು ಅಖಂಡ ಪರಂಜ್ಯೋತಿ ಸದೃಶರು ಶ್ರೀ ಆದಿ

ಶಂಕರಾಚಾರ್ಯರು ಶಿವಾಂಶ ಸಂಭೂತರಾದ ಅವತಾರ ಪುರುಷರು. ಅಂತೂ ಉಭಯಾ ಚಾರ್ಯರೂ, ಚಿದಾದಿತ್ಯ ಮತ್ತೂ ಆ ಆದಿತ್ಯನ ಪರತರವಾದ ಒಂದು ಕಿರಣ, ಈ ಎರಡೂ ಕಾಂತಿಗಳು ಒಂದುಗೂಡಿ ವಿಶ್ವ ಧರ್ಮದ ಜಾಗೃತಿಗಾಗಿ ಸಂಧಿಸಿರುವಂತೆ ಭಾಸವಾಗುತ್ತೆ. ನಿಷ್ಕಲ ಪರತತ್ವದ ಸೊಬಗನ್ನೂ ಪರಶಿವನ ಸಕಲ ನಿಷ್ಕಲ ಮತ್ತು ಸಕಲ ರೂಪಗಳನ್ನೂ ಅಡಿಗಡಿಗೆ ಅಂತಃಕರಣದಲ್ಲಿ ಚಿಂತಿಸಿ, ಆನಂದಿಸಿ, ಆ ಶಿವಾನಂದದ ಸೌರಭವನ್ನು ಸಾಹಿತ್ಯ ರೂಪದಲ್ಲಿ ಯತ್ಕಿಂಚಿತ್ ಭಕ್ತಿಭಾವದಿಂದ ಭಟ್ಟಿ ಇಳಿಸುವಾಗ ಒಂದು ಕಡೆ ಪ್ರತಿಪಾದಿಸಿದ ವಿಷಯ ಮುಂದುವರಿದಂತೆ ಪುನಃ ಪುನಃ ಬೇರೆ ಬೇರೆ ಪುಟಗಳಲ್ಲಿ ಮತ್ತಷ್ಟು ಪುಷ್ಟೀಕರಿಸಿ ವಿವಿಧ ವಿವರಣೆಗಳೊಂದಿಗೆ ಅದೇ ಭಗವದ್ವಿಷಯವನ್ನು ನವ ನವೋಲ್ಲಾಸ ಭಾವದಿಂದ ಪ್ರಕಾಶಗೊಳಿಸುತ್ತಾ ಬಂದಿರುವುದರಿಂದ, ಈ ಗ್ರಂಥದಲ್ಲಿ ಪುನರುಕ್ತಿದೋಷವಿದೆಯೆಂದು ಯಾರೂ ಭಾವಿಸ ಬಾರದೆಂದು ಕೋರುತ್ತೇನೆ. ಏಕೆಂದರೆ ಆದಿ ಮಧ್ಯಾಂತ ರಹಿತವಾದ ಪರತತ್ವ ವಿಚಾರ, ಅಚಿಂತ್ಯ ಅಗಮ್ಯ, ಅನಿರ್ವಚನೀಯವೆನಿಸಿ, " ಅಣೋರಣೀಯಾ ಮಹ ತೋ ಮಹೀಯಾ " ಎಂಬಂತೆ ವಿರಾಜಿತವಾಗಿದೆ. ಇಂತಪ್ಪ ಪಾವನಾತಿ ಪಾವನ ವಾದ ಆಧ್ಯಾತ್ಮ ವಿಷಯಗಳನ್ನು ಎಷ್ಟಕ್ಕೆಷ್ಟು ಸಾರಿ ಮನನ ಮಾಡುತ್ತೇವೆಯೋ, ಮೇಲಿಂದ ಮೇಲೆ ರಚಿಸುತ್ತೇವೆಯೋ, ಓದುತ್ತೇವೆಯೋ ಅಷ್ಟಕ್ಕಷ್ಟು ಪಾಪಕೋಟಿ ಗಳು ಸ್ವಲ್ಪ ಸ್ವಲ್ಪವಾಗಿ ನಾಶವಾಗುವುವು. " ಜಪತೋ ನಾಸ್ತಿ ಪಾತಕಂ " ಎಂಬುದು ಗಮನಾರ್ಹವಿರುತ್ತೆ.

ಸಮುದ್ರದಲ್ಲಿ ಮುಳುಗಿ ರತ್ನಾಕರನ ಗರ್ಭದಲ್ಲಿ ಹುದುಗಿರುವ ಹವಳ, ಮುತ್ತು ಮತ್ತೂ ನವರತ್ನಗಳನ್ನು ಒಮ್ಮಿಂದೊಮ್ಮೆಲೇ ಬಾಚಿ ತರಲು ಯಾರಿಂದಲೂ ಸಾಧ್ಯವಿಲ್ಲ. ಈ ಗರಡಿಯಲ್ಲಿ ಚೆನ್ನಾಗಿ ಪಳಗಿದ ಈಜುಗಾರನು ಮಾತ್ರ ಪ್ರಯತ್ನಿಸಬಹುದು, ಈತನೂ ಸಹ ಅನೇಕ ಭಾರಿ ಆಳವಾದ ಸಮುದ್ರದ ನೀರಿನಲ್ಲಿ ಮುಳುಗಿ, ದಮ್ ಕಟ್ಟಿ ಇಳಿದು, ಸ್ವಲ್ಪ ಹೊತ್ತು ಹುಡುಕಿ, ನಂತರ ಆಗ ದೊರಕಿದ್ದಷ್ಟು ಮುತ್ತು ರತ್ನಗಳನ್ನು ಮೇಲಕ್ಕೆ ತರುತ್ತಾನೆ. ಅಷ್ಟಕ್ಕೆ ಸುಮ್ಮ ನಾಗದೆ, ಅನೇಕ ಬಾರಿ ಪ್ರಯತ್ನಿಸುತ್ತಾ, ಪ್ರತಿಯೊಂದು ಸಾರಿಯೂ ನೂತನ, ನೂತನವಾದ ಹವಳ, ಜಾತಿ ಮುತ್ತುಗಳನ್ನೂ ಮತ್ತು ಕೆಲವು ಭಾರಿ ವಜ್ರ ವೈಢೂರ್ಯ, ಮರಕತ, ಮಾಣಿಕ್ಯ, ಪುಷ್ಯರಾಗ, ಧವಳೇಂದ್ರ, ನೀಲಾಖಚಿತ, ರತ್ನ ಇತ್ಯಾದಿಗಳನ್ನು ಸಮುದ್ರದ ಗರ್ಭದಿಂದ ಹೊರತರಲು, ಪ್ರಯತ್ನಿಸುವನೋ, ಅದರಂತೆ ಶಿವಾನಂದ ಸಾಗರದ ಗರ್ಭದಲ್ಲಿ ಹುದುಗಿರುವ ತತ್ವರಾಶಿಯಲ್ಲಿ ಕೈಯಾಡಿಸಿ ಚಿಂತನ ಮಂಥನ ಮಾಡಿ, ಶ್ರೀ ಗುರುವಿನ ಕಟಾಕ್ಷಬಲದಿಂದ ಅಂತರ್ಮುಖಿಯಾಗಿ ಶುದ್ಧಾಂತಃಕರಣವೆಂಬ ಒಳಗಣ್ಣಿನ ನೋಟಕ್ಕೆ, ಭಾವಕ್ಕೆ ಅನುಭವಕ್ಕೆ ವೇದ್ಯವಾದ ಹಾಗೂ ಭಾಸವಾದ ಸದ್ವಿಷಯಗಳ ಸತ್ಯಾಂಶಗಳನ್ನು ಅನೇಕ ಸಾರಿ ರೂಢಿಸಿ, ಸೋಸಿ

ಸರ್ವ ಸಮ್ಮತವಾದರೀತಿಯಲ್ಲಿ ಸ್ವಲ್ಪ ಸ್ವಲ್ಪವಾಗಿ ರಚಿಸಿ, ಪ್ರಕಾಶಗೊಳಿಸುವಾಗ, "ಏಕಂ ಸತ್, ವಿಪ್ರಾ ಬಹುಧಾವದಂತಿ" ಎಂಬಂತೆ ಪ್ರತಿಪಾದಿಸಿದ ವಿಷಯ ವನ್ನೇ ಮತ್ತೆ ಮತ್ತೆ, ವೇದಾಂತ ಸಿದ್ಧಾಂತ ಶಾಸ್ತ್ರಗಳ ಆಧಾರದ ಮೇಲೆ ಹೊಸ ಹೊಸ ಬೆಳಕನ್ನು ಚೆಲ್ಲುತ್ತಾ ರಚಿಸಿದ್ದರೆ ಇದನ್ನು ಸಹೃದಯರಾದ ಗ್ರಾಹಕರು ಪುನರುಕ್ತಿ ದೋಷಕ್ಕೆ ಗುರಿಮಾಡಬಾರದೆಂದು ಕೋರುತ್ತೇನೆ.



# ಅಧ್ಯಾಯ 17

## ಪ್ರಥಮ ಭಾಗ

**ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ಶ್ರೀ ಆದಿ ಜ॥ ರೇವಣಸಿದ್ಧರು ಶ್ರೀ ಜ॥ ರೇಣುಕಾದಿಪಂಚಾಚಾರ್ಯರ ಶಿವಲಿಂಗಾವತಾರ ಮತ್ತು ಯುಗ ಯುಗಾಂತರಗಳಿಂದ ಭುವಿಯಲ್ಲಿ ಪರಿಶೋಭಿಸುವ ಪಂಚ ಮಹಾ ಪೀಠಗಳ ಬಗೆಗೆ ವಿವರಿಸಿದುದು.**

ಶ್ರೀಮತ್ ಕೈಲಾಸದಲ್ಲಿ ಪರಮೇಶ್ವರನು, ಶ್ರೀ ಜ॥ ರೇಣುಕರನ್ನುದ್ದೇಶಿಸಿ ಜ್ಯೋತಿರ್ಲಿಂಗ ಮುಖದಿಂದ ಭುವಿಯಲ್ಲಿ ಅವತರಿಸಬೇಕಾದ ವಿವರಗಳನ್ನು ನೀಡಿದುದು.

### " ಶ್ರೀ ರೇಣುಕ ಗಣೇಶ್ವರಂ ಪ್ರತಿ ಶಿವಾದೇಶಃ "

॥ ಶ್ರೀಶೈಲ ಸ್ಯೋತ್ತರೇ ಭಾಗೇ । ತ್ರಿಲಿಂಗ ವಿಷಯೇ ಶುಭೇ ॥
ಕುಲ್ಯಪಾಕಾಭಿಧಂ ಪುಣ್ಯ । ಕ್ಷೇತ್ರಮೇಕಂ ವಿರಾಜತೇ ॥

॥ ಸೋಮೇಶ್ವರಾಭಿ ಧಾನಸ್ಯ । ತತ್ರ ವಾಸವತೋ ಮಮ ।
ಅಸ್ಪೃಶ ಸ್ಮಾನುಷಂ ಭಾವಂ । ಲಿಂಗಾತ್ ಪ್ರಾದುರ್ಭವಿಷ್ಯಸಿ ॥

॥ ಮದೀಯ ಲಿಂಗ ಸಂಭೂತಂ । ಮದ್ಭಕ್ತ ಪರಿಪಾಲಕಂ ।
ವಿಸ್ಮಿತಾ ಮಾನುಷಾಃ ಸರ್ವೇ । ತ್ವಾಂ ಭಜಂತು ಮದಾಜ್ಞಯಾ ॥

॥ ಮದದ್ವೈತ ಪರಂ ಶಾಸ್ತ್ರಂ । ವೇದ ವೇದಾಂತ ಸಮ್ಮತಂ ।
ಸ್ಥಾಪಯಿಷ್ಯಸಿ ಭೂಲೋಕೇ । ಸರ್ವೇಷಾಂ ಹಿತಕಾರಕಂ ॥

॥ ಮಮಪ್ರತಾಪ ಮತುಲಂ । ಮದ್ಭಕ್ತಾನಾಂ ವಿಶೇಷತಃ ।
ಪ್ರಕಾಶಯ ಮಹೀ ಭಾಗೇ । ವೇದ ಮಾರ್ಗಾನ: ಸಾರತಃ ॥

॥ ಇತ್ಯುಕ್ತ್ವಾ ಪರಮೇಶ್ವರಃ ಸ । ಭಗವಾನ್ ಭದ್ರಾ ಸನಾದುತ್ಥಿ ತೋ ।
ಬ್ರಹ್ಮೋಪೇಂದ್ರ ಮುಖಾನ್ಸಿ। ಸೃಜ್ಯ ವಿಭುರ್ಧಾನ್ ಭ್ರೂ ಸಂಜ್ಞಯಾ ಕೇವಲಂ॥

॥ ಪಾರ್ವತ್ಯಾ ಸಹಿತೋ । ಗಣೈರಭಿ ಮತೈಃ ಪ್ರಾಪ ಸ್ವಮಂತಃ ಪುರಂ ।
ಕ್ಷೋಣೀ ಭಾಗ ಮವಾತರ । ತ್ಪಶುಪತೇ ರಾಜ್ಞಾ ವಶಾದ್ರೇಣುಕಃ ॥

( ಸಿ.ಶಿ.ಪರಿ. 3 ಶ್ಲೋ. 67–72 )

ಶ್ರೀಶೈಲ ಕ್ಷೇತ್ರಕ್ಕೆ ಉತ್ತರದಲ್ಲಿ ತ್ರಿಲಿಂಗ ರಾಜ್ಯ ಅಂದರೆ, ಶ್ರೀಶೈಲ ಮಲ್ಲಿಕಾರ್ಜುನ ಲಿಂಗ, ಶ್ರೀ ಕಾಳಹಸ್ತೀಶ್ವರ ಲಿಂಗ ಮತ್ತು ಕೊಲನುಪಾಕಿ ಶ್ರೀ ಸೋಮನಾಥಗಳೆಂಬ ಮೂರು ಲಿಂಗಗಳ ಮಧ್ಯೆ ಆವೃತವಾಗಿರುವ ತ್ರಿಲಿಂಗ ರಾಜ್ಯ ವೆಂಬ ಆಂಧ್ರದಲ್ಲಿ, ಕೊಲ್ಲಿಪಾಕಿ ಎಂಬ ಪುಣ್ಯ ಶಿವ ಕ್ಷೇತ್ರ ಯುಗಗಳಿಂದ ಪ್ರಸಿದ್ಧಿ ಇರುತ್ತೆ. ಅಲ್ಲಿ ನಾನು " ಸೋಮೇಶ್ವರಾಭಿಧಾನಸ್ಯ । ತತ್ರ ವಾಸವತೋ ಮ ಮ " ಶ್ರೀ ಸೋಮನಾಥ ಲಿಂಗವೆಂಬ ಹೆಸರಿನಿಂದ ಸದಾ ಸುಪ್ರಸನ್ನ ಭಾವದಿಂದ ನೆಲಸಿದ್ದೇನೆ. ರೇಣುಕಾ (ರೇವಣಸಿದ್ಧಾ) ಆ ದಿವ್ಯ ಲಿಂಗದ ಮುಖದಿಂದ ; ಯಾವ ಮಾನವನ ಭಾವಕ್ಕೂ ಗೋಚರವಾಗುವುದಕ್ಕೆ ಮುಂಚಿತವಾಗಿಯೇ, ನೀನು ಪವಿತ್ರ ವಾದ ಮಂತ್ರಮಯ ದಿವ್ಯ ದೇಹಧಾರಿಯಾಗಿ ಆವಿರ್ಭವಿಸು. ಅಖಿಲ ದೇವ, ದಾನವ ಮಾನವ ಕೋಟಿಗಳಿಗೆ, ವೇದೋಕ್ತ ವಿಶ್ವಧರ್ಮದ ತಿರುಳನ್ನು ಸರ್ವಧರ್ಮ ಸಮನ್ವಯ ದೃಷ್ಟಿಯಿಂದ ಆಚರಿಸಿ ತೋರಿಸಿ, ಸರ್ವತ್ರ ಸ್ಥಾಪಿಸಿ, " ಸರ್ವೇಷಾಂ ಹಿತಕಾರಕಂ" ಎಲ್ಲಾ ಕೋಮಿನವರಿಗೂ ಹಿತವಾಗುವ ಪ್ರಸಿದ್ಧ ರೀತಿಯಲ್ಲಿ ಪ್ರಸಾರ ಮಾಡೆಂದು ಆಜ್ಞಾಪಿಸಿದರು.

ಸದಾಶಿವನ ಪಂಚಮುಖಗಳಲ್ಲಿ ಸದ್ಯೋಜಾತ ಮುಖ ಸಂಭವರು ಶ್ರೀ ಮಹಾ ಚಾರ್ಯರು. ಯಜುರ್ವೇದದ ವೀರ ಲೈಂಗ್ಯೋಪನಿಷತ್ತಿನಲ್ಲಿ ಮೇಲುಕ್ತವಾದ ಮಹದಂಶವನ್ನು ಪ್ರತಿಪಾದಿಸುತ್ತಾ.

### ಯಜುರ್ವೇದೇ ವೀರ ಲೈಂಗ್ಯೋಪನಿಷದಿಃ

॥ ಸದ್ಯೋಜಾತ ಮುಖ ಮಾಸೀತ್ । ರೇಣುಕಾಚಾರ್ಯಾರಾಧ್ಯ ಉದ್ಭವತಿ ।
॥ ವಾಮದೇವ ಮುಖ ಮಾಸೀತ್ । ದಾರುಕಾಚಾರ್ಯಾರಾಧ್ಯ ಉದ್ಭವತಿ ।
॥ ಅಘೋರ ಮುಖ ಮಾಸೀತ್ । ಘಂಟಾಕರ್ಣ ಗಣೇಶಾರಾಧ್ಯ ಉದ್ಭವತಿ ।

॥ ತತ್ಪುರುಷ ಮುಖ ಮಾಸೀತ್ । ಧೇನು ಕರ್ಣಗಣೇಶಾರಾಧ್ಯ ಉದ್ಭವತಿ ।
॥ ಈಶಾನ ಮುಖ ಮಾಸೀತ್ । ವಿಶ್ವ ಕರ್ಣಗಣೇಶಾರಾಧ್ಯ ಉದ್ಭವತಿ ।
॥ ವೇದಾಗಮ ಸಂಪ್ರದಾಯ । ಮಾಹೇಶ್ವರ ತತ್ವ ವಿತ್ತಂ ಚಾಚಾ
ಯೋರ್ಣ ಭ್ಯೋ ದೀಕ್ಷಿತಃ । ಲಿಂಗ ಸ್ಪರ್ಶನಃ ಸ ಏನಾಹಂ ॥

ಎಂಬುದಾಗಿ, ಶ್ರೀ ಜಗದಾದಿ ಜಗದ್ಗುರು ಸಾರ್ವ ಭೌಮರಾದ ರೇಣುಕಾದಿ ಪಂಚಾಚಾರ್ಯರು ಜ್ಯೋತಿರ್ಲಿಂಗ ವಲಯದಿಂದ, ಇಚ್ಛಾ ಮಾತ್ರೇಣ ಆವಿರ್ಭವಿಸುವ ವಿಷಯ ಸ್ವಚ್ಛಂದವಾಗಿ ಇಲ್ಲಿ ನಿರೂಪಿಸಲಾಗಿದೆ. ಆದಿ ಶ್ರೀ ಜ॥ ರೇವಣಸಿದ್ಧರು ಕೃತ ಯುಗದಲ್ಲಿ ಶ್ರೀ ಸೋಮನಾಥ ಜ್ಯೋತಿರ್ಲಿಂಗದಿಂದ ಉದಿಸಿದಾಗ "ಏಕಾಕ್ಷರ ಶಿವಾಚಾರ್ಯರೆಂಬ" ಹೆಸರಿನಿಂದಲೂ, ತ್ರೇತಾಯುಗದಲ್ಲಿ ಶ್ರೀಮದಾಚಾರ್ಯವರ್ಯರು "ಏಕ ವಕ್ತ್ರ ಶಿವಾಚಾರ್ಯರೆಂದೂ", ದ್ವಾಪರ ಯುಗಾರಂಭದ ಪರ್ವಕಾಲದಲ್ಲಿ, ಶ್ರೀ ಶಿವಲಿಂಗ ಮುಖದಿಂದ ತಾನೇ ತಾನಾಗಿ ಶಿವೋಕ್ತಿಯಂತೆ ಅವತರಿಸಿದಾಗ "ರೇಣುಕಾಚಾರ್ಯರೆಂತಲೂ" ಮತ್ತು ಈ ಕಲಿಯುಗದಲ್ಲಿ ಅದೇ ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗ ಮುಖದಿಂದ ಸ್ವಚ್ಛಂದವಾಗಿ ಆವಿರ್ಭವಿಸಿದಾಗ "ಶ್ರೀ ರೇವಣಸಿದ್ಧರೆಂಬ" ಅಭಿದಾನಗಳಿಂದ ಪರಿಶೋಭಿಸಿ ಸದಾ ಜಗದ್ವಂದ್ಯರೆನಿಸಿ ರುವರು. ಇನ್ನುಳಿದ ಆದಿ ಶ್ರೀ ಜ॥ ದಾರುಕಾಚಾರ್ಯರು, ಶ್ರೀ ಘಂಟಾಕರ್ಣ ಅಥವಾ ಶ್ರೀ ಜ॥ ಏಕೋರಾಮಾರಾಧ್ಯರೂ, ಶ್ರೀ ಜ॥ ಪಂಡಿತಾರಾಧ್ಯರೂ ಮತ್ತು ಶ್ರೀ ಜ॥ ವಿಶ್ವಾರಾಧ್ಯರೂ ಸಹ, ಬೇರೆ ಬೇರೆ ಲಿಂಗಗಳಿಂದ ಪ್ರತಿ ಯುಗಾರಂಭ ಪರ್ವಕಾಲಗಳಲ್ಲಿ ಆವಿರ್ಭವಿಸಿ, ಆ ಆ ಯುಗಗಳಿಗೆ ಅನ್ವಯಿಸಿದ ಪವಿತ್ರ ನಾಮಗಳಿಂದ ಸತತ ಅಖಂಡವಾಗಿ, ವಿಶ್ವಧರ್ಮದ ಸಾರವನ್ನು ಪ್ರಭಾನ್ವಿತವಾಗಿ ವಿಶ್ವದ ಮೂಲೆ ಮೂಲೆಗಳಲ್ಲಿ ದಿಟ್ಟತನದಿಂದ ಅನಂತ ಕಾಲ ಪ್ರತಿಪಾದಿಸಿ ಸ್ಥಾಪಿಸಿರುವರು ಎಂದು ಶ್ರೀ ಜ॥ ರೇವಣಸಿದ್ಧರು, ಆದಿ ಶ್ರೀ ಶಂಕರಾಚಾರ್ಯರಿಗೆ ಸ್ಪಷ್ಟವಾಗಿ ಉಪದೇಶಿಸಿ ಮುಂದುವರಿದು ಶಿವೋಕ್ತಿಯನ್ನು ಸಮರ್ಥಿಸುತ್ತಾ

॥ ತಸ್ಮಾತ್ಪಂಚ ವಿಧಾಚಾರ್ಯಾಃ । ಪಂಚ ಪೀಠಾಧಿ ದೇವತಾಃ ।
ಪಂಚ ಸಿಂಹಾಸನಾಧೀಶಾ । ಜಗದ್ಗುರು ವರಾಶ್ಚತೇ ॥

ಶಿವನು ಗಿರಿಜೆಗೆ ದೇವೀ ! "ಏತೇ ಯುಗ ಚತುಷ್ಕೇತು । ಪಂಚಾರಾಧ್ಯಾ ಯಥಾ ವಿಧಿಃ ॥ ಮಮ ಲಿಂಗ ಮುಖೋದ್ಭೂತಃ । ಲೋಕ ವಿಶ್ರುತ ಕೀರ್ತಯಃ ॥ ಎಂದು ಘಂಟಾಘೋಷವಾಗಿ, ಅಖಿಲಾಂಡ ಬ್ರಹ್ಮಾಂಡ ಗಳಲ್ಲಿ ಅಧಿಕೃತವಾಗಿ ಶಿವಾಗಮಗಳ ಮೂಲಕ ಪ್ರತಿಪಾದಿಸಿರುವರು.

ಶ್ರೀ ವೇದವ್ಯಾಸಾಚಾರ್ಯರೂ ತಮ್ಮಿಂದ ರಚಿತವಾಗಿರುವ ಮಹಾ ಸ್ಕಾಂದದ

ಕಾಶಿಖಂಡದಲ್ಲಿ ತಮ್ಮ ಆದಿ ಜಗದ್ಗುರು ಸಾರ್ವಭೌಮರಾದ ಶ್ರೀ ಘಂಟಾಕರ್ಣ ಅರ್ಥಾತ್ ಶ್ರೀ ಜ॥ ಏಕೋರಾಮಾರಾಧ್ಯಾದಿ ಶ್ರೀ ಪಂಚಾಚಾರ್ಯರ ಘನ ಉತ್ಪತ್ತಿ ವಿಷಯವನ್ನು ಭಕ್ತ್ಯಾ ಪ್ರತಿಪಾದಿಸುತ್ತಾ.

॥ ಶ್ರೀಮದ್ರೇವಣ ಸಿದ್ಧಸ್ಯ । ಕೊಲ್ಲಿಪಾಕಿ ಪುರೋತ್ತಮೇ ।
ಸೋಮೇಶ ಲಿಂಗಾಜ್ಜನನಂ । ಆವಾಸಃ ಕದಳೀಪುರೇ ॥

॥ ತದ್ವನ್ಮರುಲ ಸಿದ್ಧಸ್ಯ । ವಟಕ್ಷೇತ್ರೇ ಮಹತ್ತರೇ ।
ಸಿದ್ಧೇಶ ಲಿಂಗಾಜ್ಜನನಂ । ಸ್ಥಾನ ಮುಜ್ಜಯಿನೀಪುರೇ ॥

॥ ದ್ರಾಕ್ಷಾ ರಾಮಾಖ್ಯ ಸುಕ್ಷೇತ್ರೇ । ರಾಮನಾಥಾಖ್ಯ ಲಿಂಗತಃ ।
ಏಕೋರಾಮಸ್ಯ ಜನನಂ । ಆವಾಸಸ್ತು ಹಿಮಾಲಯೇ ॥

॥ ಸುಧಾಕುಂಡಾಖ್ಯ ಸುಕ್ಷೇತ್ರೆ । ಮಲ್ಲಿಕಾರ್ಜುನ ಲಿಂಗತಃ ।
ಜನನಂ ಪಂಡಿತಾರ್ಯಸ್ಯ । ನಿವಾಸಃ ಶ್ರೀ ಗಿರೌ ಶಿವೇ ॥

॥ ಕಾಶ್ಯಾಂ ವಿಶ್ವೇಶ ಲಿಂಗಾಚ್ಚ । ವಿಶ್ವಾರಾಧ್ಯಸ್ಯ ಸಂಭವಃ ।
ಸ್ಥಾನಂ ಶ್ರೀ ಕಾಶಿಕಾ ಕ್ಷೇತ್ರೇ । ಶೃಣು ಪಾರ್ವತಿ ಸಾದರಂ ॥

(ಸುಪ್ರಭೇದಾಗಮ)

ಜಗಜ್ಜನನಿ ಶ್ರೀ ಪಾರ್ವತಿಗೆ ಪರಮೇಶ್ವರನು ಶ್ರೀ ಪಂಚ ಜಗದ್ಗುರು ವರೇಣ್ಯರು ಲಿಂಗಮುಖಗಳಿಂದ ಅವತರಿಸಿದ ವೃತ್ತಾಂತವನ್ನು, ಶ್ರೀ ವೇದವ್ಯಾಸಾಚಾರ್ಯರು ಪ್ರತಿಪಾದಿಸಿ, ಶ್ರೀ ಜ॥ ರೇಣುಕಾದಿ ಪಂಚಾಚಾಯರ್ಯರುಗಳನ್ನು ಅತ್ಯಂತ ಭಕ್ತಿಭಾವದಿಂದ ಸ್ತುತಿಸಿರುವರು.

ಸದಾಶಿವನ ಸದ್ಯೋಜಾತಾದಿ ಪಂಚಮುಖಗಳು, ಶಿವ ಪಂಚಾಕ್ಷರೀ ಮಹಾ ಮಂತ್ರದ "ನ" ಕಾರಾದಿ ಪಂಚ ಬೀಜಾಕ್ಷರಗಳನ್ನು ಪ್ರತಿನಿಧಿಸುತ್ತಲಿವೆ. ಈ ಬೀಜಾಕ್ಷರಗಳ ಪ್ರಭಾವದಿಂದ ಪೃಥ್ವಿ ಲಿಂಗ, ಅಪ್ ಲಿಂಗ, ಅಗ್ನಿ ಲಿಂಗ, ವಾಯುಲಿಂಗ ಮತ್ತು ಆಕಾಶ ಲಿಂಗಗಳು ಉದ್ಭವಿಸಿದವು ಪೃಥ್ವಿ, ಪೃಥ್ವಿ ಲಿಂಗದ ಆಧಾರದ ಮೇಲೆ ನಿಂತಿದೆ. ಈ ಲಿಂಗ ಸದಾಶಿವನ "ನ" ಕಾರ ಬೀಜಾಕ್ಷರ ಮಹಾಮಂತ್ರವನ್ನು ಪ್ರತಿನಿಧಿಸುವ, ಸದ್ಯೋಜಾತ ಮುಖವನ್ನೊಳ ಗೊಂಡು ಪ್ರಜ್ವಲಿಸುತ್ತಲಿದೆ. ಭಗವತ್ಪಾದ ಶ್ರೀ ಜಗದ್ಗುರು ರೇವಣಸಿದ್ಧರು ಸದ್ಯೋಜಾತಮುಖ ಸಂಭವರಾದ್ದರಿಂದ ಜಗದಾದಿಯಿಂದ ಸತತ ಏಕೈಕ ಜಗದ್ ಗುರು ಸಾರ್ವಭೌಮರೆಂದು ಶಿವನು ಶಿವಾಗಮಗಳಲ್ಲಿ ಗಿರಿಜೆಗೆ ಅರುಹುತ್ತಾ.

॥ ತಸ್ಮಾತ್ತಸ್ಮಾಚ್ಚ ಗಿರಿಜೇ । ಮತ್ಪಂಚ ವದನೋದ್ಭೂತಾ ।
ಪಂಚಾಚಾರ್ಯಸ್ ಜಗದ್ಗುರೂ ।
ಮದಾದಿ ಸರ್ವ ಲೋಕಾನಾಂ । ಜಗದ್ಗುರುವರೋತ್ತಮಾಃ ॥

( ಸ್ವಾಯಂಭುವಾಗಮ )

ಕೊಲ್ಲಿಪಾಕಿ ಶ್ರೀ ಸೋಮನಾಥ ಲಿಂಗ ಮತ್ತು ಶಿವಕಂಚಿ ಶ್ರೀ ಏಕಾಂಬರೇಶ್ವರ ಜ್ಯೋತಿರ್ಲಿಂಗಗಳು ಸ್ವಯಂ ಪೃಥ್ವಿ ಲಿಂಗಗಳೆಂದು ಜಗವಾದಿಯಿಂದ ಪ್ರಸಿದ್ಧವಿರುವವು. ಶ್ರೀಮದಾದಿ ಜಗದ್ಗುರು ರೇವಣಸಿದ್ಧರು ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗದಿಂದ, ಪರಂಜ್ಯೋತಿ ಸ್ವರೂಪಿಗಳಾಗಿ ಆವಿರ್ಭವಿಸಿ, ಇಡೀ ಪೃಥ್ವಿ ತತ್ವಕ್ಕೆ, ಅಖಂಡ ಮಹೀಮಂಡಲವೆನಿಸಿವ ಜಗತ್ತಿಗೆ ಜಗವಾದಿ ಶ್ರೀ ಜಗದ್ಗುರು ಸಾರ್ವಭೌಮರೆಂದು ಸಂಪೂಜ್ಯರಾಗಿರುವರು. ತಮ್ಮ ಶ್ರೀಮದ್ರಂಭಾಪುರೀ ಮಹಾ ಪೀಠಕ್ಕೆ ಉತ್ತರಾಧಿಕಾರಿಯನ್ನು ಪಡೆಯುವ ನಿಮಿತ್ತ ಶ್ರೀ ಜ॥ ರೇವಣಸಿದ್ಧರು ತಮ್ಮ ನಿಜ ಜಾಗೃತ ಸ್ಥಾನವೆನಿಸಿದ ಶಿವಕಂಚಿಯ ಪೃಥ್ವಿ ಲಿಂಗವೆನಿಸಿದ ಶ್ರೀ ಏಕಾಂಬರೇಶ್ವರನ ದಿವ್ಯ ಸನ್ನಿಧಿಗೆ ದಯಮಾಡಿಸಿ, ತಮ್ಮ ಮನೋಭೀಷ್ಟವನ್ನು ಸ್ವಾಮಿಯಲ್ಲಿ ಭಕ್ತಿ ಪೂರ್ವಕ ನಿವೇದಿಸಿಕೊಂಡರು. ಜ್ಯೋತಿರ್ಲಿಂಗ ನಿಷ್ಕಲ ಬ್ರಹ್ಮ. ಭಗವತ್ಪಾದ ಶ್ರೀ ಆದಿ ಜಗದ್ಗುರು ರೇವಣಸಿದ್ಧರು ಸಕಲ ಬ್ರಹ್ಮವೆನಿಸಿರುವರು. ಆಗ ಶಿವಕಂಚಿ ಶ್ರೀ ಏಕಾಂಬರೇಶ್ವರನ ಪ್ರೇರಣೆಯಂತೆ ಮಹಾ ದೇವನ ಸನ್ನಿಧಿಯಲ್ಲಿ ಶ್ರೀ ಜಗದ್ಗುರುಗಳವರು ಅಮೃತ ಹಸ್ತದಿಂದ, ಭೂ ಸ್ಪರ್ಶ ಮಾಡಲು, ತಕ್ಷಣ ಭೂಗರ್ಭದಿಂದ, ಕೋಟಿ ಸೂರ್ಯ ಪ್ರಕಾಶಮಾನವಾದ ಮಂತ್ರಮಯ ದಿವ್ಯ ದೇಹಧಾರಿ ಮಹಾ ಪುರುಷನು, ಓಂಕಾರ ನಾದದೊಂದಿಗೆ ಮೇಲೆ ಬಂದು ಮಹಾಚಾರ್ಯರನ್ನು ಮತ್ತು ಮಹಾ ದೇವನನ್ನೂ ನಮಸ್ಕರಿಸಿ, ಕೈ ಜೋಡಿಸಿ ಭಕ್ತಿ ಭಾವದಿಂದ ನಿಂತನು. ಶ್ರೀ ಜಗದ್ಗುರು ಮಹಾಚಾರ್ಯರು ಶ್ರೀ ಏಕಾಂಬರೇಶ್ವರನ ಆಜ್ಞೆಯಂತೆ ಈ ಮಹಾ ಪುರುಷನಿಗೆ ಶ್ರೀ ರುದ್ರಮುನಿದೇವನೆಂದು ಹೆಸರಿಟ್ಟು, ತಮ್ಮ ನಂತರ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧಿಪತಿಯನ್ನಾಗಿ ನೇಮಿಸಲಾಗಿದೆ ಎಂಬಿವೇ ದೈವೀ ಸತ್ಯಾಂಶಗಳನ್ನು ಶ್ರೀ ಆದಿ ಶಂಕರಾಚಾರ್ಯರಿಗೆ ಭಗವತ್ಪಾದ ಆದಿ ಶ್ರೀ ಜ॥ ರೇವಣಸಿದ್ಧರು ವಿವರಿಸಿದರು. ದೈವ ಲೀಲೆ ಅಲೌಕಿಕವಾದ ರಹಸ್ಯ ಲೌಕಿಕರಿಗೆ ತಕ್ಷಣ ಅರ್ಥವಾಗುವುದು ಕಷ್ಟ. ಶ್ರೀಮದ್ರಾಮಾಯಣ ಮಹಾ ಕಾವ್ಯದಲ್ಲಿ ಸೀತೆ ಭೂಜಾತೆಯೆಂದು ವರ್ಣಿಸಲಾಗಿದೆ. ಅಂತ್ಯದಲ್ಲಿ ಭೂ ಗರ್ಭದಿಂದ, ಸೀತೆಯ ಪ್ರಾರ್ಥನೆಯಂತೆ ಬಂಗಾರಮಯ ದಿವ್ಯ ಸಿಂಹಾಸನ ಹೊರಬರಲು, ಅದರಲ್ಲಿ ಕುಳಿತ ಸೀತೆ ಭೂ ಗರ್ಭವನ್ನು ಸೇರಿದಳೆಂದು ಉಕ್ತವಾಗಿದೆ.

ಆಧ್ಯಾತ್ಮಿಕವಾದ ಉನ್ನತ ವಿಷಯಗಳನ್ನು ಭಕ್ತ್ಯಾ ನಂಬಬೇಕು.

# ಅಧ್ಯಾಯ 17

## ದ್ವಿತೀಯ ಭಾಗ

## ಶ್ರೀ ಮದಾದಿ ಜಗದ್ಗುರು ಪಂಚಾಚಾರ್ಯರ ಉತ್ಪತ್ತಿ ಶಿವಾಗಮಗಳಲ್ಲುಕ್ತವಾದಂತೆ

1. ॥ ಸದ್ಯೋಜಾತ ಮುಖೋದ್ಭೂತಂ । ಸದ್ಯೋ ವೈಭವದಾಯಕಂ ।
ಸಿದ್ಧಿದಂ ಸಿದ್ಧವೃಂದಸ್ಯ । ವಂದೇ ಶ್ರೀ ರೇಣುಕಂ ಗುರುಂ ॥

2. ॥ ಯಸ್ಯನಾಮಾಮೃತಂ ಪೀತ್ವಾ । ದಧೀಚಾದಿ ಮಹರ್ಷಯಃ ।
ಲೇ ಭಿರೇ ಪರಮಂ ಧಾಮ । ವಂದೇ ತಂ ದಾರುಕಂ ಗುರುಂ ॥

3. ॥ ಅಘೋರ ಮುಖಸಂಭೂತ ॥ ಮಘೋರ ಚರಿತಾವೃತಂ ।
ಏಕೋರಾಮ ಶಿವಾಚಾರ್ಯಃ ಶೋಕಘಂ ಶರಣಂವ್ರಜೇ ॥

4. ॥ ತತ್ಪುರುಷ ಮುಖೋದ್ಭೂತಂ । ಸತ್ಪುರುಶ್ಲಾಘ ವಂದಿತಂ ।
ಸ್ತುತ್ಯಂ ಶ್ರೀ ಪಂಡಿತಾರಾಧ್ಯಂ । ಸಂಸ್ತುವೀಮೋಪ್ಸಿತಾಪ್ತಯೇ ॥

5. ॥ ಈಶಾನೇಶಾನ ವಕ್ತ್ರಾಬ್ಜ । ಸಂಭವಂ ಪ್ರಮಥಪ್ರಿಯಂ ।
ಕೈಲಾಸೇ ವಿಶ್ವಕರ್ಣಾಖ್ಯಂ । ಕೃತೇ ಪಂಚಾಕ್ಷರಾಹ್ವಯಂ ॥

6. ॥ ಸರ್ವಲೋಕೇಷು ಸಂಚಾರ್ಯ । ಸ್ಥಾಪಯಿತ್ವಾ ಶಿವಾಗಮಾ ।
ಜಗದ್ಗುರು ತ್ವಮಾಪನ್ನಂ । ಜಗದ್ರಕ್ಷಣಕಾರಣಂ ॥

28 ಶಿವಾಗಮಗಳು, ವೇದಗಳಂತೆ ಸಮಾನ ಪ್ರಾಮಾಣ್ಯವುಳ್ಳವುಗಳು, ಶಿವನ ಉಚ್ಛ್ವಾಸ ನಿಶ್ವಾಸಗಳು ಚತುರ್ವೇದಗಳೆನಿಸಿದರೆ, ಶಿವನ ಮುಖದಿಂದ ಉಪದೇಶ ರೂಪದಲ್ಲಿ ಆಗಮಿಸಿದ ಕೋಟಿ ಕೋಟಿ ಮಂತ್ರ ಭಾಗಗಳು ಶಿವಾಗಮವೆನಿಸಿವೆ. ಋಗಾದಿ ಚತುರ್ವೇದಗಳನ್ನು ಶಿವನು ಚತುರ್ಮುಖ ಬ್ರಹ್ಮನಿಗೆ

॥ ಸ ಶಂಭುರ್ಭಗವಾ ದೇವಃ । ಸರ್ವಜ್ಞಃ ಸರ್ವ ಶಕ್ತಿಕಃ ॥
ಜಗತ್ಸಿಸೃಕ್ಷಃ ಪ್ರಥಮಂ ಬ್ರಹ್ಮಾಣಂ ಸರ್ವದೇಹಿನಾಂ ॥
ಕರ್ತಾರಂ ಸರ್ವಲೋಕಾನಾಂ ವಿದಧೇ ವಿಶ್ವನಾಯಕಃ ॥
ತಸ್ಮೈ ಪ್ರಥಮ ಪುತ್ರಾಯ ಶಂಕರಃ ಶಕ್ತಿಮಾ ವಿಭುಃ ।
ಸರ್ವಜ್ಞಃ ಸಕಲಾವಿದ್ಯಾಃ ಸಾನುಗ್ರಹ ಮುಪಾದಿಶತ್ ॥ (ಸಿ .ಶಿ.)

ಸಾಂಗೋಪಾಂಗವಾಗಿ ಉಪದೇಶಿಸಿ, ಜಗತ್ಸೃಷ್ಟಿ ಕ್ರಮವನ್ನು ಚತುರ್ಮುಖ ಬ್ರಹ್ಮನ ಮನಮುಟ್ಟುವಂತೆ ಬೋಧಿಸಿ, ಸೃಷ್ಟಿಕಾರ್ಯವನ್ನು ಆರಂಭಿಸುವಂತೆ ಆಜ್ಞಾಪಿಸಿದನು. ಚತುರ್ಮುಖನು ಎಲ್ಲವನ್ನೂ ಶಿವನಿಂದ ಅರಿತವನಾದರೂ, ನೇರವಾಗಿ ಜಗತ್ತನ್ನು ಹೇಗೆ ಸೃಷ್ಟಿಸಲು ಆರಂಭಿಸಬೇಕೆಂಬುದು ಪರಮೇಷ್ಠಿಗೆ ಅರ್ಥವಾಗಲಿಲ್ಲ. ಆಗ ಬ್ರಹ್ಮನು ಶಿವನನ್ನು ವಂದಿಸಿ, ಜೀಯಾ ! ಜಗತ್ಸೃಷ್ಟಿ ಕಾರ್ಯವನ್ನು ವೊಮ್ಮೆ ನನ್ನೆದುರಿಗೆ ಮಾಡಿ ತೋರಿಸಬೇಕೆಂದು ಪ್ರಾರ್ಥಿಸುತ್ತಾ–

॥ ದೇವದೇವ ಮಹಾದೇವ । ಜಗತ್ಪ್ರಥಮಕಾರಣ ।
। ನಮಸ್ತೇ ಸಚ್ಚಿದಾನಂದ । ಸ್ವೇಚ್ಛಾ ವಿಗ್ರಹ ರಾಜಿತ ।
। ಭವಶರ್ವ ಮಹೇಶಾನ । ಸರ್ವಕಾರಣ ಕಾರಣ ॥
। ಭವದುಕ್ತೋಽಪ್ಯುಪಾಯೋಮೇ । ನ ಕಿಂಚಿದ್ ಜ್ಞಾಯತೇಽಧುನಾ ।
। ಸೃಷ್ಟಿಂ ವಿಧೇಹಿ ಭಗವನ್ । ಪ್ರಥಮಂ ಪರಮೇಶ್ವರ ॥
॥ ಜ್ಞಾತೋಪಾಯಸ್ತತಃ ಕುರ್ಯಾಂ । ಜಗತ್ಸೃಷ್ಟಿ ಮುಮಾಪತೇ ॥

( ಸಿದ್ಧಾಂತ ಶಿಖಾಮಣಿ )

ಈ ಪ್ರಕಾರವಾಗಿ ಚತುರ್ಮುಖ ಬ್ರಹ್ಮನು ಬದ್ಧಾಂಜಲಿ ಪುಟನಾಗಿ ಪ್ರಾರ್ಥಿಸಲು, ಉಮಾಪತಿಯು ಕರುಣೆಯಿಂದ ಚತುರ್ಮುಖನ ಎದುರಿನಲ್ಲಿ ಕೇವಲ ಸಂಕಲ್ಪ ಮಾತ್ರೇಣ–

॥ ಇತ್ಯೇವಂ ಪ್ರಾರ್ಥಿತಃ ಶಂಭು ಬ್ರಹ್ಮಣಾ ವಿಶ್ವಯೋನಿನಾ ।
ಸ ಸರ್ಜಾತ್ಮ ಸಮಪ್ರಖ್ಯಾನ್ । ಸರ್ವಜ್ಞಾನ್ಸರ್ವಶಕ್ತಿ ಕಾನ್ ॥

ದೇದೀಪ್ಯವಾದ ತನ್ನ ಹಿರಣ್ಮಯ ವಪುವನ್ನು ವೊಮ್ಮೆ ಚಲಿಸಲು, ಶಿವಾತ್ಮ ಸಂಭೂತರಾದ ಶ್ರೀಮದ್ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಸದಾಶಿವನ ಸದ್ಯೋಜಾತಾದಿ ಪಂಚ ಮುಖಗಳಿಂದ ಕೈಲಾಸದಲ್ಲಿ ಪರಂಜ್ಯೋತಿರ್ಮಯ ಚಿತ್ಕಳಾ ಸ್ವರೂಪಿಗಳಾಗಿ, ಕ್ಷಣಾರ್ಧದಲ್ಲಿ ಮೂಲಪ್ರಣವ ಮಂತ್ರಮಯ ದಿವ್ಯದೇಹ ಧಾರಿಗಳಾಗಿ ಅವತರಿಸಿ, ಶಿವನನ್ನು ವಂದಿಸಿ, ಪರಮಾತ್ಮನ ಸುತ್ತಲೂ ಪಂಚವ್ಯೂಹಾಕಾರವಾಗಿ ನಿಂತರು.

ಹಿರಣ್ಮಯಗರ್ಭನೆನಿಸಿದ ಸದಾಶಿವನ ಚಿತ್ಕಳೆಯಿಂದ ತಾವೇತಾವಾಗಿ ಹೊರ ಹೊಮ್ಮಿದ, ಚಿದಾದಿತ್ಯರೆನಿಸಿದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು, ಪರಶಿವ ಬ್ರಹ್ಮನಿಷ್ಠೇ " ಆತ್ಮ ಸಮ ಪ್ರಖ್ಯಾನ್ " ಪ್ರತಿಭಾವಂತರು, "ಸರ್ವಜ್ಞಾನ್" ಸರ್ವವೇತ್ತರೂ ಮತ್ತೂ " ಸರ್ವಶಕ್ತಿಕಾನ್ " ಅಂದರೆ ಇವರು ಶಿವನಂತೆ ಮುಕ್ಕಣ್ಣೇ

ಶ್ವರರಾಗಿ ವಿರಾಜಿಸಿ, ನೆನೆದಾಕ್ಷಣ, ಕೇವಲ ಸಂಕಲ್ಪಮಾತ್ರೇಣ ಜಗತ್ಸೃಷ್ಟಿಸುವ ಸರ್ವಶಕ್ತಿಮೂರ್ತಿ ಪ್ರಭೃತಿಗಳಾಗಿ ವಿರಾಜಿತರಾದರು. ಶಿವನಪ್ಪಣೆಯಂತೆ ಅಖಿಲಾಂಡ ಬ್ರಹ್ಮಾಂಡ ಕೋಟಿಗಳಲ್ಲಿ ಮತ್ತು ಈ ಭುವಿಯಲ್ಲೂ ಪರಮ ವೀರಶೈವ ಮತವನ್ನು ಸ್ಥಾಪಿಸಿ, ಅನಾದಿ ಸಂಸಿದ್ಧವಾದ ಶಿವಶಕ್ತಿ ಸಂಪುಟದ ಗುಹ್ಯಾದ್ ಗುಹ್ಯತಮವಾದ ಶಿವಾದ್ವೈತ ಸಿದ್ಧಾಂತದ ಹೃದಯವನ್ನೊಳಗೊಂಡ ಅರ್ಥಾತ್ – ಅಷ್ಟಾವರಣ, ಪಂಚಾಚಾರ ಷಟ್ಸ್ಥಲ ಸಿದ್ಧಾಂತವನ್ನೊಳಗೊಂಡು ಸರ್ವಾಂಗಲಿಂಗಿಯಾಗಿ, ಲಿಂಗಭೋಗೋಪಭೋಗಿಯೆಂದೆನಿಸಿ ಬೆಳಗುವ ಶಿವಾತ್ಮ ವಿದ್ಯೆಯನ್ನು ಅಖಿಲ ವ್ಯವಸ್ಥಿತರಾದ ಸುಹೃತ್ತುಗಳಿಗೆ, ಆಸ್ತಿಕವೃಂದಕ್ಕೆ ಇಷ್ಟಲಿಂಗಾರ್ಚನೆ ವಿಧಾನ, ಧ್ಯಾನ, ಧಾರಣ ಸಮಾಧಿ ಯೋಗಗಳ ಅಂತರಗಳನ್ನು ತಾವು ಆಚರಿಸಿ ತೋರಿಸಿ, ಬೋಧಿಸಿ, ಅಖಿಲ ವಿಶ್ವಾದ್ಯಂತ, ದೇವ, ದಾನವ, ಮಾನವಾದಿಗಳಿಗೆ ಸದ್ಧರ್ಮದ ತಿರುಳನ್ನು ಅನುಭವ ಅನುಷ್ಠಾನಂಗಳಿಗೆ ಬರುವಂತೆ ಅಹೋರಾತ್ರಿ ಶ್ರಮಿಸಿ, ವಿಶ್ವಧರ್ಮವನ್ನು ಜಗತ್ತಿನಲ್ಲಿ ಪ್ರಪ್ರಥಮ ಬಾರಿಗೆ ಬಂಧುರವಾಗಿ ಪ್ರಸಾರ ಮಾಡಿದ ಪರಮಾಚಾರ್ಯರೆಂದರೆ, ಶ್ರೀ ಆದಿ ಜಗದ್ಗುರು ರೇಣುಕಾದಿ ಪಂಚಾಚಾರ್ಯರೇ ಆಗಿರುವರು, ಇಂತಪ್ಪ ಸಾಕಾರವಾಗಿ ಮೊದಲು ಶಿವನಿಂದ ನಂತರ, ಸಾಕ್ಷಾತ್ ಶಿವಾತ್ಮ ಸಂಭವರೂ, ಸರ್ವದಾ ಪ್ರಥಮಾಶ್ರಮ ಸಂಭ್ರಮರೂ ಆದ ಪಂಚ ಮಹಾಚಾರ್ಯರಿಂದ ಸರ್ವಲೋಕಗಳಲ್ಲೂ ಮತ್ತೂ ಭುವಿಯಲ್ಲೂ ಸ್ಥಾಪಿತವಾದ ಲಿಂಗಾಂಗಿ ವಿಶ್ವಧರ್ಮವನ್ನು ಸಮಸ್ತ ಗಣಾಧೀಶ್ವರರಿಗೂ, ಋಷಿ ಮಹರ್ಷಿಗಳಿಗೂ, ಮಾಂಧಾತಾದಿ ರಾಜ ಮಹಾರಾಜರಿಗೂ, ಜಾತಿ, ಕುಲ, ಗೋತ್ರ ಕೀಳ್ ಮೇಲೆಂಬ ಉಚ್ಚ ನೀಚ ಭಾವ ಭೇದವಿಲ್ಲದ ತಮ್ಮನ್ನು ಶರಣಾಗತಿ ಭಾವದಿಂದ। ಅಂತರಂಗ ಶುದ್ಧಿ ಯುಳ್ಳವರಾಗಿ ಮೊರೆಬಿದ್ದು ವೊಮ್ಮೆ ಪ್ರಾರ್ಥಿಸುವರೋ ಅಂತವರನ್ನು ಬಿಡದೆ ಅಪ್ಪಿಕೊಂಡು ಸಂತೈಸಿಸಿ, ಧರ್ಮ ಬೋಧೆಮಾಡಿ, ಶಿವಾದ್ವೈತ ಸಿದ್ಧಾಂತ ಸ್ಥಾಪನಾಚಾರ್ಯವರ್ಯರೆಂದು ಸತತ ಶ್ರೀ ಜ॥ ಪಂಚಾಚಾರ್ಯರು ಸ್ತುತ್ಯರಿರುವರು. ಈ ಕಾರಣಗಳಿಂದ ಆಗಮಾಮ್ನಾಯಾದಿಗಳಲ್ಲಿ ಪ್ರೋಕ್ತವಾದ, ಪರಮ ಪರತರವೆನಿಸಿದ ಲಿಂಗಾಂಗಿ ಧರ್ಮದ ಅರ್ಥಾತ್ ವೀರಶೈವ ಧರ್ಮ, ವಂದು ಕೋಮಿನವರಿಗೆ, ವಂದು ಕಾಲಕ್ಕೆ ವಂದು ದೇಶಕ್ಕೆ ಸೀಮಿತವಾಗಿರದೆ. ಶಿವೋಕ್ತಿಯಂತೆ ॥ **ಸರ್ವೆಷಾಂ ಹಿತಕಾರಕಂ** ॥ ಅಂದರೆ " ತತ್ವಾನಾಂ ಮಹದಾದೀ ನಾಂ " ತ್ರಿಮತಾಚಾರ್ಯರುಗಳ ಅವತಾರಗಳಿಗಿಂತಲೂ ಬುದ್ಧ, ಜೈನ, ಮಹಾವೀರ, ಏಸುಕ್ರಿಸ್ತ, ಮೊಹಮ್ಮದ್ ಪೈಗಂಬರ್ ಇತ್ಯಾದಿ ಮಹಾ ಮತಾಚಾರ್ಯರ ಕಾಲಗಳಿಗಿಂತಲೂ, ಬಹು ಪೂರ್ವದಲ್ಲೇ ಬೋಧಿತವಾಗಿ ಸರ್ವತ್ರ ಸ್ಥಾಪಿಸಲ್ಪಟ್ಟು ಸಮಸ್ತರಿಗೂ ಸರ್ವಕಾಲದಲ್ಲೂ ಹಿತಕರವಾದ ವಿಶ್ವಧರ್ಮವನ್ನು ವಿಶ್ವಾಚಾರ್ಯರು ಭುವಿಯಲ್ಲಿ ಅನಂತ ಕಾಲ ಸ್ಥಾಯಿಯಾಗಿ ನಿಲ್ಲುವಂತೆ ಸ್ಥಾಪಿಸಿರುವರು,

ಶಿವನಿಂದಾದ ಈ ಅಪ್ರಾಕೃತ ಸೃಷ್ಟಿಯನ್ನು ಕಣ್ಣಾರೆ ಕಂಡ ಚತುರ್ಮುಖ ಬ್ರಹ್ಮನು ತದನಂತರ, ಆ ಕ್ಷಣದಲ್ಲೇ ಶಿವಾನುಗ್ರಹಬಲದಿಂದ ತಾನು ಪ್ರಾಕೃತ ಸೃಷ್ಟಿಯನ್ನು ಸಂಕಲ್ಪ ಮಾತ್ರೇಣ ಮಾಡಲು ಸಂಕಲ್ಪಿಸಿ ತನ್ನ ಮಾನಸ ಪುತ್ರರನ್ನು ಮೊದ ಮೊದಲು ಸೃಷ್ಟಿ ಮಾಡಿ ತದನಂತರ ಜಗತ್ ಸೃಷ್ಟಿ ಕಾರ್ಯದಲ್ಲಿ ನಿರತನಾದನು.

ಕಾಮಿಕಾದಿ ವಾತುಲ ಪರ್ಯಂತವಿರುವ ಇಪ್ಪತ್ತೆಂಟು ಶಿವಾಗಮಗಳನ್ನು ಶಿವನು, ಚತುರ್ವೇದಗಳಿಗೆ ಪೂರ್ವವೇ, ತನ್ನ ಅರ್ಧಾಂಗಿ ಗಿರಿಜೆಗೆ ಕಾಂತಾಸಂಹಿತೆಯಂತೆ ಬೋಧಿಸಿರುವನು. ಶಿವನ ಶ್ರೀಮುಖ ಕಮಲಗಳಿಂದ ಹೊರಹೊಮ್ಮಿದ ಶಿವಾಗಮಗಳು ವೇ ದ ಗ ಳ ಷ್ಟೇ ಪ್ರಾಮಾಣ್ಯವುಳ್ಳವುಗಳು. ವೇದೋಪನಿಷದ್ ಮಂತ್ರಾರ್ಥಗಳು ದ್ವಂದ್ವಾರ್ಥಗಳಿಗೆ ಎಡೆಮಾಡಿಕೊಡುವ ಸ್ಥಿತಿಯಲ್ಲಿವೆ. ಆದರೆ ಶಿವಾಗಮೋಕ್ತ ಸಿದ್ಧಾಂತ, ವೇದ ಮಾರ್ಗವನ್ನನುಸರಿಸಿ ಅವುಗಳ ಉತ್ತರಾರ್ಧದ ಮಂತ್ರ ಭಾಗಗಳು, ಸಂಶಯಾರ್ಥಗಳಿಗೆ ಅವಕಾಶ ನೀಡದೆ, ನಿರ್ಣಯಾತ್ಮಕ ಅರ್ಥ ಗರ್ಭಿತವಾಗಿ ಗಂಭೀರವೆನಿಸಿವೆ. ಭಗವತ್ಪಾದ ಆದಿ ಶ್ರೀ ಜಗದ್ಗುರು ರೇಣುಕಾಚಾರ್ಯರು ಮೇಲುಕ್ತವಾದ ವಿಷಯವನ್ನು ಶ್ರೀ ಆದಿ ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸುತ್ತಾ–

॥ ವೇದ ಸಿದ್ಧಾಂತಯೋರೈಕ್ಯ । ಮೇಕಾರ್ಥಃ ಪ್ರತಿಪಾದನಾತ್ ।
ಪ್ರಾಮಾಣ್ಯಂ ಸದೃಶಂ ಜ್ಞೇಯಂ । ಪಂಡಿತೈ ರೇತಯೋಃ ಸದಾ ॥

( ಸಿ.ಶಿ.ಅ. 5 ಶ್ಲೋ. 13 )

ವೇದ ಭಾಷ್ಯಕರ್ತರಾದ ಶ್ರೀಕಂಠ ಶಾಸ್ತ್ರಿಗಳ ಪರಮ ಶಿಷ್ಯ ಶ್ರೀ ಅಪ್ಪಯ್ಯ ದೀಕ್ಷಿತರೂ ಸಹ ಮೇಲ್ಕಂಡ ವಿಷಯವನ್ನು ಪ್ರತಿಪಾದಿಸುತ್ತಾ–

॥ ವಯಂ ವೇದ ಶಿವಾಗಮ । ಯೋ ರ್ಭೇದಂ ನ ಪಶ್ಯಾಮಃ ॥
ಎಂದು ಘೋಷಿಸಿರುವರು.

ಶ್ರೀಮದಾದಿ ಜಗದ್ಗುರು ಸಾರ್ವ ಭೌಮ ಶ್ರೀ ರೇಣುಕಾದಿ ಪಂಚಾಚಾರ್ಯರ ಮಹಿಮೆಯನ್ನು ಶ್ರೀ ಕೈಲಾಸನಾಥನು ತುಂಬಿದ ಹೃದಯದಿಂದ ಜಗಜ್ಜನನಿ ಶ್ರೀ ಗಿರಿಜೆಗೆ ಪ್ರತಿಪಾದಿಸುತ್ತಾ–

1) ॥ ಶ್ರೀಕಂಠಾನನ ವಾರಿಜನ್ಮ ಜನಿತಾ । ಶ್ರೀಕಂಠ ದೇಹೋಪಮಾ ।

ಘೂ ಕೈಲಾಸ ಹಿಮಾಲಯಾದಿ ವಿಲಸ । ಚ್ಛ್ರೀ ಪೀಠ ಸಂಸ್ಥಾಪಕಾ ॥
ಸಾನಂದಾದಿ ಯಮೀಂದ್ರ ವಂದ್ಯ । ಚರಣಾ, ಚಕ್ರೇಶ ಸಂಪೂಜಿತಾ ।
ಪಂಚಾಚಾರ್ಯ ಜಗದ್ಗುರೂ । ಗಣವರಾ ವಂದೇ ದಯಾ ಸಾಗರಾ ॥

2) ॥ ಕೊಲ್ಲೀಪಾಕ್ಯ ಭಿದೇಪುರೇ । ಸುವಿಮಲೇ ಸೋಮೇಶ ಲಿಂಗಾಚ್ಛ ಭಾ ।
ದಾವಿರ್ಭೂಯ ತತೋ ಗತೋ ಗಗನ । ತೋ ಅಗಸ್ತ್ಯಾ ಶ್ರಮಂ ಪಾವಯ ॥
ಯಸ್ತಸ್ಮೈ ವಿನತಾಯ ವೇದ । ವಿಹಿತಂ ಸಿದ್ಧಾಂತ ಮಾ ಬೋಧಯತ್ ।
ಸ ಶ್ರೀ ರೇಣುಕ ಯೋಗಿರಾಡ್ವಿ । ತನುತಾಂ ಸಾನಂದ ಮುರ್ವೀತಲಂ ॥

3) ॥ ಯೋ ಯೋಗೀ ಕರುಣಾಮಯಃ । ಶಿವ ವಟ ಕ್ಷೇತ್ರೀಯ ಸಿದ್ಧೇಶ್ವರಾ ।
ದುತ್ಪತ್ತಿಂ ಸಮವೇತ್ಯ ಲೋಕ । ನಿವಹೇ ಸಂಚಾರ್ಯ ಸಲ್ಲೀಲಯಾ ॥
ಸಿದ್ಧಾಂತಾಂ ಕುರಮಾದಿ ಭಕ್ತ । ಹೃದಯೇನಿಕ್ಷಿಪ್ತವಾ ಸಾದರಂ ।
ಸ ಶ್ರೀಮ ಮರುಲಾರ್ಯದೇ । ಶಿಕವರಃ ಪಾಯಾದ ಪಾಯಾಜ್ಜನಾ ॥

4) ॥ ದ್ರಾಕ್ಷಾ ರಾಮ ಶಿವಾಭಿಧಾನ ಕಲಿತ । ಕ್ಷೇತ್ರಸ್ಥ ರಾಮೇಶ್ವರಾ ।
ಜ್ಜನ್ಮ ಪ್ರಾಪ್ಯ ಸಮಸ್ತ ಸಂಯ । ಮಿ ಗಣಂ ಸಂಬೋಧ್ಯ ತತ್ವಂಪರಂ ॥
ಯಶ್ಚಕ್ರೇ ನಿಜ ಧರ್ಮ ಪೀಠ । ರಚನಾಂ ಶೀತಾದ್ರಿ ಸಾನೌ ಮುದಾ ।
ಏಕೋರಾಮ ಗುರೂತ್ತಮಃ । ಸ ನಿಖಿಲಾಂಪಾಯಾದ್ಧ ರಾಮನ್ವ ಹಂ ॥

5) ॥ ಶ್ರೀಶೈಲ ಸ್ಥಿತ ಮಲ್ಲಿಕಾರ್ಜುನ । ಮಹಾಲಿಂಗಾಚ್ಛಲಬ್ಧ್ವಾ ಜನಿಂ ।
ಸಿದ್ಧಾಂತಂ ನಿಗಮಾಗಮಾದಿ । ಗಡಿತಂ ಯೋಗೀಂದ್ರ ಸಂ ಸೇವಿತಂ ॥
ಯೋ ಲೋಕೇ ಪ್ರಸಸಾರ । ತಾಪಸಗುರುಃ ಶ್ರೀಶೈಲ ಪೀಠಾಧಿಪಃ ।
ಸ ಶ್ರೀ ಪಂಡಿತ ದೇಶಿಕೋ । ವಿತನು ತಾಂ ಸೌಖ್ಯಂ ಸದಾ ಭೂತಲೇ ॥

6) ॥ ಕಾಶೀ ಕ್ಷೇತ್ರ ವಿರಾಜಮಾನ । ಭಗವದ್ವಿಶ್ವೇಶ ಗರ್ಭೋದಯಂ ।
ಯಃ ಸಂಪ್ರಾಪ್ಯ ಮಹೀ ತಲೇ । ಶಿವ ಮಯೀಂ ಭಕ್ತಿಂ ತತಾನಾಮಲಾಂ ॥
ಗರ್ಜದ್ದುರ್ಮತವಾದಿ ವಾರಣಲ । ಸತ್ಕಂಠೀರವಃ ಶ್ರೀಕರೋ ।
ವಿಶ್ವಾರಾಧ್ಯ ಗುರೂತ್ತಮಃ । ಸ ಜಗತೀ ಮವ್ಯಾದಪಾಯಾಚ್ಚಿರಂ ॥

ಮೇಲೆ ಸ್ತುತ್ಯವಾದಂತೆ ಜಗದಾದಿ ಶ್ರೀ ಪರಮ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯ ಸಾರ್ವಭೌಮರ ಮಹತ್ವ, ಅನಾದಿ ಕಾಲದಿಂದಲೂ ಅಖಿಲಾಗಮೋಪನಿಷದಾದಿಗಳಲ್ಲಿ ಅನೂಚಾನವಾಗಿ ಪ್ರತಿಪಾದಿಸಲ್ಪಟ್ಟ ಸಾರಾಂಶವೆನಿಸಿದೆ ಎಂಬು

ಸತ್ಯಾಂಶಗಳನ್ನು ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ಶ್ರೀಮದ್ ಜಗದಾಚಾರ್ಯ ವರೇಣ್ಯ ಆದಿ ಶ್ರೀ ರೇವಣಸಿದ್ಧರು ಮನಂಬುಗುವಂತೆ ಬೋಧಿಸಿದರು. ಸಾಕ್ಷಾತ್ ಕೈಲಾಸನಾಥನಾದ ಪರಶಿವನು ಶ್ರೀಮದಾದಿ ಜ॥ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರ ರೂಪದಲ್ಲಿ, ಶಿವ ತೇಜಃ ಪುಂಜವಾದ ಮಹದ್ವಿಷಯಗಳನ್ನು ರಮಣೀಯವಾಗಿ ಕರುಣಾಮೃತ ರಸ ಭಾವದಿಂದ ದೇದೀಪ್ಯಮಾನವಾಗಿ ಬೋಧಿಸುತ್ತಲಿರುವಾಗ ; ಬ್ರಹ್ಮಜ್ಞಾನಿಗಳೂ, ತತ್ತ್ವವೇತ್ತರೂ ಹಾಗೂ ಶಿವಾಂಶ ಸಂಭೂತರಾದ ಆದಿ ಶ್ರೀ ಶಂಕರಾಚಾರ್ಯರು, ಮಹಾ ಗುರುದೇವನ ಸನ್ನಿಧಿಯಲ್ಲಿ ಮುಗ್ಧ ಭಕ್ತಿಭಾವದಿಂದ, ವಿನಯಾನ್ವಿತರಾಗಿ ಮೌನಮುದ್ರೆಯಿಂದ ಎಲ್ಲವನ್ನೂ ಸಾವಧಾನಚಿತ್ತದಿಂದ ಶ್ರವಣ ಮಾಡಿ ಆನಂದಿಸಿದರು. ಶ್ರೀ ಶಂಕರರ ತೀಕ್ಷ್ಣವಾದ ಜ್ಞಾನಾನುಭವದ, ಅಂತರಂಗದ ಪಾರಿಶುದ್ಧತೆಯಲ್ಲಿ, ಒಳಗಣ್ಣಿನಿಂದ ಅವರು ಆಗ ಕಂಡ ಮನಮೋಹಕವಾದ ಉನ್ನತ ಸ್ಥಿತಿಯ ಸತ್ಯಾಂಶವನ್ನು ಬೇರೆಯವರು, ಆ ಹಂತದಲ್ಲಿದ್ದು ಅನುಭವಿಸಲು ಸಾಧ್ಯವಿಲ್ಲ. ಇದರಿಂದಾಗಿ ಪಂಡಿತರು ಮೇಲುಕ್ತವಾದ ವಿಷಯಗಳನ್ನು ಮನಸ್ವಿಯಾಗಿ ವಿರೋಧ ಭಾವದಿಂದ ಕಳಂಕವನ್ನುಂಟು ಮಾಡುವಂತೆ ಕೃತಿಗಳನ್ನು ರಚಿಸಬಾರದು.



## ಅಧ್ಯಾಯ 18

ಶ್ರೀ ವೀರಾಗಮದಲ್ಲಿ ಸ್ತುತ್ಯವಾದ ಶ್ರೀಮದ್ರಂಭಾಪುರೀ ವೀರ ಸಿಂಹಾಸನ, ನಿಗಮಾಗಮಗಳ ಕಾಲಕ್ಕಿಂತಲೂ ಬಹು ಪೂರ್ವದಲ್ಲೇ, " ಭದ್ರಾಸನ " ವೆಂದು ಖ್ಯಾತಿ ಪಡೆದಿತ್ತೆಂಬ ಮಹದಂಶವನ್ನು ಆದಿ ಶ್ರೀ ರೇವಣಸಿದ್ಧರು ಆದಿ ಶ್ರೀ ಶಂಕರಾಚಾರ್ಯರಿಗೆ ಬೋಧಿಸಿದರು.

ಶ್ರೀಮದ್ರಂಭಾಪುರೀ ಮಹಾ ಪೀಠದಲ್ಲಿ ಅನಾದಿ ಕಾಲದಿಂದ ವಿರಾಜಿಸುವ, " ವೀರಸಿಂಹಾಸನ "ದ ಬಗೆಗೆ ಕಾಮಿಕಾದಿ ವಾತುಲ ಪರ್ಯಂತರವುಳ್ಳ ಇಪ್ಪತ್ತೆಂಟು ಶಿವಾಗಮಗಳಲ್ಲಿ ವೀರಾಗಮವು ಲಕ್ಷಗಟ್ಟಲೆ ಮಂತ್ರರಾಜಿಗಳಿಂದ ವಿರಾಜಿಸುವ

ಪ್ರಮುಖ ಶಿವಾಗಮವೆಂದು ತತ್ವವೇತ್ತರೂ ಮತ್ತು ಶಿವಶರಣರೂ ಏಕಕಂಠದಿಂದ ಘೋಷಿಸುತ್ತಲಿದ್ದಾರೆ. ಜಗತ್ಪತಿಯಾದ ಶಿವನು ಸಹ, ಗಿರಿಜೆಗೆ ಶಿವಾಗಮಗಳ ಸ್ಥಾನವನ್ನು ವಿವರಿಸುವಾಗ ವೀರಾಗಮದ ಬಗೆಗೆ ಮಹತ್ತರವಾಗಿ ಪ್ರಶಂಸಿಸಿರುವನು. ವೀರಸಿಂಹಾಸನದ ಬಗೆಗೆ, ವೀರಾಗಮದಲ್ಲಿ ಅತ್ಯಂತ ಸುಂದರವಾದ ಮಹತ್ವವನ್ನು ಹೊರಗೆಡಹಿ ಸತ್ಯಾಂಶವನ್ನು ಜಗತ್ತಿಗೆ ತಿಳಿಯುವಂತೆ ಅಧಿಕೃತವಾಗಿ ಪ್ರತಿಪಾದಿಸಲಾಗಿದೆ.

ವೀರಾಗಮದ ಉತ್ತರ ಭಾಗದಲ್ಲಿ ಉಮಾಕಾಂತನು ತನ್ನ ಅರ್ಧಾಂಗಿಗೆ ವೀರ ಸಿಂಹಾಸನದ ಬಗೆಗೆ ಹೇಳಿದ ಶಿವೋಕ್ತಿ, ನಿತ್ಯ ಸತ್ಯ ಸುಂದರವೂ, ಅತಿ ಮನೋಹರವಾಗಿ ವರ್ಣಿತವಾಗಿದೆ. ಎಂದು ಶ್ರೀ ಜ॥ ರೇವಣಸಿದ್ಧರು ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ಅರುಹಿದರು. ವೇದಾಗಮಗಳ ಕಾಲಕ್ಕಿಂತಲೂ ಬಹು ಪೂರ್ವದಲ್ಲಿ ಕರ್ನಾಟಕದಲ್ಲಿ ಮಹಾ ಶಿವಭಕ್ತಾಗ್ರೇಸರನೂ, ಸುಜ್ಞಾನಿಯೂ ಲಿಂಗಾಂಗಿ ಧರ್ಮದ ರಾಜೇಂದ್ರ ಶತಾನಂದನೆಂಬ ಧರ್ಮಜ್ಞನಾದ ಮಹಾರಾಜನಿದ್ದನು. ಕೋಟಿಗೊಬ್ಬ ಶರಣನೆಂಬಂತೆ, ಶಿವಶರಣರಲ್ಲಿ ಶ್ರೇಷ್ಠನೆನಿಸಿದ ಶತಾನಂದಪ್ರಭು ವಿರಾಜಿತನಾಗಿದ್ದನು. ಈತನೂ ಸ್ವಭಾವತಃ ಸುಸಂಸ್ಕೃತನಾದ್ದರಿಂದ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಮುಮುಕ್ಷುಗಳಾದ ಮುನಿಕುಲತಿಲಕ ಪ್ರಾಯರಾದ ಮಹಾತ್ಮರ, ಶಿವಶರಣರ ಮಧ್ಯೆ ಸುಧೀರ್ಘಕಾಲ ಯಿದ್ದು ಬೆಳೆದು ಅವರ ಶ್ರೀಪಾದ ಸೇವೆಯನ್ನು ಈಶಸೇವೆಯೆಂದರಿತು ಅನಂತ ಮುಖದಿಂದ ಇತೋಪ್ಯತಿಶಯದಿಂದ ಸಲ್ಲಿಸುತ್ತಾಯಿದ್ದು' ಆಧ್ಯಾತ್ಮ ವಿದ್ಯಾಮೃತವನ್ನು ಸೂರೆಗೊಂಡಿದ್ದನು. ಇಂತು ಮಹಾನುಭಾವನಾದ ರಾಜೇಂದ್ರ ಶತಾನಂದ ಅರಸನ ಘನ ವೃತ್ತಾಂತವನ್ನು ವೀರಾಗಮವು ಮುಕ್ತ ಕಂಠದಿಂದ ಉಜ್ವಲವಾಗಿ ಈ ಕೆಳಗೆ ಪ್ರತಿಪಾದಿಸಿದಂತೆ ಸಾರುತ್ತಲಿದೆ.

ವೇದಾಗಮಗಳ ಉದಯಕಾಲಕ್ಕೆ ಪೂರ್ವ ಶ್ರೀ ಮಹಾಗುರುಭಕ್ತ ಶಿಖಾಮಣಿ, ಶಿವಭಕ್ತಾಗ್ರೇಸರನಾದ, ಶ್ರೀ ರಾಜೇಂದ್ರ ಶತಾನಂದನೆಂಬ ನೃಪತುಂಗ ಅರಸನ ಸತ್ವಶೀಲವಾದ ಮಹತ್ವ ಶ್ರೀ ರಾಜೇಂದ್ರ ಶತಾನಂದೇತಿಹಾಸವೆಂದು ಪ್ರಶಂಶಿಸಲಾಗಿದೆ.

ಮಹಾಚಾರ್ಯವರೇಣ್ಯರಾದ ಶ್ರೀ ಆದಿ ಜ॥ ರೇವಣಸಿದ್ಧರು, ಶ್ರೀ ಆದಿ ಜ॥ ಶಂಕರಾಚಾರ್ಯರಿಗೆ, ಶ್ರೀರಾಜೇಂದ್ರಶತಾನಂದ ಮಹಾರಾಜನು ಆಗಮಾಮ್ನಾಯಾದಿಗಳ ಉದಯಕಾಲಕ್ಕೂ ಬಹು ಪೂರ್ವದಲ್ಲಿ, ಧರ್ಮಕ್ಷೇತ್ರವೆಂದು ಹೆಸರ್ಗೊಂಡ ಭಾರತದ

ಕರ್ನಾಟಕದ ಪ್ರದೇಶದಲ್ಲಿ ಧರ್ಮಿಷ್ಠನಾಗಿ ಪ್ರಜಾಪಾಲನೆಯನ್ನು ಮಾಡುತ್ತಲಿದ್ದನು. ಶತಾನಂದನು ನಿತ್ಯ ಹರಪೂಜೆ ಶ್ರೀ ಗುರುಸೇವೆಯಲ್ಲಿ ನಿರತನಾಗಿದ್ದನು. ಶ್ರೀ ಮಹಾ ಗುರುವೆಂದರೆ "ಸಾಕ್ಷಾತ್ಪರಬ್ರಹ್ಮ" ವೆಂದರಿತಿದ್ದ ಮಹೋದಯನವನು. ವೀರಾಗಮದಲ್ಲಿ ರಾಜೇಂದ್ರ ಶತಾನಂದನ ಗುಣಗಾನ ಮಾಡಿರುವುದನ್ನು, ಶಿವನು ತನ್ನರ್ಧಾಂಗಿಯಾದ ಶ್ರೀಗಿರಿಜೆಗೆ ವಿವರಿಸುತ್ತಾ–

॥ ಪುರಾಕಿಲ ಮುನೀನಾಂಚ । ಸಮಾಜೇಷು ವಿರಾಜಿತಃ ।
ಧರ್ಮವಿತ್ ಶಾಸ್ತ್ರನಿಪುಣಃ । ಪ್ರಾಣಲಿಂಗೀ ಜಿತೇಂದ್ರಿಯಃ ॥ ೧ ॥

॥ ವೀರಮಾಹೇಶ್ವರಾಚಾರೆ । ಜ್ಞಾನಾನಂದೈಕ ಸಾಧನಃ ।
ಆತ್ಮಾರ್ಥಾ ಧೃಢರ್ವಾ ಧೀರಃ । ಸರ್ವಶಾಸ್ತ್ರಾಸ್ತ್ರಕೋವಿದಃ ॥ ೨ ॥

॥ ಮಂತ್ರಜ್ಞಃ ಕಾಮಶಾಸ್ತ್ರಾಸ್ತ್ರ । ವಿಧ್ವಂಸಿ ವಿಷಯಾಂತಕಃ ।
ಏಕೋತ್ತರ ಶತಸ್ಥಾನ ಕ್ರಿಯಾ । ತತ್ವಾರ್ಥಶೋಧಕಃ ॥ ೩ ॥

॥ ಮತಿರ್ಮಾ ಮದಮತ್ತೇಭ । ವಿದಾರಣ ಕಲಾನ್ವಿತಃ ।
ವೀರಮಾಹೇಶ್ವರ ಪ್ರಾಣಸಖಾ । ಲೋಕೈಕ ಪೂಜಿತಃ ॥ ೪ ॥

॥ ಬ್ರಹ್ಮಾಂಡಕೋಟಿ ವಿಧ್ವಂಸ । ಲೀಲಾಭೈರವವೇಷ್ಟಿತಃ ।
ಕಾಲಾಗ್ನಿಸದೃಶಃ ಕ್ರೋಧಃ । ಕ್ಷಮಯಾಂ ಪೃಥುವೀಸಮಃ ॥ ೫ ॥

(ವೀರಾಗಮ)

ರಾಜೇಂದ್ರ ಶತಾನಂದನು ಈ ಪ್ರಕಾರ, ಧರ್ಮಜ್ಞನೂ, ಕೃತಜ್ಞನೂ ಮತ್ತೂ ಭಾವಜ್ಞನೂ ಆಗಿ ಜಗತ್ಪೂಜ್ಯನೆನಿಸಿದ್ದನು. ಕೋಟಿ ಬ್ರಹ್ಮಾಂಡಗಳನ್ನು ಲಯ ಗೊಳಿಸುವ ಬಲವುಳ್ಳ ಭೈರವರ ಬೆಂಬಲವುಳ್ಳವನಾಗಿ, ದುಷ್ಕೃತಿಗಳನ್ನು ವಿನಾಶ ಮಾಡುವುದರಲ್ಲಿ ಕಾಲಾಗ್ನಿ ರುದ್ರನಂತೆ ಕೋಪವುಳ್ಳವನೂ, ಶಿವ ಶರಣರನ್ನು ರಕ್ಷಿಸು ವುದರಲ್ಲಿ ಭೂಮಾತೆಯಂತೆ ॥ ಕ್ಷಮಯಾ ಧರಿತ್ರಿ ॥ ಕ್ಷಮಾವಿಭೂಷಿತನೂ ಆಗಿದ್ದನು. ಮಹಾ ಗುರುಸೇವೆಯಲ್ಲಿ ಆತ್ಮಾರ್ಪಣ ಭಾವವುಳ್ಳ ಅವ್ಯಭಿಚಾರಿಣೀ ಭಕ್ತಿಯಿಂದ ಕೂಡಿದ್ದನು. ಈ ಮಹಾನುಭಾವನು ಅಂದಿನ ಶ್ರೀ ಜ॥ ರೇಣುಕಾಚಾರ್ಯ ಗುರು ಸಾರ್ವಭೌಮರಿಗೆ ರತ್ನಖಚಿತವಾದ ಬಂಗಾರದ ಸಿಂಹಾಸನವೊಂದನ್ನು ಸಿದ್ಧಪಡಿಸಿ ತನ್ನ ಅತುಲ ಭಕ್ತಿ ಕಾಣಿಕೆಯಾಗಿ, ಶ್ರೀ ಮಹಾ ಗುರುವಿನ ಪಾದದ್ವಯಂಗಳಲ್ಲಿ ಅರ್ಪಿಸಿ ಕೃ ತಾ ರ್ಥ ನಾ ಗ ಬೇ ಕೆಂ ಬ ಮನೋಭಿಲಾಷೆಯಿಂದ ನಿಶ್ಚಯಿಸಿದನು. ॥ ಶ್ರೀ ಗುರುಪಾದ ದ್ವಯಮೇವ ದೈವಂ ॥ ಎಂಬ ಘನ ತತ್ವವನ್ನು ಮನ ಗಂಡಿದ್ದನು.

## " ವೀರಸಿಂಹಾಸನ " ನಾಮಾಂಕಿತ ಬಂಗಾರದ ಭದ್ರಪೀಠ ಪ್ರದಾನ

ಶ್ರೀಮದ್ರಂಭಾಪುರೀ ವೀರ ಸಿಂಹಾಸನದಲ್ಲಿ, ವೇದಾಗಮಗಳ ಉದಯಕಾಲಕ್ಕಿಂತಲೂ ಬಹು ಪೂರ್ವದಿಂದ ವಿರಾಜಿತವಾಗಿರುವ, ಬಂಗಾರದಿಂದ ನಿರ್ಮಿತವಾದ ಭದ್ರಪೀಠವನ್ನು ಪರಮ ವೀರ ಮಾಹೇಶ್ವರ ಗೋತ್ರೋತ್ಪನ್ನನಾದ, ಶ್ರೀ ರಾಜೇಂದ್ರ ಶತಾನಂದನು ಶ್ರೀ ಜ॥ ರೇಣುಕಾಚಾರ್ಯರಿಗೆ, ಭಕ್ತಿಯಿಂದ ಅರ್ಪಿಸಿದ ಪರಮ ವೀರಸಿಂಹಾಸನದ ಸತ್ಯನಿತ್ಯಸುಂದರ ವರ್ಣನೆಯನ್ನು ಶಿವನು ಜಗದಾಂಬಿಕೆಗೆ ಪ್ರೀತಿಪೂರ್ವಕ ನಿರೂಪಿಸಿದಂತೆ ವೀರಾಗಮದಲ್ಲಿ ಈ ಕೆಳಕಂಡಂತೆ ವರ್ಣಿತವಾಗಿದೆ.

॥ ಆ ಹೂಯ ರೇಣುಕಂ ದೀಪ್ತ । ಗಾತ್ರರೋಚಿ ಪರಿಷ್ಕೃತಂ ।
ಕಾರ್ತಸ್ವರಾನ್ವಿತಂ ಭದ್ರಪೀಠಂ । ದತ್ವಾ ವಿಚಿತ್ರಿತಂ ॥ ೧ ॥

॥ ಶ್ರೀಚಕ್ರ ಮಂತ್ರಸದನಂ । ಪರಾವಿದ್ಯಾ ಸಮನ್ವಿತಂ ।
ಅಶೇಷ ವೇದ ಮಂತ್ರಾರ್ಥ । ಬೀಜನ್ಯಾಸ ವಿಲೇಖಿತಂ ॥ ೨ ॥

॥ ಉಚ್ಚಸಿಂಹ ಮುಖಂ ಶ್ರೇಷ್ಠ । ಮಷ್ಟ ಭೈರವ ವೇಷ್ಟಿತಂ ।
ಬ್ರಾಹ್ಮೀಸಪ್ತ ಸ್ವರೋಪೇತಂ । ಸರ್ವಬೀಜ ಸಮನ್ವಿತಂ ॥ ೩ ॥

॥ ತ್ರಿಷಷ್ಠಿತಂತ್ರ ಸಹಸ್ರಬದ್ಧ । ಪ್ರತಿಮಾವೇಷ್ಟಿತಂ ।
ಮನೋಮಾಯುದಳಾನ್ಯಷ್ಟ । ವೃತ್ತಷಟ್ಕವಿರಾಜಿತಂ ॥ ೪ ॥

॥ ತಾಪತ್ರಯ ಕಲಾಶೂನ್ಯಶಕ್ತಿ । ಕೀಲಕ ವೇಷ್ಟಿತಂ ।
ಮಂತ್ರಾಸನಂ ದದರ್ಶಾಸೌ । ದೇಶಿಕೇಂದ್ರೋ ಜಿತೇಂದ್ರಿಯಃ ॥ ೫ ॥

॥ ತಂ ತೋಷ ತತ್ಪರಂ ಶ್ರೇಷ್ಠ । ಮಾರೂಹ್ಯ ಮವನೀತಳೇ ।
ಅಂಶುಮಾನಿವ ತತ್ಪೀಠ ರೋಚಿ । ಗಾತ್ರ ಕಳಾನ್ವಿತಂ ॥ ೬ ॥

॥ ರರಾಜ ರೇಣುಕಂವ್ಯಾಪ್ತ । ಪೀಠ ಮಧ್ಯೇ ಪ್ರತಿಷ್ಠಿತಂ ।
ಅಂಬರೇಷ್ಠಿತಂ ಸೂರ್ಯ । ಮಿವ ಕಾಂತೇ ವರಾನನೇ ॥ ೭ ॥

(ವೀರಾಗಮ)

ಭದ್ರಾಸನವೆಂದು ಜಗದ್ವಿಖ್ಯಾತವಾದ ಪರಮ ವೀರ ಸಿಂಹಾಸನದ ಮಹತ್ವವನ್ನು ಶಿವನು ಗಿರಿಜೆಗೆ ಮುಕ್ತ ಕಂಠದಿಂದ ವಿವರಿಸುತ್ತಾ " ದೇವಿ ! ದೇದೀಪ್ಯಮಾನ

ವಾಗಿ ಬೆಳಗುವ ಮಂತ್ರಮಯ ದಿವ್ಯ ದೇಹಧಾರಿ ಶ್ರೀ ರೇಣುಕ ದೇಶಿಕೇಂದ್ರರನ್ನು ಮಹಾ ಗುರುಭಕ್ತರತ್ನ ಶತಾನಂದ ಮಹಾರಾಜನು, ಸಕಲರಾಜ ಗೌರವಗಳೊಂದಿಗೆ ಉತ್ಸವ ಪೂರ್ವಕ ತನ್ನ ಅರಮನೆಯೊಳಗೆ ಬಿಜಯಂಗೈಸಿಕೊಂಡು ಹೋಗಿ ವಿಧಿ ವತ್ತಾಗಿ ಶಿವಪೂಜೆ ಪಾದಪೂಜೆಗಳನ್ನು ಭಕ್ತಿಭಾವದಿಂದ ಇತ್ಯೋಪ್ಯತಿಶಯವಾಗಿ ನೆರ ವೇರಿಸಿ, ಬಂಗಾರದಿಂದ ನಿರ್ಮಿತವಾದ ವೀರಸಿಂಹಾಸನ ನಾಮಾಂಕಿತ ಭದ್ರಪೀಠ ವಂದನ್ನು ಮಹಾಚಾರ್ಯರಿಗೆ, ಅತುಲಾನಂದದಿಂದ ಹಾಗೂ ಅನನ್ಯ ಭಕ್ತಿಭಾವದಿಂದ ಅರ್ಪಿಸಿ ಕೃತಾರ್ಥನಾದನು. **" ಭದ್ರಾಸನದ ವರ್ಣನೆ" :-**

ಈ ಭದ್ರಾಸನವು ಭಕ್ತರ ಕಣ್ಮನಂಗಳನ್ನು ಆಕರ್ಷಿಸುವಂಥಾ ಚಿತ್ರಮಯ ಬಣ್ಣಗಳಿಂದಲೂ, ಶಾಂಭವೀ ಚಕ್ರದ ಮಂತ್ರಗಳಿಗೆ ನೆಲೆಯಾಗಿ, ಪರಾಶಕ್ತಿಯ ವಿದ್ಯಾ ಕಳೆಯಿಂದ ವಿರಾಜಿತವಾಗಿತ್ತು. ಚತುರ್ವೇದಗಳ ಮಂತ್ರಾರ್ಥ ಮತ್ತೂ ಬೀಜಾಕ್ಷರ ವಿನ್ಯಾಸವುಳ್ಳದಾಗಿತ್ತು. ಬೃಹತ್ ಸಿಂಹ ಮುಖಗಳುಳ್ಳದಾಗಿತ್ತು. ಅಷ್ಟಭೈರವ ಚಿತ್ರವುಳ್ಳದಾಗಿ ಉತ್ಕೃಷ್ಟವೆನಿಸಿತ್ತು. ಸಪ್ತಮಾತೃಕೆಯರಾದ ಶ್ರೀ ಬ್ರಾಹ್ಮೀ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಮಾಹೇಂದ್ರಿ, ಶ್ರೀ ಚಾಮುಂಡಿಯರ ಸಂಕೇತಗಳಾದ ಸಪ್ತಸ್ವರಾಕ್ಷರಗಳ ಸಹಿತವಾಗಿತ್ತು. ಸರ್ವ ಬೀಜಾಕ್ಷರಗಳಿಂದ ಈ ಸ್ವರ್ಣ ನಿರ್ಮಿತ ಭದ್ರಾಸನ ಸಮನ್ವಿತವಾಗಿತ್ತು. ಪ್ರತಿಮಾ ವಿಧಾನದಲ್ಲಿ 63 ತಂತ್ರ ಗಳಿಂದಲೂ ಸಾವಿರ ಗ್ರಂಥಗಳಿಂದಲೂ ಕೂಡಿ ಥಳಥಳಿಸುತ್ತಲಿತ್ತು, ಚಿಚ್ಛಕ್ತಿ ಚಿನ್ಮಯಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ. ಕ್ರಿಯಾಶಕ್ತಿ ಇತ್ಯಾದಿ ಅಷ್ಟದಳಗಳ, ಆರು ವೃತ್ತಗಳ ಉಲ್ಲೇಖನದಿಂದ ಉಜ್ವಲವಾಗಿ ಪ್ರಜ್ವಲಿಸುತ್ತಲಿತ್ತು. ಆದಿ ಭೌತಿಕಾದಿ ತಾಪತ್ರಯ ಕಲಂಕ ರಹಿತವಾಗಿತ್ತು. ಕ್ರಿಯಾದಿಶಕ್ತಿ ಕೀಲಕಗಳಿಂದ ಕೂಡಿತ್ತು.

ಮಹಾ ಸುಕೃತಶಾಲಿಯಾದ ರಾಜೇಂದ್ರ ಶತಾನಂದ ಮಹಾರಾಜನು ನಿಗಮಾ ಗಮಗಳಲ್ಲಿ ಇತ್ತೀಚೆಗೆ ಸ್ತುತ್ಯವಾದಂತೆ ಬೆಳಗುವ ಶ್ರೀ ಆದಿ ಭಗವತ್ಪಾದ ರೇಣುಕಾ ಚಾರ್ಯರ ಅಖಂಡವಾದ ಅದ್ವಿತೀಯ ಖ್ಯಾತಿಯನ್ನು ವೀರ ಮಾಹೇಶ್ವರ ಜಂಗಮ ವೃಂದದವರಿಂದಲೂ, ಋಷಿ ಮಹರ್ಷಿಗಳಿಂದಲೂ, ಅಸಂಖ್ಯಾತರಾದ ಶಿವಶರಣ, ಶಿವಯೋಗಿಗಳಿಂದಲೂ ಮತ್ತು ಅನೇಕ ಭಕ್ತ ಜನರಿಂದಲೂ ಆಗಾಗ ಶ್ರವಣ ಮಾಡು ತ್ತಲಿದ್ದನಾದ ಕಾರಣ, ಪೂರ್ವಯೋಜಿತ ಸತ್ಸಂಕಲ್ಪದಿಂದ ತಾನು ಮಹಾರಾಜನಾದ ಪ್ರಯುಕ್ತ ಮುತ್ತು ನವರತ್ನ ಖಚಿತವಾದ ಬಂಗಾರದ ಭದ್ರಾಸನವನ್ನು ಅತಿ ಮನೋ ಹರವಾಗಿ, ದರ್ಶನ ಮಾತ್ರದಿಂದ ಭಕ್ತಿಜ್ಞಾನೋದ್ರೇಕವಾಗುವಂತಹ, ಪಾವನಾತಿ ಪಾವನವಾದ ರೀತಿಯಲ್ಲಿ ರಚಿಸಿ, ಶ್ರೀ ಮಹಾಚಾರ್ಯವರ್ಯರಿಗೆ ಶ ರ ಣಾ ಗ ತಿ

ಭಾವದಿಂದ ಈ ಭದ್ರಪೀಠವನ್ನು ಅರ್ಪಿಸಿದನು.

ಆಗ ತ್ರಿಭುವನಾಚಾರ್ಯವರೇಣ್ಯರಾದ ಶ್ರೀ ರೇಣುಕಾಚಾರ್ಯರು ತಮ್ಮೆದುರಿನಲ್ಲಿ ಪರಿಶೋಭಿಸುತ್ತಲಿರುವ ಮಂತ್ರಮಯ ದಿವ್ಯ ಭದ್ರಾಸನವನ್ನು ಕರುಣಾಕಟಾಕ್ಷದಿಂದ ಪ್ರೇಮ್ಮೆ ವೀಕ್ಷಿಸಿದ ಪರಮಾಚಾರ್ಯರು ಆನಂದಿಸಿ, ಸರ್ವರೂ ನೋಡುತ್ತಿದ್ದ ಹಾಗೆ ಶುಭ ಮುಹೂರ್ತದಲ್ಲಿ ತಮ್ಮ ಬಲಗಾಲನ್ನೂರಿ ಬಂಗಾರಖಚಿತವಾದ ವೀರ ಸಿಂಹಾಸನ ನಾಮಾಂಕಿತ ಭದ್ರಾಸನಾರೋಹಣವನ್ನು ಮಾಡಿದರು. ಸಮಸ್ತ ಸದ್ಭಕ್ತ ವೃಂದದವರು ಜಯಜಯ ಘೋಷವನ್ನು ಮಾಡಿದರು. ಕೆಲವರು ಜಯೀಭವ ವಿಜಯೀಭವ ಎಂದು ಪುಳುಕಾಂಕಿತ ಭಾವದಿಂದ ಝೇಂಕರಿಸಿದರು. ಮತ್ತೆ ಕೆಲವರು ರಾಜೇಂದ್ರ ಶತಾನಂದ ಮಹಾರಾಜನ ಭಾಗ್ಯಕ್ಕೆಣೆಯುಂಟೇ ಅವನು ಕೃತಕೃತ್ಯನಾದನು. ಸ್ವರ್ಗ, ಮರ್ತ್ಯಾದಿ ಅನಂತ ಲೋಕಗಳಲ್ಲಿ ಬೆಳಗುವಂಥಾ ನಿತ್ಯ ಕೀರ್ತಿಶಾಲಿಯಾದನು ಎಂದು ನಾನಾತರವಾಗಿ ಆ ರಾಜನನ್ನು ಜನಸಂದಣಿ ಹಾಡಿ ಪಾಡಿಕೊಂಡಾಡಿತು. ಬಂಗಾರದ ಭದ್ರಾಸನಾರೋಹಣ ಮಾಡಿದ ಚಿದಾದಿತ್ಯ ಸದೃಶರಾದ ಪರಮಾಚಾರ್ಯ ರೇಣುಕರು, ತಮ್ಮ ವೀರ ಸಿಂಹಾಸನದಲ್ಲಿ ಮಂಡಿಸಿ, ಕೋಟಿ ಸೂರ್ಯ ಪ್ರಕಾಶಮಾನರಾಗಿ ಬೆಳಗುತ್ತಾ, ಆನಂದ ತುಂಬಿದ ಹೃದಯ ಸ್ವಾಂತರಾಗಿ ಪ್ರಸನ್ನ ಭಾವದಿಂದ, ಭಕ್ತಾಗ್ರೇಸರನಾದ ರಾಜೇಂದ್ರ ಶತಾನಂದನನ್ನು ಆಶೀರ್ವದಿಸಿ ಅವನ ಅವ್ಯಭಿಚಾರಿಣಿ ಭಕ್ತಿಗೆ ಕೊಂಡಾಡಿದರು. ನೆರೆದಿದ್ದ ಅಸಂಖ್ಯಾತ ಭಕ್ತಸ್ತೋಮವನ್ನು ಹರಸಿ, "ಸರ್ವೇಜನಾ ಸುಖಿನೋ ಭವಂತು ಲೋಕಾಸ್ಸಮಸ್ತಾ ಸ್ಸಮಂಗಳಾನಿ ಭವಂತು" ಎಂದು ಆಶೀರ್ವದಿಸಿದರು. ಆಗ ನಭೋ ಮಂಡಲದಲ್ಲಿ ನೆರೆದಿದ್ದ ಅಖಿಲ ಪ್ರಮಥಗಣ, ದೇವಗಣ, ಗಂಧರ್ವಾದಿ ಯಕ್ಷ ಕಿನ್ನರರು ಮಂಗಳ ವಾದ್ಯದೊಡನೆ ಪುಷ್ಪವೃಷ್ಟಿಯನ್ನು ಗರೆದು, ಶತಾನಂದ ಭಕ್ತಾಗ್ರೇಸರನನ್ನೂ ಭೂಲೋಕ ನಿವಾಸಿಗಳ ಭಾಗ್ಯಕ್ಕೆಣೆಯಿಲ್ಲವೆಂದು ಕೊಂಡಾಡಿ, ಮಹಾಗುರು ರೇಣುಕರ ಮಹಿಮೆಯನ್ನು ಸಹಸ್ರ ನಾಲಿಗೆಗಳಿಂದ ಪ್ರಶಂಸಿಸಿ ವಿವಿಧ ರೀತಿಯಲ್ಲಿ ಭಕ್ತಿಯಿಂದ ಸ್ತುತಿಸಿದರು. ಆಗ ರಾಜೇಂದ್ರ ಶತಾನಂದನು ಶ್ರೀ ಮಹಾಗುರುವಿನ ಶ್ರೀ ಪಾದೋದಕದೊಂದಿಗೆ, ಸಮಸ್ತ ಭಕ್ತ ಕೋಟಿಗೆ ಮೃಷ್ಟಾನ್ನ ಪಾನಾದಿ ದಕ್ಷಿಣೆಗಳೊಂದಿಗೆ ಸಮಸ್ಥರನ್ನು ತೃಪ್ತಿಗೊಳಿಸಿ, ಶ್ರೀಮಹಾಗುರುವಿನ ಶ್ರೀ ಪಾದದ ಕಾರುಣ್ಯಸ್ಥಳದಲ್ಲಿ ನಿಂತು ಎನಗಿಂತ ಕಿರಿಯರಿಲ್ಲ ಎಂಬ ಸದ್ಭಾವದಿಂದ ತಲೆಬಾಗಿಸಿ ಬದ್ಧಾಂಜಲಿ ಪುಟನಾಗಿ ನಿಂತನು. ರಾಜೇಂದ್ರ ಶತಾನಂದನು ಧನ್ಯ ಧನ್ಯಾತ್ಮನು.

ತ್ರೇತಾಯುಗಾಂತ್ಯ ದ್ವಾಪರ ಯುಗಾರಂಭ ಕಾಲದಲ್ಲಿ ಲಂಕೇಶನಾದ ವಿಭೀಷಣನು ಶ್ರೀ ರೇಣುಕ ಗುರು ಸಾರ್ವಭೌಮರನ್ನು ಪ್ರಾರ್ಥಿಸಿ, ತನ್ನಣ್ಣ ದಶಕಂಠ ರಾವಣಾಸುರನ ಸಂಕಲ್ಪದಂತೆ ಮೂರು ಕೋಟಿ ಶಿವ ಲಿಂಗಗಳನ್ನು ಲಂಕೆ

ಯಲ್ಲಿ ಸ್ಥಾಪಿಸುವ ನಿಮಿತ್ತ, ಮಹಾ ಗುರುವನ್ನು ತನ್ನ ಅರಮನೆಯೊಳಗೆ ಬಿಜಯಂಗೈಸಿಕೊಂಡು ಸತ್ಕರಿಸುತ್ತಾ, ಗುರುದೇವನನ್ನು ರಮಣೀಯವಾದ ಭದ್ರಾಸನದ ಮೇಲೆ ಕುಳ್ಳಿರಿಸಿ, ಭಕ್ತಿ ಪೂರ್ವಕ ರಾಜ ಗೌರವಗಳೊಂದಿಗೆ ಶ್ರೀ ಮಹಾ ಗುರುವಿನ ಶ್ರೀಪಾದಪೂಜೆಯನ್ನು ವೈಭವದಿಂದ ನೆರವೇರಿಸಿರುವನು. ಇದನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತೃಗಳಾದ, ಶ್ರೀ ಶಿವಯೋಗಿ ಶಿವಾಚಾರ್ಯರು ವರ್ಣಿಸುತ್ತಾ.

॥ ಭದ್ರಾಸನೇ ಮಹಾರಮ್ಯೇ । ನಿವೇಶ್ಯ ಗಣನಾಯಕಂ ॥

ಎಂಬುದಾಗಿ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಉಲ್ಲೇಖಿಸಿರುತ್ತಾರೆ. ವಿಭೀಷಣ ಚಕ್ರವರ್ತಿ ಜಗದಾಚಾರ್ಯವರ್ಯರಿಗೆ ನೀಡಿದ ಆಸನ ಭದ್ರಾಸನ ಅಥವಾ ಭದ್ರ ಪೀಠವೆಂದೇ ಶ್ರೀಮದ್ರಾಮಾಯಣ ಮಹಾ ಕಾವ್ಯದಲ್ಲೂ ಉಲ್ಲೇಖವಿರುವುದು. ವೇದಕಾಲಕ್ಕೂ ಪೂರ್ವದಲ್ಲೇ ರಾಜೇಂದ್ರ ಶತಾನಂದ ಮಹಾರಾಜನು, ಆದಿ ಶ್ರೀ ಜಗದ್ಗುರು ರೇಣುಕಾಚಾರ್ಯರಿಗೆ ಭಕ್ತಿಯಿಂದ ಅರ್ಪಿಸಿದ ಅಪೂರ್ವ ಸಿಂಹಾಸನದ ಕೊಡುಗೆ ಆಧರ್ಶವಾದುದಾಗಿದೆ. ಶಿವನ ಮುಖದಿಂದ ಭದ್ರಾಸನದ ವೈಭವೋಪೇತವಾದ ವರ್ಣನೆಯನ್ನು ಕೇಳಿದ ಶ್ರೀ ಗಿರಿಜೆ ಆಶ್ಚರ್ಯಚಕಿತ ಮಾನಸಿಕಳಾಗಿ, ಪರಮವೀರ ಸಿಂಹಾಸನ ನಾಮಾಂಕಿತ ಶ್ರೀಭದ್ರಾಸನವನ್ನು ದೇವಿಯು ಮುಕ್ತ ಕಂಠದಿಂದ ವರ್ಣಿಸುತ್ತಾ–

॥ ಮಂತ್ರ ಗರ್ಭಿತಂ ಸುರೇಂದ್ರಾಣಾಮಾಶ್ಚರ್ಯಂ ಇತಿಹಾಸಂ ಕಥಯ ॥

ಎಂದುಸುರಿದಳು ಭದ್ರಾಸನವೆಂಬ ಕನಕಮಯ ಶ್ರೀ ಮದ್ರಂಭಾಪುರೀ ವೀರ ಸಿಂಹಾಸನವು ನಿಗಮಾಗಮಗಳಲ್ಲಿ ಸ್ತುತ್ಯವಾದ ಮಹಾ ಗುರುಪೀಠವೆಂದು, ಶ್ರೀ ಆದಿ ಜಗದ್ಗುರು ರೇವಣಸಿದ್ಧರು, ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ವಿವರಿಸಿದಾಗ ಶ್ರೀ ಆದಿ ಶಂಕರರು ಎಲ್ಲವನ್ನು ಸಾವಧಾನ ಚಿತ್ತದಿಂದ 'ಮಹಾ ಗುರುವಿನ ಶ್ರೀ ಮುಖದಿಂದ ಶ್ರವಣ ಮಾಡಿ ಆನಂದಿಸಿದರು.



## ಅಧ್ಯಾಯ 19

### ಪ್ರಥಮ ಭಾಗ

ಶಿವಾದ್ವೈತ ಸಿದ್ಧಾಂತವನ್ನೊಳಗೊಂಡ ವಿಶ್ವಧರ್ಮವೆನಿಸಿದ ಪರಮ ವೀರ ಶೈವ ಲಿಂಗಾಂಗಿ ಧರ್ಮವು ಅನಾದಿ ಕಾಲದಿಂದ, ವಿಷ್ಣು ಬ್ರಹ್ಮೇಂದ್ರಾದಿ ಅಖಿಲ ದೇವತೆಗಳೂ, ಅಸಂಖ್ಯಾತ ದಾನವ ಮಾನವಾದಿಗಳೂ, ಋಷಿ ಮಹರ್ಷಿಗಳಿಂದ, ಪರಮಾದರದಿಂದ ಆಚರಿಸಲ್ಪಟ್ಟು ಅವರ ಅನುಭವಕ್ಕೆ ವೇದ್ಯವೂ ಸ್ತುತ್ಯವೂ, ಅತ್ಯ ಪರಮೋತ್ಕೃಷ್ಟ ಮತವಿದೆಂದು ಕೈಲಾಸನಾಥ ಪರಮೇಶ್ವರನು, ಜಗಜ್ಜನನಿ ಶ್ರೀ ಗಿರಿಜೆಗೆ ಪಾರಮೇಶ್ವರಾಗಮದಲ್ಲಿ ಭಾನುಕೋಟಿ ಪ್ರಕಾಶ ಮಾನವಾಗಿ ಶೃತಪಡಿ ಸುತ್ತಾ, ದೇವಿ !

॥ ನ ಹಿ ವೀರಶೈವ ಸದೃಶ ಮತಮಸ್ತಿ ಜಗತ್ರಯೇ ।
ಸರ್ವಭೋಗ ಪ್ರದಂ ಪುಣ್ಯಂ । ಶಿವಸಾಯುಜ್ಯ ದಾಯಕಂ ॥

ಎಂದು ಮುಕ್ತ ಕಂಠದಿಂದ ಪ್ರಶಂಸಿಸಿರುವನು. ಶ್ರೀ ವೇ ದ ವ್ಯಾ ಸಾ ಚಾ ರ್ಯ ರು ತಮ್ಮಿಂದ ರಚಿತವಾಗಿರುವ ಪದ್ಮಪುರಾಣ ಮತ್ತು ಲಿಂಗಪುರಾಣ ಗಳಲ್ಲಿ –

॥ ವಿಷ್ಣುಬ್ರಹ್ಮಾದಯೋ ದೇವಾ । ಮುನಯೋ ಗೌತಮಾದಯಃ ।
ಧಾರಯಂತಿ ಸದಾಲಿಂಗಮು । ತ್ತಮಾಂಗೇ ವಿಶೇಷತಃ ॥

ಮಹಾಸ್ಕಾಂದ ಪುರಾಣದಲ್ಲಿ ಶ್ರೀ ಬಾದರಾಯಣರು (ವ್ಯಾಸರು)
॥ ಲಕ್ಷ್ಮೀ ಸರಸ್ವತೀ ಮುಖ್ಯಾಃ । ದೇವ್ಯೋಮಲ್ಲಿಂಗ ಮಾದರಾತ್ ।
ಧೃತ್ವಾ ನಿಜಾಂಗೇ ತಲ್ಲೀನ । ಭಾವಾಜಗ್ಮುಃ ಪರಂ ಸುಖಂ ॥

ಎಂದು ಶ್ರೀ ವೇದವ್ಯಾಸಾಚಾರ್ಯರು, ಸರ್ವರಿಗೂ ಮನವರಿಕೆಯಾಗುವಂತೆ ಘೋಷಿಸಿರುವರು. ಇಷ್ಟೇ ಅಲ್ಲ, ಮೇಲುಕ್ತವಾದ ಪಾವನವೆನಿಸಿದ ಸತ್ಯಾಂಶವನ್ನು ಜಗತ್ತರಿಯುವಂತೆ ಶಿವನು ಸುಪ್ರಭೇದಾಗಮದಲ್ಲಿ, ತನ್ನ ಅ ರ್ಧಾಂ ಗಿ ಗೆ ಅರುಹುತ್ತಾ–

॥ ತಸ್ಮಾ ತಸ್ಮಾಚ್ಚ ಗಿರಿಜೆ । ಮತ್ಪಂಚಾನನ ಸಮುದ್ಭವಾಃ ।
ಮದಾದಿ ಸರ್ವಲೋಕಾನಾಂ । ಜಗದ್ಗುರುವರೋತ್ತಮಾಃ ॥

ನನ್ನ ಶ್ರೀಮತ್ಕೈಲಾಸ ಪ್ರವಿರಾಜಮಾನ ರಜತಗಿರಿಯನ್ನು ಮೊದಲುಮಾಡಿ, " ಸರ್ವಲೋಕಾನಾಂ " ಸಮಸ್ತ ಲೋಕಂಗಳಲ್ಲಿರುವ ಅಖಿಲ ದೇವ, ದಾನವ,

ಮಾನವರಿಗೆಲ್ಲಾ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಗುರುಸಾರ್ವಭೌಮರೆನಿಸಿರುವರು ಎಂದು ಮಹಾದೇವನು ತನ್ನ ಅಧಿಕೃತವಾದ ದೇವವಾಣಿಯಿಂದ ವಿಶ್ವವರಿಯುವಂತೆ ಸಾರಿರುವನು,

॥ ಅಗಸ್ತ್ಯೋ ಜೈಮಿನಿಶ್ಚೈವ । ವಿಶ್ವಾಮಿತ್ರೋಥಕಾಶ್ಯಪಃ ।
ಭರದ್ವಾಜೋಂಗಿರಾ । ಅತ್ರಿರ್ವಶಿಷ್ಠೋರೋಮ ಹರ್ಷಣಃ ॥
ಏತೇಸರ್ವೇ ಮಹಾಭಾಗಾ । ಅತಿವರ್ಣಾಶ್ರಮೇರತಾಃ ।
ವೀರಶೈವಾ ಸಮಾಖ್ಯಾತಾ । ಜೀವನ್ಮುಕ್ತಾಸ ನಿಶ್ಚಯಃ ॥

(ಇತಿ ಕ್ರಿಯಾಸಾರ ಉಪದೇಶ-೧)

ಮೇಲ್ಕಂಡ ಒಂಭತ್ತು ಸುಪ್ರಸಿದ್ಧರಾದ ಆದಿ ಋಷಿಮಹರ್ಷಿಗಳಿಗೆ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳು ಪ್ರಮುಖರಿರುವರು.

॥ ತಥಾಗಸ್ತ್ಯಾದಿ ದೂರ್ವಾಸಾಃ ।
ಮುನಯೋ ನಂದಿಕೇಶ್ವರಾಃ ॥
ಮಹಾಕಾಲೋದಧೀಚಶ್ಚ ।
ಕನಾದಃ ಪಾಣಿನಿಸ್ಥತಾ ॥

ಕನಾದ, ಪತಂಜಲಿ, ವ್ಯಾಘ್ರಪಾದ, ಪಾಣಿನಿ, ಧೌಮ್ಯ, ದಧೀಚಿ, ಗೌತಮ, ಧೂರ್ವಾಸ, ಮೃಕಂಡು, ಉಪಮನ್ಯು, ಮೊದಲಾದ ಭೂರುದ್ರರೂ ಮತ್ತು ವಸಿಷ್ಠ ವಾಲ್ಮೀಕಿ, ವ್ಯಾಸ, ಶೌನಕ, ಗರ್ಗ, ಜಮದಗ್ನಿ, ಪರಾಶರ, ಬೋಧಾಯನ, ಭಾರದ್ವಾಜ, ಕಶ್ಯಪ, ಮರೀಚಿ, ವಿಶ್ವಾಮಿತ್ರ, ವಿಭಾಂಡಕ, ಯಜ್ಞವಲ್ಕ, ಮೊದಲಾದ ಭೂಸುರರು, ಶ್ರೀ ಮದಾದಿ ಜಗದ್ಗುರು ರೇಣುಕಾದಿ ಪಂಚಾಚಾರ್ಯರ ಪ್ರಭಾವಕ್ಕೊಳಗಾಗಿ, ನಿತ್ಯ ಲಿಂಗಾರಾಧಕರಾಗಿ ಅನವರತ ॥ **ಮಸ್ತಕೇ ಲಿಂಗಧಾರಣಂ** ॥ ಲಿಂಗಾರ್ಚನೆಯಾದ ನಂತರ ತಮ್ಮ ಶಿವಲಿಂಗವನ್ನು ಸದಾ ಮಸ್ತಕದಲ್ಲಿನ, ಜಟಾ ಭಾರದಲ್ಲಿ ಧರಿಸಿ ಸ್ಮರಿಸುತ್ತಲಿದ್ದರು. ಶ್ರೀ ನಿಡುಮಾಮಿಡಿ ಪರಮ ಪೂಜ್ಯ ಶ್ರೀ ಜ. ಚ. ನಿ. ಸನ್ನಿಧಿಯವರು, ವೀರಾಗಮದ ಸಹಸ್ರಾರು ಶ್ಲೋಕಗಳುಳ್ಳ ಒಂದು ಭಾಗವನ್ನು ಪರಿಷ್ಕರಿಸಿ, ಅಧ್ಯಯನ ಮಾಡಿ, ಪುರಾತನರೆಂದರೆ, ಜಗತ್ತಿಗೆ ಆದಿಗಾದಿಯರಾದ ಶಿವಲಿಂಗೋದ್ಭವ ಮಂತ್ರಮಯ ದಿವ್ಯ ಮೂರ್ತಿಗಳೆನಿಸಿದ, ಮಹಾಚಾರ್ಯವರೇಣ್ಯರಾದ ಶ್ರೀ ರೇಣುಕಾದಿ ಪಂಚಾಚಾರ್ಯರೆಂಬುದನ್ನು, ॥ ಶ್ರೀ ಜ॥ ಆದಿ ರೇಣುಕರು ॥ ಎಂಬ ತಮ್ಮ ಬೃಹದ್ಗ್ರಂಥದಲ್ಲಿ ಗಂಭೀರವಾಗಿ ಪ್ರತಿಪಾದಿಸಿರುವರು.

## ದ್ವಿತೀಯ ಭಾಗ

॥ ಶಂಭೋ ಮೂರ್ತಿಃ ಶ್ಚರತಿ ಭುವನೇ। ಶ್ರೀಜ॥ ರೇಣುಕಾಚಾರ್ಯ ರೂಪ॥

ಸಾಕ್ಷಾತ್ ಶ್ರೀ ಕೈಲಾಸನಾಥನೆನಿಸಿ ಅಂಖಡವಾಗಿ ಸ್ತುತ್ಯರಾಧ ಆದಿ ಶ್ರೀ ಜಗದ್ಗುರು ರೇವಣಸಿದ್ಧ ಮಹಾಶಿವಯೋಗಿ ಶಿವಾಚಾರ್ಯರು, ಆದಿ ಶ್ರೀ ಶೃಂಗೇರಿ ಶಂಕರಾಚಾರ್ಯರ ಪ್ರಾರ್ಥನಾನುಸಾರ–

**ಶ್ರೀ ರತ್ನಭರ್ಗ ಗಣಪತಿಯನ್ನೂ ಮತ್ತು ಶ್ರೀಚಂದ್ರಮೌಳೀಶ್ವರ ಲಿಂಗವನ್ನು ಸುಪ್ರಸನ್ನ ಭಾವದಿಂದ ಅನುಗ್ರಹಿಸಿ ಆಶೀರ್ವದಿಸಿದರು.**

॥ ಸಮಸ್ತ ಲೋಕ ಸಂದಾಹ । ತಾಪತ್ರಯ ಮಹಾನಲಃ ।
ತೃಪ್ತದಾಂಬು ಕಣಾಸ್ವಾದಾ । ದುಪ ಶಾಮ್ಯತಿ ದೇಹಿನಾಂ ॥

॥ ಸಂಸಾರ ಸರ್ಪ ದಷ್ಟಾನಾಂ । ಮೂರ್ಛಿತಾನಾಂ ಶರೀರಿಣಾಂ ।
ಕಟಾಕ್ಷಸ್ತವ ಕಲ್ಯಾಣಾಂ । ಸಮುಜ್ಜೀವನ ಭೇಷಜಂ ॥

॥ ರೇವಣಸಿದ್ಧೋಽಪಿ ಮಹಾ ತೇಜಾಃ । ಸಂಚರನ್ ಕ್ಷಿತಿ ಮಂಡಲೇ ।
ಪ್ರಚ್ಛನ್ನಶ್ಚ ಪ್ರಕಾಶಶ್ಚ । ಪರಮಾದ್ವೈತ ಭಾವತಃ ॥

॥ ವಿಜಿತ್ಯ ಸ್ವಪ್ರಭಾವೇನ । ಸ್ಥಾಪಯಿತ್ವಾ ಶಿವಾಗಮಾನ್ ।
ಆಜಗಾಮ ನಿಜಾವಾಸಂ । ಕುಲ್ಯ ಪಾಕಾಭಿದಂ ಸ್ಥಲಂ ॥

( ಸಿದ್ಧಾಂತ ಶಿಖಾಮಣಿ )

ಅನಾದಿಕಾಲದಿಂದ ಸಂಸಿದ್ಧವಾಗಿ ರಾರಾಜಿಸುವ, ಶ್ರೀಮದ್ರಂಭಾಪುರೀ ವೀರ ಸಿಂಹಾಸನದ ಪಾವನ ಚರಿತ್ರೆಯನ್ನು ಶ್ರೀ ಆದಿ ಜಗದ್ಗುರು ರೇವಣಸಿದ್ಧರ ಅಮೃತ ವಾಣಿಯಿಂದ, ನಿಷ್ಕಾಭಕ್ತಿಯಿಂದ ಶ್ರವಣ ಮಾಡಿದ, ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರು, ಅತುಲಾನಂದ ಭರಿತರಾಗಿ ಶ್ರೀ ಶತಾನಂದ ಮಹಾ ರಾಜ ನಿಂದ ಶ್ರೀ ಗುರು ಭಕ್ತಿ ಕಾಣಿಕೆಯಾಗಿ ಅರ್ಪಿಸಿದ ಬಂಗಾರದ ಭದ್ರಾಸನದ ಮಹತ್ವ ವನ್ನು ಸಹ ಕೇಳಿ ಭಕ್ತಿಭಾವದಿಂದ ಮೆಚ್ಚಿ ತಲೆಬಾಗಿ ಸ್ತುತಿಸಿದರು. ಸುಜ್ಞಾನಿಗಳಾದ ಆದಿ ಶ್ರೀ ಶಂಕರಾಚಾರ್ಯರು, ಅವ್ಯವಸ್ಥಿತ ಕೆಲವು ಸಂಕುಚಿತ ಪಂಡಿತರಂತಲ್ಲದ ಪೂರ್ಣ ವ್ಯವಸ್ಥಿತ ಧರ್ಮದ್ರಷ್ಟಾರರಾದುದರಿಂದ ಸತ್ಯಕ್ಕೆ ತಲೆಬಾಗಿದರು. ಶ್ರೀಮದಾಚಾರ್ಯ ಶಂಕರರ ಶುದ್ಧ ಅಂತರಂಗದ ಪರಿಪಕ್ವವೆತ್ತ, ಕಾಮ ಸಂಕಲ್ಪ ವುಳ್ಳ ಕೋಪುವಾರು ಕಳಂಕ ಭರಿತ ಚಿತ್ತದಿಂದ ಮೋಹಪರವಶರಾದ ಕೆಲವ

ಪಂಡಿತರು ಅಪಲಪಿಸುವ ಅವಿಚಾರ ಲಹರಿಯತ್ತಾ ಬ್ರಹ್ಮವಿತ್ತುಗಳಿಗೆ ಬೃಹದ್ ಬ್ರಹ್ಮ ವಿಷಯ ಬ್ರಹ್ಮಾನಂದವೆನಿಸುವುದು. ಕಾರಣ ಅವರು ಸರ್ವದಾ ಬ್ರಾಹ್ಮೀ ಸ್ಥಿಯಲ್ಲಿ ರಂಜಿತರಾದುದರಿಂದ, ಇವರು ವೀರಶೈವ ಮತದ ಗುರುಗಳು. ನಾವು ಬ್ರಾಹ್ಮಣ ಮತದ ಗುರುಗಳೆಂಬ ಸಂಕುಚಿತ ಭಾವಕ್ಕೆಡೆಯಿಲ್ಲ. "ಗುರು ಸಾಕ್ಷಾತ್ಪರ ಬ್ರಹ್ಮ" ಎಂಬ ಉನ್ನತ ಭಾವ ಬಲಿತು ಪ್ರಪ್ಪುಲ್ಲಿತವಾಗಿರ್ಪುದು. ಆದ್ದರಿಂದ ಆದಿ ಶ್ರೀ ಶಂಕರಾಚಾರ್ಯರು ಆದಿ ಶ್ರೀ ಜಗದ್ಗುರು ರೇವಣಸಿದ್ಧರನ್ನು ಪ್ರಥಮ ಭಾರಿಗೆ, ಶ್ರೀರಂಭಾಪುರೀ ವೀರಸಿಂಹಾಸನದ ಭದ್ರಪೀಠದಲ್ಲಿ ಮಂಡಿಸಿರುವುದನ್ನು ಕಂಡ ತಕ್ಷಣ, ತನ್ನನ್ನು ತಾನು ಮರೆತು ಮಹಾಚಾರ್ಯರ ದಿವ್ಯ ದರ್ಶನದಿಂದ ತಾವು ಧನ್ಯರಾದುದನ್ನು ಸ್ಮರಿಸಿದರು.

ಶ್ರೀ ಆದಿ ಶಂಕರಾಚಾರ್ಯರ ವಿನೀತ ಭಾವವನ್ನು ಕಂಡು ಹರ್ಷಿತರಾದ ಶ್ರೀ ಆದಿ ಜ॥ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು, ಶಿವಶಕ್ತಿ ಸಂಪುಟದಿಂದ ಸ್ವಯಮೇ ಅನಾದಿ ಸಂಸಿದ್ಧವಾಗಿ ಹಾಗೂ ಅವಿನಾಭಾವ ಸಂಬಂಧದಿಂದ ನಿಕಟ ದಿವ್ಯ ಸಹಜ ಸಂಪರ್ಕದಿಂದ ಸದಾ ಪರಂಜ್ಯೋತ್ಯಾತ್ಮಿಕವಾಗಿ ರಂಜಿಸುವ ಸ್ಫುರಣಮಯ ಮಹಾ ತತ್ವ, ಲಿಂಗವೆನಿಸಿ ರಾರಾಜಿತವಾಗಿರುವುದು ಎಂಬ ಮಹೋನ್ನತವಾದ ಅಂಶ ವನ್ನು ಶಂಕರರಿಗೆ ಬೋಧಿಸಿದರು. ಶ್ರೀ ಶಂಕರಾಚಾರ್ಯರು ತಮ್ಮ ಮುಂಡಕೋಪ ನಿಷತ್ತಿನ ವ್ಯಾಖ್ಯಾನದಲ್ಲಿ ಲಿಂಗ ವೆಂದರೆ, ಸನ್ಯಾಸ ವೆಂದು ಅರ್ಥೈಸಿರುವುದು ಇಲ್ಲಿ ಸ್ಮರಣೀಯವಿರುತ್ತೆ. ಮಹಾಗುರು ಶ್ರೀ ಆದಿ ರೇವಣಸಿದ್ಧರು ತಮ್ಮ ಲಿಂಗಶಬ್ದದ ವ್ಯಾಖ್ಯಾನವನ್ನು ಶಾಂತದಿಂದ ಮುಂದುವರಿಸುತ್ತಾ- ಆತ್ಮ ಪ್ರಕಾಶಕ್ಕೆ, ವಿಶ್ವದ ವಿಕಾಷಕ್ಕೆ ಕಾರಿಣೀಭೂತವಾದುದು ಮಹಾಲಿಂಗ.

॥ ಪರಂ ಬ್ರಹ್ಮಾಭಿದಂ ಲಿಂಗಂ । ಪಶುಪಾಶ ವಿಮೋಚಕಂ ।
ಯೋ ಶಿರಸಿಧಾರಯಂತಿ ಸದ್ಭಕ್ತ್ಯಾ । ಸ ಪಾಶುಪತ ಉಚ್ಯತೇ ॥
ಯಸ್ತು ಲಿಂಗಾಂಗ ಸಂಯುಕ್ತಾ । ಸ ಏವಾತ್ಮಾ ಶ್ರಮೊಭವೇತ್ ॥

॥ ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ । ವಾಸವಾದ್ಯಾಶ್ಚ ಲೋಕಪಾಃ ।
ಮುನಯಃ ಸಿದ್ಧ ಗಂಧರ್ವಾ । ದಾನವಾ ಮಾನವಾಸ್ಥತಾಃ ॥

॥ ಸರ್ವೇ ಸುಜ್ಞಾನಯೋಗೇನ । ಸರ್ವಕಾರಣ ಕಾರಣಂ ।
ಪಶ್ಯಂತಿ ಹೃದಯೇಲಿಂಗಂ । ಪರಮಾನಂದ ಲಕ್ಷಣಂ ॥

॥ ಪರಂ ಬ್ರಹ್ಮ ಮಹಾಲಿಂಗಂ । ಪ್ರಪಂಚಾತೀತಮವ್ಯಯಂ ।
ತದೇವ ಸರ್ವಭೂತಾನಾ । ಮಂತಸ್ತ್ರಿಸ್ಥಾನ ಗೋಚರಂ ॥

॥ ಮೂಲಾಧಾರೇಚ ಹೃದಯೇ । ಭ್ರೂಮಧ್ಯೇ ಸರ್ವದೇಹಿನಾಂ ।
ಜ್ಯೋತಿರ್ಲಿಂಗಂ ಸದಾಭಾತಿ । ಯದ್ ಬ್ರಹ್ಮೇತ್ಯಾಹುರಾಗಮಾಃ ॥

ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು–

॥ ಈಶ್ವರಃ ಸರ್ವಭೂತಾನಾಂ । ಹೃದ್ದೇಶೇಯರ್ಜುನತಿಷ್ಠತಿ ।
ಭ್ರಾಮಯರ್ನ್ಸ ಸರ್ವಭೂತಾನಿ । ಯಂತ್ರಾರೂಢಾನಿ ಮಾಯಯಾ ॥

(ಗೀ. ಅ. 18 ಶ್ಲೋ. 61)

ಅಂದರೆ, ನನ್ನ ಭಕ್ತರ ಪವಿತ್ರವಾದ ಹೃದಯ ಕಮಲದ ಮಧ್ಯೆ ನಾನು ತಿಷ್ಠತಿ ಕುಳಿತಿದ್ದೇನೆ ಎಂದರುಹಿರುವನು. ಕುಳಿತಿರುವುದು, ನಿಂತಿರುವುದು ಎಂಬ ಶಬ್ದಗಳು ವ್ಯಕ್ತಿಗತವಾದ ಶಬ್ದಗಳು. ಪರಬ್ರಹ್ಮವು ವ್ಯಕ್ತಿಯಲ್ಲವೆಂಬುದು ಸರಿಯಷ್ಟೆ. ತನಗ ನ್ಯವಾದೊಬ್ಬ ಈಶ್ವರನು ಸರ್ವರ ಹೃನ್ಮಂದಿರದಲ್ಲಿ ತಿಷ್ಠತಿ ಮಂಡಿಸಿದ್ದಾನೆಂದು ಶ್ರೀ ಕೃಷ್ಣ ಹೇಳಿದ ಹಾಗಾಯಿತು. ಶ್ರೀ ನಾರದರ ಪ್ರಶ್ನೆಯೊಂದನ್ನು ಉತ್ತರಿಸುತ್ತಾ ಶ್ರೀ ಮಹಾವಿಷ್ಣು ಶ್ರೀ ವೈಕುಂಟದಲ್ಲಿ– "ನಾಹಂ ವಸಾಮಿ ವೈಕುಂಟೇ । ನಯೋಗಿ ಹೃದ ಯೇರರೌ । ಮದ್ಭಕ್ತಾಯತ್ರಗಾಯಂತಿ ತತ್ರ "ತಿಷ್ಠಾಮಿ" ನಾರದ ॥ ನನ್ನ ಭಕ್ತನು ಎಲ್ಲಿ ಆನಂದ ಪರವಶನಾಗಿ ಹಾಡುವನೋ, ಅಲ್ಲಿ ನಾನು ಕುಳಿತು ಕೇಳುವೆನೆಂದರು ಹಿರುವನು, ಆದರೆ ಶ್ರೀ ಭಗವತ್ಪಾದ ರೇಣುಕಾಚಾರ್ಯರು ಶ್ರೀ ಸಿದ್ಧಾಂತ ಶಿಖಾ ಮಣಿಯಲ್ಲಿ-ಮೂಲಾಧಾರ ಹೃದಯ ಮತ್ತು ಭ್ರೂಮಧ್ಯೆ ಜ್ಯೋತಿರ್ಲಿಂಗಂ ಸದಾ ಭಾತಿ, ಪರಶಿವ ಬ್ರಹ್ಮವು ಸದಾ ಪರಂಜ್ಯೋತಿ ರೂಪದಲ್ಲಿ ಪ್ರಕಾಶಮಾನವಾಗಿ ಬೆಳಗು ತ್ತಿರುವುದೆಂದು ಅರುಹಿರುವುದು ಗಮನೀಯುವಿರುತ್ತೆ. ಮುಂದುವರಿದು ಶ್ರೀ ಮದಾಚಾರ್ಯವರೇಣ್ಯರು ಆದಿ ಅಗಸ್ತ್ಯ ಮುನಿಚಂದ್ರನನ್ನುದ್ದೇಶಿಸಿ –

॥ ಹೃದಯೇ ಆತ್ಮಲಿಂಗಂ । ಸ್ಫುರತಿ ಜ್ಯೋತಿವತ್ ॥

ಆದ್ದರಿಂದ ಶಂಕರಾ ಲಿಂಗ ಶಬ್ದವು ಪರಶಿವ ಬ್ರಹ್ಮಪರವಾದುದು.

1) **॥ ಲಿಂಗಂತು ಶಿವಯೋರ್ದೇಹಃ ॥** ಶಿವನ ದೇಹ ಮಂತ್ರಮಯವೆನಿಸಿ, ಚಿಚ್ಚೈತನ್ಯ ಚಿನ್ಮಯವೆನಿಸಿದೆ. ಇದರಿಂದಾಗಿ ಉಪನಿಷದ್ವಾಣಿ **॥ ಚೈತನ್ಯಂ ಬ್ರಹ್ಮ ॥** ಎಂದು ಸಾರುತ್ತಲಿದೆ. **ಲಿಂಗವೆಂದರೆ** ಅರಿವು ಶಿವಜ್ಞಾನಮಯ ವೆಂದರ್ಥ. ಶೃತಿಯು ಇದನ್ನೇ **॥ ಪ್ರಜ್ಞಾನಂಬ್ರಹ್ಮ ॥** ಎಂಬ ಸ್ಪಷ್ಟೋಕ್ತಿ ಗಳಿಂದ ಶೃತಪಡಿಸಿದೆ. ಮತ್ತೂ **ಲಿಂಗವೆಂದರೆ** ಆನಂದಮಯವಾದುದು ನಿತ್ಯಾನಂದ, ಬ್ರಹ್ಮಾನಂದ, ನಿಜಾನಂದ, ಶಿವಾನಂದ ಆತ್ಮಾನಂದಕರವಾದುದು ಲಿಂಗರೂಪಿ ಪರಶಿವಬ್ರಹ್ಮ ಇದರಿಂದಾಗಿ ॥ ಆನಂದಂ ಬ್ರಹ್ಮೇತಿ ವಿಜಾನಾತ್॥ ಎಂದು ಉಪನಿಷದ್ವಾಣಿ ಘೋಷಿಸುತ್ತಲಿದೆ.

2) ॥ ಲಿಂಗಂ ಚಿದಾತ್ಮಕಂ ಬ್ರಹ್ಮ । ತಚ್ಛಕ್ತಿಃ ಪ್ರಾಣರೂಪಿಣೀ॥ ಎಂದಿದೆ ಶಿವಾಗಮ. ಸರ್ವ ಭೂತಗಳ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಲಿಂಗ ಆಗರವೆನಿಸಿದೆ, ॥ ಸ್ಥೀಯತೇ ಲೀಯತೇ ಯತ್ರ । ಜಗದ್ದೇತಚ್ಚರಾಚರಂ ॥ ಪುನಃ ಪುನಃ ಸಮುತ್ಪತ್ತಿಂ । ತಲ್ಲಿಂಗಂ ಬ್ರಹ್ಮ ಶಾಶ್ವತಂ ॥ ಮಹಾಲಿಂಗದ ಮೂಲಸ್ಥಾನದಲ್ಲಿ–

॥ ಮೂಲೇ ಬ್ರಹ್ಮಾವಸತಿ ॥ ಮಧ್ಯಭಾಗೇಚ ಭಗವಾನ್ ವಿಷ್ಣುಃ।
ಅಗ್ರೇ ಶಂಭುಃ ಪಶುಪತಿಃ । ತಸ್ಮಾಲಿಂಗಂ ಪ್ರಪೂಜಯೇತ್ಸದಾ ॥

ಆದ್ದರಿಂದ ಅನಾದಿ ಕಾಲದಿಂದ ಮನು ಮುನಿ ಮಾಂಧಾತಾದಿ ಅನಂತ ಋಷಿ ಮಹರ್ಷಿಗಳೂ, ರಾಜರೂ, ಶ್ರೀ ಮಹಾವಿಷ್ಣು ಬ್ರಹ್ಮೇಂದ್ರಾದಿಗಳೂ, ಶ್ರೀ ಲಕ್ಷ್ಮೀ ಸರಸ್ವತಿ ಜಗದಾಂಬಿಕೆಯರಾದ ತ್ರಿಶಕ್ತಿ ಸ್ವರೂಪಿಣಿಯರು ಸಮಸ್ತರೂ ನಿರಂತರ ಲಿಂಗಪೂಜಾವ್ರತಧಾರಿಗಳಾಗಿ ರಾರಾಜಿತರಾಗಿರುವರು.

॥ ಬ್ರಹ್ಮಮುರಾರಿ ಸುರಾರ್ಚಿತ ಲಿಂಗಂ । ನಿರ್ಮಲ ಭಸಿತ ಸು ಶೋಭಿತ ಲಿಂಗಂ ॥
ಜನ್ಮಜದುಃಖ ವಿನಾಶಕಲಿಂಗಂ । ತತ್ಪ್ರಣಮಾಮಿ ಸದಾಶಿವಲಿಂಗಂ ॥ ಎಂದು ಶ್ರೀ ಆದಿ ಜ॥ ರೇವಣಸಿದ್ಧರು ಲಿಂಗರೂಪ ಪರಶಿವ ತತ್ವವನ್ನು ಪ್ರಕಾಶಮಯವಾಗಿ ವಿಸ್ತರಿಸುತ್ತಾ–

॥ ಲಿಂಗಮೇವ ಪರಂಜ್ಯೋತಿ । ರ್ಭವತಿ ಬ್ರಹ್ಮಕೇವಲಂ ।
ತಸ್ಮಾ ತತ್ಪೂಜನಾದೇವ । ಸರ್ವಕರ್ಮ ಫಲೋದಯಃ ॥

ಎಂಬುದಾಗಿ ಪ್ರತಿಪಾದಿಸಿದ, ಸರ್ವಧರ್ಮಸಮನ್ವಯಾಚಾರ್ಯ ಜಗದಾದಿ ಪರಮ ಜಗದ್ಗುರು ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು ತಮ್ಮ ಘನ ವ್ಯಾಖ್ಯಾನವನ್ನು ಮುಂದುವರಿಸುತ್ತಾ–

॥ ಘನಲಿಂಗಂ ಮಹಾ ಭಾಸಂ। ಸಚ್ಚಿದಾನಂದ ಲಕ್ಷಣಂ ।
ನಿಷ್ಕಲಂನಿಷ್ಕ್ರಿಯಂ ಶಾಂತಂ ಸ್ವತಂತ್ರಂ ಸ್ವಪ್ರಕಾಶಿ ತತ್ ॥
॥ ಆಕಾಶಂ ಲಿಂಗಮಿತ್ಯಾಹುಃ । ಪೃಥ್ವೀ ತಸ್ಯ ಪೀಠಿಕಾ ।
ಆಲಯಂ ಸರ್ವ ಭೂತಾನಾಂ । ಲಯನಾಲ್ಲಿಂಗ ಮುಚ್ಯತೇ ॥
॥ ಲಿಂಗ ಮಧ್ಯೇ ಜಗತ್ಸರ್ವಂ । ತ್ರೈಲೋಕಂ ಸಚರಾಚರಂ ।

ಲಿಂಗ ಬಾಹ್ಯಾತ್ಪರಂ ನಾಸ್ತಿ । ತಸ್ಮೈ ಲಿಂಗಾಯ ತೇ ನಮಃ ॥
॥ ಲಿಂಗ ಮಧ್ಯೇ ಮಹಾ ದೇವಃ । ಸಾಕ್ಷಾ ನ್ನಿತ್ಯಂ ವ್ಯವಸ್ಥಿತಃ ।
ಅನುಗ್ರಹಾಯ ಲೋಕಾನಾಂ । ತಸ್ಮಾಲ್ಲಿಂಗಂ ಪ್ರಪೂಜಯೇತ್ ॥
॥ ಲಿಂಗ ಗರ್ಭೋದ್ಭವೋ ಮಂತ್ರೋ । ಮಂತ್ರ ಗರ್ಭೋದ್ಭವೇ ಶಿವಃ ।
ಲಿಂಗ ಮಂತ್ರ ದ್ವಯೋ ರೈಕ್ಯಂ । ವೀರಶೈವ ಮಿತಿ ಸ್ಮೃತಂ ॥

ನಿಗಮಾಗಮಗಳಲ್ಲಿ ಮಹಾ ಲಿಂಗದ ಚಿದ್ಘನ ತತ್ವವನ್ನು ವಿಸ್ತಾರವಾಗಿ ಪ್ರತಿಪಾದಿಸುತ್ತಾ-

॥ ಓಂಕಾರ ಏವ ಲಿಂಗಂ ಸ್ಯಾತ್ ॥ (ಯೋಗಜಾಗಮ)

॥ ತದೇವ ಲಿಂಗಂ ಪ್ರಥಮಂ । ಪ್ರಣವಂ ಸರ್ವ ಕಾಮದಂ ॥ (ಶಿವ ಪುರಾಣ)

॥ ಹೃದಯಾಬ್ಜೇ ಜ್ವಲಂತ । ಮಂಗುಷ್ಟ ಮಿತಂ ಪುರಾಣಂ ।
ಲಿಂಗ ಸ್ವರೂಪಂ ॥ (ಮಹಾಸ್ಕಾಂದ)

॥ ಲಿಂಗಂ ಬ್ರಹ್ಮ ಸನಾತನಂ ॥ (ಶಿವಾಗಮ)

॥ ಲಿಂಗಂ ಶೈವ ಮಿದಂ । ಸಾಕ್ಷಾಚ್ಛಿವ ಶಕ್ತ್ಯು ಭಯಾತ್ಮಕಂ ।
ಧ್ಯಾತವ್ಯಃ ಮರ್ಚನೀಯಂ । ಭುಕ್ತಿ ಮುಕ್ತಿಫಲೇಚ್ಛುನಾ ॥

ಅಥೋ ಯಜೇತ್ತದಾ ಲಿಂಗಂ । ಸರ್ವ ಕಾರಣ ಕಾರಣಂ ॥

ಎಂದು ಪ್ರಸನ್ನ ಭಾವದಿಂದ ಶಿವಶಕ್ತಿ ಸಂಪುಟದಿಂದ ರಾರಾಜಿಸುವ ಘನ ಲಿಂಗ ತತ್ವವನ್ನು ಹೃದಯಂಗಮವಾಗಿ ಶ್ರೀ ಮಹಾಚಾರ್ಯ ರೇವಣಸಿದ್ಧರು, ತತ್ವಜ್ಞಾನಿ ಶ್ರೀ ಆದಿ ಶಂಕರಾಚಾರ್ಯರಿಗೆ ಬೋಧಿಸುತ್ತಾ-

॥ ಸಮಸ್ತ ಜಗದಾತ್ಮಾಪಿ । ಶಂಕರಃ ಪರಮೇಶ್ವರಃ ।
ಭಕ್ತಾನಾಂ ಹೃದಯಾಂ ಭೋಜೇ । ವಿಶೇಷೇಣ ವಿರಾಜತೇ ॥
॥ ಸರ್ವೇ ಸುಜ್ಞಾನ ಯೋಗೇನ । ಸರ್ವ ಕಾರಣ ಕಾರಣಂ ।
ಪಶ್ಯಂತಿ ಹೃದಯೇಲಿಂಗಂ । ಪರಮಾನಂದ ಲಕ್ಷಣಂ ॥
ಸರ್ವೇ ವಿಭುದಾಃ ಲಿಂಗ ಮಾಶ್ರಿತಾಃ ಬದ್ಧಾಃ ।
ಸ್ವ ಸ್ವ ಪದೇ ಭಾಂತಿ । ಜಗತಂತ್ರಾಧಿ ಕಾರಿಣಃ ॥

॥ ಕಿಮನ್ಯೈಃ ಧರ್ಮ ಕಲಿಲೈಃ । ಕೀಕಸಾರ್ಥ ಪ್ರದಾಯಿಭಿಃ ।
॥ ಸಾಕ್ಷಾನ್ಮೋಕ್ಷ ಪ್ರದಃ ಶಂಭೋ । ಧರ್ಮೋ ಲಿಂಗಾರ್ಚನಾತ್ಮಕಃ ॥

ಈ ಪ್ರಕಾರವಾಗಿ ಮಹಾ ಲಿಂಗ ತತ್ವವನ್ನು ಮಹಾ ಗುರುವರೇಣ್ಯರಾದ ಶಿವಲಿಂಗೋದ್ಭವ ಜಗನ್ಮಂಗಳ ಮೂರ್ತಿ ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ಮನವರಿಕೆಯಾಗುವಂತೆ ಬೋಧಿಸಿದರು. ಎಲ್ಲವನ್ನು ಸಾವಧಾನ ಚಿತ್ತದಿಂದ, ನಮ್ರತೆಯಿಂದ ಶ್ರವಣ ಮಾಡಿದ ಶಂಕರರು ತಮ್ಮ ಅತುಲಾನಂದವನ್ನು ವ್ಯಕ್ತಪಡಿಸಿ, ತಮ್ಮ ಕೃತಜ್ಞತೆಯನ್ನು ಮಹಾಚಾರ್ಯರಲ್ಲಿ ಭಕ್ತಿಯಿಂದ ನಿವೇದಿಸಿಕೊಂಡರು.

ಲಿಂಗೋದ್ಭವ ಮಂಗಳ ಮೂರ್ತಿ ಆದಿ ಶ್ರೀ ಜಗದ್ಗುರು ರೇವಣಸಿದ್ಧ ಮಹಾ ಯೋಗಿ ಶಿವಾಚಾರ್ಯರು ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರ ಪ್ರಾರ್ಥನಾನುಸಾರ–

**ಶ್ರೀ ರತ್ನಗರ್ಭ ಗಣಪತಿಯನ್ನು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಸುಪ್ರಸನ್ನ ಭಾವದಿಂದ ಅನುಗ್ರಹಿಸಿ ಆಶೀರ್ವದಿಸಿದುದು.**

ಸ್ಫಟಿಕಮಯ, ಶಿವಲಿಂಗ ಒಂದು ನರ್ಮದಾನದಿಯಲ್ಲಿ ಶಂಕರರು ಸ್ನಾನ ಮಾಡುವಾಗ ಲಭಿಸಿತೆಂದು ತಂದು ಪೂಜಿಸುವುದಕ್ಕಿಂತ, ಗುರು ಹಸ್ತದಿಂದ ಅನುಗ್ರಹಿಸಿದ ಲಿಂಗಾರಾಧನೆಯಿಂದ ಸಾಯುಜ್ಯಮೋಕ್ಷ ಲಭಿಸುವುದೆಂದು ಶೃತವಿದೆ. ಶ್ರೀ ಆದಿ ಶಂಕರರಿಗೆ ಕೈಲಾಸನಾಥ ಶಿವನು ಶ್ರೀ ಚಂದ್ರ ಮೌಳೀಶ್ವರ ಲಿಂಗವನ್ನು ಅನುಗ್ರಹಿಸಿರುವರೆಂಬುದು ಗೌಣವಿರುತ್ತೆ. ಯಾಕೆಂದರೆ ಪರಮೋತ್ಕೃಷ್ಟವಾದ ಶಿವಲಿಂಗವನ್ನು ಶಿವನೇ ನೇರವಾಗಿ ಅನುಗ್ರಹಿಸುವುದಿಲ್ಲ. ತಾನು ಗುರು ರೂಪವನ್ನು ತಾಳಿ, ಪರಿಪಕ್ವ ಜೀವಿಯಾದ ಶಿಷ್ಯನಿಗೆ ಮೊದಲು, ಶಿವಶಕ್ತಿ ಸಂಪುಟದಿಂದ ರಾರಾಜಿಸುವ ಮಹಾಲಿಂಗ ತತ್ವದ ಹಿರಿಮೆಯನ್ನೂ, ಈಶ್ವರಾರಾಧನೆಯ ಮಹತ್ವವನ್ನು ಮನಂಬುಗುವಂತೆ ಬೋಧಿಸಿ, ತದನಂತರ ಗುರು ದೇವನು ತನ್ನ ಆತ್ಮೀಯ ಶಿಷ್ಯನನ್ನು ಎದುರಲ್ಲಿ ದರ್ಭಾಸನಾರೂಢನಾಗಿ ಕುಳ್ಳಿರಿಸಿ, ಅವನ ಮುಖ ಮಂಡಲವನ್ನು ಕರುಣಾರ್ದ್ರ ಹೃದಯದಿಂದ ಮೊಮ್ಮೆ ವೀಕ್ಷಿಸಿ, ತಮ್ಮ ಅಮೃತಮಯ ಹಸ್ತಮಸ್ತಕ ಸಂಯೋಗ ದೀಕ್ಷೆಯಿಂದ ಇಷ್ಟಲಿಂಗವನ್ನು ಕಟಾಕ್ಷಿಸುವವನು ಮಹಾ ಗುರು.

॥ ಅಪ್ರತ್ಯಕ್ಷೋ ಮಹಾ ದೇವಃ । ಸರ್ವೇಷಾ ಮಾತ್ಮ ಮಾಯಯಾ ।
ಪ್ರತ್ಯಕ್ಷೋ ಗುರು ರೂಪೇಣ । ವರ್ತ ತೇ ಭಕ್ತಿ ಸಿದ್ಧಯೇ ॥

( ಸಿ.ಶಿ.ಅ. 9 ಶ್ಲೋ. 53 )

ಕಣ್ಣಿಗೆ ಕಾಣದ ಶಿವನು, ಕರುಣೆಯಿಂದ ಶ್ರೀಗುರು ರೂಪದಲ್ಲಿ ಪ್ರತ್ಯಕ್ಷನಾಗು ವನು, ಮ ಹಾ ಗು ರು ವಿ ನ ಅಮೃತ ಹಸ್ತದಿಂದ ಮಂತ್ರ ಪೂರ್ವಕ ಶಿಷ್ಯನ ಕರಕಮಲಕ್ಕೆ ಪೂಜೆಗೊಳ್ಳಲು, ಆತ್ಮ ಲಿಂಗದ ಪ್ರತೀಕವಾದ ಶಿವಲಿಂಗವು ಅಣಿಯಾಗಿ ನಿಲ್ಲುವುದು. ಇದು ಶಿಷ್ಯನ ಭಾಗ್ಯೋದಯದ ನಿತ್ಯ ಸಂಪತ್ತೆನಿಸಿದೆ. ಶ್ರೀ ಗುರೂಕ್ತ ಮಂತ್ರ ಮಾರ್ಗೇಣ ಪ್ರತಿನಿತ್ಯ ತ್ರಿಸಂಧ್ಯಾಕಾಲಗಳಲ್ಲಿ ಅವ್ಯಭಿಚಾರಿಣೀ ಭಕ್ತಿಭಾವದಿಂ ಯಾವಜ್ಜೀವವೂ ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನ ಭಕ್ತಿಗಳಿಂದ ಹಾಗೂ ನವ ವಿಧ ಭಕ್ತಿ ಮಾರ್ಗಗಳನ್ನು ಬಿಡದೆ ವಿಧಿವತ್ತಾಗಿ, ಅನನ್ಯ ಭಕ್ತಿ ಭಾವದಿಂದ ಮತ್ತು ಆತ್ಮಾರ್ಪಣ ಭಕ್ತಿ ಭಾವದಿಂದ ಪೂಜಿಸಿ, ಸ್ತುತಿಸಿ ಶರಣಾಗತರಾದವರನ್ನು, ಮಹಾ ಗು ರು ದೇ ವ ನು ॥ ನಿಜ ಪದಂ ಕರ ಬಿಲ್ವ ಫಲಂ ॥ ಎ ೦ ಬ ೦ ತೆ, ಜೀವಂತನಾಗಿರುವ ಕಾಲದಲ್ಲೇ ಲಿ ೦ ಗಾ ೦ ಗ ಸಾಮರಸ್ಯ ನಿತ್ಯನಿರತಿಶಯಾ ನಂದ ಸುಖವನ್ನು ಹಾಗೂ ಅಭಯವನಿತ್ತು ರಕ್ಷಿಸುವನೆಂದು ಶ್ರೀ ಶಂಕರಾಚಾರ್ಯರಿಗೆ ವಿಪುಲವಾಗಿ ಬೋಧಿಸಿ, ಶುಭ ಮುಹೂರ್ತದಲ್ಲಿ ಶ್ರೀಮದ್ ತ್ರಿಭುವನ ಜಗದಾ ಚಾರ್ಯ ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು ಕೃಪೆಯಿಂದ ಆದಿ ಶ್ರೀ ಶಂಕರಾಚಾರ್ಯರ ಪವಿತ್ರವಾದ ಹಸ್ತದಲ್ಲಿ ಶ್ರೀ ರತ್ನಗರ್ಭ ಗಣಪತಿಯನ್ನು ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು, ಶಿವಪಂಚಾಕ್ಷರೀ ಮಹಾ ಮೂಲ ಮಂತ್ರೋಚ್ಚಾರಣೆ ಪೂರ್ವಕ ಇರಿಸಿ, ನಿತ್ಯ ಪೂಜಾ ವಿಧಾನವನ್ನು ಬೋಧಿಸಿ ಅನು ಗ್ರಹಿಸಿ ದೀಪ್ತಿವಂತನಾದ ಶಿಷ್ಯನನ್ನು ಹೃದಯಾರ ಹರಸಿ ಆಶೀರ್ವದಿಸಿದರು. ಚಿನ್ಮಯ ಸ್ವರೂಪಿಗಳಾದ ಶ್ರೀ ಆದಿ ಜಗದ್ಗುರು ರೇವಣಸಿದ್ಧರ ದಿವ್ಯಾನುಗ್ರಹಕ್ಕೆ ಸಾ ಕ್ಷಾ ತ್ತಾ ಗಿ ಆ ದಿ ಶ್ರೀ ಶ ೦ ಕ ರಾ ಚಾ ರ್ಯ ರು ಪಾತ್ರರಾದ್ದರಿಂದ, ಮಹಾ ಗುರುವಿನ ಕಾರುಣ್ಯ ಪ್ರಭಾವದಿಂದ ಆದಿ ಶ್ರೀ ಶಂಕರರು, ಕಣ್ಣುರಪ್ಪೆ ಯೊಮ್ಮೆ ಚಲಿಸುವಷ್ಟರೊಳಗೆ ಚಿನ್ಮಯ ಸ್ವರೂಪಿಗಳಾಗಿ ರಾರಾಜಿಸಿದರು.

॥ ಗುರು ಚರಣಂ ಭವಹರಣಂ । ಸದ್ಗುರು ಚರಣಂ ಭವಹರಣಂ ।
ಶರಣ ಜನೋದ್ಧಾರ ಕರುಣಾ ಭರಣಂ । ಸದ್ಗುರು ಚರಣಂ ಭವಹರಣಂ ॥

॥ ಓಂ ಶ್ರೀ ಗುರೂಣಾಂ । ಗುರುವೇ ನಮಃ ॥

॥ ಶಿವಂ ಶಾಂತಂ ॥

# ಅಧ್ಯಾಯ 20

## ಪ್ರಥಮ ಭಾಗ

॥ ಸ್ಥಿರೈರಂಗೈಃ ಸ್ತುಷ್ಟುವಾಂಶಸ್ತನೂಭಿಃ ॥

॥ ಭದ್ರಂ ಕರ್ಣೇಭಿ ಶ್ರುಣುಯಾಮದೇವಾಃ ।
ಭದ್ರಂ ಪಶ್ಯೇ ಮಾಕ್ಷಭಿ ರ್ಯಜತ್ರಾಃ ॥
ಸ್ಥಿರೈ ರಂಗೈ ಸ್ತುಷ್ಟುವಾಂ ಸಸ್ತನೂಭಿಃ ।
ವ್ಯಶೇಮ ದೇವ ಹಿತಂ ಯದಾಯುಃ ॥

( ಇತಿ ವೇದಃ )

ಈ ಮಂಗಳ ಶ್ಲೋಕದಿಂದ ( ಮಂತ್ರದಿಂದ ) ಆದಿ ಮಧ್ಯಾಂತರಹಿತನಾದ ಪರಶಿವ ಬ್ರಹ್ಮಕ್ಕೆ ಸ್ಥಿರಾಂಗಗಳುಂಟೆಂದು ಶೃತಪಟ್ಟಿದೆ. ನಿಜಕ್ಕೂ ಪರಶಿವನಿಗೆ ನಿಜಾಂಗಗಳಿವೆಯೂ ? ನಿರವಯವ, ನಿರವಧ್ಯ, ನಿರಾಕಾರ, ನಿರಂಜನ, ನಿಷ್ಕಲ, ನಿರುಪಮನೆನಿಸಿದ ಪರಶಿವ ಬ್ರಹ್ಮಕ್ಕೆ ನಿಜಾಂಗ ಅವಯುವಗಳುಂಟಾ ? ಮಹರ್ಷಿಗಳಲ್ಲಿ, ಶಿವಯೋಗಿಗಳಲ್ಲಿ ಅಥವಾ ಶಿವ ಶರಣರಲ್ಲಿ ಯಾರಾದರೂ ಪರಮಾತ್ಮನ ತೊಳಗುವ ಸ್ಥಿರಾಂಗಗಳನ್ನು ಯಾವಾಗಲಾದರೂ ಪ್ರತ್ಯಕ್ಷವಾಗಿ ಸಂದರ್ಶಿಸಿರುವರಾ? ಅನಂಗನೆನಿಸಿದ ಪರಶಿವ ಬ್ರಹ್ಮಕ್ಕೆ ಅಂಗ ಅವಯುವಗಳಿವೆಯೂ ? ಇದನ್ನು ವರ್ಣಿಸಲು ಸಾಧ್ಯವಾ ? ಮೇಲುಕ್ತವಾದೀ ಪ್ರಶ್ನೆಗಳಿಗೆ ನಾವು ಸದುತ್ತರವನ್ನು ಕಾಣಬೇಕಾದರೆ ಶಾಸ್ತ್ರಕ್ಕೆ ಶರಣಾಗತರಾಗಬೇಕು. ಯಾಕೆಂದರೆ–

॥ ತಸ್ಮಾಚ್ಛಾಸ್ತ್ರಂ ಪ್ರಮಾಣಂತೆ । ಕಾರ್ಯಾ ಕಾರ್ಯ ವ್ಯವಸ್ಥಿತಾ ।
ಜ್ಞಾತ್ವಾ ಶಾಸ್ತ್ರ ವಿಧಾನೋಕ್ತಂ । ಕರ್ಮ ಕರ್ತುಮಿಹಾರ್ಹಸಿ ॥

॥ ಯಚ್ಛಾಸ್ತ್ರ ವಿಧಿ ಮುತ್ಸೃಜ್ಯ । ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾ ಪ್ನೋತಿ । ನ ಸುಖಂ ನ ಪರಾಂಗತಿಂ ॥

( ಗೀ. ಅ. 16 ಶ್ಲೋ. 24 )

ಶೃತಿಯು ಈ ವಿಷಯದ ಬಗೆಗೆ ಅರುಹುತ್ತಾ ಪರಶಿವನು ಷಡ್ಗುಣೈಶ್ವರ್ಯ ಸಂಪನ್ನನು ಈ ಆರೂ ಅವನ ದಿವ್ಯಾಂಗಗಳಿರುವುವೆಂದರುಹುತ್ತಾ–

॥ ಐಶ್ವರ್ಯಸ್ಯ ಸಮಗ್ರಸ್ಯ । ವೀರ್ಯಸ್ಯ ಯಶಸಃ ।
ಶ್ರೀಯಃ ಜ್ಞಾನ ವೈರಾಗ್ಯ ಯೋಃ ಶ್ಚೈವ । ಷಣ್ಣಾಂ ಭಗಯಿತಿ ಈರಿಣಃ ॥

ಸೃಷ್ಟಿಯಲ್ಲಿ ಕಾಣುವ ಸಮಗ್ರ ಐಶ್ವರ್ಯ, ವೀರ್ಯ ಶೌರ್ಯಾದಿಗಳೂ; ಕೀರ್ತಿ ಯಶಸ್ಸುಗಳೂ ; ಶ್ರೀಃ ಅಖಿಲ ಸಂಪತ್ತೂ ; ಜ್ಞಾನ ಶಿವಜ್ಞಾನ ಹಾಗೂ ಸ್ವಸ್ವರೂಪ ಜ್ಞಾನ ; ಮತ್ತು ಪರಮ ವೈರಾಗ್ಯ ಸ್ಥಿತಿ ಇತ್ಯಾದಿಗಳು ಪರಶಿವ ಸ್ಥಿರಾಂಗಗಳೆನಿಸಿವೆ ಎಂದು ಕಂಡುಬರುತ್ತೆ.

ಮೇಲುಕ್ತವಾದ ವೇದ ಮಂತ್ರದಿಂದ ಪರಶಿವ ಬ್ರಹ್ಮದ ಸ್ಥಿರಾಂಗಗಳ ಬಗ್ಗೆ ಕಂಡುಬರುವುದೇನೆಂದರೆ.

ಸರ್ವಜ್ಞತ್ವ ; ಅನಂತ ಶಕ್ತಿತ್ವ ; ಅಲುಪ್ತ ಶಕ್ತಿತ್ವ ;
ಅನಾದಿ ಬೋಧತ್ವ : ನಿತ್ಯ ತೃಪ್ತತ್ವ ; ಪರಿಪೂರ್ಣತ್ವ ;
ಸರ್ವಾಂತರ್ಯಾಮಿತ್ವ ; ಸರ್ವ ಶಕ್ತಿತ್ವ ; ಸರ್ವ ಸ್ವತಂತ್ರತ್ವ ;

ಇತ್ಯಾದಿ ಮಹೋನ್ನತವಾದ ಸ್ಫುರಣಮಯ ವಿಮರ್ಶಾ ಶಕ್ತಿಗಳ ಆವಿರ್ಭಾವಾದಿಗಳು, ಲಿಂಗರೂಪಿ ಪರಶಿವ ಬ್ರಹ್ಮದ ನಿತ್ಯೈಶ್ವರ್ಯ ಪ್ರದವಾದ ಸ್ಥಿರಾಂಗಗಳೆಂದು ವಿಮರ್ಶಿಸಲಾಗಿದೆ. ಇದು ವೇದ ವಿಹಿತವೆನಿಸಿ ಸ್ತುತ್ಯವೆನಿಸಿದೆ. "ಸ್ಥಿರೈ ರಂಗೈಃ" ಎಂಬ ಉಕ್ತಿ, ಋಗ್ವೇದಾನುಸಾರ "ಸ್ಥಿರೇಭಿರಂಗೈಃ" ಎಂದು ಪ್ರತಿಪಾದಿಸಲಾಗಿದೆ. ಮುಂಡಕೋಪನಿಷತ್ತಿನಲ್ಲಿ ಈ ಬಗೆಗೆ ವಿವರಿಸುತ್ತಾ, ಪರಶಿವನ ಅಪ್ರಾಕೃತ ದಿವ್ಯಾಂಗಗಳು– ॥ ಘೃತರೀತಿ ಘನೀ ಭೂತಃ । ಸಚ್ಚಿದಾನಂದ ಲಕ್ಷಣಃ ॥ ಎಂದು ಘೋಷಿಸಿ, ಘೃತ ರೀತಿ ಕಾಠಿಣ್ಯನ್ಯಾಯಾನುಸಾರ ಅಂದರೆ ಕರಗಿದ ತುಪ್ಪ ಘಟ್ಟಿ ತುಪ್ಪ, ಹೆಪ್ಪುಗಟ್ಟಿ ಶಕ್ತಿ ಸೌಂದರ್ಯಾದಿ ದಿವ್ಯ ಲಕ್ಷಣಗಳಿಂದ ಹಳಿ ಹಳಿಯಾಗಿ ಮಿರುಗುತ್ತಾ ಆಪ್ಯಾಯನಕರವಾದ ಪರ ತತ್ವದ ಮಹದಂಶಗಳು ಪರಶಿವನ ಸ್ಥಿರಾಂಗಗಳೆಂದು ಮುಂಡಕೋಪನಿಷತ್ತಿನಲ್ಲಿ ಉಲ್ಲೇಖಿಸಲಾಗಿದೆ.

॥ ಭದ್ರಂ ಕರ್ಣೇಭಿ ಶ್ರುಣು ಯಾಮ ದೇವಾಃ ॥

॥ ದೇವಾಃ ॥ 33 ಕೋಟಿ ದೇವತೆಗಳಿರಾ ; ದೇವಾಃ ಮಹಾಗುರುವಿನ ಶಕ್ತಿ ಪಾತಕ್ಕೊಳಪಟ್ಟು ಶಿವ ಪೂಜೆ, ಶಿವ ಜ್ಞಾನ, ಶಿವ ವ್ರತ, ಶಿವ ಮಂತ್ರ ಮತ್ತು ಅನುದಿನ ಶಿವ ಧ್ಯಾನಾದಿಗಳಿಂದ, ಪರಿಪಕ್ವಾಂತಃಕರಣಗಳಿಂದ ದೇದೀಪ್ಯವಾದ ದೇಹ ಕಾಂತಿಯಿಂದ ಬೆಳಗುವ, ಮಹಾ ಗುರು ಪುತ್ರರುಗಳಿರಾ ; ಮುನಿ

ಗಳಿರಾ, ಎಲೈ ಸರ್ವ ಪ್ರಮಥ ವರ್ಯರುಗಳಿರಾ ;

॥ ಭದ್ರಂ ॥ ಸರ್ವ ಮಂಗಳಗಳಿಗೆಲ್ಲಾ ॥ ಮಂಗಳಂ ಮಂಗಳಾನಾಂ ॥ ಎಂಬಂತೆ ಮಂಗಳಾತ್ಮಕನಾದ ಲಿಂಗರೂಪಿ ಪರಶಿವ ಬ್ರಹ್ಮದ ನಿತ್ಯ ಕಲ್ಯಾಣ ವಿಶಿಷ್ಟವಾದ ಗುಣಗಣಗಳ ಪ್ರಭಾವವನ್ನು ಹಾಗೂ ॥ ಪಾವನಂ ಪಾವನಾನಾಂ ॥ ಪಾವನಗಳಿಗೆಲ್ಲಾ ಅತಿ ಪಾವನವಾದ, ಮುಮ್ಮಲಗಳನ್ನು ಛೇದಿಸಿ ನಾಶಗೊಳಿಸಿ, ಪಾವನಾತ್ಮಕರನ್ನಾಗಿಸುವಂಥಾ ಪರಶಿವನ ಅಗಣಿತವಾದ ಮಹಿಮೆಗಳನ್ನು ಕುರಿತು-

॥ ಕರ್ಣೇಭಿಃ ॥ ಕಿವಿಗಳಿಂದ ಶ್ರದ್ಧಾ ಭಕ್ತಿ ಪೂರ್ವಕ ಅನವರತ ಶ್ರವಣ ಮಾಡೋಣ, ಸ್ವಾನುಭೂತಿಯಿಂದ ಶ್ರವಣ ಮಾಡಿ ಆನಂದಿಸೋಣ.

॥ ಭದ್ರಂ ಪಶ್ಯೇ ಮಾಕ್ಷಭಿ ರ್ಯಜತ್ರಾಃ ॥

॥ ಭದ್ರಂ ॥ ದೇವಾದಿದೇವನೆನಿಸಿದ ಮಹಾದೇವನನ್ನು ಅರ್ಥಾತ್ ಲಿಂಗರೂಪಿ ಪರಶಿವನನ್ನು

॥ ಅಕ್ಷಭಿಃ ॥ ಎರಡು ಕಣ್ಣುಗಳ ತುಂಬ ಅಥವಾ ನಿರೀಕ್ಷಣ ಪೂರ್ವಕ ಕಣ್ ತುಂಬ.

॥ ಪಶ್ಯೇಮ ॥ ಈ ಕ್ಷಿ ಸೋ ೀ ಣ, ಆ ಪರಮಪುರುಷನ ಪರಾತ್ಪರನೆನಿಸಿದ ಸ್ಥಿರಾಂಗಗಳನ್ನು ಅಂತರಂಗದ ಪೊಳಗಣ್ಣಿನ ನೋಟದಿಂದ ದರ್ಶಿಸಿ, ಆನಂದಿಸಿ ಹಾಡಿ ಪಾಡಿ, ಕೊಂಡಾಡುತ್ತಾ ಪುನಃ ಪುನಃ ಕಂಡು ಆಶ್ಚರ್ಯದಿಂದ ಪುಳುಕಾಂಕಿತರಾಗಿ ಆ ದಿವ್ಯರೂಪದಲ್ಲಿ ನಲಿದೊಲಿದು ರಮಿಸೋಣ. ಪಶ್ಯೇಮ = ಅವ್ಯಭಿಚಾರಿಣಿಭಕ್ತಿ ಪೂರ್ವಕ ಲಿಂಗರೂಪಿ ಪರಶಿವನಲ್ಲಿಟ್ಟ ದಿವ್ಯದೃಷ್ಟಿ, ಅಂತಪ್ಪ ನಿಜದೃಷ್ಟಿಯಲ್ಲಿ ನಿಂತ ಮನ; ಅಚಲವಾದೀ ಮನಸ್ಸಿನಲ್ಲಿ, ಹಿಂಗದೆನಿಂದ ಶಿವಭಾವ, ಮದರೋಳ್ ನೆಲೆಗೊಂಡ ಶಿವಾತ್ಮಲಿಂಗವಾ, ಪಶ್ಯೇಮ, ಕಂಡು ಮತ್ತಾ ಮಹಾಲಿಂಗ ತತ್ವದೊಳಿರ್ದು ನಿತ್ಯಸುಖಿಯಾಗಿ ವಿರಾಜಿಸುವಾತಂಗೆ ಬಾಹ್ಯಕರ್ಮಂಗಳ ಗೋಜಿನಿಂದಾಗಬೇಕಾದ ದ್ದೇನಿದೆ. ಆದ್ದರಿಂದ ನಾವೆಲ್ಲಿರೂ ಸದಾ ಲಿಂಗರೂಪಿ ಪರಶಿವನ ಸ್ಥಿರಾಂಗಗಳ ವೈಭವವನ್ನು ಪೊಳಗಣ್ ನೋಟದಿಂದ ಪಶ್ಯೇಮ ಅನವರತ ಸಂತುಷ್ಟಿ ಭಾವದಿಂದ ಕಾಣೋಣ, ನೋಡೋಣ.

॥ ಯಜತ್ರಾಃ ॥ ಕಣ್ ಕಂಡ, ಶುದ್ಧ ಬ್ರಹ್ಮ ಪರಾತ್ಪರನೆನಿಸಿದ, ಪರಶಿವನ ಜ್ಯೋತಿರ್ಮಯ ಲಿಂಗವನ್ನು, ಯ ಜ ತ್ರಾಃ ಅಂಗದ ಮೇಲೆ ಮತ್ತು ನಮ್ಮ

ಪವಿತ್ರವಾದ ಹೃನ್ಮಂದಿರದಲ್ಲೂ ॥ಅಂತರ್ಭಹಿಶ್ಚ ತತ್ಸರ್ವಂ॥ ಸದಾ ಪ್ರೇಮಪೂರಿತ ಭಾವದಿಂದ ಭಕ್ತರು, ಶ್ರೀ ಮಹಾಗುರುವಿನ ಹಸ್ತದಿಂದ ದತ್ತವಾದ ಶಿವಲಿಂಗವನ್ನು ಧರಿಸೋಣ, ಹಾಗೂ ಧ್ಯಾನ ಧಾರಣ ಸಮಾದಿಯೋಗಗಳ ಮೂಲಕ ಪೂಜಿಸಿ ಧರಿಸಿ ರೋಣ. ಇದರಿಂದ ಸಮಸ್ತ ಅನಿಷ್ಟಗಳು ಬಿಟ್ಟೋಡುವುವು, ಮಲತ್ರಯಗಳು ನಿರ್ನಾಮವಾಗುವುವು. ಸಕಲೇಷ್ಟಗಳು ಪ್ರಾಪ್ತಿಯಾಗಿ ನಮ್ಮನ್ನು ಭಕ್ತ ದಯಾನಿಧಿ ಯಾದ ಪರಮೇಶ್ವರನು ಅನವರತ ರಕ್ಷಿಸುವನು.

॥ ಸ್ಥಿರೈ ರಂಗೈ ಸ್ತುಷ್ಟುವಾಂಸ ಸ್ತನೂಭಿಃ ॥

ಮೊಡಲಿಲ್ಲದ ಮೊಡಲುಳ್ಳ ಲಿಂಗರೂಪಿ ಪರಶಿವ ಬ್ರಹ್ಮದ ಸ್ಥಿರಾಂಗಗಳ ಸೌರಭ ವನ್ನು ಕಂಡುಂಡನುಭವಿಸಿ, ನಿತ್ಯಾನುಸಂಧಾನದಲ್ಲಿ ಸ್ವಾತ್ಮಬೋಧೆಯಾಗುವಂತೆ ಅರಿ ಯಲು ಸಾಧ್ಯವಾ, ? ಶಿವ ಮಹಿಮ್ನಾ ಸ್ತುತಿಯಲ್ಲಿ ಧರ್ಮಾತ್ಮನಾದ ಪುಷ್ಪ ದಂತನು ಶ್ರೀ ಕಾಶೀ ವಿಶ್ವೇಶ್ವರನನ್ನು ಅನನ್ಯ ಭಕ್ತಿ ಭಾವದಿಂದ ಹೃದಯಂಗಮ ವಾಗಿ ವಿಶ್ವನಾಥನ ಮಹಿಮೆಯನ್ನು ಎದುರಿನಲ್ಲಿ ಕೈ ಜೋಡಿಸಿನಿಂತು ಸ್ತುತಿಸುತ್ತಾ-

॥ ಮಹಿಮ್ನಃ ಪಾರಂತೇ । ಪರಮವಿದಿಷೋ । ಯದ್ಯಸದೃಶೀ ।
ಸ್ತುತಿ ಬ್ರಂಹ್ಮಾದೀನಾಮಪಿ । ತದವಸನ್ನಾಸ್ತ್ವಯಿಗಿರಃ ॥
ಅಥಾ ವಾಚ್ಯಾ ಸರ್ವಃ । ಸ್ವಮತಿ ಪರಿಣಾಮಾವಧಿ ಗೃಣನ್ ।
ಮಮಾಪ್ಯೇಶಸ್ತೋತ್ರೇ । ಹರನಿರಪವಾದಃ ಪರಿಕರಃ ॥

ಭೋ ಭೋ ವಿಶ್ವೇಶ್ವರನೇ ! ॥ಸತ್ಯಂ ಜ್ಞಾನಮನಂತಂ ಬ್ರಹ್ಮ ॥ ನೆಂದನಿ ಸಿದ ನಿನ್ನ ಮಹಿಮೆಗೆ ಪಾರವೆಲ್ಲಿದೆ. ಭಕ್ತನೊಬ್ಬ ನಿನ್ನ ಅಪಾರ ಮಹಿಮೆಯನ್ನು ಅವನ ಶಕ್ತ್ಯಾನುಸಾರ ಹಾಡಿ ಪಾಡಿ ಕೊಂಡಾಡಿದರೂ ಅದು ಯದ್ ಕಿಂಚಿತ್ತೆಂದು ಭಾವಿಸಲಾಗಿದೆ, ಅಷ್ಟೇ ಅಲ್ಲ ಹರಿ ಬ್ರಹ್ಮಾದಿಗಳು ಅಪಾರವಾಗಿ ನಿನ್ನ ಸೀಮಾತೀತ ವಾದ ದಿವ್ಯ ಮಹಿಮೆಯನ್ನು ಕೊಂಡಾಡಿದರೂ ಸಹ ಅದೂ ಅಪೂರ್ಣವೆಂದೆನಿಸಿ ಕೊಂಡಿರುವುದರಿಂದ, ನನ್ನೀ ಭಕ್ತಿಭರಿತವಾದ ಸ್ತುತಿಸಹ ಮೇಲುಕ್ತವಾದಂತೆ ಯತ್ಕಿಂಚಿತ್ತಾದರೂ, ನಿರ್ದೋಷವಾದುದೆಂಬ ಭಕ್ತಿಭಾವದಿಂದ ನಾನು ಯಥಾಮತಿ ಸ್ತುತಿಸಿರುತ್ತೇನೆಂದು ಪ್ರಾರ್ಥಿಸಿರುವನು, ದಯಾಮಯನಾದ ಪರಮಾತ್ಮನು, ಸರ್ವಾಂತರ್ಯಾಮಿಯಾದ್ದರಿಂದ ಭಕ್ತರ, ಹೃದಯದ ಪಾವಿತ್ರತೆಯನ್ನೂ ಅವರ ಶರಣಾಗತಿ ಭಾವವನ್ನು ಮಾತ್ರ ಗ್ರಹಿಸುವನೇ ವಿನಃ ಬೇರಿನ್ನಾವುದನ್ನು ಗಮನಿಸನು.

ಇದರಂತೆ ಪರಶಿವ ಬ್ರಹ್ಮದ ಸಂತುಷ್ಟಿಯಿಂದ ಕೂಡಿ, ಕಲ್ಯಾಣಾದ್ಭುತ ಗಾತ್ರವಾದ ಸ್ಥಿರಾಂಗಗಳ ಘನ ಮಹಿಮೆಯನ್ನು ನೂರ್ಕಾಲ ವರ್ಣಿಸಿ, ಸ್ತುತಿಸಿದರೂ, ಆ ಪರತರವಾದ ಸ್ಥಿರಾಂಗಗಳು ಅವ್ಯಕ್ತ, ಅಗೋಚರ, ಅಪ್ರಮೇಯ, ಅನಂತ, ಅಚಿಂತ್ಯ ವೆನಿಸಿರುವಾಗ, ಅಲ್ಪಜ್ಞನಾದ ನಾನು ನನ್ನೀ ಸಣ್ಣ ಗ್ರಂಥದಲ್ಲಿ ಲಿಂಗ ರೂಪಿ ಪರಶಿವನ ಸ್ಥಿರಾಂಗಗಳನ್ನು ವರ್ಣಿಸಲೆತ್ನಿಸಿರುವುದು ಅಪೂರ್ಣ ಪ್ರಯತ್ನವೆನಿಸಿರುವುದು. ಆದರೂ ಈ ಯತ್ನ ಭಗವದ್ ಪ್ರೇರಣೆಯಂತೆ ಶುದ್ಧಾಂತಃಕರಣ ಪೂರ್ವಕ ಭಕ್ತಿಭಾವದಿಂದೆಸಗಿರುವುದರಿಂದ, ಶಿವ ಪ್ರೀತಿಗೆ ಪಾತ್ರವಾಗಿರಬಹುದೆಂದು ನಂಬಿದ್ದೇನೆ.

1) ॥ ಸ್ತುಷ್ಟುವಾಂಸಃ ॥ ಈಶ್ವರಾರಾಧನಾ, ಪ್ರಣೀಧಾನದ್ವಾ, ಮೊದಲಾದ ಸಂದರ್ಭಗಳಲ್ಲಿ, ಪರಮಾತ್ಮನ ಮೇಲುಕ್ತವಾದ, ಸರ್ವಜ್ಞತ್ವ, ಅನಾದಿ ಬೋಧತ್ವ, ನಿತ್ಯತೃಪ್ತಿತ್ವ, ಪರಿಪೂರ್ಣತ್ವ, ಅಲುಪ್ತ ಶಕ್ತಿತ್ವ ಇತ್ಯಾದಿ ಶಿವಾಂಶ ಭರಿತ ರಾಜ ತೇಜದಿಂದ ಸದಾ ಬೆಳಗುವ " ತನು ", ಪರಿಶೋಭಿಸುವ ಮಂತ್ರಮಯ ದೇಹವಿದು. ಇಂತಪ್ಪ ಪಾವನತರವಾದ ಭಗವಂತನ ಸ್ಥಿರಾಂಗಗಳನ್ನು ಕಣ್ಣಾರೆ ಕಾಣಬೇಕಾದರೆ ಆಚಾರವಂತನಾಗಿರಬೇಕು. ॥ ಆಚಾರಃ ಪ್ರಿಯಃ ಶಂಭುಃ । ಆಚಾರೇನ ತುಷ್ಯತಿ ॥. ಆಚಾರ ವಿಧಿಗನುಸಾರ ಆಚರಣೆ ಇದ್ದರೆ, ಶಿವನು ಸಂತೋಷಿಸುವನು. ಶಿವನಿಗೆ ಆಚಾರವೇ ಪ್ರಾಣ. ಇದು ಪರಮನ ಸ್ಥಿರಾಂಗವೆಂಧರಿಯಬೇಕು. ಆಚಾರ ಐದು ಪ್ರಕಾರ ಹಮ್ಮಿ ರಾರಾಜಿತವೆನಿಸಿದೆ. ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರ. ಆಚಾರವೆಂಬುದು, ಷಡ್ಲಿಂಗಗಳಲ್ಲಿ ಪ್ರಪ್ರಥಮವೆನಿಸಿದ ಆಚಾರ ಲಿಂಗವೆಂದು ಪ್ರಸಿದ್ಧವಿರುತ್ತೆ. ಆದಕಾರಣ, ಇದೂ ತೃಪ್ತಿದಾಯಕವಾದ ಸ್ಥಿರಾಂಗವೆಂದರಿಯಬೇಕು.

2) ॥ ಅಭಿಷೇಕಃ ಪ್ರಿಯ ಶಂಭುಃ । ಅಭಿಷೇಕೇನ ತುಷ್ಯತಿ ॥

॥ ಸ್ತೋತ್ರ ಪ್ರಿಯೋ ಹರಿಃ ॥ ಶ್ರೀ ಹರಿ ಸ್ತೋತ್ರ ಪ್ರೀಯನಾದರೆ, ॥ ಶಂಭುಃ ಅಭಿಷೇಕ ಪ್ರಿಯಃ ॥ ಅಭಿಷೇಕ ಪ್ರಿಯನು ಶಿವನು. ಪವಿತ್ರ ಗಂಗೋದಕದಿಂದ ದ್ವಿಸಂಧ್ಯಾಕಾಲಗಳಲ್ಲಿ " ಶ್ರೀರುದ್ರ " ಪಠನೆಯೊಂದಿಗೆ ಭಕ್ತಿಯಿಂದ ಅಭಿಷೇಕವನ್ನು ಮಾಡಿದರೆ, ಇದರಿಂದ ಸಂಪ್ರೀತನಾದ ಶಂಭುಃ ಭಕ್ತರ ಅಭೀಷ್ಟಗಳನ್ನನುಗ್ರಹಿಸಿ ನಲಿಯುವನು. ಈ ವಿಧದ ಆರಾಧನೆಯಿಂದ ಪರಶಿವನ ಸ್ಥಿರಾಂಗಗಳನ್ನು ಭಕ್ತನು ತನ್ನಂತರಂಗದಲ್ಲಿ ಕಿಂಚಿತ್ ಕಾಣಬಹುದು, ಹೇಗೆಂದರೆ.

3) ॥ ಭಕ್ತಿಃ ಪ್ರಿಯೋ ಸದಾಶಿವಃ ॥ ಶಿವನು ಕೇವಲ ಭಕ್ತಿ ಪ್ರಿಯನು. ಭಕ್ತನು ಪುಳುಕಾಂಕಿತ ಭಾವದಿಂದ, ಅವ್ಯಭಿಚಾರಿಣೀ ಭಕ್ತಿಯಿಂದ ಭಗವಂತನ

ಮಹಿಮೆಯನ್ನು ಆತ್ಮಾರಾಮನಾಗಿ ಸುಸ್ವರದಿಂದ ಅನುದಿನ ಹಾಡಿದರೆ, ನಾದ ಪ್ರಿಯನಾದ ದೇವನು ಅಲ್ಲಿದ್ದು ಪ್ರಸನ್ನ ಭಾವದಿಂದ ಕೇಳಿ ಸಂತೋಷಗೊಳ್ಳುವನು. ಭಕ್ತ ವಿಜಯದಲ್ಲಿ, ಹುಟ್ಟುಕುರುಡ ಸೂರದಾಸ್ ಎಂಬ ಹರಿಜನ ಶ್ರೇಷ್ಠನು ತನ್ನ ಪೂಜಾ ಗೃಹದಲ್ಲಿ ಕಳಿತು ತಂಬೂರಿ ನಾದದೊಂದಿಗೆ ಶ್ರೀ ಕೃಷ್ಣಾಮೃತ ವೈಭವವನ್ನು ರಮ್ಯವಾಗಿ ಹಾಡುತ್ತಿರುವಾಗ, ಅವನ ಬೆನ್ನ ಹಿಂಬದಿಯಲ್ಲಿ ಶ್ರೀ ಕೃಷ್ಣಸ್ವಾಮಿಯು ನಿಂತು ಆ ಗಾನವನ್ನು ಕೇಳಿ ಆನಂದಿಸಿದನಂತೆ. ಭಕ್ತ ಮಲಗಿ ಪಾಡಿದರೆ ಆ ಕೀರ್ತನೆ ಯನ್ನು ಅವನ ತಲೆ ದಿಂಬಿನ ಹಿಂದೆ ಸ್ವಾಮಿ ಕುಳಿತು ಕೇಳುವನು. ಭಕ್ತ ಕುಳಿತು ಪಾಡಿದರೆ ದೇವನು ಹಿಂದೆನಿಂತು ಕೇಳುವನು. ಭಕ್ತ ನಿಂತು ದೇವನ ಗುಣಗಾನ ಮಾಡಿದರೆ, ಸ್ವಾಮಿ ನಲಿದೊಲಿದು ಭಕ್ತನಿಗೆ ಪ್ರಸನ್ನನಾಗುವನೆಂದು ಶ್ರೀ ಪುರಂದರ ದಾಸರು ಹಾಡಿರುವರು.

ಶ್ರದ್ಧಾಭಕ್ತಿ ; ನಿಷ್ಠಾಭಕ್ತಿ ; ಅವಧಾನಭಕ್ತಿ ; ಅನುಭವಭಕ್ತಿ ; ಆನಂದಭಕ್ತಿ ; ಮತ್ತು ಸಮರಸಭಕ್ತಿ ಗಳೆಂಬ ಷಡ್ವಿಧ ಭಕ್ತಿಭಾವಗಳನ್ನು ನಮ್ಮ ಜೀವಿತದಲ್ಲಿ ಅಳವಡಿಸಿಕೊಂಡು, ಇದರೊಂದಿಗೆ ನವ ವಿಧ ಭಕ್ತಿ ಅಂದರೆ ಶ್ರವಣಂ, ಕೀರ್ತನಂ, ಶಂಭೋಃ, ಸ್ಮರಣಂ, ಪಾದಸೇವನಂ, ಅರ್ಚನಂ, ವಂದನಂ, ದಾಸ್ಯಂ, ಸಖ್ಯಂ ಮತ್ತು ಆತ್ಮ ನಿವೇದನಂ ಇತ್ಯಾದಿ ಶ್ರೇಷ್ಠ ಭಕ್ತಿ ಮಾರ್ಗ ದಲ್ಲಿ ನಾವು ಅನುದಿನ ಪಳಗಿದರೆ. ಭಕ್ತಿ ಪ್ರಿಯನಾದ ಶಂಭುಃ ನಮಗೆ ಲೀಲಾಜಾಲ ವಾಗಿ ಮಯೂರಾಂಡ ರಸ ನ್ಯಾಯಾನುಸಾರ ಜ್ಯೋತಿರ್ಮಯ ಲಿಂಗ ರೂಪದಲ್ಲಿ ಕಾಣಿಸಿಕೊಳ್ಳುವನು. ಪರಶಿವನ ಸ್ಥಿರಾಂಗಗಳು ಪರಂಜ್ಯೋತಿ ಸ್ವರೂಪದಲ್ಲಿ ಸರ್ವತ್ರ ಬೆಳಗುತ್ತಲಿವೆಯೆಂದರಿಯಬೇಕು. ಅರಿತು ಕಂಡನುಭವಿಸಿ ಅಂಗನು (ಜೀವಾತ್ಮನು) ಧನ್ಯನೂ, ಕೃತಕೃತ್ಯನೂ ಆಗಬೇಕು. ಶಿವನ ಸ್ಥಿರಾಂಗಗಳನ್ನು ಯೆಂದು ತನ್ನ ಶುದ್ಧಾಂತಃಕರಣಗಳಲ್ಲಿ ಮಾನವನು ಕಾಣುವನೋ ಅಂದೇ ಅವನು ದೇವಮಾನವನೆನಿ ಸುವನು ಶರಣನ ಶರಣಾಂಗದಲ್ಲಿ ಇಂತಪ್ಪ ದಿವ್ಯ ದೃಶ್ಯವನ್ನು ಕಾಣಲು ಸಾಧ್ಯವಿರುತ್ತೆ, ಈ ಮಹದ್ ತತ್ವ ॥ ಸ್ವಾನು ಭೂತ್ಯೇಕ ಮಾನಾಯ ॥ ಎಂಬಂತೆ ಸ್ವಾನುಭೂತಿಗೆ ಮಾತ್ರ ಗಮ್ಯವಿರುವುದು, ಆದರೆ ಇದು ಅನಿರ್ವಚನೀಯ ಮತ್ತು ಮಧುರವಾದ ಪ್ರೇಮಾಮೃತ ಸ್ವರೂಪವುಳ್ಳದ್ದು. ಶ್ರೀ ಕೃಷ್ಣನು ಗೀತೆಯಲ್ಲಿ ಪರಶಿವನ ಸ್ಥಿರವಾದ ದಿವ್ಯಾಂಗಗಳನ್ನು ಕುರಿತು ಬೋಧಿಸುವಾಗ–

॥ ಆಶ್ಚರ್ಯವತ್ಪಶ್ಯತಿ ಕಶ್ಚಿದೇನ ।
ಮಾಶ್ಚರ್ಯವದ್ವದತಿ ತಥೈವಚಾನ್ಯಃ ।
ಮಾಶ್ಚರ್ಯವದ್ ಶೃಣೋತಿ ।
ಶೃತ್ವಾಪ್ಯೇನಂ ವೇದ ನ ಚೈವಕ ಶ್ಚಿತ್ ॥ ( ಗೀತ )

ಧನಂಜಯಾ ; ಪರಮಾತ್ಮನ ॥ ಸ್ಥಿರೈರಂಗೈಃ ಸ್ತುಷ್ಟುವಾಂಸ ಸ್ತನೂಭಿಃ ॥ ಸ್ಥಿರಾಂಗಗಳ ಮಹಿಮೆಯನ್ನೂ, ಸೌಂದರ್ಯಾತಿ ಶಯಗಳನ್ನೂ, ಒಳಗಣ್ಣಿನ ನೋಟದಿಂದ ಎಷ್ಟು ಕಾಲ ದಿಟ್ಟಿಸಿ ನೋಡುತ್ತಿದ್ದರೂ, ಆ ಚಿತ್ಕಳಾಲಹರಿಯ ನೂತನಾತಿನೂತನ ತರಂಗ ಕೋಟಿಗಳು, ಕಣ್ಮನಂಗಳನ್ನು ಬಿಡದೆ ಆಕರ್ಷಿಸುತ್ತಲಿರುವುದರಿಂದ ಅದನ್ನು ಆಶ್ಚರ್ಯದಿಂದ ದಣಿಯದೆ ನೋಡುವನು. ಮತ್ತೆ ಕೆಲವು ಉತ್ತೀರ್ಣ ಪ್ರವಚನಕಾರರು, ಸ್ಥಿರಾಂಗಗಳ ಘನ ಮಹಿಮೆಗಳನ್ನು ನವರಸಾಲಂಕಾರ ಭರಿತವಾಗಿ ವೈಖರಿಯಿಂದ ವರ್ಣಿಸುತ್ತಾ, ವರ್ಣಿಸುತ್ತಾ, ಆಶ್ಚರ್ಯಪರವಶರಾಗಿ ಪರಶಿವ ತತ್ವದ ವರ್ಣನೆಯಲ್ಲೇ ತಲ್ಲೀನರಾಗುವರು. ಮತ್ತೆ ಕೆಲವು ಸುಶ್ರೋತೃಗಳು ಈ ಅಖಂಡ ವರ್ಣನೆಯನ್ನು ಪರಮಾನಂದದಿಂದ ಶ್ರವಣ ಮಾಡಿ, ಮಾಡಿ, ಆಶ್ಚರ್ಯ ಚಕಿತ ಮಾನಸಿಕರಾಗಿ ಸದಾ ರಂಜಿಸುತ್ತಿರುವರು. ಇಷ್ಟಾದರೂ, ಯಾರೊಬ್ಬರೂ ॥ ಶ್ರುತ್ವಾಪ್ಯೇನಂ । ವೇದ ನ ಚೈವ ಕಶ್ಚಿತ್ ॥ ಪರಶಿವ ಬ್ರಹ್ಮದ ॥ ಸ್ಥಿರಾಂಗಗಳನ್ನು ॥ ಕಾಣರು. ಕಾರಣ, ಪರಶಿವ ಬ್ರಹ್ಮದ ಸ್ಥಿರಾಂಗಗಳ ಮೂಲ ಶಕ್ತಿ ॥ ಮುಪ್ಪಾಗ ಊರ್ಧ್ವಲೋಕದೊಳಿಹುದು। ತ್ರಿಪಾದ ಸ್ಯಾಮೃತಂ ದಿವಿ ॥ ಇವನ್ನರಿಯಲು ಶ್ರೀ ಮಹಾ ಗುರುವಿನ ದಿವ್ಯಾನುಗ್ರಹದಿಂದ ಮಾತ್ರ ಸಾಧ್ಯ ಮತ್ತು ಗೀತಾಚಾರ್ಯನು ಸ್ಥಿರಾಂಗಗಳನ್ನು ನಿತ್ಯ ಕಾಣುತ್ತಿರುವವರು ಯಾರೆಂದರೆ–

॥ ಯಾ ನಿಶಾ ಸರ್ವ ಭೂತಾನಾಂ । ತಸ್ಯಾಂ ಜಾಗರ್ತಿ ಸಂಯಮಿ ॥
ಯಸ್ಯಾಂ ಜಾಗ್ರತಿ ಭೂತಾನಿ । ಸಾ ನಿಶಾ ಪಶ್ಯತೋ ಮುನೇಃ ॥ (ಗೀತ)

(ಅ, 2 ಶ್ಲೋ. 69)

ಲೌಕಿಕ ಜನರಿಗೆ ಹಾಗೂ ಸಮಸ್ತ ಭೂತಗಳಿಗೆ ಯಾವುದು ಕತ್ತಲೋ, ಯಾವುದು ಕಾಣುವುದಿಲ್ಲವೋ ಅದನ್ನು ಇಂದ್ರಿಯ ನಿಗ್ರಹವುಳ್ಳ ಆತ್ಮಜ್ಞಾನಿಗಳು ತಮ್ಮ ಅಂತರಂಗದ ಕಣ್ಣಿನಿಂದ ದರ್ಶಿಸಿ ಜಾಗೃತ ಭಾವದಿಂದ ಆನಂದಿಸುತ್ತಲಿದ್ದಾರೆ ಅಖಿಲ ಜೀವ ಕೋಟಿಗಳು ಯಾವುದರಲ್ಲಿ ಎಚ್ಚೆತ್ತು ಕಾರ್ಯನಿರ್ವಹಿಸುತ್ತಲಿರುವರೋ ಅದು ಸಂಯಮಿಗಳಿಗೆ–ತತ್ವವೇತ್ತರಿಗೆ ರಾತ್ರಿ ಯೋಪಾದಿ ಕಾಣದು ಆದ್ದರಿಂದ ಪರಶಿವನ ಸ್ಥಿರಾಂಗಗಳು ಸ್ವಸ್ವರೂಪ ದರ್ಶಕರಿಗೆ ಕಾಣುವುವು.

4) ॥ ವ್ಯಶೇಮ ದೇವ ಹಿತಂ ಯದಾಯುಃ ॥

ನಾವು ಬದುಕಿರುವ ವರೆವಿಗೂ ಅಂದರೆ ಯಾವಜ್ಜೀವವೂ, ನಮ್ಮ ಆಯುಃ ಪೂರಾ, ನಮ್ಮ ಹಿತ ದೃಷ್ಟಿಯಿಂದ ಹಾಗೂ ಆತ್ಮೋದ್ಧಾರಾರ್ಥ, ದೀನದಯಾಪರ

ನಾದ, ಮತ್ತು ಆರ್ಥತ್ರಾಣ ಪರಾಯಣನಾದ ಸರ್ವೇಶ್ವರನನ್ನು ಅನನ್ಯ ಭಕ್ತಿ ಭಾವ ದಿಂದ ಆರಾಧಿಸಿ, ಸ್ತುತಿಸಿ, ಅರ್ಪಣಾರ್ಪಿತ ಭಾವದಿಂದ ಧ್ಯಾನಿಸಿ ಶರಣು ಹೋಗೋಣ. ॥ ಜ್ಞಾನಾತ್ ಧ್ಯಾನಂ ವಿಶಿಷ್ಯತೇ ॥ ಪರಶಿವನ ಸ್ಥಿರಾಂಗ ಗಳು ॥ ಧ್ಯಾನಗಮ್ಯಃ ॥. ಶಿವ ಧ್ಯಾನ ಯೋಗದಿಂದ ಕಾಣಲರ್ಹವೆನಿಸಿರುವವು ॥ಧ್ಯಾನಾವಸ್ಥಿತ ತದ್ಗತೇನ ಮನಸಾ। ಪಶ್ಯಂತಿ ಯಂ ಯೋಗಿನಃ॥ ಶಿವಧ್ಯಾನಾ ರೂಢರಾದ ಶಿವಶರಣರಂತೆ ಯುಗಾಂತರಗಳಿಂದಲೂ, ತಮ್ಮ ಅಂತರಂಗದ ಒಳಗಣ್ಣಿ ನಿಂದ ಪರಮಾತ್ಮನ ॥ ಸ್ಥಿರೇಭಿ ರಂಗೈಃ ॥ ಸ್ಥಿರಾಂಗಗಳನ್ನು ಸಂದರ್ಶಿಸಿ ಆ ದಿವ್ಯಾಂಗಗಳ ಸೌಷ್ಠವದಲ್ಲಿ " ವ್ಯಶೇಮ " ತಲ್ಲೀನರಾಗಿರೋಣ. ಈ ದಿವ್ಯಾಂಗ ಗಳನ್ನು ನಾದೋಪಾಸನೆ ಭಕ್ತ್ಯೋಪಾಸನೆ, ಮತ್ತು ಜ್ಞಾನೋಪಾಸನೆಗಳ ಮೂಲಕ ನಮ್ಮ ಶುದ್ಧಾಂತರಂಗದಲ್ಲಿ ಸದ್ಭಾವ ಪೂರ್ವಕ ಕಾಣೋಣ, ಅಸ್ತು.



## ದ್ವಿತೀಯ ಭಾಗ

ಶ್ರೀ ಶೃಂಗೇರಿ ಆದಿ ಶ್ರೀ ಶಂಕರಾಚಾರ್ಯರು ಶ್ರೀ ರತ್ನಗರ್ಭ ಗಣಪತಿಯನ್ನೂ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನೂ ಶ್ರೀ ಆದಿ ಜಗದ್ಗುರು ರೇವಣಸಿದ್ಧರಿಂದ ಪಡೆದು ಅನುಗ್ರಹೀತರಾದ ಬಳಿಕ, ತಮ್ಮ ಮಸ್ತಕದಲ್ಲಿ ಭಕ್ತಿಯಿಂದ ಧರಿಸಿ, " ಸು ಸಿದ್ಧ = ಶ್ರೀ ರಂಭಾಪುರೀ ಶ್ರೀ ರೇವಣಸಿದ್ಧರನ್ನು ಸ್ತುತಿಸುತ್ತಾ, ಶ್ರೀ ಶೃಂಗೇರಿಗೆ ಹಿಂತಿರುಗಿದರು.

ಆದಿ ಶ್ರೀ ಶಂಕರಾಚಾರ್ಯರು, ಶ್ರೀ ವೀರ ವೈಷ್ಣವ ಸಂಪ್ರದಾಯದ ಗುರು ಶ್ರೀ ಗೋವಿಂದ ಭಗವತ್ಪಾದರ ಗುರುಕುಲದಲ್ಲಿ ಕೆಲವು ದಿವಸಗಳಿದ್ದು, ಅವರಿಂದ ಅನುಗ್ರಹೀತವಾದ ಶ್ರೀ ವೈಷ್ಣವ ಸನ್ಯಾಸ ದೀಕ್ಷೆಯನ್ನು, ತಮ್ಮ ಮುಗ್ಧಾವಸ್ಥೆಯಲ್ಲಿ ಅದೇನೋ ಕಾರಣಾಂತರ ಸ್ವೀಕರಿಸಿದರೂ, ಶ್ರೀ ಆದಿ ಶಂಕರರು ಯಾವ ಜ್ಜೀವವೂ ಪರಮ ಶಿವೋಪಾಸಕರಾಗಿ, ಕೇವಲ ಶಿವ ಲಾಂಛನ ಲಾಂಛಿತರಾಗಿ ಬೆಳಗಿ, ಶಿವ ಸರ್ವೋತ್ತಮತ್ವವನ್ನು ನಭೋಮಂಡಲದೆತ್ತರಕ್ಕೆ ಎತ್ತಿಹಿಡಿದು ಸಾರಿದರು. ಇವರ ಕುಲದೈವ ಕೇರಳ ದೇಶದ ತ್ರಿಚೂರಿನ ಲಿಂಗರೂಪಿ ಶ್ರೀ ವೃಷಭಾಚಲೇಶ್ವರ ಮಹಾದೇವ. ಶಂಕರರ ತಾತ ಶ್ರೀ ವಿದ್ಯಾದಿರಾಜ, ತಂದೆ ಶಿವಗುರು; ತಾಯಿ ಆರ್ಯಾಂಬಾ, ಇವರೆಲ್ಲರೂ ಶತಮಾನಗಳಿಂದ ಪರಮ ಶೈವ ಸಂಪ್ರದಾಯದ ಶ್ರೇಷ್ಠ ಮನೆತನಕ್ಕೆ ಸೇರಿದವರು. ಅದರಂತೆಯೇ ಆದಿ ಶ್ರೀ ಶಂಕರರೂ ಸಹ

'ಪರಮ ಶೈವಾಚಾರ ಘನ ಸಂಪ್ರದಾಯದ ಶಿವೋಪಾಸಕರು. ಇದಕ್ಕನುಸಾರವಾಗಿ, ಕಾಲಟಿಯಲ್ಲಿ ಭಗವಾನ್ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳು ಸುಮಾರು ಐದು ವರ್ಷದ ಹಸುಳೆ ಶಂಕರರಿಗೆ ದರ್ಶನವಿತ್ತು, ತಮ್ಮ ಅಮೃತ ಮಯವಾದ ಹಸ್ತಮಸ್ತಕದ ಸಂಯೋಗ ಶಿವ ದೀಕ್ಷೆಯಿಂದ ತರಳನನ್ನು ಉದ್ಧರಿಸಿ, ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ ತಮ್ಮ ಪೂರ್ಣ ದಿವ್ಯಾನುಗ್ರಹಕ್ಕೆ ಪಾತ್ರನನ್ನಾಗಿ ಮಾಡಿಕೊಂಡಿದ್ದುದು ಸರಿಯಷ್ಟೆ.

ಆದಿ ಶ್ರೀ ಜಗದ್ಗುರು ರೇವಣಸಿದ್ಧರು ಅನುಗ್ರಹಿಸಿದ, "ಶ್ರೀ ರತ್ನಗರ್ಭ ಗಣಪತಿಯನ್ನು" ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಶ್ರೀ ಆದಿ ಶಂಕರರು ತಮ್ಮ ಮಸ್ತಕದಲ್ಲಿರಿಸಿ, ಮುಖದಲ್ಲಿ ಶಿವಪಂಚಾಕ್ಷರೀ ಮಹಾ ಮೂಲ ಮಂತ್ರವನ್ನು ಉಚ್ಚರಿಸುತ್ತಾ, ಮಹಾಗುರು ಶ್ರೀ ವೀರ ಸಿಂಹಾಸನಾಧೀಶ್ವರ ಶ್ರೀ ಲಿಂಗೋದ್ಭವ ಮಂಗಳ ಮೂರ್ತಿ ಆದಿ ಜ॥ ರೇವಣಸಿದ್ಧರ ಶ್ರೀ ಪಾದ ಸ್ಮರಣೆ ಯೊಂದಿಗೆ ಅಲ್ಲಿಂದ ಶ್ರೀ ಶೃಂಗೇರಿಗೆ ಹಿಂದಿರುಗಿದರು. ಆ ಕಾಲದಲ್ಲಿ ಋಷಿ ಮಹರ್ಷಿಗಳೂ, ಆಚಾರ್ಯವರ್ಯರೂ ಹಾಗೂ ಶಿವಶರಣರೂ, "ಮಸ್ತಕೇ ಲಿಂಗಧಾರಣಂ" ಶಿವಲಿಂಗವನ್ನು ಶ್ರೀ ಮಹಾ ಗುರುವಿನಿಂದ ವಿಧಿವತ್ತಾಗಿ ಪಡೆದು ಪೂಜಿಸಿದನಂತರ ತಮ್ಮ ಮಸ್ತಕದ ಜಟಾಭಾರದಲ್ಲಿ ಧರಿಸುತ್ತಲಿದ್ದರು.

ಈ ವಿಷಯ ವೀರಾಗಮದಿಂದ ಸ್ಪಷ್ಟಪಟ್ಟಿದೆ. ಬಹು ಪೂರ್ವದಲ್ಲಿ "ಶ್ರೀ ವ್ಯಾಸ, ಗೌತಮ, ವಾಲ್ಮೀಕಿ, ಶೌನಕ. ಗರ್ಗ, ವಸಿಷ್ಠ, ಜಮದಗ್ನಿ, ಉದುಕ, ಪರಾಶರ, ಆಶ್ಲಯ, ಭಸ್ತಿ, ಭೋದಾಯನ, ಜಾಲ, ಭಾರದ್ವಾಜ ದಂಡಿ, ಕಶ್ಯಪ, ಕೌಂತ, ಕನಕ, ಮರೀಚಿ, ಗಾದಿ ಪುತ್ರ, ಸನಕ, ಮಹಾರೋಪ ವಿಭಾಂಡಕ, ಯಜ್ಞವಲ್ಕ, ಮಾಲಿ ಮೊದಲಾದ ಅನೇಕ ಭೂ ಸುರರೂ ಮತ್ತು-

ದಧೀಚಿ, ದೂರ್ವಾಸ, ಗೌತಮ, ಮೃಕಂಡು, ಗುಹೇಶ, ಮಾರ್ಕಂಡ, ಗುಹ, ಉಪಮನ್ಯು, ವೃಷಭ, ಚಂಡಿ, ಭೃಂಗಿ, ಶಿಂಶುಮಾರ, ಡಿಂಡಿಮಾರ, ವೀರಭದ್ರ, ರೇಣುಕ, ಧರ್ಮ ಗುಪ್ತ, ಮೇಘನಾದ, ಸಿಂಹನಾದ, ನಂದಿ, ವಿಡಂಬಕ, ಕಮಲಾಕ್ಷ, ಕಾಂತಾ, ಕುಶರಾ ಮೊಲಾದ ಅನೇಕ ಭೂ ರುದ್ರರೂ ಸಹ, ಮಹಾಗುರುವಿನಿಂದ ಅನುಗ್ರಹೀತವಾದ ಶಿವಲಿಂಗಗಳನ್ನು ತಂತಮ್ಮ ಮಸ್ತಕ ದಲ್ಲಿ ಸದಾ ಧರಿಸಿ ಲಿಂಗಾಗಿಗಳೆಂದು ಪೂಜ್ಯರೆನಿಸಿದ್ದರು.

ಶ್ರೀ ಆದಿ ಶಂಕರಾಚಾರ್ಯರು ತಮ್ಮ ಶ್ರೀ ಶೃಂಗೇರಿ ಶಾರದಾ ಪೀಠದಲ್ಲಿ ಶ್ರೀ ರತ್ನಗರ್ಭ ಗಣಪತಿಯನ್ನು ಮತ್ತು ತಮ್ಮ ಆತ್ಮೀಯ ಆರಾಧ್ಯ ದೈವವೆನಿಸಿದ ಶ್ರೀ ಚಂದ್ರಮೌಳಿ ಲಿಂಗವನ್ನು ಪೂಜಾ ಗೃಹದ ರತ್ನಮಯ ಬಂಗಾರದ ಮುತ್ತಿನ

ಮಂಟಪದಲ್ಲಿರಿಸಿ, ವಿಧಿವತ್ತಾಗಿ ತ್ರಿಕಾಲಂಗಳಲ್ಲೂ ಪ್ರತಿನಿತ್ಯ ಭಕ್ತಿಯಿಂದ ಪೂಜಿಸಿ, ತಮ್ಮ ಶಿಷ್ಯ ಶ್ರೀ ಸುರೇಶ್ವರಾಚಾರ್ಯರಿಗೆ, ಎಲ್ಲ ವಿಷಯಗಳನ್ನು ವಿವರಿಸುತ್ತಾ, ಶ್ರೀ ಆದಿ ಜಗದ್ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರಿಂದ ತಮಗೆ ಪ್ರಾಪ್ತಿಯಾದ ಬಗೆಗೆ. ಸ್ವಾತ್ಮ ಪ್ರೀತಿಪುರಸ್ಸರ ಭಾವದಿಂದ ಅರುಹಿದರು. ಮತ್ತು ತಮ್ಮಿಂದ ಸ್ಥಾಪಿತವಾಗಿರುವ ಎಲ್ಲಾ ಅದ್ವೈತ ಮಠಗಳಲ್ಲಿ ಸೂರ್ಯ, ಚಂದ್ರ, ನದ ನದಿ ವಾಪೀಕೂಪ ತಟಾಕಗಳೂ, ವನಸ್ಪತಿ ವರ್ಗಗಳೂ ಭೂಮಿಯಲ್ಲಿರುವ ವರವಿಗೂ ಶ್ರೀ ರತ್ನಗರ್ಭ ಗಣಪತಿ, ಶ್ರೀ ಶಾರದಾ ದೇವಿ, ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗಾರಾಧನೆಗಳು ತ್ರಿಕಾಲಂಗಳಲ್ಲೂ ಅನನ್ಯ ಭಕ್ತಿ ಭಾವದಿಂದ ಸತತ ಆಚರಿಸತಕ್ಕ ದೆಂದೂ, ಶ್ರೀ ಚಂದ್ರಮೌಳೀಶ್ವರ ಲಿಂಗ ನಮ್ಮ ಪೀಠದ ಪರಮ ಆರಾಧ್ಯ ಪ್ರಧಾನ ದೇವತಾ ಸಾರ್ವಭೌಮನೆಂದು ಬೋಧಿಸಿದರು–

॥ ಯದ್ಯ ದಾಚರತಿ ಶ್ರೇಷ್ಠಾಃ । ಸ್ತ ತ್ತ ದೇವೇ ತರೇಜನಾಃ ॥

ಶ್ರೀ ಆದಿ ಜಗದ್ಗುರು ರೇವಣಸಿದ್ಧರು ಆದಿ ಶ್ರೀ ಶಂಕರಾಚಾರ್ಯರಿಗೆ ಶ್ರೀ ಚಂದ್ರಮೌಳಿಲಿಂಗವನ್ನು ಅನುಗ್ರಹಿಸುವುದಕ್ಕೆ ಮೊದಲು ಆಚಾರ್ಯ ಆದಿ ಶಂಕರರು ಯಾವ ಲಿಂಗ ಪೂಜೆಯನ್ನು ಮಾಡಿದಹಾಗೆ ಕಂಡುಬಂದಿಲ್ಲ– ಈ ಪದ್ಧತಿ ಆದಿ ಶ್ರೀ ಶಂಕರಾಚಾರ್ಯರಿಂದ ಪ್ರಾರಂಭಿಸಲ್ಪಟ್ಟಿತು. ಶ್ರೀ ಚಂದ್ರಮೌಳಿ ಲಿಂಗದಲ್ಲಿ ಆದಿ ಶ್ರೀ ಜಗದ್ಗುರು ರೇವಣಸಿದ್ಧರ ಚಿತ್ಕಳೆ ಮೂರ್ತಿವತ್ತಾಗಿ ವಿರಾಜಿತವಾಗಿದ. ॥ ಗುರು ಸಾಕ್ಷಾತ್ಪರ ಬ್ರಹ್ಮ ॥ ಎಂದಿದೆ ವೇದ. ಶಿವಲಿಂಗ ಮುಖದಿಂದ ಶ್ರೀ ಮಹಾ ಗುರು ಆವಿರ್ಭವಿಸುವನು. ॥ ಲಿಂಗ ಮಧ್ಯೇ ಮಹಾ ದೇವಃ । ಸಾಕ್ಷಾನಿತ್ಯಂ ವ್ಯವಸ್ಥಿತಃ । ಅನುಗ್ರಹಾಯ ಲೋಕಾನಾಂ । ತಸ್ಮಾಲ್ಲಿಂಗಂ ಪ್ರಪೂಜಯೇತ್ । ಹರಗುರುಗಳು ಹೇಗೆ ಅಭಿನ್ನರೋ ಅವರಂತೆ ಗುರು ಲಿಂಗ ತತ್ವಗಳು ಅಭಿನ್ನವೆನಿಸಿವ ಈ ರಹಸ್ಯವನ್ನು ಚಿದಾದಿತ್ಯ ಸ್ವರೂಪಿಯಾದ ತ್ರಿಭುವನಾಚಾರ್ಯವರೇಣ್ಯ ಶ್ರೀ ಆದಿ ಜಗದ್ಗುರು ರೇವಣಸಿದ್ಧರು ಆದಿ ಶ್ರೀ ಶಂಕರಾಚಾರ್ಯರಿಗೆ ಹೃದಯಂಗಮವಾಗಿ ಬೋಧಿಸುತ್ತಾ– " ಧರ್ಮೋ ಲಿಂಗಾರ್ಚನಾತ್ಮಕಃ " ಎಂದರುಹಿರುವರು. ಈ ಗುರು ಬೋಧಾಮೃತವನ್ನು ಶ್ರೀ ಶಂಕರರು ಸ್ಮರಿಸುತ್ತಾ ಶ್ರೀ ಚಂದ್ರಮೌಳೀಶ್ವರ ಲಿಂಗಾರಾಧನೆ ಪದ್ಧತಿಯನ್ನು ತಾವು ಪ್ರಥಮತಃ ಆಚರಿಸಿ, ಆದರ್ಶಪ್ರಾಯರಾದರು, ಈ ಹೊತ್ತಿಗೆ ಆದಿ ಶ್ರೀ ಶಂಕರಾಚಾರ್ಯರಿಗೆ ಸುಮಾರು ಇಪ್ಪತ್ತೈದು ವರ್ಷಗಳಿದ್ದಂತೆ ಕಾಣುತ್ತೆ. ಶ್ರೀ ಸುರೇಶ್ವರಾಚಾರ್ಯರಿಗೆ ಮೇಲುಕ್ತವಾದ ಎಲ್ಲಾ ವಿಷಯುಗಳನ್ನು ಮುಚ್ಚುಮರೆ ಇಲ್ಲದೆ ಬಿಚ್ಚಿದ ಮನದಿಂದ ಅರುಹಿ– ಶಂಕರರು ಶ್ರೀ ಶೃಂಗೇರಿಯಿಂದ " ಸಜಗಾಮ ಕಾಂಚೀಂ " ಶಿವ ಕಂಚಿಗೆ ಪ್ರಯಾಣ ಬೆಳಸಿದರು.

ಶ್ರೀ ಚಂದ್ರಮೌಳೀಶ್ವರ ಲಿಂಗ ಪ್ರದಾನದ ವಿಷಯವನ್ನು ಶ್ರೀ ಆದಿ ಶಂಕರರು ತಮ್ಮ ಅಪಾರ ಗ್ರಂಥ ಕೃತಿಗಳಲ್ಲಿ ಎಲ್ಲಿಯೂ ಪ್ರಸ್ತಾಪಿಸಿಲ್ಲ. ಶ್ರೀ ಸಾಯಣಾಚಾರ್ಯರು ತಮ್ಮ ಗ್ರಂಥರಾಶಿಯಲ್ಲಿ ಸಹ ಮೇಲ್ಕಂಡ ವಿಷಯ ಪ್ರಸ್ತಾಪಿಸಿಲ್ಲ. ಆದ್ದರಿಂದ ಶ್ರೀ ರಂಭಾಪುರೀ ವೀರಸಿಂಹಾಸನಾಧೀಶ್ವರ ಶ್ರೀ ಆದಿ ಜಗದ್ಗುರು ರೇವಣಸಿದ್ಧರು ಅನುಗ್ರಹಿಸಿರುವರೆಂಬುದನ್ನು ನಂಬಲು ಸಾಧ್ಯವಿಲ್ಲೆಂಬುದು ಕೆಲವು ಪಂಡಿತರ ಅಭಿಮತ. ಆದರೆ ನಿಜಕ್ಕೂ ಶ್ರೀ ಚಂದ್ರಮೌಳೀಶ್ವರ ಲಿಂಗ ಪ್ರದಾನದ ಮಂಗಳ ಘಟನೆ, ಶ್ರೀ ಶಂಕರರು ತಮ್ಮ ಅಖಂಡ ಭಾಷ್ಯ ರಚನಾದಿ ಕಾರ್ಯಗಳನ್ನೆಲ್ಲಾ ಪೂರ್ಣಗೊಳಿಸಿ, ಇನ್ನು ಮುಂದೆ ರಚಿಸಬೇಕಾದುದೇನೂ ಇಲ್ಲವಾಗಿ, ಕೃತಿ ರಚನೆಗಳಿಂದ ವಿರಮಿಸಿ, ಧ್ಯಾನ ಯೋಗದಲ್ಲಿ ತನ್ಮಯರಾಗಿದ್ದಾಗ, ಮೇಲ್ಕಂಡ ಮಂಗಳ ಘಟನೆ ಶಿವನಿಚ್ಛೆಯಂತೆ ನೆರವೇರಿತು. ಆದ್ದರಿಂದ ಶ್ರೀ ಶಂಕರರು ಈ ಪವಿತ್ರವಾದ ಶಿವ ಪೂಜಾ ವ್ರತವನ್ನು ಸ್ವತಃ ಆಚರಣೆಗೆ ತಂದು, ತಮ್ಮ ಶಿಷ್ಯ ಕೋಟಿಗೆ ಮೇಲುಕ್ತವಾದ ಸತ್ಯಾಂಶಗಳನ್ನು ನೇರವಾಗಿ ಪ್ರೀತ್ಯಾದರಗಳಿಂದ ಬೋಧಿಸಿರುತ್ತಾರೆ, ನಂತರ ಇದು ಕರ್ಣಾಕರ್ಣಿಕೆಯಾಗಿ ಜನತೆಯಲ್ಲಿ ಹರಡಿತು, ಅವರ ನಿತ್ಯೋಪಾಸನ ರೂಪದಲ್ಲಿ ಆಚರಣೆಗೊಳಪಟ್ಟಿದೆ. ಇದು ಗಮನಾರ್ಹವಿರುತ್ತೆ.

॥. ಸತ್ಯ ಮೇವೋದ್ಧ ರಾಮ್ಯಹಂ ॥



## ಅಧ್ಯಾಯ 21

॥ ಯತ್ರ ಶ್ರೀ ರೇಣುಕಾಚಾರ್ಯೋ । ವಿಶ್ವವಂ ದ್ಯೋ ಜಗದ್ಗುರುಃ ।
ತತ್ರ ಶ್ರೀ ರ್ವಿಜಯಃ ಕೀರ್ತಿಃ । ಶಾಂತಿ ರ್ಧರ್ಮ ಶುಭಂ ಸುಖಂ ॥

॥ ಯಸ್ಯ ಸ್ಮರಣ ಮಾತ್ರೇಣ । ನೃಣಾಂ ಮುಕ್ತಿಃ ಕರಸ್ಥಿತಂ ।
ತಂ ವಂದೇ ಜಗದಾ ಧಾರಂ । ರೇಣುಕಾರ್ಯಂ ಜಗದ್ಗುರುಃ ॥

॥ ಸ್ಥಾಪಕಾಯಚ ಧರ್ಮ ಸ್ಯ । ಸರ್ವ ಧರ್ಮ ಸ್ವರೂಪಿಣೇ ।
ಅವತಾರವರಿಷ್ಠಾಯ ಶ್ರೀ । ರೇಣುಕಾಚಾರ್ಯಾಯ ನಮಃ ॥

॥ ಸಚ್ಚಿದಾನಂದ ರೂಪಸ್ಯ । ಶಿವಸ್ಯಾಸ್ಯ ಸಮುದ್ಭವಂ ।
ಭೂ ಲೋಕೇ ಸೋಮನಾಥಸ್ಯ । ಗರ್ಭಾವಿರ್ಭೂತ ಮೀಶ್ವರಂ ॥

ಕ್ರಿ. ಪೂ. 509 ರಿಂದ ಶ್ರೀ ಆದಿ ಶಂಕರಾಚಾರ್ಯರನ್ನು ಮೊದಲು ಮಾಡಿ, ಆಗಿ ಹೋಗಿರುವ, ಶ್ರೀ ಶೃಂಗೇರಿ ಅದ್ವೈತ ಮಠದ ಹಾಗೂ ಶ್ರೀ ಶಿವಕಂಚಿ ಕಾಮ ಕೋಟಿ ಮಠದ ಶ್ರೀ ಗುರು ಪರಂಪರೆಯವರ ಸಂಕ್ಷಿಪ್ತ ವಿವರ, ಗಮನಾರ್ಹವೆನಿಸಿದೆ.

ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿದ್ದ ಕಾಲ ಯಾವುದೆಂಬುದನ್ನು ಅರಿಯಲು ಅವರು ಆದಿಕಾಲದಲ್ಲಿ ಸ್ಥಾಪಿಸಿದ ಮಠಗಳ ಕಾಲವನ್ನರಿಯುವುದೊಳ್ಳೆಯದು. ಅವರು ಸ್ಥಾಪಿಸಿದ ಚತುರಾಮ್ನಾಯ ಮಠಗಳಲ್ಲೂ ಮತ್ತು ಶ್ರೀ ಕಂಚಿ ಕಾಮಕೋಟಿ ಮಠದಲ್ಲೂ ಆದಿ ಶ್ರೀ ಶಂಕರರಿಂದ ಈವರೆವಿಗೂ ಎಷ್ಟು ಜನ ಆಚಾರ್ಯರು ಅಧಿಪತಿಗಳಾಗಿದ್ದರೆಂಬುದು ಸಹ ಆದಿ ಶ್ರೀ ಶಂಕರರಿದ್ದ ಕಾಲ ನಿರ್ಣಯಕ್ಕೆ ಸಹಾಯವಾಗುವುದು. ಮೂರನೆಯದಾಗಿ ಮೇಲುಕ್ತವಾದ ಅದ್ವೈತ ಮಠಗಳಲ್ಲಿನ ಬಹು ಪ್ರಾಚೀನ ಕಾಲದ ಓಲೆಗರಿ ಲಿಖಿತಗಳೂ, ಹಸ್ತಾಕ್ಷರದ ಕಡತ, ತಾಮ್ರದ ಶಾಸನಗಳೂ ಈ ದಿಶೆಯಲ್ಲಿ ಪ್ರಮುಖ ದಾಖಲಾತಿಗಳೆನಿಸಿವೆ. ಶ್ರೀ ಕಂಚಿ ಕಾಮಕೋಟಿ ಮಠಾಧಿಪತಿಗಳು, ಆದಿ ಶಂಕರರು ಸ್ಥಾಪಿಸಿರುವ ಎಲ್ಲಾ ಮಠಗಳಲ್ಲೂ ಮೇಲುಕ್ತವಾದ ಪ್ರಾಚೀನ ದಾಖಲಾತಿಗಳು ಇರುವುದಾಗಿ ಅಭಿಪ್ರಾಯ ಪಟ್ಟಿದ್ದಾರೆ. ಶ್ರೀ ಶಿವಕಂಚಿ ಕಾಮಕೋಟಿ ಮಠ ಕ್ರಿ. ಪೂ. 483ರಲ್ಲಿ ಶ್ರೀ ಆದಿ ಶಂಕರಾಚಾರ್ಯರು ಸ್ಥಾಪಿಸಿರುವುದಾಗಿ ಈ ಮಠಾಧ್ಯಕ್ಷರು ಸ್ಪಷ್ಟಪಡಿಸಿ, ಅಲ್ಲಿಂದ ಈವರವಿಗೂ ಈ ಕಂಚಿ ಮಠಕ್ಕೆ 67 ಜನ ಆಚಾರ್ಯ ಮಹೋದಯರು ಆಗಿ ಹೋಗಿ, ಸದ್ಯ ವರ್ತಮಾನಕಾಲದಲ್ಲಿರುವ ಪರಮ ಪೂಜ್ಯ ಜ॥ ಶ್ರೀಶ್ರೀಶ್ರೀ ಚಂದ್ರಶೇಖರ ಸರಸ್ವತಿಯವರೂ ಮತ್ತು ಜ॥ ಶ್ರೀ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಆದಿ ಶ್ರೀ ಶಂಕರಾಚಾರ್ಯರಿಂದ ತಾವುಗಳು 68 ಮತ್ತು 69ನೇ ಕಂಚಿ ಕಾಮಕೋಟಿ ಪೀಠಾಚಾರ್ಯರುಗಳೆಂದು ಅಧಿಕೃತವಾಗಿ ಸ್ಪಷ್ಟಪಡಿಸಿರುತ್ತಾರೆ. ಆದರೆ

ಶ್ರೀ ಶೃಂಗೇರಿಯ ಇಂದಿನ ದಕ್ಷಿಣಾಮ್ನಾಯ ಮಠಾಧಿಪತಿಗಳಾದ ಪರಮ ಪೂಜ್ಯ ಜ॥ ಶ್ರೀಶ್ರೀಶ್ರೀ ಅಭಿನವ ವಿದ್ಯಾ ತೀರ್ಥ ಮಹಾ ಸ್ವಾಮಿಗಳು, ತಾವು ಆದಿ ಶ್ರೀ ಶಂಕರಾಚಾರ್ಯರಿಂದ 35 ನೇ ಪೀಠಾಧಿಪತಿಗಳೆಂದೂ, ತಮ್ಮ ಉತ್ತರಾಧಿಕಾರಿ ಪೀಠಾಧ್ಯಕ್ಷ ಜ॥ ಶ್ರೀ ಶ್ರೀ ಶ್ರೀ ಭಾರತಿ ತೀರ್ಥರು 36ನೇ ಪೀಠಾಧಿಪತಿಗಳೆಂದು ಅಧಿಕೃತವಾಗಿ ಸ್ಪಷ್ಟಪಡಿಸಿರುವರು.

ಕಂಚಿ ಕಾಮಕೋಟಿ ಮಠದಲ್ಲಿ ಆದಿ ಶ್ರೀ ಶಂಕರಾಚಾರ್ಯರನ್ನು ಮೊದಲು

ಮಾಡಿ ಕ್ರಿ. ಪೂ. 483 ರಿಂದ ಇಲ್ಲಿಯವರೆವಿಗೆ ಪೀಠಾಧ್ಯಕ್ಷರುಗಳಾಗಿ, ಆಗಿಹೋಗಿರುವ ಪರಮಾಚಾರ್ಯರ ವಿವರಗಳಿಂದ ಕೂಡಿದ ಹೆಸರುಗಳು ಈ ಕೆಳಗೆ ಉಲ್ಲೇಖಿಸಲಾಗಿದೆ.

ಶ್ರೀ ಶಿವಕಂಚಿ ಕಾಮಕೋಟಿ ಮಠದ, ಕ್ರಿ. ಪೂ, 483 ರಿಂದ ಕಾಣುವ ಪೀಠಾಧಿಪತಿಗಳು–

| | ಪೀಠಾಧೀಶ್ವರರು | ಕಾಲಮಾನ (ಕ್ರಿ. ಪೂ.) | ಅಧಿಕಾರದಲ್ಲಿದ್ದ ವರ್ಷಗಳು |
|---|---|---|---|
| 1. | ಆದಿ ಶ್ರೀ ಜ॥ ಶಂಕರಾಚಾರ್ಯರು | 483-476 | 6 |
| 2. | ಶ್ರೀ ಸುರೇಶ್ವರಾಚಾರ್ಯ | 406 | 70 |
| 3. | ಶ್ರೀ ಸರ್ವಜ್ಞಾತ್ಮನ್ ಗುರುಗಳು | 364 | 42 |
| 4. | ಶ್ರೀ ಸತ್ಯಬೋಧ | 268 | 96 |
| 5. | ಶ್ರೀ ಜ್ಞಾನಾನಂದ | 205 | 63 |
| 6. | ಶ್ರೀ ಶುದ್ಧಾನಂದ | 124 | 81 |
| 7. | ಶ್ರೀ ಆನಂದಜ್ಞಾನ | 55 | 69 |
| | | (ಕ್ರಿ. ಶಕ) | |
| 8. | ಶ್ರೀ ಕೈವಲ್ಯಾನಂದ | 28 | 83 |
| 9. | ಶ್ರೀ ಕೃಪಾಶಂಕರ-2 | 69 | 41 |
| 10. | ಶ್ರೀ ಸುರೇಶ್ವರ | 127 | 58 |
| 11. | ಶ್ರೀ ಚಿದ್ಘನ | 172 | 45 |
| 12. | ಶ್ರೀ ಚಂದ್ರಶೇಖರ-1 | 235 | 63 |
| 13. | ಶ್ರೀ ಸಚ್ಚಿದ್ಘನ | 272 | 37 |
| 14. | ಶ್ರೀ ವಿದ್ಯಾಘನ-1 (ಶಕ 239) | 317 | 45 |
| 15. | ಶ್ರೀ ಗಂಗಾಧರ-1 | 329 | 12 |
| 16. | ಶ್ರೀ ಉಜ್ವಲಶಂಕರ-3 | 367 | 38 |
| 17. | ಶ್ರೀ ಸದಾಶಿವ | 375 | 8 |
| 18. | ಶ್ರೀ ಸುರೇಂದ್ರ (ಕಲಿ 3486) | 385 | 10 |
| 19. | ಶ್ರೀ ವಿದ್ಯಾಘನ-2 | 398 | 13 |
| 20. | ಶ್ರೀ ಮೂಕಶಂಕರ-4 (ಶಕ 359) | 437 | 39 |

| | ಪೀಠಾಧೀಶ್ವರರು | ಕಾಲಮಾನ (ಕ್ರಿ. ಶಕ) | ಅಧಿಕಾರದಲ್ಲಿದ್ದ ವರ್ಷಗಳು |
|---|---|---|---|
| 21. | ಶ್ರೀ ಚಂದ್ರಚೂಡ-1 | 447 | 10 |
| 22. | ಶ್ರೀ ಪರಿಪೂರ್ಣ ಬೋಧಾ | 481 | 34 |
| 23. | ಶ್ರೀ ಸಚ್ಚಿತ್ಸುಖ | 512 | 31 |
| 24. | ಶ್ರೀ ಚಿತ್ಸುಖ-1 | 527 | 15 |
| 25. | ಶ್ರೀ ಸಚ್ಚಿದಾನಂದ ಘನ (ಶಕ 470) | 548 | 21 |
| 26. | ಶ್ರೀ ಪ್ರಜ್ಞಾನ ಘನ | 564 | 16 |
| 27. | ಶ್ರೀ ಚಿದ್ವಿಲಾಸ | 577 | 13 |
| 28. | ಶ್ರೀ ಮಹಾದೇವ-1 | 601 | 24 |
| 29. | ಶ್ರೀ ಪೂರ್ಣ ಬೋಧ | 618 | 17 |
| 30. | ಶ್ರೀ ಬೋಧ-1 | 665 | 37 |
| 31. | ಶ್ರೀ ಬ್ರಂಹ್ಮಾನಂದ ಘನ-1 | 668 | 13 |
| 32. | ಶ್ರೀ ಚಿದ್ಘನಾನಂದ ಘನ | 672 | 4 |
| 33. | ಶ್ರೀ ಸಚ್ಚಿದಾನಂದ-2 | 692 | 20 |
| 34. | ಶ್ರೀ ಚಂದ್ರಶೇಖರ-2 | 710 | 18 |
| 35. | ಶ್ರೀ ಚಿತ್ಸುಖ-2 | 737 | 27 |
| 36. | ಶ್ರೀ ಚಿತ್ಸುಖಾನಂದ | 758 | 21 |
| 37. | ಶ್ರೀ ವಿದ್ಯಾಘನ-3 | 788 | 30 |
| 38. | ಶ್ರೀ ಅಭಿನವ ಶಂಕರಾಚಾರ್ಯರು (ಕಲಿ 3941) | 840 | 52 |
| 39. | ಶ್ರೀ ಸಚ್ಚಿದ್ವಿಲಾಸ | 873 | 33 |
| 40. | ಶ್ರೀ ಮಹಾದೇವ-2 | 915 | 42 |
| 41. | ಶ್ರೀ ಗಂಗಾಧರ-2 | 950 | 35 |
| 42. | ಶ್ರೀ ಬ್ರಹ್ಮಾನಂದ ಘನ–2 | 978 | 28 |
| 43. | ಶ್ರೀ ಆನಂದ ಘನ | 1014 | 36 |
| 44. | ಶ್ರೀ ಪೂರ್ಣಬೋಧ–2 | 1040 | 26 |
| 45. | ಶ್ರೀ ಪರಮಶಿವ–1 | 1061 | 21 |
| 46. | ಶ್ರೀ ಬೋಧ–2 | 1098 | 37 |
| 47. | ಶ್ರೀ ಚಂದ್ರಶೇಖರ–3 | 1166 | 68 |
| 48. | ಶ್ರೀ ಅದ್ವೈತಾನಂದ ಬೋಧ | 1200 | 34 |

| ಪೀಠಾಧೀಶ್ವರರು | ಕಾಲಮಾನ (ಕ್ರಿ. ಶಕ) | ಅಧಿಕಾರದಲ್ಲಿದ್ದ ವರ್ಷಗಳು |
|---|---|---|
| 49. ಶ್ರೀ ಮಹಾದೇವ-3 | 1247 | 47 |
| 50. ಶ್ರೀ ಚಂದ್ರಚೂಡ-2 | 1297 | 50 |
| 51. ಶ್ರೀ ವಿದ್ಯಾತೀರ್ಥ | 1385 | 86 |
| 52. ಶ್ರೀ ಶಂಕರಾನಂದ | 1417 | 32 |
| 53. ಶ್ರೀ ಪೂರ್ಣಾನಂದ ಸದಾಶಿವ | 1498 | 81 |
| 54. ಶ್ರೀ ಮಹಾದೇವ-4 | 1507 | 9 |
| 55. ಶ್ರೀ ಚಂದ್ರಚೂಡ-3 | 1524 | 17 |
| 56. ಶ್ರೀ ಸರ್ವಜ್ಞ ಸದಾಶಿವಬೋಧ | 1539 | 15 |
| 57. ಶ್ರೀ ಪರಮಶಿವ-2 | 1586 | 47 |
| 58. ಶ್ರೀ ಆತ್ಮಬೋಧ | 1638 | 52 |
| 59. ಶ್ರೀ ಬೋಧ-3 | 1692 | 54 |
| 60. ಶ್ರೀ ಅದ್ವಯಾತ್ಮಪ್ರಕಾಶ್ | 1704 | 12 |
| 61. ಶ್ರೀ ಮಹಾದೇವ-5 | 1746 | 42 |
| 62. ಶ್ರೀ ಚಂದ್ರಶೇಖರ-4 | 1783 | 37 |
| 63. ಶ್ರೀ ಮಹಾದೇವ-6 | 1814 | 31 |
| 64. ಶ್ರೀ ಚಂದ್ರಶೇಖರ-5 | 1851 | 37 |
| 65. ಶ್ರೀ ಮಹಾದೇವ-7 | 1891 | 40 |
| 66. ಶ್ರೀ ಚಂದ್ರಶೇಖರ-6 | 1908 | 17 |
| 67. ಶ್ರೀ ಮಹಾದೇವ-8 | 1908 | 7 ದಿನಗಳು ಮಾತ್ರ |
| 68. ಶ್ರೀ ಚಂದ್ರಶೇಖರ ಸರಸ್ವತಿ | 1908 | ಇಂದಿನ ಹಿರಿಯ ಶ್ರೀ ಜಗದ್ಗುರುಗಳು |
| 69. ಶ್ರೀ ಜಯೇಂದ್ರ ಸರಸ್ವತಿ | – | ಇಂದಿನ ಕಿರಿಯ ಶ್ರೀ ಜಗದ್ಗುರುಗಳು |

(68 ಮತ್ತು 69ನೇ ಉಭಯ ಶ್ರೀ ಜಗದ್ಗುರುಗಳು ಕಂಚಿ ಕಾಮಕೋಟಿ ಮಠದಲ್ಲಿ ಪೀಠಾಧ್ಯಕ್ಷರುಗಳಾಗಿ ವಿರಾಜಿಸುತ್ತಾ ಭಕ್ತರನ್ನು ಈಗ ಅನುಗ್ರಹಿಸುತ್ತಲಿದ್ದಾರೆ)

ಮೇಲುಕ್ತವಾದ 69 ಆಚಾರ್ಯರು ಶ್ರೀ ಶಿವಕಂಚಿ ಕಾಮಕೋಟಿ ಮಠದ ಪರಮಾಚಾರ್ಯರುಗಳು. ಪ್ರತಿಯೊಬ್ಬರೂ ಸುಮಾರು 36 ವರ್ಷಗಳು ಈ ಪೀಠದ ಅಧಿಪತಿಗಳಾಗಿದ್ದರೆಂದು ಭಾವಿಸಿದರೂ, ಈ ಮಠ ಇಲ್ಲಿಗೆ ಸುಮಾರು 2484 ವರ್ಷಗಳ ಪೂರ್ವದಲ್ಲಿ ಸ್ಥಾಪಿತವಾದ ಮಠವೆಂದು ವ್ಯಕ್ತಪಡುತ್ತೆ. ಶ್ರೀ ಶಿವಕಂಚಿ

ಕಾಮಕೋಟಿ ಮಠವನ್ನು ಶ್ರೀ ಆದಿ ಶಂಕರಾಚಾರ್ಯರು ಕ್ರಿ.ಪೂ. 483ರಲ್ಲಿ ಸ್ಥಾಪಿಸಿ ತಾವು ಆರು ವರ್ಷಕಾಲ ಅಧಿಪತಿಗಳಾಗಿದ್ದು ಕ್ರಿ.ಪೂ. 477-76 ರಲ್ಲಿ ಬ್ರಹ್ಮೈಕ್ಯ ರಾದರೆಂಬುದು ಕಾಮಕೋಟಿ ಮಠದ ಪ್ರಾಚೀನ ಆಧಾರಗಳಿಂದ ಕಂಡುಬರುತ್ತೆ.

ಶ್ರೀ ಶೃಂಗೇರಿ ಶಂಕರಮಠದ ಶ್ರೀ ಗುರು ಪರಂಪರೆ ಬಗೆಗೆ ಇಂದಿನ ಜಗ ಶ್ರೀಶ್ರೀಶ್ರೀ ಅಭಿನವ ವಿದ್ಯಾತೀರ್ಥ ಮಹಾ ಸ್ವಾಮಿಗಳು ವ್ಯಕ್ತಪಡಿಸಿರುವಂತೆ, ಆದಿ ಶ್ರೀ ಶಂಕರಾಚಾರ್ಯರಿಂದ ತಾವು 35ನೇ ಆಚಾರ್ಯರೆಂದು ಘೋಷಿಸಿರುವರು, ಈ ಪೀಠದ ಶ್ರೀ ಗುರು ಪರಂಪರೆ ಇದರಡಿ ವಿವರಿಸಲಾಗಿದೆ.

## ಶ್ರೀ ಶೃಂಗೇರಿ ದಕ್ಷಿಣಾಮ್ನಾಯ ಮಠದ ಶ್ರೀ ಗುರುಪರಂಪರೆ

1. ಶ್ರೀ ಶಂಕರ ಭಗವತ್ಪಾದಾಚಾರ್ಯರು
2. ಶ್ರೀ ಸುರೇಶ್ವರಾಚಾರ್ಯರು
3. ಶ್ರೀ ನಿತ್ಯಬೋಧಘನಾಚಾರ್ಯರು
4. ಶ್ರೀ ಜ್ಞಾನಘನಾಚಾರ್ಯರು
5. ಶ್ರೀ ಜ್ಞಾನೋತ್ತಮಾಚಾರ್ಯರು
6. ಶ್ರೀ ಜ್ಞಾನಗಿರ್ವಾಚಾರ್ಯರು
7. ಶ್ರೀ ಸಿಂಹಗಿರ್ವಾಚಾರ್ಯರು
8. ಶ್ರೀ ಈಶ್ವರತೀರ್ಥ
9. ಶ್ರೀ ನರಸಿಂಹತೀರ್ಥ
10. ಶ್ರೀ ವಿದ್ಯಾಶಂಕರತೀರ್ಥ
11. ಶ್ರೀ ಭಾರತಿಕೃಷ್ಣ ತೀರ್ಥ
12. ಶ್ರೀ ವಿದ್ಯಾರಣ್ಯಗುರು
13. ಶ್ರೀ ಚಂದ್ರಶೇಖರ ಭಾರತಿ–1
14. ಶ್ರೀ ನರಸಿಂಹಭಾರತಿ-1
15. ಶ್ರೀ ಚಂದ್ರಶೇಖರ ಭಾರತಿ-2
16. ಶ್ರೀ ಪುರುಷೋತ್ತಮಭಾರತಿ-1
17. ಶ್ರೀ ಶಂಕರಾನಂದಭಾರತಿ
18. ಶ್ರೀ ಚಂದ್ರಶೇಖರಭಾರತಿ–3
19. ಶ್ರೀ ನರಸಿಂಹಭಾರತಿ-2
20. ಶ್ರೀ ಪುರುಷೋತ್ತಮಭಾರತಿ-2
21. ಶ್ರೀ ರಾಮಚಂದ್ರಭಾರತಿ
22. ಶ್ರೀ ನರಸಿಂಹಭಾರತಿ-3

23. ಶ್ರೀ ನರಸಿಂಹಭಾರತಿ-4
24. ಶ್ರೀ ಅಭಿನವ ನರಸಿಂಹಭಾರತಿ-1
25. ಶ್ರೀ ಸಚ್ಚಿದಾನಂದಭಾರತಿ-1
26. ಶ್ರೀ ನರಸಿಂಹಭಾರತಿ-5
27. ಶ್ರೀ ಸಚ್ಚಿದಾನಂದಭಾರತಿ-2
28. ಶ್ರೀ ಅಭಿನವ ಸಚ್ಚಿದಾನಂದಭಾರತಿ-1
29. ಶ್ರೀ ಅಭಿನವ ನರಸಿಂಹಭಾರತಿ-2
30. ಶ್ರೀ ಸಚ್ಚಿದಾನಂದಭಾರತಿ-3
31. ಶ್ರೀ ಅಭಿನವ ಸಚ್ಚಿದಾನಂದಭಾರತಿ-2
32. ಶ್ರೀ ನರಸಿಂಹಭಾರತಿ-6
33. ಶ್ರೀ ಸಚ್ಚಿದಾನಂದ ಶಿವಾಭಿನವ ನರಸಿಂಹಭಾರತಿ
34. ಶ್ರೀ ಚಂದ್ರಶೇಖರಭಾರತಿ-4
35. **ಶ್ರೀ ಅಭಿನವ ವಿದ್ಯಾತೀರ್ಥರು** ಇಂದಿನ ಹಿರಿಯ ಶ್ರೀ ಜ॥ ಗುರುಗಳು
36. **ಶ್ರೀ ಭಾರತಿತೀರ್ಥರು** ಇಂದಿನ ಕಿರಿಯ ಶ್ರೀ ಜಗದ್ಗುರುಗಳು.

ಮೇಲ್ಕಂಡ ಉಭಯ ಶ್ರೀ ಶಂಕರ ಮಠಗಳ ಗುರು ಪರಂಪರೆಯಿಂದ ಕಾಣು ವುದೇನೆಂದರೆ, ಶ್ರೀ ಶೃಂಗೇರಿ ಪೀಠದಲ್ಲಿ ಆದಿ ಶ್ರೀ ಶಂಕರಾಚಾರ್ಯರಿಂದ ಇಲ್ಲಿಯುವರೆಗೆ 36 ಪೀಠಾಧಿಪತಿಗಳೆಂದೂ ಮತ್ತೂ ಶ್ರೀ ಕಂಚಿ ಕಾಮಕೋಟಿ ಪೀಠದಲ್ಲಿ ಆದಿ ಶಂಕರಾಚಾರ್ಯರನ್ನು ಮೊದಲು ಮಾಡಿ, ಇಲ್ಲಿಯುವರೆವಿಗೆ 69 ಪೀಠಾಧಿಪತಿಗಳೆಂದು ಕಂಡುಬಂದಿದೆ, ಶ್ರೀ ಶೃಂಗೇರಿ ಮಠದಲ್ಲಿ 33 ತಲೆಮಾರಿನ ಗುರುಗಳು ಕಮ್ಮಿ ಎಂಬುದು ವ್ಯಕ್ತಪಟ್ಟಿದೆ. ಉಭಯ ಮಠಗಳ ಶ್ರೀ ಗುರು ಪರಂಪರೆಯಲ್ಲಿ ನಾಲ್ಕಾರು ತಲೆಗಳ ವ್ಯತ್ಯಾಸ ದೊಡ್ಡದೇನಲ್ಲ. ಆದರೆ 33 ತಲೆಮಾರಿನ ಗುರುಗಳು ಶೃಂಗೇರಿಯುಲ್ಲಿರಲಿಲ್ಲವೆಂದರೆ ಅದು ಹೇಗೆ ಸಾಧ್ಯ. ಪ್ರತಿ ಆಚಾರ್ಯರು ಸರಾಸರಿ 36 ವರ್ಷಗಳ ಕಾಲ ಅಧಿಪತಿಗಳಾಗಿದ್ದರೆಂದು ಭಾವಿಸಿದರೂ ಸುಮಾರು **1296** ವರ್ಷ ಗಳಾಗುತ್ತವೆ ಅಂದರೆ ಕ್ರಿ. ಶ. ಎಂಟನೆಯ ಶತಮಾನವೆಂದಾಗುತ್ತದೆ. ಕಾಮಕೋಟಿ ಮಠದಲ್ಲೂ 69 ಆಚಾರ್ಯರು ಸರಾಸರಿ 36 ವರ್ಷಗಳ ಕಾಲ ಅಧಿಪತಿಗಳಾಗಿದ್ದರೆಂದು ನೋಡಲಾಗಿ **2484** ವರ್ಷಗಳಾಗುತ್ತೆ ಅಲ್ಲಿಗೆ ಕ್ರಿ. ಪೂ. ಐದನೆಯ ಶತಮಾನವೆಂದಾ ಗುತ್ತೆ. ಶೃಂಗೇರಿ ಮಠಕ್ಕಿಂತಲೂ ಕಂಚಿಮಠ **1188** ವರ್ಷಗಳಷ್ಟು ಪೂರ್ವ ದೆಂದಾಗುತ್ತೆ ಅದಕ್ಕನುಗುಣವಾಗಿ ಶ್ರೀ ಗುರು ಪರಂಪರೆ, ಶೃಂಗೇರಿಗಿಂತ 33 ಆಚಾ ರ್ಯರು ಕಾಮಕೋಟಿ ಪೀಠದಲ್ಲಿ ಹೆಚ್ಚುವರಿಯಾಗಿದ್ದಾರೆ. ಕಂಚಿ ಪೀಠಾಚಾರ್ಯರು

ಚತುರಾಮ್ನಾಯ ಮಠಗಳಲ್ಲೂ ತಮ್ಮ ಮಠದಂತೆಯೇ 70, 74 ಆಚಾರ್ಯರು ಆಗಿ ಹೋಗಿರುತ್ತಾರೆಂದು ಆ, ಆ ಮಠಗಳ ಬಹು ಪ್ರಾಚೀನವಾದ ಮೂಲ ದಾಖಲಾತಿಗಳಿಂದ ಕಾಣಬಹುದೆಂದು ಶೃತಪಡಿಸಿರುವರು.



## ಅಧ್ಯಾಯ 22

॥ ವೇದಃ ಶಿವಃ ಶಿವೋ ವೇದಃ ।
ವೇದಾ ಧ್ಯಾಯಿ ಸದಾ ಶಿವಃ ॥

ಚತುರ್ವೇದಗಳು ಅಪೌರುಷೇಯವಾಣಿ ಎನಿಸಿವೆ. ಪರಮೇಶ್ವರನ ದಿವ್ಯ ಮುಖ ಕಮಲದಿಂದ ಅನಾಯಾಸವಾಗಿ ಅಂದರೆ ಶ್ವಾಸೋಚ್ಛ್ವಾಸ ರೂಪದಲ್ಲಿ ಹೊರ ಹೊಮ್ಮಿದ ಪರತತ್ವದ ಬೋಧಾಮೃತ. ಇದರಿಂದ ಪರಶಿವ ತತ್ವ ರಹಸ್ಯವನ್ನು ಅರಿಯಲು ನೆರವಾಗಿದೆ. ಈ ಕಾರಣದಿಂದ ವೇದವೆಂದರೆ ಶಿವ ಮತ್ತು ಶಿವನೇ ವೇದ ರೂಪದಲ್ಲಿ ಭಾಸಮಾನವಾಗಿದ್ದಾನೆ. ಇಂತಪ್ಪ ಶಿವನ ಸರ್ವಾತ್ಮಕತ್ವ ಸರ್ವಾಂತರ್ಯಾಮಿತ್ವಾದಿ ಅಗಣಿತ ಮಹಿಮೆಯನ್ನು ಸ್ವಾನುಭೂತಿಯಲ್ಲಿ ಕಂಡು ಅನುಸಂಧಾನ ಮಾಡುವ ಹಾಗೂ ಋಗ್, ಯಜುರ್, ಸಾಮ ಮತ್ತು ಅಥರ್ವಣ ವೇದಗಳನ್ನು ಶ್ರೀ ಗುರು ಮುಖದಿಂದ ನಿತ್ಯ ಅಧ್ಯಯನ ಮಾಡುವಾತ ನಿಜಕ್ಕೂ ಶಿವನೇ ಆಗುವನು. (ಇತಿ ವೇದಃ)

ಈ ಕಾರಣದಿಂದ ವಿಶೇಶತಃ ವೀರಶೈವ ಬ್ರಹ್ಮಚಾರಿ ವಟುಗಳೂ, ಶಿವಾಚಾರ್ಯರುಗಳೂ, ಋತ್ವಿಕ್‌ಗಳೂ ಹಾಗೂ ಪುರೋಹಿತರೂ, ಚಿಕ್ಕಂದಿನಲ್ಲೇ ಅವರವರ ಶ್ರೀ ಗುರು ಪೀಠಗಳಿಗೆ ಅನ್ವಯಿಸಿದ ವೇದ ಮಂತ್ರಗಳನ್ನು ಆ, ಆ ವರ್ಗದ ಘನ ಪಾಠಿಗಳಿಂದ ಬೋಧಿತರಾಗಬೇಕು. ವೇದ ಮಂತ್ರಗಳ ಉಚ್ಛಾರಣೆ ಇತ್ಯಾದಿಗಳೂ ಸುಸ್ವರದಿಂದ, ಒಳ್ಳೇ ಶಾರೀರದಿಂದ, ನಿರಂತರ ಅಭ್ಯಾಸೇನ, ವಿಮುಕ್ತವಾದ ಉಚ್ಚಾರಣೆಯಲ್ಲಿ ಆರೋಹಣ ಅವರೋಹಣಗಳ ಪದ್ಧತಿಗಳನ್ನು ಚಾಚು ತಪ್ಪದೆ, ಘನ ಗಂಭೀರವಾಗಿ ಅರ್ಥ ಪೂರ್ವಕ ಮಂತ್ರೋಚ್ಛಾರಣೆ

ಮಾಡುವುದರಲ್ಲಿ ನೈಪುಣ್ಯವನ್ನು ಪಡೆದಿರಬೇಕು. ಈ ದಿಶೆಯಲ್ಲಿ ಅಭ್ಯಸಿಸುವವರು ಸಾಕಷ್ಟು ಅಮರ ಕೋಶತ್ರಯಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರಬೇಕು. ಜ್ಞಾಪಕ ಶಕ್ತಿ, ಸುಖವಾದ ಶಾರೀರ ( ಮಧುರ ಕಂಠ ) ಆಸಕ್ತಿ ಮತ್ತು ಬ್ರಹ್ಮಚರ್ಯದ ಓಜಸ್ಸು ಮುಖಮಂಡಲದಲ್ಲಿ ಕಾಂತಿಯುಕ್ತವಾಗಿರಬೇಕು. ಇವೆಲ್ಲಾ ಲಕ್ಷಣಗಳು ಶ್ರೀಗುರು ಕೃಪೆಯಿಂದ, ಶ್ರದ್ಧಾಭಕ್ತಿಯಿಂದ ಹಾಗೂ ವೇದ, ವೇದಾಂತ ಸಿದ್ಧಾಂತಗಳಲ್ಲಿ ಪ್ರವೀಣರಾದ ಘನಪಾಠಿಗಳ ಸಂಘ, ಸೇವೆ, ತ್ಯಾಗ ಮತ್ತು ಸತತ ಅಭ್ಯಾಸಗಳಿಂದ ಮೈಗೂಡಿಸಿಕೊಳ್ಳಬಹುದು. ವೀರಶೈವ ಮತದ ವೀರ ಮಾಹೇಶ್ವರ ಗುರು ವರ್ಗದವರೆಲ್ಲರೂ, ತಮ ತಮಗೆ ಅನ್ವಯಿಸಿರುವ ವೇದ ಮಂತ್ರಭಾಗಗಳನ್ನು ಪ್ರಾಣಕ್ಕೆ ಸಮನಾಗಿ ಭಾವಿಸಿ ಶ್ರಮಿಸಿ ಚಿಕ್ಕಂದಿನಲ್ಲಿ ವೇದ ಪಠನೆ, ಉಚ್ಚಾರಣೆಗಳಲ್ಲಿ ಪಾರಂಗತರಾದರೆ, ಮುಂದೆ ಇವರು ಮಠಾಧಿಪತಿಗಳಾದಾಗ, ತಾವು ಅಭ್ಯಾಸಿಸಿದ ವೇದ ಪಾಠ, ಮಂತ್ರೋಚ್ಚಾರಣಾದಿ ಕೌಶಲ್ಯವನ್ನು ನೂರಾರು ತರುಣ ವಟುಗಳನು ಈ ದಿಶೆಯಲ್ಲಿ ಪಳಗಿಸಿ, ಅವರನ್ನೂ ಸಿದ್ಧಪುರುಷರನ್ನಾಗಿ ಮಾಡಲು ಅನುವಾಗುತ್ತೆ.

॥ ವೇದಾ ಧ್ಯಾಯಿ ಸದಾಶಿವಃ ॥

॥ ಊರ್ಧ್ವಾಯ ನಮಃ । ಊರ್ಧ್ವ ಲಿಂಗಾಯ ನಮಃ ।
ಹಿರಣ್ಯಾಯ ನಮಃ । ಹಿರಣ್ಯ ಗರ್ಭಾಯ ನಮಃ ॥
ಶಿವಾಯ ನಮಃ ಶಿವ ಲಿಂಗಾಯ ನಮಃ ।
ಸರ್ವ ಲಿಂಗಂ ಸ್ಥಾಪಯತಿ ॥
॥ ಊರ್ಧ್ವ ಮೂಲ ಮಧಃ ಶಾಖ । ಮಶ್ವತ್ಥಂ ಪ್ರಾಹುರ ವ್ಯಯಂ ।
ಛಂದಾಂಸಿ ಯಸ್ಯ ಪರ್ಣಾನಿ । ಯಸ್ತಂ ವೇದ ಸ ವೇದವಿತ್ ॥

ಆದಿ ಶ್ರೀ ಶಂಕರಾಚಾರ್ಯರು ಕ್ರಿ. ಶ. ಎಂಟನೇ ಶತಮಾನದಲ್ಲಿದ್ದರೆಂಬ ಅಂಶಕ್ಕೆ ಸಾಕಷ್ಟು ಪುಷ್ಟಿಯಾದ ವಿವರವಿಲ್ಲ. ಶ್ರೀ ಆದಿ ಶಂಕರರು ಕ್ರಿ. ಪೂ. 509 ರಿಂದ 477ರ ಕಾಲಾವಧಿಯ 32 ವರ್ಷಗಳು ಭುವಿಯಲ್ಲಿದ್ದರೆಂಬ ಬಗೆಗೆ ಬಲವಾದ ಕಾರಣಗಳಿವೆ.

ಆದಿ ಶ್ರೀ ಶಂಕರಾಚಾರ್ಯರು ಪ್ರಚ್ಛನ್ನ ಬೌದ್ಧರೆಂಬ ಪ್ರತೀತಿ ಇದೆ. ಬೌದ್ಧ ಮತವು ಕ್ರಿ. ಪೂ. ಕಾಲದಲ್ಲಿ ಭಾರತಾದ್ಯಂತ ವ್ಯಾಪಿಸಿತ್ತು. ಕ್ರಿ. ಶ.ದ 8ನೇ ಶತಮಾನದ ಹೊತ್ತಿಗೆ, ಬೌದ್ಧ ಜೈನ ಮತಗಳ ಪ್ರಾಬಲ್ಯ ಬಹಳ ಮಟ್ಟಿಗೆ ಕುಂಠಿತವಾಗಿದ್ದವು. ಮೇಲ್ಕಂಡ ಬೌದ್ಧಾದಿ ನಿರೀಶ್ವರವಾದದ ಮತಗಳ ಪ್ರಾಬಲ್ಯವನ್ನು ಬಹಳ ಮಟ್ಟಿಗೆ ತಡೆಗಟ್ಟಿದವರಲ್ಲಿ, ಶ್ರೀ ಸಿದ್ಧಾಂತ ಶಿಖಾಮಣಿ ಮಹಾ ಗ್ರಂಥ

ಕರ್ತೃಗಳಾದ ಶ್ರೀ ಶಿವಯೋಗಿ ಶಿವಾಚಾರ್ಯರು ಪ್ರಥಮರಿರುವರು. ಈ ವಿಷಯ ಶ್ರೀ ಸಿದ್ಧಾಂತ ಶಿಖಾಮಣಿಯಿಂದ ಸ್ಪಷ್ಟವಾಗಿ ವೇದ್ಯವಾಗುತ್ತೆ.

॥ ಯೇನ ರಕ್ಷಾವತೀಜಾತಾ । ಶಿವಭಕ್ತಿಃ ಸನಾತನಿ ।

ಬೌದ್ಧಾದಿ ಪ್ರತಿಸಿದ್ಧಾಂತ । ಮಹಾಧ್ವಾಂತಾಂಶು ಮಾಲಿನಾ ॥

ಇಲ್ಲಿ ಒಂದು ವಿಷಯ ಗಮನಾರ್ಹವಿರುತ್ತೆ. ಆದಿ ಶ್ರೀ ಶಂಕರಾಚಾರ್ಯರಿಗೆ ಆದಿ ಶ್ರೀ ಜ॥ ರೇವಣಸಿದ್ಧರು ಶ್ರೀ ಚಂದ್ರಮೌಳಿಲಿಂಗವನ್ನು ಅನುಗ್ರಹಿಸಿದ ಕಾಲಕ್ಕೂ ಸ್ವಲ್ಪ ಮೊದಲು, ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಶ್ರೀಶಿವಯೋಗಿ ಶಿವಾಚಾರ್ಯರು ರಚಿಸಿದಂತೆ ಕಂಡುಬರುತ್ತೆ, ಯಾಕೆಂದರೆ ಮೇಲ್ಕಂಡ ಶ್ರೀ ಚಂದ್ರಮೌಳೀಶ್ವರ ಲಿಂಗ ಪ್ರದಾನದ ವಿಷಯವಾಗಿ ಶಿವಯೋಗಿ ಶಿವಾಚಾರ್ಯರು ಪ್ರಸ್ತಾಪಿಸಿಲ್ಲ.

ಶ್ರೀ ಶಿವಯೋಗಿ ಶಿವಾಚಾರ್ಯರ ನಂತರ ಬೌದ್ಧಮತದ ಉಪಟಳವನ್ನು ತಪ್ಪ ಗಟ್ಟಿದವರಲ್ಲಿ ಶ್ರೀ ಆದಿ ಶಂಕರಾಚಾರ್ಯರು ಎರಡನೆಯವರೆಂದು ಹೇಳಬಹುದು. ಈ ಕಾರಣದಿಂದ ಆದಿ ಶ್ರೀ ಶಂಕರಾಚಾರ್ಯರು ಕ್ರಿ.ಪೂ. ಕಾಲಾವಧಿಯಲ್ಲಿದ್ದರೆಂದು ಹೇಳ ಬಹುದು.

2. ಜೈನ ಧರ್ಮದ ಪ್ರಸಿದ್ಧ ಪ್ರಾಚೀನಗ್ರಂಥ " **ಜಿನವಿಜಯ** ". ಈ ಗ್ರಂಥದಲ್ಲಿ ಆದಿ ಶ್ರೀ ಶಂಕರಾಚಾರ್ಯರ ಜನನ ಕುಂಡಲಿಯಿದ್ದು, ಆದಿ ಶ್ರೀ ಶಂಕರಾಚಾರ್ಯರು ಕ್ರಿ.ಪೂ. 509 ರಲ್ಲಿ ಕಾಲಟಿಯಲ್ಲಿ ಆರ್ಯಾಂಬೆ ಮತ್ತು ಶಿವಗುರು ಇವರ ಸುಪುತ್ರರಾಗಿ ಜನಿಸಿದ ಜನನ ಕುಂಡಲಿ ಪ್ರಸಿದ್ಧವಾಗಿದೆ.

3. ಆಂಧ್ರದೇಶದ ಪೂರ್ವಮೀಮಾಂಸ ಶಾಸ್ತ್ರಜ್ಞ ಶ್ರೀ ಕುಮಾರಿಲ ಭಟ್ಟನು ತನ್ನ 48ನೇ ವಯಸ್ಸಿನಲ್ಲಿ, ಸುಮಾರು 15 ವರ್ಷ ವಯಸ್ಸಿನ ತರುಣ ಆದಿ ಶ್ರೀ ಶಂಕರಾಚಾರ್ಯರನ್ನು ಪ್ರಯಾಗ ಕ್ಷೇತ್ರದಲ್ಲಿ ಕ್ರಿ.ಪೂ. 494ರಲ್ಲಿ ಸಂಧಿಸಿದುದಾಗಿ ಜಿನವಿಜಯ ದಲ್ಲುಕ್ತವಾಗಿದೆ. ಕುಮಾರಿಲನ ಜನನ ಕ್ರಿ.ಪೂ. 557 ಎಂದು ಜಿನವಿಜಯದಲ್ಲಿ ಅಧಿಕೃತವಾಗಿ ಉಲ್ಲೇಖಿತವಾಗಿದೆ. ಕೇರಳ ದೇಶದ ಅಂದಿನ ಪ್ರಭಾಕರನೆಂಬಾತನು ಕುಮಾರಿಲನ ಶಿಷ್ಯನೆಂದೂ ಉಕ್ತವಾಗಿದೆ.

4. ಕ್ರಿ.ಪೂ. 478ರಲ್ಲಿ ಅಂದಿನ ಸುಧನ್ವರಾಜನು ಶ್ರೀ ಆದಿ ಶಂಕರಾಚಾರ್ಯರನ್ನು ಸನ್ಮಾನಿಸುತ್ತಾ, ಶ್ರೀ ಆಚಾರ್ಯರಿಗೆ ತಾಮ್ರ ಶಾಸನ ವಂದನ್ನು, ತನ್ನ

ಭಕ್ತಿ ಪೂರ್ವಕವಾದ ಬಿನ್ನವತ್ತಳಿಕೆಯೊಂದಿಗೆ ಅರ್ಪಿಸಿದುದಾಗಿ, ದ್ವಾರಕಾ ಮಠಾಧೀಶರಲ್ಲೊಬ್ಬರು, ತಮ್ಮ "ವಿಮರ್ಶ" ಎಂಬ ಗ್ರಂಥದಲ್ಲಿ ಉಲ್ಲೇಖಿಸಿರುತ್ತಾರೆಂದು ಕಂಡುಬಂದಿದೆ.

5. ಆದಿ ಶ್ರೀ ಶಂಕರಾಚಾರ್ಯರ ಜನನದ ಬಗೆಗೆ ಶ್ರೀ ಕಂಚಿ ಕಾಮಕೋಟಿ ಮಠಕ್ಕೆ ಸೇರಿದ ಶ್ರೀ ಆತ್ಮಬೋಧ ಎಂಬ ಗುರುಗಳು ತಾವು ಕ್ರಿ. ಶ. 17ನೇ ಶತಮಾನದಲ್ಲಿ ರಚಿಸಿದ "ಸುಶಾಮ" ಎಂಬ ಗ್ರಂಥದಲ್ಲಿ ಪ್ರಸ್ತಾಪಿಸುತ್ತಾ ಪ್ರಾಚೀನ ಶಂಕರ ವಿಜಯದ ಪ್ರಕಾರ ಆದಿ ಶ್ರೀ ಶಂಕರರು ಕ್ರಿ.ಪೂ. 509 ರಲ್ಲಿ ಜನಿಸಿದುದಾಗಿ ಉಲ್ಲೇಖಿಸಿರುವರು,

6. ಶ್ರೀ ಆತ್ಮಬೋಧ ತಮ್ಮ "ಸುಶಾಮ" ಎಂಬ ಕೃತಿಯಲ್ಲಿ ಶ್ರೀ ಅಭಿನವ ಶಂಕರಾಚಾರ್ಯರು ಕ್ರಿ.ಶ. 788ರಲ್ಲಿ ಜನಿಸಿದರೆಂದೂ, ಇವರು ಶ್ರೀ ಶಂಕರ ಮಠದ ಶ್ರೀ ಗುರು ಪರಂಪರೆಯಲ್ಲಿ ಆದಿ ಶ್ರೀ ಶಂಕರಾಚಾರ್ಯರಿಂದ 38 ನೇ ಆಚಾರ್ಯರೆಂದೂ, ಇವರು ಶ್ರೀ ಚಿದಂಬರ ಸುಕ್ಷೇತ್ರದಲ್ಲಿ ಜನಿಸಿದುದಾಗಿ ರಚಿಸಿರುತ್ತಾರೆ.

7. ಆದಿ ಶ್ರೀ ಶಂಕರಾಚಾರ್ಯರ ಪೂರ್ವ ಶ್ರೀ ಗುರು ಪರಂಪರೆಯನ್ನು ನಾವು ವೀಕ್ಷಿಸಿದಾಗ, ಶ್ರೀ ಸದಾಶಿವನಿಂದ ಪ್ರಾರಂಭಿಸಿ, ನಾರಾಯಣಂ, ಪದ್ಮಭವಂ, ವಸಿಷ್ಠ, ಶಕ್ತಿ, ಪರಾಶರ ಯಿವರಮಗ ಶ್ರೀ ವೇದವ್ಯಾಸ ಇವರ ತನುಜ ಶ್ರೀ ಶುಕಾಚಾರ್ಯರೆಂದೂ, ಇವರ ಕರಕಂಜಾತ ಶ್ರೀ ಗೌಡ ಭಗವತ್ಪಾದಾಚಾರ್ಯ, ಇವರ ಸಚ್ಚಿಸಶಿಷ್ಯ ಶ್ರೀ ಗೋವಿಂದ ಭಗವತ್ಪಾದಾಚಾರ್ಯರೆಂದೂ ಸ್ತುತಿಸಿ, ಇವರ ಶಿಷ್ಯ ಆದಿ ಶ್ರೀ ಶಂಕರಾಚಾರ್ಯರೆಂದು, ಗುರು ಪ್ರಾರ್ಥನಾಶ್ಲೋಕದಲ್ಲಿ ಪ್ರಣೀತವಾಗಿರುವುದು ಸರ್ವವೇದ್ಯವಿರುತ್ತೆ.

ಇಲ್ಲಿ ಗಮನೀಯವಾದ ಅಂಶವೆಂದರೆ- ದ್ವಾಪರಾಂತ್ಯದಲ್ಲಿ ಪಾಂಡವರಾಗ್ರಜ ಶ್ರೀ ಧರ್ಮರಾಯನು ಕಲಿಯುಗ ಪ್ರಾರಂಭವಾದ ಚಿನ್ಹೆಗಳನ್ನು ಕಂಡು, ಇನ್ನು ತಾವು ಭುವಿಯಲ್ಲಿರಬಾರದೆಂದು ನಿಶ್ಚಯಿಸಿ, ತನ್ನನುಜರೊಂದಿಗೆ ಪಂಚ ಪಾಂಡವರು ಹಿಮಾಲಯ ಪರ್ವತದ ಮಾರ್ಗವಾಗಿ ಸ್ವರ್ಗಾರೋಹಣವನ್ನು ಮಾಡಿದರಷ್ಟೆ, ನಂತರ ವೀರಾಭಿಮನ್ಯುವಿನ ಮಗ ಪರೀಕ್ಷಿತ್ ಮಹಾರಾಜನಿಗೆ ಆತ್ಮವೇತ್ತರಾದ ಶ್ರೀ ಶುಕಾಚಾರ್ಯರು ಏಳು ದಿವಸಗಳೊಳಗೆ ಶ್ರೀಮದ್ಭಾಗವತ ಪುರಾಣವನ್ನು ಬೋಧಿಸಿ ರಾಜನನ್ನು ಮೋಕ್ಷಗಾಮಿಯನ್ನಾಗಿ ಮಾಡಿದರು. ಅದರ ಬಳಿಕ ಶ್ರೀ ಶುಕಾಚಾರ್ಯರು ಮತ್ತು ಇವರ ಪರಮ ಶಿಷ್ಯ ಶ್ರೀ ಗೌಡಪಾದಾಚಾರ್ಯರು ಕಲಿಯುಗದ ಆದಿ ಭಾಗದ

ಕ್ರಿ.ಪೂ, ಕಾಲಾವಧಿಯಲ್ಲಿದ್ದವರೆಂದು ಸ್ಪಷ್ಟಪಡುತ್ತೆ. ಗೌಡಪಾದಾಚಾರ್ಯರ ಪರಮ ಶಿಷ್ಯ ಶ್ರೀ ಗೋವಿಂದ ಭಗವತ್ಪಾದಾಚಾರ್ಯರೂ ಸಹ ಕ್ರಿ.ಪೂ. ದ ಕಾಲಾವಧಿಗೆ ಸೇರಿ ಪಟ್ಟವರೇ ವಿನಃ, ಕ್ರಿ.ಶ. ಎಂಟನೆಯ ಶತಮಾನದ ವರವಿಗೂ ಆದಿ ಗೋವಿಂದ ಭಗ ವತ್ಪಾದರನ್ನು ಎಳೆಯಲು ಸಾಧ್ಯವಿಲ್ಲ, ಆದಿ ಶ್ರೀ ಶಂಕರಾಚಾರ್ಯರು ಗೋವಿಂದ ಭಗವತ್ಪಾದರ ಕೃಪೆಗೆ ಪಾತ್ರರಾಗಿದ್ದರೆಂಬ ಬಗೆಗೆ ಆದಿ ಶಂಕರಾಚಾರ್ಯರು ಕ್ರಿ.ಪೂ. 509 ರಿಂದ 477 ರ ಕಾಲಾವಧಿಯಲ್ಲಿದ್ದವರೆಂಬ ಮಹದಂಶ ನಿರ್ವಿವಾದವಷ್ಟೆ.

**ಆದಿ ಶ್ರೀ ಶಂಕರಾಚಾರ್ಯರು ಶ್ರೀ ಆದಿ ಜ|| ಶಿವ ಲಿಂಗೋದ್ಭವ ಮಂಗಳ ಮೂರ್ತಿ ರೇವಣಸಿದ್ಧ ಮಹಾ ಶಿವಾಚಾರ್ಯವರೇಣ್ಯರ ಸಮಕಾಲೀನರು :-**

1) ಎ. ಆದಿ ಶ್ರೀ ಶಂಕರಾಚಾರ್ಯರ ಜನನ ಕ್ರಿ.ಪೂ. ... 509

ಬಿ. ಇವರು ಬ್ರಹ್ಮೀಭೂತರಾದುದು ಕ್ರಿ.ಪೂ. ... 477

ಸಿ. ಆದಿ ಶಂಕರಾಚಾರ್ಯರಿದ್ದ ಕ್ರಿ.ಪೂ. ದ ಕಾಲಮಾನ 32 ವರ್ಷಗಳು

ಅಂದರೆ ಕ್ರಿ.ಪೂ. 477–76ರ ವರವಿಗೂ ಶ್ರೀ ಶಂಕರರು ಭುವಿಯಲ್ಲಿದ್ದರು.

2) ಡಿ. ಲಿಂಗೋದ್ಭವ ಆದಿ ಜ|| ರೇವಣಸಿದ್ಧರು ಅವತರಿಸಿದ್ದು ಕ್ರಿ. ಪೂ. 1885

ಕಲಿಯುಗ ಪ್ರಾರಂಭಿಸಿದ್ದು ಕ್ರಿ.ಪೂ. **3102**ಕ್ಕೆ

ಆದಿ ಜ|| ರೇವಣಸಿದ್ಧರ ಲಿಂಗಾವತಾರದ ಹೊತ್ತಿಗೆ, ಕಲಿಗತಾಬ್ಧಿ ಕ್ರಿ. ಪೂ. **1217** ವರ್ಷಗಳು

ಆದಿ ಜ|| ಶ್ರೀರೇವಣಸಿದ್ಧರ ಲಿಂಗಾವತಾರದಕಾಲ ಕ್ರಿ.ಪೂ. **1885** ರಲ್ಲಿ

ಈ ವರೆವಿಗೆ, ಕಲಿಗತಾಬ್ಧಿ ವರ್ಷಂಗಳು **3102+1985 = 5087** ವರ್ಷಗಳು ಗತಿಸಿವೆ. ಇಂದಿನ ಕ್ರೋಧನನಾಮ ಸಂವತ್ಸರದ ಪಂಚಾಂಗರೀತ್ಯಾ ಕಲಿಯುಗ ಆರಂಭವಾಗಿ ಇಲ್ಲಿಗೆ **5085** ವರ್ಷಗಳಾಗಿದೆಯೆಂದು ಸ್ಪಷ್ಟಪಡಿಸಿದೆ.

ಇ. ಆದಿ ಶ್ರೀ ಜ|| ರೇ ವ ಣ ಸಿ ದ್ಧ ರು **ಶಿವಲಿಂಗದಿಂದ ಶಿವನಪ್ಪಣೆಯಂತೆ ಆವಿರ್ಭವಿಸಿದುದು** ಕ್ರಿ.ಪೂ. **1885**

ಎಫ್. ಶ್ರೀ ಮಹಾಚಾರ್ಯವರೇಣ್ಯರು ಮಂತ್ರಮಯ ದಿವ್ಯದೇಹಧಾರಿಗಳಾಗಿ ಭುವಿಯಲ್ಲಿದುದು ಕ್ರಿ.ಪೂ. ಕಾಲಾವಧಿ **1400** ವರ್ಷಗಳು

ಶ್ರೀ ತ್ರಿಭುವನಾಚಾರ್ಯ ವರೇಣ್ಯರು ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗದಲ್ಲಿ ವಿಲೀನರಾದುದು ಕ್ರಿ. ಪೂ. 485ರ ಕೊನೆಯಲ್ಲಿ.

ಜಿ. ಆದಿ ಶ್ರೀ ಜಗದ್ಗುರು ರೇವಣಸಿದ್ಧರನ್ನು ಆದಿ ಶ್ರೀ ಶಂಕರಾಚಾರ್ಯರು ಸಂಧಿಸಿ ದಿವ್ಯ ಸಂದರ್ಶನ ಪಡೆದುದು ಕ್ರಿ. ಪೂ. 486 ರಲ್ಲಿ.

ಹೆಚ್. ಆದಿ ಶ್ರೀ ಶಂಕರಾಚಾರ್ಯರಿಗೆ ಜಗದ್ಗುರು ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು, ಶ್ರೀ ಚಂದ್ರಮೌಳಿ ಲಿಂಗವನ್ನು ಶ್ರೀ ರತ್ನಗರ್ಭ ಗಣಪತಿಯನ್ನು ಪ್ರಸನ್ನ ಭಾವದಿಂದ ಅನುಗ್ರಹಿಸಿ, ಶಿವಶಕ್ತಿ ಸಂಪುಟದಿಂದ ತಾನೇತಾನಾಗಿ ವಿರಾಜಿಸುವ ಶಿವತತ್ವವನ್ನು ಬೋಧಿಸಿ ಆಶೀರ್ವದಿಸಿದುದ ಕ್ರಿ. ಪೂ. 486 ರ ಮಧ್ಯ ಕಾಲಾವಧಿಯಲ್ಲಿ ಎಂಬುದು ಸ್ಮರಣೀಯ.

ಆ ಸಮಯಕ್ಕೆ ಆದಿ ಶ್ರೀ ಶಂಕರಾಚಾರ್ಯರು ಸುಮಾರು 23 ಅಥವಾ 24 ವಯಸ್ಸಿನವರಿರಬೇಕು.

ಮೇಲುಕ್ತವಾದ ವಿಶ್ವಸನೀಯವಾದ ಅಂಶಗಳಿಂದ ಆದಿ ಶ್ರೀ ಶೃಂಗೇರಿ ಶಂಕರಾಚಾರ್ಯರು ಆದಿ ಜಗದ್ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರ ಸಮಕಾಲೀನರೆಂದು ಸ್ಪಷ್ಟಪಡುತ್ತೆ. ಕ್ರಿ.ಶ. ಎಂಟನೇ ಶತಮಾನದಲ್ಲಿದ್ದ ಮಹನೀಯರಾದ ಶ್ರೀ ಶಂಕರಾಚಾರ್ಯರು ಅಭಿನವ ಶಂಕರಾಚಾರ್ಯರೇ ವಿನಃ ಇವರು ಆದಿ ಶ್ರೀ ಶಂಕರಾಚಾರ್ಯರಲ್ಲವೆಂಬುದು ಭಾನುಕೋಟಿ ಪ್ರಕಾಶಮಾನವಾಗಿ ಸರ್ವರಿಗೂ ಮನವರಿಕೆಯಾವಂತಾಗಿದೆ. ಅಭಿನವ ಶ್ರೀ ಶಂಕರಾಚಾರ್ಯರು ಆದಿ ಶ್ರೀ ಶಂಕರಾಚಾರ್ಯರಿಂದ 38ನೇ ಆಚಾರ್ಯ ಮಹೋದಯರಿರುವರು.

ಭಗವತ್ಪಾದ ಆದಿ ಶ್ರೀ ಜಗದ್ಗುರು ರೇವಣಸಿದ್ಧರು ಕ್ರಿ. ಪೂ. 485ರಲ್ಲಿ ಕೊಲ್ಲಿಪಾಕಿ ಶ್ರೀ ಸೋಮನಾಥ ಸ್ವಯಂಭು ಮಹಾ ಪೃಥ್ವಿ ಲಿಂಗದಲ್ಲಿ ಶಿವ ಪ್ರೇರಣೆಯಂತೆ ಜಾಜ್ವಲ್ಯಮಾನವಾಗಿ ಅನೇಕ ಭಕ್ತರ ಕಣ್ಮನಂಗಳನ್ನು ಸೂರೆಗೊಳ್ಳುವಂತೆ ವಿಲೀನರಾದರು.

॥ ಲೀನೇ ತಸ್ಮಿನ್ ಶಾಂಕರೇ ಸ್ವಪ್ರಕಾಶೇ ।
ದಿವ್ಯಾ ಕಾರೇ ರೇಣುಕೇ ಸಿದ್ಧ ನಾಥೇ ॥

॥ ಸರ್ವೋ ಲೋಕೋ ವಿಸ್ಮಿತೋ ಭೂತ್ತದಾನೀಂ ।
ಶೈವೀ ಭಕ್ತಿಃ ಸ ಪ್ರಮಾಣಾ ಬಭೂವ ॥

( ಶ್ರೀ ಸಿದ್ಧಾಂತ ಶಿಖಾಮಣಿ )

ಪರಂಜ್ಯೋತಿಯಲ್ಲಿ ಚಿಜ್ಯೋತಿ ಸಮರಸದಿಂದ ವಿಲೀನಗೊಂಡು ॥ ಜ್ಯೋತಿಷಾಂ ಜ್ಯೋತಿ ॥ ಎಂದು ಬಯಲಾಯಿತು.



## ಅಧ್ಯಾಯ 23

ಲಿಂಗಾಂಗಿ ವೀರಶೈವರು ಜಗದಾದಿಯಿಂದಲೂ " ಏಕೇಶ್ವರ ವಾದಿಗಳು ". ಶಿವಸರ್ವೋತ್ತಮತ್ವವನ್ನು ಚಿತ್ತ ಸ್ಥೈರ್ಯದಿಂದ ಅಖಂಡವಾಗಿ ಎತ್ತಿಹಿಡಿದ " ಶಿರೋವ್ರತರು ".

ಪರಮ ವೀರಶೈವರು ಅನಾದಿ ಕಾಲದಿಂದ ಲಿಂಗರೂಪಿ ಪರಶಿವನಲ್ಲಿ ಅವ್ಯಭಿಚಾರಿಣಿ ಭಕ್ತಿಯಿಂದ, " ಲಿಂಗಪತಿ ತಾ ಮಹಾ ಸತಿ " ಎಂಬ ಶ್ರದ್ಧಾಭಕ್ತಿ ನಿಷ್ಠಾಭಕ್ತಿಯುಳ್ಳ ವ್ರತಶೀಲರು. ಪತಿವ್ರತೆಯಂತೆ ಲಿಂಗಪತಿ ದೇವನ ವಿನಃ ಅನ್ಯ ದೈವಂಗಳ ನೆನೆಯರು, ಆರಾಧಿಸರು. ಇವರು ಸಹಜವಾಗಿಯೇ ವಿಶಾಲ ಹೃದಯವುಳ್ಳ ಭ್ರಾತೃ ಭಾವವುಳ್ಳವರಾದ್ದರಿಂದ ॥ ಸರ್ವೇ ಭವಂತು ಸುಖಿನಃ । ಸರ್ವೇ ಸಂತು ನಿರಾಮಯಾಃ । ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿದ್ ದುಃಖ ಭಾಗ್ ಭವೇತ್ ॥ ಲೋಕದ ಸಮಸ್ತ ಪ್ರಾಣಿ ವರ್ಗಗಳಿಗೆ ಅನವರತ ಹಿತವನ್ನು ಕೋರುತ್ತಾ, ಸರ್ವ ಧರ್ಮ ಸಹಿಷ್ಣುತಾ ಭಾವದಿಂದ ಕೂಡಿರುವರು. ವೀರಶೈವರು ಜಗದಾದಿಯಿಂದಲೂ ವ್ಯವಸ್ಥಿತ ಚಿತ್ತ ವೃತಿಗಳಿಂದ ಕೂಡಿ, ಶ್ರೀ ಗುರು ಹಸ್ತದಿಂದ ಭೂ ಪತನವಾಗುತ್ತಲೇ ಪ್ರಾಪ್ತವಾದ ಇಷ್ಟಲಿಂಗ ರೂಪ ಯಜ್ಞೋಪವೀತ ಧಾರಿಗಳಾಗಿ ; ಯಾವಜ್ಜೀವವೂ ಧರಿಸಿ, ಆರಾಧಿಸುತ್ತಾ ಜೀವಂತವಾದ ಲಿಂಗರೂಪಿ ಯಜ್ಞೋಪವೀತದಿಂದ ಕ್ಷಣಾರ್ಧವೂ ಅಗಲಿರದೆ, " ಲಿಂಗಪತಿ ಅಂಗ ತಾ, ಮಹಾ ಸತಿ " ಎಂಬ

ಊರ್ಜಿತವಾದ ಏಕೈಕ ಅನನ್ಯ ಹಾಗೂ ಅಸ್ಖಲಿತ ಭಕ್ತಿಭಾವದಿಂದ ಅನವರತ ವರ್ತಿಸುವಂಥಾ " ಏಕೀಶ್ವರ ವಾದಿಗಳು ಪರಮ ವೀರಶೈವರು ".

॥ ಆಕಾಶಾ ತ್ಪತಿತಂ ತೋಯಂ । ಯಥಾ ಗಚ್ಛತಿ ಸಾಗರಂ । ತಥಾ ।
ಸರ್ವ ದೇವ ನಮಸ್ಕಾರಃ । ಶಂಕರೋ ಪ್ರತಿ ಗಚ್ಛತಿ ॥

ಆಕಾಶದಿಂದ ಬಿದ್ದ ಮಳೆಯ ನೀರು ಹಳ್ಳ ಕೊಳ್ಳ ನದ ನದಿಗಳ ರೂಪದಲ್ಲಿ ನಾನಾ ದಿಕ್ಕುಗಳಲ್ಲಿ ಹರಿದು, " ಸಿಂಧೋಃ ಸರಿದ್ವಲ್ಲಭಂ " ಎಂಬಂತೆ ಸಮಸ್ತ ನದಿಗಳು ತಮ್ಮ ಪ್ರಾಣ ವಲ್ಲಭನಾದ ಮಹಾ ಸಾಗರದಲ್ಲಿ ಕೂಡಿ ಸಂಗಮವಾಗುವಂತೆ ಪರಮ ಸನಾತನವೂ ಅಖಿಲ ತತ್ವಗಳಿಗೆ " ತತ್ವಾನಾಂ ಮಹದಾದೀನಾಂ " ಮಾತೃ ಸ್ಥಾನವಾಗಿ ರಾರಾಜಿಸುವ ಲಿಂಗರೂಪಿ ಪರಶಿವ ಬ್ರಹ್ಮವೆಂಬ ಶಿವ ಸಮುದ್ರದಲ್ಲಿ, ಲಿಂಗಾಂಗಿಯ ಸಮಸ್ತ ನಿತ್ಯದ ಪೂಜಾರಾಧನೆ. ಜಪತಪ ಧ್ಯಾನ, ಧಾರಣ ಸಮಾಧಿ ಯೋಗ, ಶಿವಯೋಗಗಳೆಲ್ಲಾ ತಾನಾಗಿಯೇ ವಿಲೀನಗೊಂಡು ರಾರಾಜಿಸುವ ಸುಯೋಗವನ್ನು ವೀರಶೈವನು ಶ್ರೀ ಮಹಾ ಗುರುವಿನ ಅನುಗ್ರಹ ಬಲದಿಂದ ಜೀವಂತಕಾಲದಲ್ಲಿಯೇ ತನ್ನ ಶುದ್ಧಾಂತರಂಗದಲ್ಲಿ ಕಂಡು, ನಿತ್ಯಾನು ಸಂಧಾನದಿಂದ ಆತ್ಮೀಯವಾಗಿ ರಮಿಸುತ್ತಲಿರ್ಪನು, ಏಕೀಶ್ವರಾರಾಧನೆಯ ಫಲವಿದು.

## ಶಿರೋವ್ರತರು ವೈದಿಕ ಪಾಶುಪತರು ವೀರಶೈವರು :-

ಜಗದಾದಿ ಕ್ರಿಯಾವಂತ ಶ್ರೋತ್ರೀಯ ಬ್ರಹ್ಮ ನಿಷ್ಠರೂ, ಸಮಿತ್ಪಾಣಿಗಳೂ ಆದ ವೀರಮಾಹೇಶ್ವರರು ಸದಾ ಮಹಾ ಶಿರೋವ್ರತರಿರುವರು. ವೈದಿಕ ಅಂದರೆ, ತಾಂತ್ರಿಕ ವೈದಿಕರಿವರು ಮತ್ತು ಇವರು ಅತಿ ವರ್ಣಾಶ್ರಮಿಗಳೆಂದೂ ಪ್ರಸಿದ್ಧರಿರುವರು. ಲಿಂಗಾಂಗ ಸಾಮರಸ್ಯ ಸಾಯುಜ್ಯ ಮೋಕ್ಷ ಪ್ರದವಾದ ಷಟ್ಸ್ಥಲ ಸಿದ್ಧಾಂತ ಅರ್ಥಾತ್ ನಿರಂತರ ಏಕೋತ್ತರ ಶತಸ್ಥಲ ತತ್ವಾನು ಸಂಧಾನಿಗಳು, ಮಹಾ ಶಿರೋವ್ರತರು. ಶೈವ ಧರ್ಮ ಅಖಿಲ ಧರ್ಮಗಳಿಗಿಂತಲೂ ಆದಿಗಾದಿ ಎನಿಸಿ ಶಿವನಷ್ಟೇ ಅನಾದಿ ಸ್ವಯಂ ಸಿದ್ಧವಾಗಿ ಬೆಳಗುವ ಧರ್ಮ. ಇದರ ಮಹತ್ವದ ಬಗೆಗೆ ಶಿವನು ಜಗನ್ಮಾತೆ ಶ್ರೀ ಗಿರಿಜೆಗೆ ಒಮ್ಮೆ ಆತ್ಮೀಯವಾಗಿ ಬೋಧಿಸುತ್ತಾ-

" ಓ ದೇವಿ ! ಶೈವವು ಪ್ರಮುಖವಾಗಿ ನಾಲ್ಕು ತೆರನಾಗಿರುವುದು ಸಾಮಾನ್ಯ ಶೈವ, ಮಿಶ್ರ ಶೈವ, ಶುದ್ಧ ಶೈವ, ಮತ್ತು ವೀರಶೈವ. ॥ ಸರ್ವೇಶಾಮಪಿ ಶೈವಾನಾಂ । ವೀರಶೈವಂ ಮಹತ್ತರಂ ॥ ಎಂದು ಶ್ಲಾಘಿಸುತ್ತಾ, ದೇವಿ ಕೇಳು- " ನಹಿ ವೀರಶೈವ ಸದೃಶ । ಮ ತ ಮ ಸ್ತಿ ಜಗತ್ರಯೇ ॥ ಸರ್ವ ಭೋಗ

ಪ್ರದಂ ಪುಣ್ಯಂ । ಶಿವ ಸಾಯುಜ್ಯ ದಾಯಕಂ ॥ ( ಪಾರಮೇಶ್ವರಾಗಮ ). ಇಷ್ಟ ಲಿಂಗೋಪಾಸನೆ ಅತ್ಯಂತ ಶೀಘ್ರ ಫಲಪ್ರದವಾದುದು. ಶಿವಸಾಯುಜ್ಯ ಮುಕ್ತಿಗೆ ಹಾಗೂ ಸ್ವಸ್ವರೂಪಾನು ಸಂಧಾನಕ್ಕೆ ಗುರುವಿನ ಕಟಾಕ್ಷಲಬ್ಧ್ವಾ ಸ್ವಾತ್ಮತೇಜಸ್ಸು ಕರದಿಷ್ಟಲಿಂಗ, ಚಿಚ್ಚೈತನ್ಯ, ಅರಿವು, ಆನಂದ ಮತ್ತು ಸ್ವಾತ್ಮ ಪ್ರಕಾಶಗಳ ಕೇಂದ್ರ ಶರಣನ ಕರಕಮಲದ ಇಷ್ಟಲಿಂಗ. ಇಷ್ಟಲಿಂಗದ ಕವಲೆರಡು, ಆಚಾರಲಿಂಗ ಗುರುಲಿಂಗಗಳು. ನಾಸಾಗ್ರದಲ್ಲಿ ಆಚಾರ ಲಿಂಗವು ಗಂಧ ಗ್ರಹಣ ಶಕ್ತಿಯುತವಾಗಿರಲು ಜಿಹ್ವಾಗ್ರದ ಮೊನೆಯಲ್ಲಿ ರಸಗ್ರಹಣಯುಕ್ತವಾಗಿ ಗುರುಲಿಂಗವು ಪರಿಶೋಭಿತವಾಗಿದೆ ಪರಿಶುದ್ಧವಾದ ಹೃನ್ಮಂದಿರದ ಕುಹರದಲ್ಲಿ ಪರಿಶೋಭಿಸುವ ಚಿಚ್ಛಕ್ತಿಯುತ ಪ್ರಾಣ ಲಿಂಗದ ಪ್ರಭೇದಗಳು ಶಿವಲಿಂಗ ಮತ್ತು ಜಂಗಮ ಲಿಂಗಗಳು. ನೇತ್ರೇಂದ್ರಿಯದ ಚಿಜ್ಯೋತಿ ಶಿವಲಿಂಗವಾದರೆ ತ್ವಗಿಂದ್ರಿಯದ ಸ್ಪರ್ಶ ಶಕ್ತಿಯುತವಾದುದು ಜಂಗಮ ಲಿಂಗ. ಇದರಂತೆಯೇ ಭ್ರೂ ಲಲಾಟ ಸ್ಥಾನದಲ್ಲಿ ಮಿಂಚಿನಂತೆ ಬೆಳಗುವ ಭಾವ ಲಿಂಗದ ಶಾಖೆಗಳೆಂದರೆ ಪ್ರಸಾದ ಲಿಂಗ ಮತ್ತು ಮಹಾ ಲಿಂಗಗಳು. ಶ್ರವಣೇಂದ್ರಿಯದೊಳ ಗಿನ ಪ್ರಸಾದ ಲಿಂಗ ಶಬ್ದಗ್ರಹಣಯುಕ್ತವಾಗಿದೆ. ಮನಸ್ಸಿನ ಪ್ರಧಾನ ಶಕ್ತಿಯುತವಾ ದುದು ಮಹಾಲಿಂಗ. ಮನೋಪ್ರಸನ್ನತೆಗೆ ಪರಮ ಆಧಾರಯುತವಾದುದು ಮಹಾ ಲಿಂಗ. ಲಿಂಗಾಂಗಿ ಶಿರೋವ್ರತನು ಷಡಂಗಗಳಲ್ಲಿ ಸದಾ ಎಡಬಿಡದೆ ಷಡ್ಲಿಂಗಗಳ ದೇದೀಪ್ಯವಾದ ಸಂಪರ್ಕದಿಂದ, ಬಾಹ್ಯಾಭ್ಯಂತರಗಳಲ್ಲೂ ಶಿವತೇಜಸ್ಸಂಪನ್ನನಾಗಿ ವಿರಾಜಿಸುತ್ತಿರ್ಪನು.

ಷಡ್ಲಿಂಗಗಳಿಗೆ ಮೂಲ ಸ್ಥಾನವೆನಿಸಿದ, ಶರಣನ ಕರದಿಷ್ಟಲಿಂಗ, ಹೃನ್ಮಂದಿರದ ಪ್ರಾಣಲಿಂಗ ಮತ್ತು ಭ್ರೂ ಮಧ್ಯಗತಶೋಭಿತವಾದ ಭಾವಲಿಂಗಗಳೆಂಬ ಮೂರು ಲಿಂಗಗಳೊಂದಿಗೆ ಮೇಲುಕ್ತವಾದ ಷಡ್ಲಿಂಗಗಳೂ ಸೇರಿ ಲಿಂಗಾಂಗಿ ಶಿವಶರಣನು ಜ್ಯೋತಿರ್ಮಯ ನವ ಲಿಂಗಾರಾಧಕನಾಗಿ ಪ್ರಜ್ವಲಿತನಾಗಿರ್ಪನು. ಇಂತಪ್ಪ ಶಿವ ಶರಣನು ನಿಜಕ್ಕೂ ಶಿರೋವ್ರತನೆನಿಸಿ ರಾರಾಜಿತನಾಗಿಹನು.

ಕಂಠದ ಮೇಲ್ಭಾಗ ಪ್ರಮುಖವಾದ ಶಿರದರ ಮನೆಯೆಂದು ವಿಖ್ಯಾತವಾಗಿರು ವುದು. ಶಿರಸ್ಸಿನಲ್ಲಿ ಮುಕ್ಕಣ್ಣೇಶ್ವರನಿರುವ ಮೂರು ಸ್ಥಾನಗಳೆಂದರೆ ಸಹಸ್ರಾರಚಕ್ರ ಶಿಖಾಚಕ್ರ ಮತ್ತು ಪಶ್ಚಿಮ ಶಿಖಾಚಕ್ರಗಳೆನಿಸಿ, ಮೂರ್ಧನ್ಯಸ್ಥಾನಗಳೆಂದು ಪ್ರತೀತಿ ಇರುವುವು. ಶಿರದರಮನೆಯು ಬ್ರಹ್ಮರಂಧ್ರವೆಂಬ ಸಹಸ್ರಾರ ಕಮಲದ ಮಧ್ಯೇ ದೇದೀಪ್ಯವಾಗಿ ಅನಂತಕೋಟಿ ಸೂರ್ಯ ಪ್ರಕಾಶದಿಂದ ನಿರಂತರ ಬೆಳಗುವ ಚಿಲ್ಲಿಂಗ, ಭಾವ, ಪ್ರಾಣ, ಇಷ್ಟಲಿಂಗಗಳ ಸಕ್ರಿಯ ಕೇಂದ್ರವೆನಿಸಿದೆ. ಮೂಲಾಧಾರ ಚಕ್ರದಲ್ಲಿನ ಕುಂಡಲಿನಿ ಶಕ್ತಿಯು, ಷಡ್ಲಿಂಗ, ನವಲಿಂಗಗಳ ಸತತ ಆರಾಧನೆಯ ಪ್ರಭಾವದಿಂದ ಜಾಗ್ರತಗೊಳ್ಳಗಾಗಿ ಊರ್ಧ್ವಾಭಿಮುಖವಾಗಿ, ಶುಷುಮ್ನಾನಾಡಿ ಮೂಲಕ ಷಡ್

ಚಕ್ರಗಳನ್ನು ದಾಟಿ, ನವಲಿಂಗ ಜ್ಯೋತಿರ್ಮಂಡಲದ ಮಾರ್ಗವಾಗಿ, ಶುಷುಮ್ನೆಯ ಕೇಂದ್ರವೆನಿಸಿದ ಸಹಸ್ರಾರವನ್ನು ಸ್ಪರ್ಶಿಸಿದ ಕುಂಡಲಿನಿಶಕ್ತಿ, ಚಿಲ್ಲಿಂಗದಲ್ಲಿ ವಿಲೀನ ವಾಗುವುದು. ಸಹಸ್ರಾರಕ್ಕೆ ಸ್ವಲ್ಪ ಮೇಲೆ ಊರ್ಧ್ವದಲ್ಲಿ ಶಿಖಾಚಕ್ರವಿರುವುದು. ಇಲ್ಲಿ ಉಜ್ವಲವಾಗಿ ಪ್ರಜ್ವಲಿಸುವ ನಿರಂಜನ ಲಿಂಗ ಪರಿಶೋಭಿತವಾಗಿದೆ. ಶಿಖಾ ಚಕ್ರಕ್ಕೆ ಸ್ವಲ್ಪ ಕೆಳಭಾಗದಲ್ಲಿ ಸುಪ್ರಸಿದ್ಧವಾದ ಪಶ್ಚಿಮ ಶಿಖಾಚಕ್ರ ವಿರಾಜಿತವಾಗಿದೆ. ಇದು ಅತ್ಯಂತ ಪ್ರಮುಖವಾದ ಮೂಲ ಸ್ಥಾನ. ಇದು ಲಿಂಗರೂಪಿ ಪರಶಿವಬ್ರಹ್ಮದ ಆವಾಸ ಸ್ಥಾನ. ಇದು ವಡಲಿಲ್ಲದ ಬಯಲು, ನಿರ್ಬಯಲು. ಈ ಕೇಂದ್ರದಲ್ಲಿ ಪರಶಿವ ಬ್ರಹ್ಮವು ಪರಂಜ್ಯೋತ್ಯಾತ್ಮಕನಾಗಿ ಜ್ಯೋತಿಶಾಂ ಜ್ಯೋತಿರ್ಲಿಂಗ ರೂಪದಲ್ಲಿ ಪ್ರಜ್ವಲಿಸುತ್ತಾ ಅಖಂಡಾದ್ವಿತೀಯ ಬ್ರಹ್ಮಾಂಡವನ್ನು ಪರಮಾಣು ರೂಪದಲ್ಲಿ ಧರಿಸಿ ಬೆಳಗುವ ಚಿನ್ಮಯ ಲಿಂಗವಿದು. ಮೇಲುಕ್ತವಾದ ಇಷ್ಟ ಲಿಂಗ, ಆಚಾರ ಲಿಂಗ, ಗುರುಲಿಂಗ, ಪ್ರಾಣ ಲಿಂಗ, ಶಿವ ಲಿಂಗ, ಜಂಗಮ ಲಿಂಗ, ಭಾವ ಲಿಂಗ, ಪ್ರಸಾದ ಲಿಂಗ ಮತ್ತು ಮಹಾ ಲಿಂಗಗಳೆಂಬ ಅದ್ವಿತೀಯ ನವ ಲಿಂಗಗಳೊಂದಿಗೆ ಶಿರದರಮನೆ ಯಲ್ಲಿ ರಾರಾಜಿಸುವ ಚಿಲ್ಲಿಂಗ, ನಿರಂಜನ ಲಿಂಗ ಮತ್ತು ಲಿಂಗರೂಪಿ ಪರಶಿವಬ್ರಹ್ಮ ಈ ಮೂರು ಸೇರಿ ಈ ತ್ಯಾಗಾಂಗವೆನಿಸಿದ ಮೃಣ್ಮಯ ದೇಹದಲ್ಲಿ ( ದೇಗುಲದಲ್ಲಿ ) ಲಿಂಗಾಂಗಿ ಶರಣನು ತನ್ನ ಪರಿಶುದ್ಧಾಂತಃಕರಣದಲ್ಲಿ ಅಂತರ್ಮುಖಿಯಾಗಿ " ಧ್ಯಾನಾ ವಸ್ಥಿತ ತದ್ಗತೇನ ಮನಸಾ । ಪಶ್ಯಂತಿ ಯಂ ಯೋಗಿನಃ ॥ ಎಂಬಂತೆ ದಘದಘಿಸುವ ಸ್ವಯಂಜ್ಯೋತಿ, ಪರಂಜ್ಯೋತಿ ರೂಪದಲ್ಲಿ ಚಿನ್ಮಯಾತ್ಮಕ ದ್ವಾದಶ ಜ್ಯೋತಿ ರ್ಲಿಂಗಗಳನ್ನು ಅಂತರಂಗದಲ್ಲಿ ಸದಾ ಸಂದರ್ಶಿಸುತ್ತಾ ; ಶಿವಯೋಗದ ಸಾರಾ ಮೃತವನ್ನು ಹನಿ ಹನಿಯಾಗಿ ಸವಿದು ತನ್ಮಯನಾಗಿ ; ॥ ಸ್ವ ಸ್ವರೂಪೈಕ ಚಿಚ್ಛಕ್ತಿ ಯಿಂ । ಸ್ಫುರಿಸು ತಿರ್ದು ದದ್ವೈತ ಪರಮಾತ್ಮ ತತ್ವಂ ॥ ಎಂಬ ಸ್ವಾನು ಭೂತಿಯ ಫಲವಾಗಿ, ಕರ್ಪೂರವನ್ನುಂಡ ಜ್ಯೋತಿಯಂತೆ ॥ ಯಥಾನದ್ಯಃ ಸ್ಯಂದ ಮಾನಾಃ । ಸಮುದ್ರೇ ಅಸ್ತಂಗಚ್ಛಂತಿ । ನಾಮ ರೂಪೇ ವಿಹಾಯ ॥ ತಥಾ ವಿದ್ವಾನ್ನಾಮ ರೂಪಾ ದ್ವಿಮುಕ್ತಃ । ಪರಾತ್ಪರಂ ಪುರುಷ ಮುಪೈತಿ ದಿವ್ಯಂ ॥ ಎಂಬ ಶೃತಿವಾಣಿ ಗನುಗುಣವಾಗಿ, ಲಿಂಗಾಂಗಿ ವೀರಮಾಹೇಶ್ವರ ಶರಣನು ಸರ್ವದಾ ಸರ್ವಕಾಲದಲ್ಲೂ ನಿಷ್ಠೆಯಿಂದ ತನ್ನ ಶಿರದರಮನೆಯಲ್ಲಿ ದ್ವಾದಶ ಜ್ಯೋತಿರ್ಲಿಂಗಮಯ ಆರದ ಮಹಾ ರುದ್ರಾಂಶದ ಅಗ್ನಿಯನ್ನು ನೆತ್ತಿಯಲ್ಲಿ ಚಿತ್ತಸ್ಥೈರ್ಯದಿಂದಲೂ ಅವ್ಯಭಿಚಾರಿಣೀ ಭಕ್ತಿಯಿಂದ ಹೊತ್ತು ಅಸ್ಖಲಿತ ಭಾವದಿಂದ ತಧ್ಯಾನಾಸಕ್ತನಾಗಿ ನಿರಂತರ ತನ್ಮಯ ನಾಗಿರುವುದರಿಂದ, ಇಂತಪ್ಪ ಶಿವ ಶರಣನೆ ನಿಜಕ್ಕೂ ಮಹಾ ಶಿರೋವ್ರತ ನೆನಿಸಿರುವನು. ಇವನೇ ವೈದಿಕ ಪಾಶುಪತನೂ ಅಹುದು.

॥ ಏ ಧಾರಯಂತಿ ಹೃದಯೇ । ಲಿಂಗಂ ಚಿದ್ರೂಪ ಮೈಶ್ವರಂ ।
ನ ತೇಷಾಂ ಪುನರಾವೃತ್ತಿ । ಘೋರ ಸಂಸಾರ ಮಂಡಲೇ ॥

" ಶಿರೋವ್ರತ " ಶಬ್ದವು ಮುಂಡಕೋಪನಿಷತ್ತಿನ ತೃತೀಯ ದರ್ಶನದ ದ್ವಿತೀಯ ಖಂಡದ ಹತ್ತನೇ ಮಂತ್ರವಲ್ಲಿ ಪ್ರತಿಪಾದಿತವಾಗಿದೆ.

॥ ಕ್ರಿಯಾವಂತಃ ಶ್ರೋತ್ರೀಯಾ ಬ್ರಹ್ಮ ನಿಷ್ಠಾಃ ।
ಸ್ವಯಂ ಜುಹ್ವತ । ಏಕರ್ಷಿಂ ಶ್ರದ್ಧಯಂತಃ ॥
ತೇಷಾಮೇ ವೈತಾಂ ಬ್ರಹ್ಮ ವಿದ್ಯಾಂ ವದೇಂ ।
ಶಿರೋವ್ರತಂ ವಿಧಿವದ್ ಯೈಸ್ತು ಚೀರ್ಣಂ ॥

( ಮುಂಡಕೋಪನಿಷತ್ )

ಈ ಗ್ರಂಥದ ಪೂರ್ವಾರ್ಧದಲ್ಲಿ ಮೇಲ್ಕಂಡ ಮಂತ್ರಕ್ಕೆ ಸಂಕ್ಷಿಪ್ತವಾಗಿ ವ್ಯಾಖಾನ ಮಾಡಲಾಗಿದೆ. ಯಾವ ವೀರ ಮಾಹೇಶ್ವರ ಬ್ರಹ್ಮಚಾರಿ ವಟು, ಶ್ರದ್ಧಾ ಭಕ್ತಿಗಳಿಂದ, ಷಟ್ಸ್ಥಲ ಸಿದ್ಧಾಂತ ಬೋಧಕನೂ, ಕ್ರೀಯಾವಂತನೂ, ಶ್ರೋತ್ರೀಯ ಪರಶಿವ ಬ್ರಹ್ಮ ನಿಷ್ಠನೂ ಆದ ಶ್ರೀ ಗುರುವಿನಲ್ಲಿ ಶರಣಾಗತನಾಗಿ, ಸ್ವಾತ್ಮದಲ್ಲಿ ಹೃದಯ ಭ್ರೂಮಧ್ಯ ಹಾಗೂ ಶಿರವರಮನೆಯಲ್ಲಿ ಏಕರ್ಷಿನಾಮಕ ಚಿನ್ಮಯ ರೂಪ ಪರಂಜ್ಯೋತಿ ಸತತ ಬೆಳಗುತ್ತಿರುವುದನ್ನು ಒಳಗಣ್ಣಿನಿಂದ ಶಿವಯೋಗದಲ್ಲಿದ್ದು ಮತ್ತದನ್ನೇ ಎವೆಯಿಕ್ಕದ ನೋಟದಿಂದ ಕಂಡು, ಸ್ತುತಿಸಿ ಧ್ಯಾನಾರೂಢನಾಗಿಪ್ಪನೋ ಮತ್ತಿನ್ನಾವ ಅಂತರಂಗದ ದ್ವಾದಶ ಜ್ಯೋತಿರ್ಲಿಂಗಗಳ ಸಂದರ್ಶನದಿಂದ ಶಾಂತನೂ ಆಗಿರುವನೋ, ಅಂತಪ್ಪ ಅಧಿಕಾರಿಯಾವ ವೀರ ಮಾಹೇಶ್ವರ ಜಂಗಮ ಬ್ರಹ್ಮಚಾರಿ ವಟುವಿಗೆ ಶಿರೋವ್ರತವೆಂಬ ಲಿಂಗಾಂಗ ಸಾಮರಸ್ಯ ರೂಪ " ಲಿಂಗಪತಿ ಅಂಗ ಸತಿ ಮಹಾ ಸತಿ " ಎಂಬ ಜೀವ ಬ್ರಹ್ಮೈಕ್ಯಾನಂದದ ವಿದ್ಯೆಯನ್ನು ಬೋಧಿಸಲು ಅರ್ಹನಿರುವನೆಂದು ಅರ್ಥ ಸ್ಫುರಿಸುತ್ತಲಿದೆ. ಏಕರ್ಷಿನಾಮಕ ಸ್ವಯಂ ಬೆಳಗುವ ಶಿವಾಗ್ನಿ ಅಥವಾ ಮಹಾ ರುದ್ರ ಸದೃಶ ದಿವ್ಯಾಗ್ನಿ, ಶಿರದ ಪರಶಿವ ಬ್ರಹ್ಮವೆನಿಸಿದೆ. ಇದು ಅರದ ಸ್ವಯಂ ಜ್ಯೋತಿ, ಜ್ಯೋತಿಶಾಂ ಜ್ಯೋತಿ, ಪರಂಜ್ಯೋತಿ.

ಆದಿ ಶ್ರೀ ಶಂಕರಾಚಾರ್ಯರು ಮೇಲ್ಕಂಡ ಮಂತ್ರದಲ್ಲಿನ " ಶಿರೋವ್ರತಂ " ಏಕರ್ಷಿನಾಮಕ ಅಗ್ನಿಯೆಂದರೆ ತಮ್ಮ ಭಾಷ್ಯದಲ್ಲಿ " ಶಿರೋವ್ರತಂ ಶಿರಸಿ, ಅಗ್ನಿ, ಧಾರಣ ಲಕ್ಷಣಂ " ಅಂದರೆ, ಪವಿತ್ರವಾದ ಹೋಮಾಗ್ನಿಯನ್ನು ಕುಂಡವಂದರಲ್ಲಿ ತುಂಬಿ, ಸಿಂಬೆಯ ಮೇಲಿರಿಸಿ ಅಗ್ನಿಯನ್ನು ಶಿರಸ್ಸಿನಲ್ಲಿ ಹೊತ್ತು, ದರ್ಭಾಸನದ ಮೇಲೆ ಪದ್ಮಾಸನಾಸೀನನಾಗಿ ಮಂಡಿಸಿ ಧ್ಯಾನಯೋಗದಲ್ಲಿ ನೈಪುಣ್ಯವನ್ನು ಪಡೆದ ವ್ರತಶೀಲನಿಗೆ ಆತ್ಮವಿದ್ಯೆಯನ್ನು, ಶ್ರೋತ್ರೀಯ ಬ್ರಹ್ಮನಿಷ್ಠನಾದ ಶ್ರೀ ಗುರು ಬೋಧಿಸಬಹುದು. ಇಂತಪ್ಪ ವ್ರತಧಾರಿ ಬ್ರಹ್ಮಚಾರಿಯಾದ ವಟುವೆ

ಶಿರೋವ್ರತನೆನಿಸಿರುವನೆಂದು ಶ್ರೀ ಶಂಕರರ ಅಭಿಪ್ರಾಯ.

ಹೋಮಾಗ್ನಿ ಪವಿತ್ರವಾದ ಅಗ್ನಿಯೇ ಹೌದು. ವೇದ ಮಂತ್ರೋಚ್ಚಾರಣೆಗಳಿಂದ, ಸಮಿತ್ತು ಹವಿಸ್ಸುಗಳಿಂದ ಉಜ್ವಲಗೊಳಿಸಿದ ಶ್ರೇಷ್ಠತರವಾದ ಅಗ್ನಿ, ಆದರೆ ಈ ಅಗ್ನಿಯನ್ನು ಹಚ್ಚಲು, ಮೊಟ್ಟಮೊದಲು ಭೌತಿಕಾಗ್ನಿಯ ಸ್ಪರ್ಶ ಅಗತ್ಯವಿರುತ್ತೆ. ಭೌತಿಕಾಗ್ನಿಯ ನೆರವಿನಿಂದ ಆಂಟಿಸಿದ ಹೋಮಾಗ್ನಿ ಮತ್ತು ಭೌತಿಕ ದ್ರವ್ಯಗಳೆನಿಸಿದ ಸಮಿತ್ತುಗಳು, ತುಪ್ಪ, ಆಜ್ಯಾದಿಗಳಿಂದ ಪ್ರಜ್ವಲಗೊಳಿಸಿದ ಹೋಮಾಗ್ನಿ ಅಂತ್ಯದಲ್ಲಿ ಕೆಂಡ, ಬೂದಿಯಾಗಿ ಆರಿ, ಕಾಂತಿಹೀನವಾಗಿ ತಣ್ಣಗಾಗುತ್ತೆ ಭೌತಿಕ ಪದಾರ್ಥಗಳ ಆಶ್ರಯದಿಂದ ಆಚರಿಸಿದ ವ್ರತ ಅಲ್ಪ ಫಲವನ್ನು ಕೊಡಬಲ್ಲದೇವಿನಃ, ನಿರತಿಶಯಾನಂದವಾದ ಶಾಶ್ವತ ಸಾಯುಜ್ಯಮುಕ್ತಿ ದೊರಕಬೇಕಾದರೆ ಮಹಾ ಗುರುವಿನ ಕಟಾಕ್ಷ ದೀಕ್ಷೆಗೆ ಹಾತೊರೆಯಬೇಕು. ಹೋಮಾಗ್ನಿಯನ್ನು ಶಿರಸ್ಸಿನಲ್ಲಿ ಧರಿಸಿರುವ ವ್ರತ ಶೀಲನಾದ ಯತಿ ಅಥವಾ ವಟು ಉರಿಯುವ ಹೋಮಾಗ್ನಿಯ, ಅಗ್ನಿಕುಂಡದ ಬಿಸಿಗೆ, ತಾಪಕ್ಕೆ ತಳಮಳಗೊಳ್ಳಬೇಕಾಗುವುದು. " ಏಕರ್ಷಿನಾಮಕ ಅಗ್ನಿ " ಎಂದರೆ ಹೋಮಕುಂಡದಲ್ಲಿ ಸುರಿದ ತುಪ್ಪ ಆಜ್ಯಸಮಿತ್ತುಗಳಿಂದ ಉಜ್ವಲಗೊಂಡು ಸಪ್ತ ನಾಲಿಗೆಗಳಿಂದ ಸುತ್ತಲೂ ಚಾಚಿದ ತಾತ್ಕಾಲಿಕವಾದ ಉರಿ ಎಂದರ್ಥ. ಈ ಹೋಮಾಗ್ನಿ ನೀರಿನಿಂದ ಆರಿಹೋಗುವ ಗುಣವುಳ್ಳಭೌತಿಕಾಗ್ನಿ.

ಇವರಂತಲ್ಲದೆ ಪರಮ ವೀರ ಮಾಹೇಶ್ವರ ಜಂಗಮಯತಿ, ಶಿವಶರಣ, ಲಿಂಗಾಂಗಿ ವಟುವಿನ ಶಿರದರಮನೆಯಲ್ಲಿ ಹೊತ್ತು ಸತತ ಶಿವ ವ್ರತಶೀಲನಾದ ಇವನ ಏಕರ್ಷಿನಾಮಕ ಸ್ವಯಂ ಬೆಳಗುವ ಸ್ವಯಂಜ್ಯೋತಿ, ಆತನ ಸ್ವಾತ್ಮದೊಳು ತಾನೇ ತಾನಾಗಿ ವಿರಾಜಿಸುವ ಆತ್ಮಲಿಂಗದ ದ್ವಾದಶ ಸ್ಥಾನಗಳಲ್ಲಿ ದ್ವಾದಶ ಜ್ಯೋತಿರ್ಲಿಂಗಗಳ ಸಂಪರ್ಕದಿಂದ ಹೊರಹೊಮ್ಮಿದ "ಪರಂಜ್ಯೋತಿಯನ್ನು" ಹೊತ್ತು ತಾನಾಚರಿಸುವ ಶಿವವ್ರತ ಶಿವಧ್ಯಾನಾದಿ ಶಿವಯೋಗದಿಂದ ಸಿದ್ಧಿಯನ್ನು ಪಡೆದಾತ ನಿಜಕ್ಕೂ ಶಿರೋವ್ರತನೆನಿಸಿ, ಆತ್ಮವಿದ್ಯೆಗೂ, ಷಟ್ಸ್ಥಲ ಸಿದ್ಧಾಂತವೆಂಬ ಶಿವಾತ್ಮವಿದ್ಯೆ ಕಲಿಯಲು ಅರ್ಹನಿರುವನು. ವಟುವಿಗೆ ಶಾಂಭವೀ ವಿದ್ಯೆಯನ್ನು ಸಾಯುಜ್ಯ ಮೋಕ್ಷಾರ್ಥ ಬೋಧಿಸಬಹುದು ಎಂಬ ಅರ್ಥ ಮೇಲುಕ್ತವಾದ ಮುಂಡಕೋಪನಿಷತ್ತಿನ ಮಂತ್ರಕ್ಕೆ ಚೆನ್ನಾಗಿ ಅನ್ವಯಿಸುವುದು ಮತ್ತು ಅರ್ಥಗರ್ಭಿತವಾಗಿರುವುದು.

ಶಿರದರಮನೆಯಲ್ಲಿ ನಿರಂತರ ಪ್ರಜ್ವಲಿಸುವ ಉಜ್ವಲ ಕಾಂತಿಯಿಂದ ಕೂಡಿದು ಪರಂಜ್ಯೋತಿನಾಮಕ " ಏಕರ್ಷಿಂ " ಎಂಬ ಮಹಾರುದ್ರ ಸದೃಶವಾದ ಅಂತರಂಗದ ಶಿರದಗ್ನಿಯನ್ನು ಅದರ ಜಾಜ್ವಲ್ಯಮಾನವಾದ ಪ್ರಕಾಶವನ್ನೂ, ಕಾಂತಿಯನ್ನೂ ಸಪ್ತ ಕಾರ್ಮೇಘಗಳು ಏಕಕಾಲದಲ್ಲಿ ಒಂದು ಸ್ಥಳದಲ್ಲಿ ಕೂಡಿ, ರಭಸದಿಂದ

ಧಾರಾಕಾರವಾಗಿ ಆ ಅಗ್ನಿಯು ಮೇಲೆ ವರ್ಷ ಕಾಲ ಮಳೆ ಸುರಿದರೂ. ಶಿರದಲ್ಲಿ ಹೊತ್ತು ಸ್ಮರಿಸಿ ಧ್ಯಾನಿಸುತ್ತಿರುವ ರುದ್ರಾಗ್ನಿಯು ಆರದು "ಮಸ್ತಕೇ ಲಿಂಗ ಧಾರಣಂ" ಎಂಬಂತೆ ಯಾವಜ್ಜೀವವೂ ಧರಿಸಿ, ನಿರಂತರ ಧ್ಯಾನ ಧಾರಣ ಸಮಾಧಿ ಯೋಗದಲ್ಲಿ ನಿರತನಾಗಿರುವ, ಲಿಂಗಾಂಗಿ ಶರಣನು ನಿಜಕ್ಕೂ ಮಹಾ ಶಿರೋವ್ರತಿ ನಿರುವನು. ಮಹಾ ಪಾಶುಪತನೂ ಇವನೇ ಎಂದು ಅರಿಯಬೇಕು.

ಲಿಂಗಾಂಗಿ ಮಹಾ ಶಿರೋವ್ರತಿಯು, ಶಿರಸ್ಸಿನಲ್ಲಿ ಅಂತರ್ಮುಖವಾಗಿ ಸದಾ ಹೊತ್ತು ಆರಾಧಿಸುತ್ತಿರುವ ಪರಂಜ್ಯೋತಿರ್ಮಯ ಮಹಾ ರುದ್ರಾಗ್ನಿಯಿಂದ ಕಿಂಚಿತ್ತೂ ಭಾಧೆಯಾಗಲಿ, ದಹಿಸುವ ಲಕ್ಷಣಗಳಾಗಲೀ ಇಲ್ಲದವನಾಗಿ, ಪರಮ ಶಾಂತಿ ತೃಪ್ತಿಗಳಿಂದ ಶಿವಾನಂದದಲ್ಲಿ ಮಗ್ನನಾರ್ಪನು.

॥ ಶಿವಂ ಶಾಂತಂ ॥

## ಭುವಿಯಲ್ಲಿ ಎದ್ದು ಕಾಣುವ ದ್ವಾದಶ ಜ್ಯೋತಿರ್ಲಿಂಗಗಳ ಧ್ಯಾನ.

॥ ಸೌರಾಷ್ಟ್ರೇ ಸೋಮನಾಥಂಚ । ಶ್ರೀಶೈಲೇ ಮಲ್ಲಿಕಾರ್ಜುನಂ ॥
ಉಜ್ಜಯಿನ್ಯಾಂ ಮಹಾಕಾಲ । ಮೋಂಕಾರ ಮಮಲೇಶ್ವರಂ ॥
ಪರಲ್ಯಾಂ ವೈಜನಾಥಂ ಚ । ಢಾಕಿನ್ಯಾಂ ಭೀಮ ಶಂಕರಂ ॥
ಸೇತು ಬಂಧೇತು ರಾಮೇಶಂ । ನಾಗೇಶಂ ದಾರುಕಾವನೇ ॥
ವಾರಾಣ ಸ್ಯಾಂತು ವಿಶ್ವೇಶಂ ತ್ರ್ಯಂಬಕಂ ಗೌತಮೀ ತಟೇ ॥
ಹಿಮಾಲ ಯೇತು ಕೇದಾರಂ । ಘುಸೃಣೇಶಂ ಶಿವಾಲಯೇ ॥
ಏತಾನಿ ಜ್ಯೋತಿರ್ಲಿಂಗಾನಿ । ಸಾಯಂ ಪ್ರಾತಃ ಪಠೇನ್ನರಃ ॥
ಸಪ್ತ ಜನ್ಮ ಕೃತಂ ಪಾಪಂ । ಸ್ಮರಣೇನ ವಿನಶ್ಯತಿ ॥



# ಅಧ್ಯಾಯ 24

## ಪ್ರಥಮ ಭಾಗ

॥ ಅಪ್ರತ್ಯಕ್ಷೋ ಮಹಾದೇವಃ । ಸರ್ವೇಷಾಂ ಆತ್ಮ ಮಾಯ ಯಾ ।
ಪ್ರತ್ಯಕ್ಷೋ ಗುರು ರೂಪೇಣ । ವರ್ತತೇ ಭಕ್ತಿ ಸಿದ್ಧಯೇ ॥

॥ ಅಪರಿಚ್ಛಿನ್ನಮ ವ್ಯಕ್ತಂ । ಲಿಂಗಂ ಬ್ರಹ್ಮ ಸನಾತನಂ ।
ಉಪಾಸನಾರ್ಥ ಮಂತಃ ಸ್ಥಂ । ಪರಿಚ್ಛಿನ್ನಂ ಸ್ವ ಮಾಯಯಾ ॥

॥ ಬ್ರಹ್ಮೇತಿ ಲಿಂಗ ಮಾಖ್ಯಾತಂ । ಬ್ರಹ್ಮಣಃ ಪತಿರೀಶ್ವರಃ ।
ಪವಿತ್ರಂ ತದ್ಧಿ ವಿಖ್ಯಾತಂ । ತತ್ಸಂ ಪರ್ಕಾತ್ತನು ಶ್ಶುಚಿಃ ॥

॥ ಏಕೇನ ಜನ್ಮನಾ ಮುಕ್ತಿಃ । ವೀರಾಣಾಂತು ಮಹೇಶ್ವರೀ ।
ಇತರೇ ಷಾಂತು ಶೈವಾನಾಂ । ಮುಕ್ತಿಃ ಜನ್ಮ ತ್ರಯಂ ಭವೇತ್ ॥

॥ ಯೋ ಹಸ್ತ ಪೀಠೇ ನಿಜಲಿಂಗ ಮಿಷ್ಟಂ ।
ವಿನ್ಯಸ್ಯ ತಲ್ಲೀನ ಮನಃ ಪ್ರಚಾರಃ ।
ಬಾಹ್ಯ ಕ್ರಿಯಾ ಸಂಕುಲ ನಿಸ್ಪೃಹಾತ್ಮಾ ।
ಸಂಪೂಜಯೇ ತ್ಯಂಗ ಸ ವೀರಶೈವಃ ॥

॥ ಕರಾಬ್ಜ ಪೀಠೇ ವಿನ್ಯಸ್ಯ । ತಧ್ಯಾನಾಸಕ್ತ ಮಾನಸಃ ।
ಲಿಂಗಾಂಗ ಸಂಗಿನೋವತ್ಸ । ಪುನರ್ಜನ್ಮ ನ ವಿದ್ಯತೇ ॥

( ಮಹಾಸ್ಕಾಂದ )

॥ ಮೂಲೇ ವಸತಿ ಬ್ರಹ್ಮ । ಮಧ್ಯ ಭಾಗೇಚ ಭಗವಾನ್ ವಿಷ್ಣುಃ ।
ಅಗ್ರೇ ಶಂಭುಃ ಪಶುಪತಿಃ । ತಸ್ಮಾಲ್ಲಿಂಗಂ ಪ್ರಪೂಜಯೇತ್ ॥

॥ ಲಿಂಗ ಮಧ್ಯೇ ಮಹಾದೇವಃ । ಸಾಕ್ಷಾನ್ನಿತ್ಯಂ ವ್ಯವಸ್ಥಿತಃ ।
ಅನುಗ್ರಹಾಯ ಲೋಕಾನಾಂ । ತಸ್ಮಾಲ್ಲಿಂಗಂ ಪ್ರಪೂಜಯೇತ್ ॥

**ವೇದಾಗಮಾದಿಗಳಲ್ಲಿ ಅನಾದಿ ಕಾಲದಿಂದ ಪ್ರೋಕ್ತವಾದ ಪರಮ ವೀರಶೈವಾಚಾರ ದಲ್ಲಿನ " ಇಷ್ಟಲಿಂಗಾರಾಧನೆ ಕಾಮಧೇನು, ಕಲ್ಪವೃಕ್ಷ ಮತ್ತು ಚಿಂತಾಮಣಿಗಳಂತೆ ಶಾಶ್ವತ ಫಲಪ್ರದವೆನಿಸಿದೆ ".**

" ಲಿಂಗಧಾರಣ ಮಾತ್ರೇಣ। ಶಿವತ್ವಂ ಪ್ರಾಪ್ತಿ ರೇವಹಿ "

## –: ಪರಮ ವೀರಶೈವರು ವಿಗ್ರಹಾರಾಧಕರಲ್ಲ :–

ಶಿವಲಿಂಗ ಅಥವಾ ಇಷ್ಟಲಿಂಗ ವಿಗ್ರಹವಲ್ಲ. ವಿಗ್ರಹವೆಂದರೆ ಕೈಯಿ, ಕಾಲು, ಕಣ್ಣು, ಮೂಗು, ಕಿವಿ, ಇತ್ಯಾದಿ ಅಂಗಗಳಿಂದ ಕೂಡಿದ ಪ್ರತಿಮೆ. ಲಿಂಗದಲ್ಲಿ ಇವ್ಯಾವೂ ಇಲ್ಲದ್ದರಿಂದ, ಇಷ್ಟ ಲಿಂಗಾರಾಧನೆ ವಿಗ್ರಹಾರಾಧನೆಯಲ್ಲ. ಲಿಂಗ ಕೇವಲ ನಿಷ್ಕಲವೂ ಅಲ್ಲ, ಸಕಲವೂ ಅಲ್ಲ, ಶಿವಯೋಗಿಗಳೂ ಶಿವಶರಣರೂ, ಇಷ್ಟಲಿಂಗವನ್ನು ಸಕಲನಿಷ್ಕಲ ಸ್ವರೂಪವುಳ್ಳದ್ದೆಂದು ನಿತ್ಯ ಆರಾಧಿಸುತ್ತಲಿದ್ದಾರೆ, ಸಕಲನಿಷ್ಕಲ ತತ್ವಗಳನ್ನು ಒಂದುಗೂಡಿಸುವ ದಿವ್ಯ ಸೇತುವೆಯಂತೆ ಇಷ್ಟಲಿಂಗ ರಾರಾಜಿಸುತ್ತಲಿದೆ. ಆದ್ದರಿಂದ ನಿತ್ಯ ದ್ವಿಸಂಧ್ಯಾಕಾಲಗಳಲ್ಲಿ ಇಷ್ಟ ಲಿಂಗಾರಾಧನೆಯನ್ನು ಗುರೂಕ್ತ ಮಂತ್ರಮಾರ್ಗೇಣ . ಆರಾಧಿಸುವವರಿಗೆ ನಿಷ್ಕಲ ಬ್ರಹ್ಮಾರಾಧನೆಯನ್ನು ಮಾಡುವವರು ಯಾವ ಫಲವನ್ನು ಹೊಂದುತ್ತಾರೆಯೋ ಆ ಫಲ, ಸಕಲ ಬ್ರಹ್ಮೋಪಾಸಕರು ಯಾವ ಫಲವನ್ನು ಪಡೆಯುತ್ತಾರೆಯೋ ಆ ಫಲ ಇಂತು ಉಭಯುತರವಾದ ಫಲಗಳು ಏಕಕಾಲದಲ್ಲಿ ಪ್ರಾಪ್ತಿಯಾಗುವುದು. ಇಷ್ಟಲಿಂಗಧಾರಣ ಸಂಸ್ಕಾರವು ಶ್ರೀ ಗುರುವಿನ ಅಮೃತ ಹಸ್ತದಿಂದ ಶಿಷ್ಯನ ಅಂಗಕ್ಕೆ ವಿಧಿವತ್ತಾಗಿ ಅನುಗ್ರಹಿಸಬೇಕು. ಇದು ಅನಾದಿಯಿಂದ ಬಂದಿರುವ ಪರಮ ವೈದಿಕ ಸಂಪ್ರದಾಯ. ಇಷ್ಟಲಿಂಗವೆಂಬುದು " ಶಿವಯೋರ್ದೇಹಃ " ಪರಶಿವನ ಕಾಣುವ, ಕಂಡು ಅಭಿಷೇಕಾದ್ಯುಪಚಾರಗಳಿಂದ ನಿತ್ಯ ಪೂಜಿಸಿ, ಆರಾಧಿಸಿ, ಧ್ಯಾನಿಸುವ ಪರತತ್ವ. " ಇಷ್ಟಲಿಂಗ ಮಿದಂ ಸಾಕ್ಷಾದನಿಷ್ಟ ಪರಿಹಾರಕಂ " ಎಂದಿದೆ ಶೃತಿ. ಶಿವಲಿಂಗ ಸ್ಥಾವಿರಲಿಂಗವೆಂತಲೂ, ಇಷ್ಟಲಿಂಗವೆಂತಲೂ ಎರಡು ಪ್ರಕಾರವಾಗಿದೆ. ಈ ಉಭಯ ಲಿಂಗಗಳ ಆರಾಧನೆಯಿಂದ ಏರ್ಪಡುವ ಫಲ ಒಂದೇ ಆದರೂ, ಇಷ್ಟಲಿಂಗವು ಶ್ರೀ ಗುರುವಿನ ಅಮೃತ ಹಸ್ತದಿಂದ ಶಿಷ್ಯನ ಕರಕಮಲಕ್ಕೆ ವಿಧಿವತ್ತಾಗಿ ಬರುವುದರಿಂದ, ಇಷ್ಟಲಿಂಗದ ಪ್ರಭಾವ ಅತ್ಯಧಿಕವೆನಿಸಿದೆ. ॥ ಏಕೇನ ಜನ್ಮನಾ ಮುಕ್ತಿ ರ್ವೀರಾಣಾಂ ತು ಮಹೇಶ್ವರೀ। ಇತರೇ ಶಾಂತು ಶೈವಾನಾಂ ಮುಕ್ತಿಃ ಜನ್ಮತ್ರಯಂ ಭವೇತ್ ॥ ಎಂದು ಶೃತಿವಾಣಿ ಇದೆ.

## ॥ ಮೋಕ್ಷ ಮೂಲಂ ಗುರೋಕೃಪಾ ॥

ಲಿಂಗವನ್ನು ದೇವ, ದಾನವ, ಮಾನವರಿಗೆಲ್ಲಾ ಅನುಗ್ರಹಿಸುವವನು ಶ್ರೀ ಗುರುವೇ ವಿನಃ ಶಿವನಲ್ಲವೆಂಬುದು ಗಮನಾರ್ಹವಿರುತ್ತೆ. ಶಿವನು ತನ್ನ ನಿಜ ರೂಪವಾದ ಶಿವಲಿಂಗವನ್ನು ತಾನೇ ಕೊಡುವುದಿಲ್ಲ. ಶಿವನು ತನ್ನ ನಿಜ ಮುಖವಾದ ಶಿವ

ಲಿಂಗದಿಂದ ಚಿಜ್ಜ್ಯೋತಿಯಾಗಿ ಗುರು ರೂಪದಲ್ಲಿ ಮಂತ್ರಮಯ ದೇಹದಿಂದ "ಇಚ್ಛಾ ಮಾತ್ರಃ ಪ್ರಭೋಃ ಸೃಷ್ಟಿಃ" ಎಂಬಂತೆ ಆವಿರ್ಭವಿಸಿ, ಸರ್ವತಂತ್ರ ಸ್ವತಂತ್ರನಾಗಿ ಬೆಳಗಿ, ಶಿಷ್ಯ ಕೋಟಿಗಳಿಗೆ ಅನವರತ, ಶಿವಶಕ್ತಿ ಸಂಪುಟದಿಂದ ವಿರಾಜಿಸುವ ತನ್ನ ಆತ್ಮ ಪ್ರತೀಕವೆನಿಸಿದ ಇಷ್ಟಲಿಂಗವನ್ನು ಶಿಷ್ಯನಿಗೆ ಹಸ್ತಮಸ್ತಕ ಸಂಯೋಗವೆಂಬ ತ್ರಿವಿಧ ದೀಕ್ಷಾ ವಿಧಿಗನುಗುಣವಾಗಿ ಅನುಗ್ರಹಿಸುವ ಏಕೈಕ ಅಧಿಕಾರಿ ಶ್ರೀ ಗುರು. ಅಂದಬಳಿಕ ಶಿವನು ಲಿಂಗವನ್ನು ಯಾರಿಗೂ ಕೊಡುವುದಿಲ್ಲ. ಹೊಳೆಯಲ್ಲಿ ಲಿಂಗ ಸಿಕ್ಕಿತೆಂದು ತಾನಾಗಿ ತಂದು ಪೂಜಿಸಿದರೆ ಅದರಿಂದ ಸಾಯುಜ್ಯ ಮೋಕ್ಷ ದೊರೆಯುವುದಿಲ್ಲ. ಈ ಎರಡು ಅಂಶಗಳನ್ನು ಪ್ರಾಜ್ಞರು ಸ್ಮರಣೆಯಲ್ಲಿರಿಸಿರುವುದು ಒಳ್ಳೆಯದು.

॥ ಊರ್ಧ್ವ ಭಾಗೇ ಗೋಳಕಶ್ಚ । ಅಧಃ ಪೀಠಂ ಸಮೀರಿತಂ ।
ಶಿವಶಕ್ತಿ ಸುಸಂಯೋಗಾ । ನ್ಮುಕ್ತಿ ಮಾಪ್ನೋತಿ ಶಾಂಕರೀ ॥

ಲಿಂಗ ರೂಪಿ ಶಿವನು ತನ್ನ ಒಂದಂಶದಿಂದ ಗೋಳಕನಾದ ಮತ್ತೊಂದಂಶದಿಂದ ತಾನೇ ಶಕ್ತಿ ರೂಪದಲ್ಲಿ ಪೀಠವಾಗಿ ಶಿವಶಕ್ತಿ ಸಂಪುಟದಿಂದ ವಿರಾಜಿಸಿದ. ಈ ಕಾರಣದಿಂದ ಶಿವಶಕ್ತಿಯರ ಅವಿನಾ ಭಾವ ಸಂಬಂಧ ಅನಾದಿ ಸಂಸಿದ್ಧವಾದುದು.

## ದ್ವಿತೀಯ ಭಾಗ

### ವೀರಶೈವರು ಅನಾದಿ ಕಾಲದಿಂದ ಆರಾಧಿಸುವ ಇಷ್ಟಲಿಂಗವೆಂದರೇನು ?

ಬಹು ಪೂರ್ವದಲ್ಲಿ ವೀರ ಮಾಹೇಶ್ವರ ಗೋತ್ರದ ಲಿಂಗಾಂಗಿಯಾದ ಶ್ರೀ ಪಿಪ್ಪಲಾದ ಮುನಿಯು, ತನ್ನ ಶಿಷ್ಯ ಭಾರ್ಗವನ "ಇಷ್ಟಲಿಂಗವೆಂದರೇನೆಂಬ" ಪ್ರಶ್ನೆಗೆ, ಆಗಮಾಮ್ನಾಯಾದಿಗಳಲ್ಲಿ ಶಿವನಿಂದ, ತನ್ನ ಅರ್ಧಾಂಗಿ ಗಿರಿಜೆಗೆ ಉಪದೇಶಿಸಿದ ಅಂಶವನ್ನು ಸ್ಮರಿಸಿ, "ವತ್ಸಾ ! ಸ್ವಲ್ಪ ಕೇಳೆಂದು ವಿವರಿಸಿದರು.

ಇಷ್ಟಲಿಂಗವೆಂದರೆ :-

1) ॥ ಮಧ್ ಚ್ಛಿಖಾ ಚಕ್ರಗಳಿತಂ । ಇಷ್ಟಲಿಂಗಂತು ಶಾಂಕರೀ ॥
ನಮ್ಮ ಶಿರದರಮನೆಯ ಶಿಖಾಚಕ್ರ ; ಪರಶಿವ ಬ್ರಹ್ಮನ ಮೂಲ ಆವಾಸ ಸ್ಥಾನವಾದ ಪಶ್ಚಿಮ ಶಿಖಾಚಕ್ರಕ್ಕೂ ಮತ್ತು ಬ್ರಹ್ಮ ರಂಧ್ರವೆಂಬಲ್ಲಿ ವಿರಾಜಿಸುವ ಸಹಸ್ರಾರ ಚಕ್ರಕ್ಕೂ ಮಧ್ಯೆ, ಮಧ್ಯಮಣಿ ನ್ಯಾಯಾನುಸಾರ ಪರಿಶೋಭಿಸುವ, ವೈದಿಕ ಶಿವ

ಯುಳ್ಳ ಸ್ಥಾನ " ಶಿಖಾಚಕ್ರವೆನಿಸಿದೆ ". ಮಹಾ ಗುರುವಿನ ಶಕ್ತಿ ಪಾತದಿಂದಾಗಿ ಶಿಖಾಚಕ್ರದಲ್ಲಿ ನಿರಂತರ ಪ್ರಜ್ವಲಿಸುವ ನಿರಂಜನಲಿಂಗದ ಚಿದ್ರಸವು ಪರಂಜ್ಯೋತಿ ರೂಪದಲ್ಲಿ ಚಲಿಸಿ, ಸಹಸ್ರಾರದ ಚಿಲ್ಲಿಂಗದ ಮುಖೇಣ ಹೃದಯದ ಪ್ರಾಣ ಲಿಂಗದ ಕಳೆಯನ್ನು ಸ್ಪರ್ಶಿಸಿ, ತನ್ಮುಖೇಣ ನೇತ್ರದ ಶಿವಲಿಂಗದ ದ್ವಾರ, ಶ್ರೀ ಗುರು ತನ್ನ ಹಸ್ತಮಸ್ತಕ ಸಂಯೋಗ ದೀಕ್ಷೆಯಿಂದ ವೀಕ್ಷಿಸಿ, ಆ ಚಿದ್ಬಿಂದು ಚಿತ್ಕಳೆಯನ್ನು ಶಿಷ್ಯನ ಕರಕಮಲದಲ್ಲಿನ ಇಷ್ಟಲಿಂಗದಲ್ಲಿ ಶಿವ ಪಂಚಾಕ್ಷರೀ ಮೂಲ ಮಂತ್ರ ಧ್ಯಾನದೊಂದಿಗೆ ಸಮಾವೇಶಗೊಳಿಸಿ, ಶಿಷ್ಯರ ನಿತ್ಯಾರಾಧನೆಗೆ ಅಣಿ ಮಾಡಿಕೊಡುವನು ಶ್ರೀ ಗುರು. ನಾವು ನಮ್ಮ ಕರಪೀಠದಲ್ಲಿ ಕಾಣುವ, ಕಪ್ಪು ಶಿಲೆ ಲಿಂಗ ರೂಪಿ ಶಿವನಲ್ಲ. ಅದರ ಮೇಲಿನ ತುಪ್ಪದ ಕಂತೆ ಸಹ ಶಿವನಲ್ಲ. ಶಿವನು ಮಹಾ ಚೈತನ್ಯಮಯಿ, ಅರಿವು ಮಯ ಹಾಗೂ ಆನಂದ ಮಯನೆನಿಸಿದ ಚಿಜ್ಯೋತಿ, ಪರಾಶಕ್ತಿಯುತನು. ಆ ದಿವ್ಯ ಶಕ್ತಿಯನ್ನು ಕಪ್ಪು ಶಿಲಾಮಯ ಮತ್ತು ತುಪ್ಪದ ಕಂತೆಯಿಂದ ಕೂಡಿದ ಈ ಎರಡು ವಸ್ತುಗಳು ತಮ್ಮತ್ತ ಆಕರ್ಶಿಸಿ ಆ ದಿವ್ಯ ಪರಂಜ್ಯೋತಿ ಸ್ವರೂಪನ್ನು ಹಿಡಿದು ನಿಲ್ಲಿಸುವ ಸಾಧನಗಳು, ಶಿಲಾ ಮತ್ತು ಕಂತೆಗಳು. ಚಕ್ಮಕಿ ಕಲ್ಲುಗಳನ್ನು ಉಜ್ಜುವುದ ರಿಂದ ಸಂಭವಿಸುವ ಅಗ್ನಿಯನ್ನು ಹತ್ತಿ ( ಅರಳೆ ) ಹಿಡಿಯುವಂತೆ ವಿದ್ಯುದ್ ಶಕ್ತಿ ಯನ್ನು ತಾಮ್ರದ ತಂತಿ ಹಿಡಿದಿರಿಸಲು ಹೇಗೆ ಸಾಧನವಾಗಿವೆಯೋ ಅದರಂತೆ, ಸಣ್ಣ ಗೋಳಾಕಾರದ ತುಪ್ಪದ ಕಂತೆಯಿಂದ ಕೂಡಿದ ಕಪ್ಪು ಶಿಲೆ, ಪರಶಿವ ಬ್ರಹ್ಮದ ದಿವ್ಯ ಚೈತನ್ಯವನ್ನು ಹಿಡಿದಿರಿಸಲು ಹೇತುವಾದ ಪರಮ ಸಾಧನವಾಗಿವೆ. ಶ್ರೀ ಗುರು ಶಿಷ್ಯನ ಮಸ್ತಕದ ಮೇಲೆ ಹಸ್ತವಿರಿಸಿ ಅವನ ಜೀವ ಕಳೆಯನ್ನು ವೀಕ್ಷಿಸಿ ಆಕರ್ಶಿಸಿ ಶಿಷ್ಯನ ವಾಮಕರ ಪೀಠದಲ್ಲಿ ಸುಸಂಸ್ಕೃತಗೊಳಿಸಿ ಇರಿಸಿರುವ ಲಿಂಗದಲ್ಲಿ ಆ ದಿವ್ಯ ಆತ್ಮ ಶಕ್ತಿಯನ್ನು ಸಮಾವೇಶಗೊಳಿಸಿ, ಈ ರಹಸ್ಯವನ್ನು ಉಪದೇಶಿಸಿ, ವತ್ಸಾ! ನಿನ್ನ ಕರಕಮಲದಲ್ಲಿನ ಲಿಂಗದೊಳಗೆ, ಶಿವಧ್ಯಾನದಲ್ಲಿ ಕಾಣುವ ಚಿತ್ಕಳೆಯೋ ಲಿಂಗ ವೆಂದರಿ. ನಿನ್ನ ಸ್ವ ಸ್ವರೂಪವನ್ನು ಕಾಣುವ ದರ್ಪಣ ( ಕನ್ನಡಿ ) ಈ ಲಿಂಗ ವೆಂದರಿ ಎಂದು ಬೋಧಿಸುತ್ತಾನೆ. ಈ ಲಿಂಗ ನಮ್ಮ ಇಷ್ಟವಾದ ಆತ್ಮ ತೇಜಸ್ಸಾದ್ದ ರಿಂದ, ಇದಕ್ಕೆ ಇಷ್ಟಲಿಂಗವೆಂದು ಹೆಸರು. ಇಷ್ಟಲಿಂಗಾರಾಧನೆ ಎಂದರೆ ಸ್ವ ಸ್ವರೂಪದ ಚಿಂತನೆ, ಆರಾಧನೆ, ಆದ್ದರಿಂದ ಇಷ್ಟಲಿಂಗವೇ ಆತ್ಮ ಲಿಂಗವೆನಿಸಿದೆ ಎಂದು ಭಾರ್ಗವನೆಂಬ ಶಿಷ್ಯನಿಗೆ ಪಿಪ್ಪಲಾದ ಮುನಿ ಆತ್ಮೀಯವಾಗಿ ಬೋಧಿಸುತ್ತಾ, ಈ ಕಾರಣದಿಂದ ಮಗನೇ ; ಇಷ್ಟಲಿಂಗವೆಂದರೆ–

2) ॥ತವ ಪ್ರಾಣಲಿಂಗಮೇ ತದಿತಿ ಭಾವಯ॥ ನಿನ್ನ ಪಂಚ ಪ್ರಾಣಗಳಿಗೆ ಆಧಾರವೆನಿಸಿದ ಮಹಾ ಪ್ರಾಣವೇ ಇಷ್ಟಲಿಂಗವೆಂದರಿ. ಇದನ್ನೇ ಶ್ರುತಿ ಮಾತೆ ( ವೇದ ಮಾತೆ ) ಯು, " ಅಥ ಏವ ಪ್ರಾಣಃ " ಎಂದು ಬೆರಳಿಟ್ಟು ತೋರಿ

ಸುತ್ತಿದ್ದಾಳೆ. ಈ ಪ್ರಾಣಲಿಂಗದ ಚಿನ್ಮುದ್ರೆ ಇಷ್ಟಲಿಂಗದಲ್ಲಿ ಪ್ರಕಾಶಿತವಾಗಿ ಸ್ಥಾಪಿಸಲಾಗಿದೆ ಎಂದರಿ.

3) ಹೇ ವತ್ಸಾ ! ಏತ ದೇವ ಖಲು । ಸರ್ವ ತತ್ವಾತೀತಂ ಪರವಸ್ತು ।
ಇತ್ಯನು ಚಿಂತಯನ್ ॥

ಮೂವತ್ತಾರು ತತ್ವಗಳಿಗೂ, ಷಡಧ್ವಗಳಿಗೂ ಅತೀತವಾದ ನಿನ್ನ ಪಶ್ಚಿಮ ಶಿಖಾಚಕ್ರದಲ್ಲಿ ಉಜ್ವಲವಾಗಿ ಸ್ವಯಂ ಪ್ರಜ್ವಲಿಸುತ್ತಿರುವ ಲಿಂಗರೂಪಿ ಪರಶಿವ ಸ್ವರೂಪವಿದು ಎಂದು ಸ್ವಾನುಭವದಿಂದಲೂ ಶ್ರೀ ಗುರುವಿನ ಅನುಗ್ರಹ ದಿಂದಲೂ ತಿಳಿ. ಮತ್ತು–

4) ಹೇ ವತ್ಸಾ ! ॥ ಇದಮೇವಹಿ । ಅಜ ಹರ್ಯೋರಪಿ ದುರ್ಲಕ್ಷ್ಯ ।
ನಿಜ ತತ್ವಮಿತಿ ನಿಶ್ಚಿನು ॥
ಇತಃ ಪರಂ ಏತನ್ನಿಮಿಷಾರ್ಧ ಮಪಿ ।
ತ್ವ ಚ್ಛರೀರಾ ನ ವಿಯೋಜರ್ಯ ॥

ಹೇ ಮಗನೇ ! ಹರಿಬ್ರಹ್ಮೇಂದ್ರಾದಿಗಳಿಗೂ ಅಗೋಚರವೆನಿಸಿರುವ ನಿಜ ತತ್ವವಿದೆಂದು ನಿಶ್ಚಯಿಸು, ಈ ಕಾರಣದಿಂದ ಇಷ್ಟಲಿಂಗವನ್ನು ಅರ್ಧ ನಿಮಿಷವೂ ನಿನ್ನ ದೇಹದಿಂದ ಅಗಲಿರಿಸದೆ ಸ್ವಾತ್ಮ ಪ್ರೀತಿಪುರಸ್ಸರ ಭಾವದಿಂದ, ದ್ವಿಸಂಧ್ಯಾಕಾಲ ಗಳಲ್ಲಿ ತಪ್ಪದೆ ಯಾವಜ್ಜೀವವೂ ಪೂಜಿಸಿ, ಚಿಂತಿಸಿ, ಧ್ಯಾನ, ಧಾರಣ ಸಮಾಧಿ ಯೋಗದಲ್ಲಿರು. ಇದರಿಂದ ನಿನಗೆ ಸತತ ಅನಂತ ಶ್ರೇಯಸ್ಸುಂಟಾಗುವುದೆಂದು ಇಷ್ಟಲಿಂಗದ ಮಹತ್ವವನ್ನು ಶ್ರೀ ಪಿಪ್ಪಲಾದ ಮುನಿ ತನ್ನ ಶಿಷ್ಯ ಭಾರ್ಗವನಿಗೆ ಮನಂಬುಗುವಂತೆ ಬೋಧಿಸಲು, ಶಿಷ್ಯನಿಗಾದ ಆನಂದಕ್ಕೆ ಪಾರವಿಲ್ಲದಂತಾಯಿತು.

ಪ್ರತಿಯೊಬ್ಬರಿಗೂ ದೇಹತ್ರಯಂಗಳುಂಟು. ಸ್ಥೂಲ ಶರೀರ ( ತ್ಯಾಗಾಂಗ ) ಸೂಕ್ಷ್ಮ ಶರೀರ ( ಭೋಗಾಂಗ ) ಮತ್ತು ಕಾರಣ ಶರೀರ ( ಯೋಗಾಂಗ ) ಈ ದೇಹತ್ರಯಂಗಳಲ್ಲಿ ಕಾರ್ಮಿಕ ಮಲ, ಮಾಯಾ ಮಲ ಮತ್ತು ಆಣವ ಮಲಗಳೆಂಬ ಪಾಶ ಅನಾದಿ ಕಾಲದಿಂದ ಆವರಿಸಿರುವುದು. ಇಂತಪ್ಪ ಅವಿದ್ಯಾ ರೂಪ ಪಾಶವೆನಿ ಸಿದ ಮಲತ್ರಯಂಗಳನ್ನು ದೇಹತ್ರಯಂಗಳಿಂದ ಆಮೂಲಾಗ್ರವಾಗಿ ನಿರ್ಮೂಲ ಮಾಡಲು, ಶ್ರೀಮದಾದಿ ಜಗದ್ಗುರು ರೇಣುಕಾದಿ ಪಂಚಾಚಾರ್ಯರು, ಜಗದಾದಿ ಯಿಂದಲೂ ದೇಹತ್ರಯಂಗಳಲ್ಲಿ ಲಿಂಗತ್ರಯಂಗಳನ್ನು ಸ್ಥಾಪಿಸಿ, ಶಿಷ್ಯನ ನಿತ್ಯಾ ರಾಧನೆಗೆ ಕರುಣೆಯಿಂದ ಅಣಿ ಮಾಡಿ ಅನುಗ್ರಹಿಸಿ, ತಾವು ಮೊದಲು ಇಷ್ಟಲಿಂಗ

ವನ್ನು ಆರಾಧಿಸಿ, ಶಿಷ್ಯೋದ್ಧಾರಾರ್ಥ, ಜಗದೋದ್ಧಾರಾರ್ಥ, ಧರ್ಮೋದ್ಧಾರಾರ್ಥ ಜಗತ್ತಿಗೆ ತೋರಿಸಿ ಕೊಟ್ಟಿರುವರು. ತ್ಯಾಗಾಂಗದಲ್ಲಿ ಇಷ್ಟಲಿಂಗ, ಭೋಗಾಂಗದಲ್ಲಿ ಪ್ರಾಣಲಿಂಗ ಮತ್ತು ಯೋಗಾಂಗದಲ್ಲಿ ಭಾವಲಿಂಗಗಳ ಸಾನ್ನಿಧ್ಯ ಸಾಕ್ಷಾತ್ಕಾರಗಳನ್ನು ಅಂಗನು (ಜೀವಾತ್ಮನು) ಶ್ರೀ ಗುರುವಿನ ಕರುಣೆಯಿಂದ ನಿತ್ಯಾರಾಧನೆಯಿಂದ ಕಂಡು ಕೊಂಡು ಸ್ವಾತ್ಮದಲ್ಲಿ ಸದಾ ರಂಜಿತನಾಗಿ, ವಿದೇಹಕೈವಲ್ಯ ಸುಖವನ್ನು ಲಿಂಗಾಂಗಿಯು ಜೀವಂತನಾಗಿರುವ ಕಾಲದಲ್ಲೇ ಸ್ವಾನುಭೂತಿಯಲ್ಲಿ ಅನುಭವಿಸು ವಂಥವನಾಗಬೇಕು. ಇಷ್ಟಲಿಂಗಾರಾಧನೆಯ ಮಹತ್ವವಿದು.



## ಅಧ್ಯಾಯ 25

### ಪ್ರಥಮ ಭಾಗ

॥ ಗುರುವೇ ಸರ್ವ ಲೋಕಾನಾಂ । ಭಿಷಜೇ ಭವರೋಗಿಣಾಂ ।
ನಿಧಯೇ ಆತ್ಮ ವಿದ್ಯಾ ನಾಂ । ದಕ್ಷಿಣಾ ಮೂರ್ತಯೇ ನಮಃ ॥

ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಶಿವಲಿಂಗೋದ್ಭವ ಮಂಗಳ ಮೂರ್ತಿ, ಜಗವಾದಿ ಪರಮ ಜಗದ್ಗುರು ರೇವಣಸಿದ್ಧರಿಂದ ಕ್ರಿ.ಪೂ. ಕಾಲಾವಧಿ ಯಲ್ಲಿ ಸಂಸ್ಕೃತ ಭಾಷೆಯಲ್ಲಿ ರಚಿಸಲ್ಪಟ್ಟ ಹತ್ತು ಕೋಟಿ ಶ್ಲೋಕಗಳಿಂದ ಗರ್ಭಿತ ವಾದ " ಪರಮ ರಹಸ್ಯ " ವೆಂಬ ಬೃಹದ್ ಆಧ್ಯಾತ್ಮಿಕ ಗ್ರಂಥದ ; ಒಂದು ಭಾಗ 26000 ( ಇಪ್ಪತ್ತಾರು ಸಾವಿರ ) ಶ್ಲೋಕಗಳಿರುವ ಕೃತಿರತ್ನ ; ( Mysore Oriental Library ) ಮೈಸೂರು ವಿಶ್ವವಿದ್ಯಾಲಯದ ಗ್ರಂಥಾ ಲಯದಲ್ಲಿರುವುದನ್ನು ನಾನು ದಿನಾಂಕ 18-4-1985 ರಂದು ಹೋಗಿ ಅಲ್ಲಿ ಖುದ್ದಾಗಿ ನೋಡಿ ಆನಂದಿಸಿದೆ.

" ಶ್ರೀ ಶೃಂಗೇರಿ ಶಂಕರರಿಗೆ ದತ್ತವಾದ ಶ್ರೀ ಚಂದ್ರಮೌಳಿ ಲಿಂಗ " ವೆಂಬ ನನ್ನ ಗ್ರಂಥದ ಉಪೋದ್ಘಾತದ ಪುಟಗಳಲ್ಲಿ, ಮೇಲುಕ್ತವಾದ " ಪರಮ ರಹಸ್ಯ " ವೆಂಬ ಅಂಕಿತದ ಆಧ್ಯಾತ್ಮಿಕ ಕೃತಿ ಬಗೆಗೆ, ಕೆಲವು ದೃಢತರವಾದ ಆಧಾರಗಳೊಂದಿಗೆ

ಸುಂದರವಾಗಿ ನಿರೂಪಿಸಿದ್ದೇನೆಯಷ್ಟೆ. ಈ ಬೃಹದ್ಗ್ರಂಥದ ಸುಮಾರು ಇಪ್ಪತ್ತಾರು ಸಾವಿರ ಶ್ಲೋಕಗಳಿರುವ ಒಂದು ಭಾಗ, ಮೈಸೂರಿನ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿರುವುದಾಗಿ ತಿಳಿದು, ಅಲ್ಲಿಗೆ ಹೋಗಿ ಆ ಪ್ರತಿಯನ್ನು ಪಡೆದು ನೋಡಿದೆನು.

ಈ ಕೃತಿ ಪುರಾತನ ತಾಳೆಗರಿಯ ಮೇಲೆ ಸುಂದರವಾಗಿ ರಚಿತವಾಗದೆ. ಲಿಪಿ ಕನ್ನಡ ಭಾಷೆಸಂಸ್ಕೃತದ ಮಂತ್ರಗಳು, ಈ ಕಟ್ಟಿನಲ್ಲಿ ಸುಮಾರು ಎರಡು ಸಾವಿರ ಉದ್ದವಾದ ತಾಳೆಗರಿಗಳಿದ್ದು, ಒಂದೊಂದು ಗರಿಯಲ್ಲೂ ಸುಮಾರು ಹನ್ನೆರಡು ಅಥವಾ ಹದಿಮೂರು ಶ್ಲೋಕಗಳು ರಚಿತವಾಗಿವೆ. ಈ ಕಟ್ಟಿನ ತಾಳೆ ಗರಿಗಳು ಸುಮಾರು ಇಲ್ಲಿಗೆ ಮೂರು ಸಾವಿರ ವರ್ಷಗಳಷ್ಟು ಪುರಾತನವೆನಿಸಿದ್ದರೂ, ಲಿಪಿಗಳು ಸುಂದರವಾಗಿದ್ದು ಶ್ಲೋಕ ಓದಲು ಬರುವಂತಿದ್ದವು. ಹೀಗಿದ್ದರೂ ಸಹ ಕೆಲವು ತಾಳೆಗರಿಗಳು ಮುಟ್ಟಿದರೆ ಮುರಿದು ತುಂಡಾಗುವ ಸ್ಥಿತಿಯಲ್ಲಿದ್ದವು. ಈ ಕಟ್ಟಿನ ತಾಳೆಗರಿಗಳು ಸುಮಾರು ಮೂರು ಅಡಿ ಉದ್ದ, ನಾಲ್ಕು ಅಂಗುಲ ಅಗಲವಿದ್ದು, ಈ ಕಟ್ಟು ಸುಮಾರು ಐದು ಅಂಗುಲಗಳಷ್ಟು ಎತ್ತರವಿತ್ತು. ನಾನು ಸುಮಾರು ಇಪ್ಪತ್ತು ನಿಮಿಷಗಳವರವಿಗೂ ನಾಲ್ಕಾರು ಗರಿಗಳನ್ನು ನೋಡಿದೆ, ಆನಂದಪಟ್ಟೆ.

ನಮ್ಮ ಪುಣ್ಯವಶಾತ್ ಮಹಾಚಾರ್ಯರಿಂದ ಕ್ರಿ.ಪೂ. ಕಾಲದಲ್ಲಿ ರಚಿತವಾದ ಈ ಅಪೂರ್ವ ಕೃತಿಯ ಒಂದು ಭಾಗ ಮೈಸೂರಿನಲ್ಲಿರುವುದರಿಂದ, ವಿದ್ವಾಂಸರು ಇದನ್ನು ನೋಡಿ, ಈ ಮಹರ್ಹ ಕೃತಿಯ ಪ್ರತಿ ಯೊಂದನ್ನು ( ನಕಲೊಂದನ್ನು ) ಶ್ರಮ ವಹಿಸಿ ಬರೆದರೆ, ವೀರಶೈವ ವಿಶ್ವ ಧರ್ಮ ಮಾನವ ಕುಲದ ಉದ್ಧಾರಕ್ಕಾಗಿ ರಚಿಸಿದ ಮಹರ್ಹ ಕೃತಿ ಎಂದು ಜಗತ್ತು ಅರಿತು, ಇದರಂತೆ ಧರ್ಮವನ್ನು ಕ್ವಚಿತ್ ಆಚರಿಸಲು ಅನುವು ಮಾಡಿಕೊಟ್ಟಂತಾಗುವುದು, ವಿ ಶ್ವಾ ಚಾ ರ್ಯ ರ ಬೋಧಾಮೃತದಿಂದ, ಇಡೀ ಮಾನವ ಧರ್ಮಕ್ಕೆ ಜಯವನ್ನು ಕಲ್ಯಾಣವನ್ನೂ ಹಾಗೂ ಶಾಶ್ವತ ಶಾಂತಿ ದಾರಿಯನ್ನು ಅವಲಂಭಿಸುವಂಥಾ, ಸರ್ವೇ ಜನಾಃ ಸುಖಿನೋ ಭವಂತು। ಲೋಕಾಃ ಸಮಸ್ತಾ ಸರ್ವ ಮಂಗಳಾನಿ ಭವಂತು॥ ಎಂಬಂತೆ ಜಗತ್ತಿಗೆ ಕಲ್ಯಾಣವೇರ್ಪಡುವುದೆಂಬುದರಲ್ಲಿ ಸಂದೇಹವೇ ಇಲ್ಲ. ಈ ವಿಷಯ ಇಷ್ಟಕ್ಕೆ ಕೇಳಿ, ಓದಿ, ನೋಡಿ ಸಂತೋಷಿಸಿ ಸುಮ್ಮನಾಗುವದಲ್ಲ ಈ ಕೃತಿಯನ್ನು ಪ್ರಕಟಿಸಬೇಕು.

ಪ್ರಸ್ಥಾನತ್ರಯಗಳಿಗೆ ವೀರಶೈವ ಪರವಾದ ವಿಶ್ವ ಧರ್ಮಕ್ಕೆ ಅನ್ವಯಿಸುವಂಥಾ ಭಾಷ್ಯಾದಿಗಳನ್ನು, ಶಿವಲಿಂಗೋದ್ಭವ ಶ್ರೀ ಆದಿ ಜಗದ್ಗುರು ಪಂಚಾಚಾರ್ಯರು ಜಗದಾದಿಯಲ್ಲೇ ಅಂದರೆ ಶ್ರೀ ಶಂಕರ, ರಾಮಾನುಜ, ಮಧ್ವ ಮೊದಲಾದ ಆಚಾರ್ಯ ಮಹೋದಯರು ಭುವಿಯಲ್ಲಿ ಜನ್ಮ ತಾಳುವುದಕ್ಕೂ ಬಹು ಪೂರ್ವದಲ್ಲೇ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು, ವಿಶಾಲಾರ್ಥಗರ್ಭಿತವಾದ,

ಮಾನವ ಕುಲಕ್ಕೆ ಆರದ ಜ್ಞಾನಜ್ಯೋತಿಯನ್ನು ತಮ್ಮ ಭಾಷ್ಯಗಳಲ್ಲಿ ಪ್ರತಿಪಾದಿಸಿದ್ದರೆಂದು, ಕ್ರಿ.ಶ. 9ನೇ ಶತಮಾನದಲ್ಲಿದ್ದ "ನೀಲಕಂಠ ಭಾಷ್ಯ" ಕರ್ತೃಗಳಾದ ಶ್ರೀ ನೀಲಕಂಠ ಶಿವಾಚಾರ್ಯರಿಂದಲೂ, ಮತ್ತು ಕ್ರಿ.ಶ. 11ನೇ ಶತಮಾನದ ಶ್ರೀಕರ ಭಾಷ್ಯ ಕರ್ತೃಗಳಾದ, ಶ್ರೀಪತಿ ಪಂಡಿತಾರಾಧ್ಯ ಶಿವಾಚಾರ್ಯರೂ ತಂತಮ್ಮ ಭಾಷ್ಯಗಳಲ್ಲಿ ವ್ಯಕ್ತಪಡಿಸಿರುವುದು ವಿದ್ವನ್ಮಂಡಲಿಗೆ ತಿಳಿದ ವಿಷಯವಾಗಿದೆ. ಆದರೂ ಶ್ರೀ ಜಗದ್ಗುರು ಪಂಚಾಚಾರ್ಯರು ರಚಿಸಿದ ಮೂಲ ಭಾಷ್ಯಾದಿಗಳು ಸಹ ವಿಶ್ವದ ಯಾವುದೋ ಒಂದು ಭಾಗದಲ್ಲಿ ತಾಳೆಗರಿ ಲಿಪಿಗಳ ರೂಪದಲ್ಲಿ ಅಡಗಿರಬೇಕು ಆದರೆ ಈಗ ಮೇಲುಕ್ತವಾದ "ಪರಮ ರಹಸ್ಯ" ವೆಂಬ ಬೃಹದ್ ಗ್ರಂಥದ ಒಂದು ಭಾಗ ಮೈಸೂರಿನ ಓರಿಯಂಟಲ್ ಗ್ರಂಥಾಲಯದಲ್ಲಿ ಇರುವುದರಿಂದ, ಅದರಲ್ಲಿನ 26000 ಶ್ಲೋಕಗಳನ್ನು ಈಗ ಘನ ಪಂಡಿತರು ಶ್ರದ್ಧೆವಹಿಸಿ, ನಿಷ್ಠೆಯಿಂದ ಆಮೂಲಾಗ್ರವಾಗಿ ಪರಿಶೀಲಿಸಿದರೆ "ಶ್ರೀ ರೇಣುಕ ಭಾಷ್ಯ-ಧಾರುಕ ಭಾಷ್ಯ ಪಂಚಾಚಾರ್ಯ ಕೃತಿ ಭಾಷ್ಯಗಳ ಬಗೆಗೆ ಹೆಚ್ಚಿನ ಮಾಹಿತಿಗಳು ದೊರಕುವುದರಲ್ಲಿ ಸಂದೇಹವಿಲ್ಲ ಹಾಗೂ ವೀರಶೈವ ಧರ್ಮ ವಿಶ್ವಧರ್ಮವೆನಿಸಿ, ಸಮಸ್ತ ದೇವ, ದಾನವ, ಮಾನವರಿಗೂ ಅನ್ವಯಿಸುವಂತಃ ಈ ಜನ್ಮದಲ್ಲೇ ಸಾಯುಜ್ಯ ಮೋಕ್ಷಪ್ರದವಾದ ಅದ್ವಿತೀಯ ಮಹಾ ಧರ್ಮವೆಂದು ಮನಗಾಣಬಹುದಾಗಿದೆ.

ಇದಕ್ಕಾಗಿ ಸಂಬಂಧಪಟ್ಟ ಲಿಂಗಾಂಗಿ ವಿದ್ವಜ್ಜನರು, ಶಿವಾದ್ವೈತ ಸಿದ್ಧಾಂತದಲ್ಲಿ ಡಾಕ್ಟರೇಟ್ ಪದವಿಯಿಂದ ಪೂರ್ಣ ನೈಪುಣ್ಯವನ್ನು ಪಡೆದ ಪಂಡಿತ ಮಹೋದಯರೂ ಕಾಲ ವಿಳಂಬ ಮಾಡದೆ, ಪರಿಣತರಿಂದ ಕೂಡಿದ ಒಂದು ವಿದ್ವಾಂಸರ ಕಮಿಟಿಯೊಂದನ್ನು ಶ್ರೀ ಜಗದ್ಗುರುಗಳವರ ನೇತೃತ್ವದಲ್ಲಿ ನೇಮಕ ಮಾಡಿ, ಈ ಪವಿತ್ರವಾದ ವಿಷಯದ ಬಗೆಗೆ ಚರ್ಚಿಸಿ, ಸದರಿ ಮೈಸೂರಿನ ಗ್ರಂಥಾಲಯದಲ್ಲಿನ ಮೇಲುಕ್ತವಾದ ಕೃತಿಯನ್ನು ಪಡೆದು, ಕೂಲಂಕಶವಾಗಿ ಇಬ್ಬರು ಘನ ವಿದ್ವಾಂಸರು ಅದನ್ನು ಪರಿಶೀಲಿಸುವುದೊಳ್ಳೆಯದು.

ಸಾರ್ಥಕವೆನಿಸಿದರೆ 6 ತಿಂಗಳು ಕಾಲ ದಿನವಹಿ 4 ಘಂಟೆಗಳಂತೆ ಅಲ್ಲೇ ಏಕಾಂತವಾಗಿ ಕುಳಿತು, ಆ ಮಹಾ ಪ್ರತಿಯ ಪೂರ್ಣ ನಕಲನ್ನು ಮಾಡಿಕೊಂಡು ಸಿದ್ಧಪಡಿಸಿದರೆ ಮುಂದಿನ ಅದರ ಮುದ್ರಣಕ್ಕೂ, ವ್ಯಾಖ್ಯಾನಕ್ಕೂ ಹಾಗೂ ಜನಜನಿತವಾಗಿ ತಿಳಿಯುವಂತೆ ಪ್ರಸಾರ ಮಾಡುವುದಕ್ಕೂ ಸದವಕಾಶ ದೊರೆತಂತಾಗುವುದು. ಇದಕ್ಕಾಗಿ ಫಂಡು, ನಿಧಿ ಸಂಗ್ರಹವನ್ನು ಮಾಡಬೇಕಾಗುವುದು.

ಇಂತಪ್ಪ ಮಹಾ ಕಾರ್ಯದಲ್ಲಿ ಅಖಿಲ ಭಾರತ ವೀರಶೈವ ಮಹಾ ಸಭೆಯವರೂ ಬಸವ ಸಮಿತಿಯ ಮಹೋದಯರುಗಳೂ ಮತ್ತು ಅಖಿಲ ಭಾರತ ವೀರಶೈವ ಶಿವಾ

ಚಾರ್ಯ ಮಹಾ ಸಂಸ್ಥೆಯವರೂ, ಅವಧಾನ ಭಕ್ತಿಯಿಂದ, ಅವ್ಯಾಹತವಾಗಿ ಶ್ರಮಿಸಿದರೆ ಈ ಕಾರ್ಯ ಸುಲಲಿತವಾಗಿ ಈಡೇರುವುದರಲ್ಲಿ ಸಂದೇಹವಿಲ್ಲ. ಈ ಕಾರ್ಯ ಶಿವಾನುಗ್ರಹದಿಂದ ಯಶಸ್ವಿಯಾಗಿ ನೆರವೇರಿದರೆ- ಶ್ರೀ ರೇಣುಕ-ದಾರುಕ ಭಾಷ್ಯಾದಿಗಳು ಒಂದು ವಿಧವಲ್ಲಿ ಸಿಕ್ಕಂತೆ ಭಾವಿಸಿ ಆನಂದಿಸಬಹುದು.

ಶ್ರೀ ಶೃಂಗೇರಿ ಶ್ರೀ ಶಾರದ ಪೀಠದ ಅಧ್ಯಕ್ಷರಾದ ಶ್ರೀ ಜಗದ್ಗುರು ಸಚ್ಚಿದಾನಂದ ಭಾರತಿ-2 ಕ್ರಿ.ಶ. 1706 ರಿಂದ 1741ರ ಕಾಲಾವಧಿಯಲ್ಲಿ ಆಸ್ಥಾನ ವಿದ್ವಾನ್ ಬ್ರಂ॥ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳಿಂದ ಸುಮಾರು ಕ್ರಿ. ಶ. 1730 ರಲ್ಲಿ ಶ್ರೀ ಜಗದ್ಗುರುಗಳ ಆಜ್ಞೆಯಂತೆ ರಚಿತವಾದ ಮಹಾ ಕೃತಿ **"ಶ್ರೀ ಗುರುವಂಶ ಕಾವ್ಯ"** ಇದರಲ್ಲಿ ಆದಿ ಶ್ರೀ ಶಂಕರಾಚಾರ್ಯರಿಗೆ ಜಗದಾದಿ ಶ್ರೀ ಜಗದ್ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು ಶ್ರೀ ರತ್ನಗರ್ಭ ಗಣಪತಿಯನ್ನು ಶ್ರೀ ಚಂದ್ರ ಮೌಳಿ ಲಿಂಗವನ್ನು ಅನುಗ್ರಹಿಸಿದ ಸಾರ ಭೂತವಾದ ವಿಷಯ ಅಧಿಕೃತವಾಗಿ ಪ್ರೋಕ್ತವಾಗಿದೆ ಎಂಬ ನಿತ್ಯ ಸತ್ಯ ಸುಂದರವಾದ ಪ್ರತಿಪಾದನೆ ಪ್ರಸಿದ್ಧವಾಗಿದೆ.

॥ ಓಂ ಪೂರ್ಣ ಮದಃ ಪೂರ್ಣ ಮಿದಂ । ಪೂರ್ಣಾತ್ಪೂರ್ಣ ಮದಚ್ಯತೇ ।
ಪೂರ್ಣಸ್ಯ ಪೂರ್ಣ ಮಾದಾಯ । ಪೂರ್ಣ ಮೇವಾ ವ ಶಿಷ್ಯತೇ ॥

॥ ಓಂ ಶಾಂತಿಃ ಶ್ಯಾಂತಿಃ ಶ್ಯಾಂತಿಃ ॥

ಅದ್ವೈತ ಸಿದ್ಧಾಂತ ಮತಸ್ಥಾಪನಾಚಾರ್ಯವರ್ಯ ಶ್ರೀ. ಶೃಂಗೇರಿ ಶ್ರೀ ಶಾರದಾ ಪೀಠಾಧ್ಯಕ್ಷ ಜಗದ್ಗುರು ಆದಿ ಶ್ರೀ ಶಂಕರಾಚಾರ್ಯರವರನ್ನು ಮೊದಲು ಮಾಡಿ, ಇವರ ಶ್ರೀ ಗುರು ಪರಂಪರೆಯಲ್ಲಿ ತಮ್ಮ ಅಂದರೆ ಶ್ರೀ ಜ॥ ಸಚ್ಚಿದಾನಂದ ಭಾರತಿ-2 ರವರ ಕಾಲದವರವಿಗೆ ಈ ಪೀಠಕ್ಕೆ ಎಷ್ಟು ಜನ ಗುರು ಮೂರ್ತಿಗಳು ಅದ್ವೈತ ಮತದ ಪೀಠಾರೋಹಣ ಮಾಡಿದ್ದರು ಎಂಬ ಪವಿತ್ರ ವಿಷಯವನ್ನು ಅರಿಯಬೇಕೆಂಬ ಸದಿಚ್ಛೆ, ಮಹಾ ಗುರುಗಳ ಚಿತ್ತದಲ್ಲುಂಟಾಯಿತು. ಒಂದು ದಿವಸ ಶ್ರೀಗಳು ತಮ್ಮ ಘನ ಆಸ್ಥಾನ ವಿದ್ವಾನ್ ಬ್ರಂ॥ ವೇ॥ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳನ್ನುದ್ದೇಶಿಸಿ ತಮ್ಮ ಮನದಿಚ್ಛೆಯನ್ನು ವ್ಯಕ್ತಪಡಿಸಿದರು. ಮುಂದು ವರಿದು ಪರಮ ಪೂಜ್ಯ ಮಹಾ ಸನ್ನಿಧಿಯವರು, ಕಾಶಿ ಲಕ್ಷ್ಮಣ ಶಾಸ್ತ್ರಿಗಳ ಅಗಾಧ ಪಾಂಡಿತ್ಯ, ಪೀಠಾಭಿಮಾನ ಅವರಲ್ಲಿದ್ದ ದೂರದೃಷ್ಟಿಯ ವೈಶಿಷ್ಟ್ಯ, ಸತ್ಯ ಸಂಧತೆ ಹಾಗೂ ಶಾಸ್ತ್ರೀಯ ವಿಷಯ ವಿಮರ್ಶನಾ ಕುಶಲತೆ ಮತ್ತು ಅವರಲ್ಲಿ ಆಜನ್ಮಸಿದ್ಧ ವಾಗಿ ಮೂಡಿದ್ದ ಸಂಸ್ಕೃತ ಕವಿತಾ ಶಕ್ತಿ, ವಾಕ್ಪಟುತ್ವಾದಿ ಅನೇಕ, ಕಲ್ಯಾಣ ಗುಣ ಸಂಪನ್ನರಾದ, ವಿಶಾಲ ಹೃದಯಿಗಳೂ ಆದ ಶಾಸ್ತ್ರಿಗಳ ವಿದ್ಯಾ ಪ್ರೌಢಿಮೆಗೆ ಶ್ರೀ

ಸಚ್ಚಿದಾನಂದ ಭಾರತಿ-2ರವರು ಹೃದಯಾರ ಮೆಚ್ಚಿದ್ದರು. ಆದ್ದರಿಂದ ಮೇಲುಕ್ತವಾದ ಶ್ರೀ ಶೃಂಗೇರಿ ಮಹಾ ಪೀಠದಲ್ಲಿ ಗತಿಸಿದ, ಶ್ರೀ ಗುರು ಪರಂಪರೆಯವರ ವೃತ್ತಾಂತವನ್ನು ಸಂಗ್ರಹವಾಗಿ ಕಾವ್ಯ ರೂಪದಲ್ಲಿ ರಚಿಸಲು, ಕಾಶಿ ಲಕ್ಷ್ಮಣ ಶಾಸ್ತ್ರಿಗಳಿಗೆ ಶ್ರೀ ಜಗದ್ಗುರುಗಳು ವೀಳ್ಯೆಯನ್ನಿತ್ತು ಅಕ್ಷತಾರೋಹಣದೊಂದಿಗೆ ಆಶೀರ್ವದಿಸಿದರು. ಮಹಾ ಗುರುಗಳ ಶ್ರೀ ಪಾದದಲ್ಲೆರಗಿದ ಆಸ್ಥಾನ ವಿದ್ವಾನ್ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳು, ಶ್ರೀ ಗುರು ಕಟಾಕ್ಷದಿಂದ ಸದರಿ ಕಾವ್ಯವನ್ನು ರಚಿಸಲು ಸಮ್ಮತಿಸಿದರು.

ಅಲ್ಲಿಂದತ್ತ ಶ್ರೀ ಶಾಸ್ತ್ರಿಗಳು ಶ್ರೀ ಪೀಠದ ಮಹಾ ಸಂಸ್ಥಾನದಲ್ಲಿ ಬಹು ಪ್ರಾಚೀನ ಕಾಲದಿಂದಲೂ ಬೆಳಗುವ ಗ್ರಂಥ ಭಂಡಾರವನ್ನು ಶೋಧಿಸಿ ಅಧಿಕೃತವಾಗಿ ಲಭ್ಯವಾದ ಪ್ರಸಿದ್ಧ ತಾಳೆಗರಿಯಲ್ಲುಕ್ತವಾದ ಕೃತಿಗಳನ್ನೂ, ಮೂಲ ಪ್ರಾಚೀನ ಗ್ರಂಥಗಳನೇಕವನ್ನು ನಾಲ್ಕಾರು ಸಾರಿ ಓದಿ, ಪರಿಶೀಲಿಸಿ, ಕೂಲಂಕಶವಾಗಿ ಅಧ್ಯಯನ ಮಾಡಿ ತಮ್ಮ ಮನಸ್ಸಿಗೆ ಸತ್ಯವೆಂದು ಮನಗಂಡ ಬಳಿಕ ಅವುಗಳನ್ನು ತಮ್ಮ ರಚಿಸಲಿರುವ ಕೃತಿಗೆ ಆಧಾರ ಗ್ರಂಥಗಳೆಂದು ಆರಿಸಿಕೊಂಡರು. ಇವುಗಳಲ್ಲಿ ಶ್ರೀ ಚಿತ್ಸುಕಾಚಾರ್ಯ ವಿರಚಿತವಾದ "ಬೃಹದ್ ಶಂಕರ ವಿಜಯ", ಜಿನವಿಜಯ ; ಶ್ರೀ ವಿದ್ಯಾರಣ್ಯ ಕೃತ "ಪಿತಾಮಹಾ ಸಂಹಿತೆ" ಶ್ರೀ ಭಾರತಿ ಕೃಷ್ಣಯತಿ ವಿರಚಿತವಾದ "ಶ್ರೀ ವಿದ್ಯಾರಣ್ಯ ಕೃತಿ" ಆದಿ ಶ್ರೀ ಜಗದ್ಗುರು ರೇಣುಕಾಚಾರ್ಯರ ಪರಮ ಭಕ್ತರಾದ ಕ್ರಿ. ಶ, 14ನೇ ಶತಮಾನದ ಹುಕ್ಕ-ಬುಕ್ಕರ ಸಂಬಂಧವಾದ ವಿಷಯುಲಹರಿ, ನಂತರ ಕೆಳದಿ ಅರಸು ಶ್ರೀ ಬಸವಪ್ಪ ನಾಯಕ ಕ್ರಿ. ಶ. 16ನೇ ಶತಮಾನದ ಅಂತ್ಯ ಕಾಲದಲ್ಲಿ ರಚಿಸಿದ, "ಶಿವ ತತ್ವ ರತ್ನಾಕರ" ಮೊದಲಾದ ಉದ್ಗ್ರಂಥಗಳನ್ನು ಕ್ರಿ. ಶ. 18ನೇ ಶತಮಾನದ ಪೂರ್ವಾರ್ಧ ಅಂದರೆ ಸುಮಾರು 1730ರಲ್ಲಿ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ರಚಿಸಿದ ಶ್ರೀ ಗುರು ಪರಂಪರಾ ವೃತ್ತಾಂತ ಗರ್ಭಿತ ಮಹಾ ಕಾವ್ಯಕ್ಕೆ ಆಧಾರವಾಗಿ ಶ್ರೀ ಶಾಸ್ತ್ರಿಗಳು ಸ್ವೀಕರಿಸಿದ ಹಾಗೆ ಕಂಡುಬರುತ್ತೆ. ಶ್ರೀ ಬಸವಪ್ಪ ನಾಯಕನು ಸಂಸ್ಕೃತದಲ್ಲಿ ಮಹಾ ಪಂಡಿತನಾದ್ದರಿಂದ ಶ್ರೀ ವಿದ್ಯಾರಣ್ಯರು ಮತ್ತು ಶ್ರೀ ಭಾರತಿ ಕೃಷ್ಣಯತಿಗಳು ತಮ್ಮಿಂದ ಅಧಿಕೃತವಾಗಿ ರಚಿತವಾಗಿರುವ "ಪಿತಾಮಹ ಸಂಹಿತೆ" ಯಲ್ಲೂ ಮತ್ತು "ಶ್ರೀ ವಿದ್ಯಾರಣ್ಯ ಕೃತಿ" ಗಳಲ್ಲಿ ಆದಿ ಶ್ರೀ ಶಂಕರಾಚಾರ್ಯರಿಗೆ, ಆದಿ ಶ್ರೀ ಜಗದ್ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು ಶ್ರೀ ರತ್ನಗರ್ಭ ಗಣಪತಿಯನ್ನೂ ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿದರೆಂದು ಸ್ಪಷ್ಟವಾಗಿ ಉಲ್ಲೇಖಿಸಿರುವುದನ್ನು ತಾವು ಕಂಡು ಓದಿ, ಆ ನಿತ್ಯ ಸತ್ಯಸುಂದರವಾದ ಮಹದ್ವಿಷಯುವನ್ನೇ ತಾವು ( ಅರಸು ಬಸವಪ್ಪ ನಾಯಕ ) ತಮ್ಮಿಂದ ರಚಿತವಾದ "ಶಿವ ತತ್ವ ರತ್ನಾಕರ" ಮಹಾ ಗ್ರಂಥದಲ್ಲಿ

ಪ್ರತಿಪಾದಿಸಿರುವುದಾಗಿ ಸ್ಪಷ್ಟಪಡಿಸಿರುತ್ತಾರೆ. ಅರಸು ಬಸವಪ್ಪ ನಾಯಕರು ರಾಣಿ ವೀರ ಚೆನ್ನಮ್ಮಾಜಿಯವರ ದತ್ತು ಪುತ್ರರು.

ವಿದ್ವಾನ್ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ಕ್ರಿ. ಶ. 1730ರಲ್ಲಿ ಗುರುವಂಶ ಮಹಾ ಕಾವ್ಯವನ್ನು ರಚಿಸುವುದಕ್ಕೆ ಮೊದಲು ತಮ್ಮ ಸಂಸ್ಥಾನದಲ್ಲಿ ದೊರೆತ ಮೂಲ ಪ್ರಾಚೀನ ಅಧಿಕೃತವಾದ ಗ್ರಂಥಗಳನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ ಶ್ರೀ ಗುರು ಸಚ್ಚಿದಾನಂದ ಭಾರತಿ–2 ರವರ ಕೃಪೆಗೆ ಪಾತ್ರರಾಗುವ ತರದಲ್ಲಿ ಶ್ರೀ ಗುರು ಪರಂಪರಾ ಮಹಾ ಕಾವ್ಯವನ್ನು ರಚಿಸಲುದ್ಯುಕ್ತರಾದರು.

ಒಂದು ಶುಭ ಮುಹೂರ್ತದಲ್ಲಿ ಆಸ್ಥಾನ ವಿದ್ವಾನ್ ಶ್ರೀ ವೇ॥ ಬ್ರಂ॥ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ಆಧ್ಯಾತ್ಮ ವಿದ್ಯಾ ಸ್ವರೂಪಿಣಿಯಾದ ಶ್ರೀ ಶಾರದಾಂಬೆಯನ್ನೂ ಮತ್ತು ಜಗದ್ಗುರು ಸಚ್ಚಿದಾನಂದ ಭಾರತಿ-2 ರವರ ಶ್ರೀ ಪಾದಗಳನ್ನು ಸ್ಮರಿಸಿ, ವಂದಿಸಿ, ತಾವು ಶ್ರೀ ಗುರು ಕೃಪೆಯಿಂದ ಸದ್ಯ ರಚಿಸಲಿರುವ, ಶ್ರೀ ಶೃಂಗೇರಿ ಆದಿ ಶ್ರೀ ಶಂಕರಾಚಾರ್ಯರನ್ನು ಮೊದಲು ಮಾಡಿ ತಮ್ಮ ಸದ್ಯದ ಆಚಾರ್ಯವರ್ಯರ ವರುವಿಗೆ ಎಷ್ಟು ಯತಿ ಪುಂಗವರವರು ಅಧಿಪತಿಗಳಾಗಿದ್ದರೆಂಬ ಪವಿತ್ರವಾದ ಶ್ರೀ ಪೀಠದ ಗುರುಪರಂಪರಾ ವೃತ್ತಾಂತವನ್ನು ರಚಿಸಲು, ಶ್ರೀ ಪೀಠದ ಪ್ರಾಚೀನವಾದ ವಿಷಯುಗಳನ್ನೇ, ತ್ರಿಕರಣ ಭಕ್ತಿ ಪೂರ್ವಕ ರಚಿಸುವುದಾಗಿ ಪ್ರತಿಜ್ಞೆ ಮಾಡಿ ನಂತರ ಮೇಲುಕ್ತವಾದ ಮಹಾ ಕಾವ್ಯವನ್ನು ರಚಿಸಲುದ್ಯುಕ್ತರಾದರು. ದೀರ್ಘದರ್ಶಿಗಳೂ ಶ್ರೀಮದದ್ವೈತ ಪೀಠದ ಮತ್ತು ಪೀಠಾಧಿಪತಿಗಳ ಮಹತ್ವವನ್ನು ಅವರುಗಳು ಸನಾತನ ಧರ್ಮೋದ್ಧಾರ ಹಾಗೂ ಪೂರ್ವಾಚಾರ್ಯರ ಮಹಾ ಭಾಷ್ಯಾದಿ ಕೃತಿಗಳ ಸಾರವನ್ನು ಚೆನ್ನಾಗಿ ಮನಗಂಡ ಅನುಭವಿಗಳಾದ್ದರಿಂದ ಶ್ರೀ ಶೃಂಗೇರಿ ಗುರುವಂಶ ಪರಂಪರಾ ವೃತ್ತಾಂತವನ್ನು ಸಾಕಷ್ಟು ಕಾಲಾವಧಿಯೊಳಗಾಗಿ ಅಧಿಕೃತ ಆಧಾರ ಬದ್ಧ ವಾಗಿ, ಶ್ರೀ ಗುರು ಪೀಠದ ಗೌರವವನ್ನು ಅನಂತ ಮುಖವಾಗಿ ಹೆಚ್ಚಿಸುವ ರೀತಿ ಯಲ್ಲಿ ಮಹಾ ಕಾವ್ಯ ಒಂದನ್ನು ಪ್ರೌಢ ಶೈಲಿಯಲ್ಲಿ ಗಂಭೀರವಾಗಿ ಯಥಾ ಮತಿ ರಚಿಸಿ ಪೂರ್ಣಗೊಳಿಸಿದರು. ಸುಮಾರು 255 ವರ್ಷಗಳ ಪೂರ್ವದಲ್ಲಿ ಅಂದರೆ ಕ್ರಿ. ಶ. 1730ರಲ್ಲಿ ರಚಿತವಾದ ಈ ಮಹಾ ಕೃತಿಯಲ್ಲಿ 19 ಅಧ್ಯಾಯಗಳಿವೆ, ಇದು ಅತ್ಯಂತ ಪ್ರಮಾಣ ಬದ್ಧವಾದ ಮಹಾ ಕಾವ್ಯವೆಂದು ಅಂದಿನಿಂದಲೂ ಸಮಸ್ತ ವಿದ್ವಾಂಸರೂ ಹಾಗೂ ಶ್ರೀ ಶಂಕರ ಮಠಾಧಿಪತಿಗಳೂ ಮುಕ್ತ ಕಂಠದಿಂದ ಪ್ರಶಂಸಿ ಸುತ್ತಲಿರುವರು. ಈ ಗ್ರಂಥದ ಕಾವ್ಯ ಶೈಲಿ, ಚಾರಿತ್ರಿಕ ಹಿನ್ನೆಲೆ, ಈ ಪೀಠದಲ್ಲಿ ಗತಿಸಿದ ಗುರು ಪರಂಪರೆಯವರ ಮನೋಹರವಾದ ವಿಷಯುಗಳ ಸೌರಭ, ಹಾಗೂ ಶ್ರೀ ಆದಿ ಶಂಕರಾಚಾರ್ಯರಿಗೆ, ಅಂದಿನ ವೀರ ಸಿಂಹಾಸನಾಧಿಪತಿಗಳಾದ ಶ್ರೀ ರೇವಣಸಿದ್ಧ ಮಹಾ ಶಿವಯೋಗಿಗಳಿಂದ ಶ್ರೀ ರತ್ನಗರ್ಭ ಗಣಪತಿ ಮತ್ತು

ಚಂದ್ರಮೌಳೀಶ್ವರ ಲಿಂಗ ಪ್ರದಾನವಾದ ವಿಷಯಾದಿಗಳು ಸುಂದರವಾಗಿ ವಿದ್ವಾ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ಕೂಲಂಕಶವಾಗಿ ಪ್ರತಿಪಾದಿಸಿರುವರು. ಕ್ರಿ. ಶ. 14ನೇ ಶತಮಾನದ ಉತ್ತರಾರ್ಧದಲ್ಲಿ ವೀರಶೈವರಾದ ಹುಕ್ಕ-ಬುಕ್ಕ ಸಹೋದರರು ಶ್ರೀಪಾದಾದಿ ಜಗದ್ಗುರು ರೇಣುಕಾಚಾರ್ಯರು ಅವನ ಸ್ವಪ್ನದಲ್ಲಿ ಕಾಣಿಸಿ " ಹೇ ಭಕ್ತಾ! ಶ್ರೀ ಆದಿ ಶಂಕರಾಚಾರ್ಯರಿಗೆ ನನ್ನಿಂದ ಅನುಗ್ರಹೀತವಾದ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಇಂದು ಶ್ರೀ ಶೃಂಗೇರಿ ಮಠದಲ್ಲಿ ಶ್ರೀ ವಿದ್ಯಾರಣ್ಯ ಗುರುಗಳು ಭಕ್ತಿಯಿಂದ ಆರಾಧಿಸುತ್ತಲಿದ್ದಾರೆ. ಆ ಮಹಾ ಲಿಂಗದ ದರ್ಶನವನ್ನು ನೀನು ಮಾಡಿ, ನಿನ್ನ ಮನೋಭೀಷ್ಟವನ್ನು ಆ ಗುರುಗಳಲ್ಲಿ ನಿವೇದಿಸಿಕೋ. ನಿನಗೆ ಶ್ರೇಯಸ್ಸೇರ್ಪಡುವುದು " ಎಂದು ಅರುಹಿ ಅಂತರ್ಧಾನರಾದರೆಂಬ ಸತ್ಯಸುಂದರವಾದ ವಿಷಯವನ್ನು ಈ ಮಹಾ ಕಾವ್ಯಕರ್ತರಾದ, ಶ್ರೀ ಶೃಂಗೇರಿ ಆಸ್ಥಾನ ವಿದ್ವಾನ್ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ವಿವರಿಸಿರುವರು.

ಶ್ರೀ ಗುರು ವಿದ್ಯಾರಣ್ಯರು ಶ್ರೀ ಶೃಂಗೇರಿ ಪೀಠಕ್ಕೆ ಕ್ರಿ. ಶ, 1380ರಲ್ಲಿ ಪಟ್ಟಾಭಿಷಿಕ್ತರಾದರು. ಅವರ ಗುರುಗಳು ಶ್ರೀ ಭಾರತಿ ಕೃಷ್ಣ ತೀರ್ಥರು ತಾವು ಅನುದಿನ ತ್ರಿಕಾಲಂಗಳಲ್ಲೂ ಭಕ್ತಿಯಿಂದ ಆರಾಧಿಸುತ್ತಿದ್ದ ಮಹಾ ಪೀಠದ ಪ್ರಧಾನ ಆರಾಧ್ಯ ದೈವ, " **ಶ್ರೀ ಚಂದ್ರಮೌಳೀಶ್ವರ ಲಿಂಗ** "ವನ್ನು ಅಂದು ತಮ್ಮ ಪೀಠದ ನೂತನ ಉತ್ತರಾಧಿಕಾರಿ ಶ್ರೀ ವಿದ್ಯಾರಣ್ಯರ ಹಸ್ತದಲ್ಲಿರಿಸಿ, ಅದರ ವಿವರವನ್ನು ಬೋಧಿಸುತ್ತಾ ; ನನ್ನ ಗುರು ಪೂಜ್ಯ ಶ್ರೀ ವಿದ್ಯಾಶಂಕರ ತೀರ್ಥರು ನನಗೆ ಅನುಗ್ರಹಿಸಿದ ಶ್ರೀ ಚಂದ್ರಮೌಳಿ ಲಿಂಗವನ್ನು ನನ್ನ ಪೀಠಾಧಿಪತ್ಯದ 57 ವರ್ಷ ಕಾಲ ನಾನು ಪೂಜಿಸಿಕೊಂಡು ಬಂದ ಈ ದೇವತಾ ಸಾರ್ವಭೌಮನನ್ನು ನೀನು ಭಕ್ತಿಯಿಂದ ದಿನವಹಿ ತ್ರಿಸಂಧ್ಯಾಕಾಲಂಗಳಲ್ಲೂ ಪೂಜಿಸುತ್ತಿರುವುದೆಂದು ವಿವರಿಸಿ ಆಜ್ಞಾಪಿಸಿದರು. ಅವರಂತೆ ಶ್ರೀ ವಿದ್ಯಾರಣ್ಯ ಮಹಾ ಗುರುಗಳು ಆರಾಧಿಸುತ್ತಲಿದ್ದ ಆದಿ ಶ್ರೀ ಜ ರೇಣುಕಾಚಾರ್ಯರ ಚಿದ್ಘನ, ತೇಜಸ್ಸು ಓಜಸ್ಸುಗಳಿಂದ ಪ್ರಭಾವಾನ್ವಿತವಾದ **ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಹುಕ್ಕ–ಬುಕ್ಕರು ಒಂದು ದಿನ ಪೂಜೆಯಲ್ಲಿ ಕುಳಿತು ಭಕ್ತಿ ಪರವಶರಾಗಿ ದರ್ಶನ ಮಾಡಿ ಕೃತಾರ್ಥರಾದರು.** ನಂತರ ಈ ಸಹೋದರರು ಭಗವಾನ್ ಶ್ರೀ ರೇಣುಕಾಚಾರ್ಯ ಗುರು ಸಾರ್ವಭೌಮರ ಆದೇಶದಂತೆ, ತಮ್ಮಲ್ಲಿಗೆ ಬಂದಿರುವುದಾಗಿ ವಿನಯದಿಂದ ಗುರುಗಳಲ್ಲಿ ಅರಿಕೆ ಮಾಡಿಕೊಂಡರು. ಆದಿ ಶ್ರೀ ಜಗದ್ಗುರು ರೇಣುಕಾಚಾರ್ಯರ ಪ್ರೇರಣೆಯೋ ಎಂಬಂತೆ ಶ್ರೀ ವಿದ್ಯಾರಣ್ಯ ಗುರುಗಳು ಹುಕ್ಕ–ಬುಕ್ಕರನ್ನು ಮನಃಪೂರ್ವಕ ಆಶೀರ್ವದಿಸಿ. ಮುಂದೆ ಇವರು ವಿಜಯನಗರ ರಾಜ್ಯ ಸಂಸ್ಥಾನವನ್ನು ಕಟ್ಟಲು ನೆರವಾದರು. ಇದೆಲ್ಲಾ ಶ್ರೀ ಆದಿ ಜಗದ್ಗುರು ರೇಣುಕಾಚಾರ್ಯರ ಅದೃಶ್ಯವಾದ ದಿವ್ಯ ಪ್ರಭಾವವೆಂದು ಸೂಕ್ಷ್ಮಮತಿಗಳಾದ ಶ್ರೀ ಗುರು ಪುತ್ರರಿಗೆ ಸ್ಪಷ್ಟಪಡುವುದು. ಈ ಕಾರಣ

ದಿಂದ, ತದನಂತರದ ಕಾಲದಲ್ಲಿ ವಿಜಯನಗರದ ಅರಸರೂ, ಮತ್ತು ಕೆಳದಿ ಮನೆತನದ ವೀರಶೈವ ಅರಸರುಗಳ, ಸತತ ಸಹಾಯ ಸಹಕಾರ ಬೆಂಬಲಗಳಿಂದ ಶ್ರೀ ಶೃಂಗೇರಿ ಮಠದ. ಆ ಸಂಸ್ಥಾನದ ಶ್ರೇಯೋಭಿವೃದ್ಧಿಗೆ ನೆರವಾಯಿತು. ಶ್ರೀ ರಂಭಾಪುರೀ ವೀರ ಸಿಂಹಾಸನ ಮಹಾ ಪೀಠಕ್ಕೂ ಶ್ರೀ ಶೃಂಗೇರಿ ಶ್ರೀ ಶಾರದಾ ಪೀಠಕ್ಕೂ ದೈವ ದತ್ತವಾಗಿ ಪ್ರಾಪ್ತವಾದ ಸಂಬಂಧ ಸ್ತುತ್ಯವಿರುತ್ತೆ. ಪ್ರಾಚೀನ ಕಾಲದಿಂದಲೂ ಶ್ರೀ ರಂಭಾಪುರೀ ಮತ್ತು ಶ್ರೀ ಶೃಂಗೇರಿ ಮಠಾಧಿಪತಿಗಳಲ್ಲಿ ಮಧುರ ಭಾವ ಅವ್ಯಾಹತ ವಾಗಿ ಆಚಾರ್ಯರುಗಳ ಮಧ್ಯೇ ಗಂಗಾ ಸಾಗರ ಸಂಗಮ ತರಂಗಗಳ ಭಂಗಿ ನ್ಯಾಯದಂತೆ ಮಧುರ ಭಾವ ಪ್ರಪುಲ್ಲಿತವಾಗಿ ಭಾಸವಾಗುತ್ತಲಿದೆ.

## ತೃತೀಯ ಭಾಗ

ಮೇಲೆ ಪ್ರತಿಪಾದಿಸಿದ ನೈಜಾಂಶಗಳಿಂದಾಗಿ ಉಭಯ ಪೀಠಗಳಲ್ಲೂ ಇಂತಪ ಪ್ರಾಚೀನ ಕಾಲದ ನಿಕಟ ಸಂಬಂಧ ಸಂಪರ್ಕಗಳಿರುವುದರಿಂದ ಧಾರ್ಮಿಕ ಪ್ರಾಚೀನ ಗ್ರಂಥಗಳಲ್ಲಿ ಪ್ರಸಂಶನೀಯವಾದ ಅಂಶಗಳು ಉಲ್ಲೇಖಿತವಾಗಿ ಎದ್ದು ಕಾಣುವ ಭಾಗ ಒಂದನ್ನು ಇಲ್ಲಿ ನಿರೂಪಿಸಲಾಗಿದೆ.

**॥ ತತಃ ಸ ರೇವಣಾಸಿದ್ಧ । ಸಂಪ್ರದಾಯ ಪ್ರವರ್ತಿನಾಂ ।**
**ಶಂಕರಾಚಾರ್ಯ ವರ್ಯಾಣಾಂ । ಪಾರಂಪರ್ಯ ಕ್ರಮಾಗತಂ ॥**

ಎಂದು ಶಿವತತ್ವ ರತ್ನಾಕರವೆಂಬ ಸಂಸ್ಕೃತ ಮಹಾ ಕೃತಿಯಲ್ಲಿ ನಾಲ್ಕನೇ ಕಲ್ಲೋಲದ ಹನ್ನೆರಡನೇ ತರಂಗದಲ್ಲಿ; ಶ್ರೀ ಶಂಕರ ಮಠದ ಪೋಷಕ ಸಂತತಿಗೆ ಸೇರಿದ, ವೀರ ರಾಣಿ ಚೆನ್ನಮ್ಮಾಜಿಯವರ ದತ್ತು ಪುತ್ರ, ಮಹಾ ಸಂಸ್ಕೃತ ವಿದ್ವಾಂ ಅರಸು, ಶ್ರೀ ಬಸವಪ್ಪ ನಾಯಕ, ಅಧಿಕೃತವಾಗಿಯೇ ಮೂರು ಶತಮಾನಗಳ ಹಿಂದೆಯೇ ಉಲ್ಲೇಖಿಸಿ ಘೋಷಿಸಿರುವನು. ಇದರ ಅರ್ಥವೇನೆಂದರೆ. " ಆದಿ ಶ್ರೀ ಶಂಕರಾಚಾರ್ಯರನ್ನು ಮೊದಲುಮಾಡಿ ಅವರ ಗುರು ಪರಂಪರೆಯಲ್ಲಿ ಅನೂಚಾನ ವಾಗಿ ಮುಂದುವರಿಯುವ, ಸಮಸ್ತ ಪೂಜ್ಯ ಆಚಾರ್ಯ ಮಹೋದಯರು ಶ್ರೀ ಆದಿ ಜಗದ್ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರ ಘನ ಸಂಪ್ರದಾಯಾ ನುವರ್ತಿಗಳೆಂದು, ಘೋಷಿಸಿರುವುದು ಜಗತ್ತಿಗೆ ಭಾನುಕೋಟಿ ಪ್ರಕಾಶಮಾನವಾಗಿ ತಿಳಿದ ವಿಷಯವಾಗಿದೆ. ಶ್ರೀ ಆಚಾರ್ಯ ಶಂಕರ ಮಠ ಸಂಸ್ಥಾನದ ಪರಮ ಪೂಜ್ಯರಾದ ಯಾವ ಆಚಾರ್ಯರೂ 3 ಶತಮಾನಗಳಿಂದಲೂ ಮೇಲುಕ್ತವಾದ ಶಿವತತ್ವ

ರತ್ನಾಕರ ಗ್ರಂಥದ ಉಲ್ಲೇಖನವನ್ನು ಬಹಿರಂಗವಾಗಿ ಪ್ರತಿಭಟಿಸಿ, ಖಂಡಿಸಿಲ್ಲವೆಂದು ಕಾಣುತ್ತೆ. ಅಸ್ತು "

ಆಸ್ಥಾನ ವಿದ್ವಾನ್ ಪಂಡಿತಸಿಂಹ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ಒಂದು ದಿವಸ ತಾವು ನಿಷ್ಠೆಯಿಂದ ರಚಿಸಿ ಪೂರ್ಣಗೊಳಿಸಿದ ತಮ್ಮ ನೂತನ ಮಹಾನ್ ಗ್ರಂಥವನ್ನು ಪರಮ ಪೂಜ್ಯ ಶ್ರೀ ಜಗದ್ಗುರು ಸಚ್ಚಿದಾನಂದ ಭಾರತಿ-2ರವರ ಸನ್ನಿಧಿಯಲ್ಲಿರಿಸಿ, ಪ್ರಣಾಮಂಗಳ ಪೂರ್ವಕ. ಶ್ರೀ ಶ್ರೀಗಳ ಕೃಪಾಶೀರ್ವಾದಗಳ ಬಲದಿಂದ ಪೂರ್ತಿಗೊಳಿಸಿದುದಾಗಿ ಶ್ರೀ ಗುರುಗಳಲ್ಲಿ ನಿವೇದಿಸಿಕೊಂಡರು.

ಆಚಾರ್ಯ ಮಹೋದಯರು ಸ್ವತಃ ಮಹಾ ತಪಸ್ವಿಗಳು, ದೂರದೃಷ್ಟಿಯುಳ್ಳ ಪಂಡಿತ ರತ್ನಪ್ರಾಯರು. ತಮ್ಮ ಮಹಾ ಪೀಠದ ಆದಿ ಶ್ರೀ ಶಂಕರರಿಂದ ತಮ್ಮ ಕಾಲದ ವರೆಗೆ ಗತಿಸಿದ ಅನೇಕ ಪ್ರತಿಭಾಸಂಪನ್ನರಾದ ಶ್ರೀ ಶ್ರೀ ಜಗದ್ಗುರುಗಳರವರ ದಿವ್ಯ ಚರಿತ್ರೆಯನ್ನೊಳಗೊಂಡ ಹಾಗೂ ಪಾಂಡಿತ್ಯ ಪೂರ್ಣದಿಂದ ಬೆಳಗುವ ಈ ಜೀವಂತ ಮಹಾನ್ ಕೃತಿಯನ್ನು ತಮ್ಮ ಮುಂದೆ ಶಾಸ್ತ್ರಿಗಳು ಮಡಗಿದ್ದನ್ನು ಕಂಡ ಜಗದ್ಗುರುಗಳಿಗೆ ಉಂಟಾದ ಆನಂದಕ್ಕೆ ಪಾರವಿಲ್ಲದಂತಾಯಿತು. ಆಗ ಗುರುಗಳು ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳ ಸೇವೆಯನ್ನು ಪ್ರಶಂಶಿಸಿ ಆಶೀರ್ವದಿಸಿದರು.

ಈ ಕೃತಿಯನ್ನು ಆಚಾರ್ಯರು ಕೆಲವು ಕಾಲ ಸಾವಧಾನದಿಂದ ಕೃತಿಯಲ್ಲಿನ ಹತ್ತೊಂಭತ್ತು ಆಶ್ವಾಸಗಳನ್ನು ಓದಿ ಸತ್ಯಾಂಶಗಳನ್ನು ಮನಮೆಚ್ಚುವಂತೆ ಪರಿಶೀಲಿಸಿ ತೃಪ್ತರಾದರು. ಅಷ್ಟಕ್ಕೆ ಶ್ರೀ ಗುರುಗಳು ಸುಮ್ಮನಾಗದೆ ತಮ್ಮ ಮಹಾ ಪೀಠದ ಹಿರಿಯ ಮಹಾ ವಿದ್ವಾನ್ ಮತ್ತು ಧರ್ಮಾಧಿಕಾರಿಗಳಾದ ಕುಣಿಗಲ್ ವೇ॥ ಬ್ರ॥ ರಾಮಾ ಶಾಸ್ತ್ರಿಗಳ ವಶ ಈ ಪವಿತ್ರವಾದ ಮಹಾನ್ ಕೃತಿಯನ್ನು ಕೊಟ್ಟು, ಶಾಸ್ತ್ರಿಗಳು ಇದನ್ನು ಕೂಲಂಕಶವಾಗಿ ವಿಮರ್ಶಿಸಿ, ಅವರ ಅಭಿಪ್ರಾಯವನ್ನು ನೀಡಬೇಕೆಂದು ಆಶಿಸಿದರು. ಆಗ ಶ್ರೀ ರಾಮಾ ಶಾಸ್ತ್ರಿಗಳು ಇದು ತಮ್ಮ ಪಾಲಿಗೆ ಬಂದ ಭಾಗ್ಯವೆಂದು ಶ್ರೀ ಗುರುಗಳ ಅಮೃತ ಹಸ್ತದಿಂದ ಪ್ರಣಾಮಂಗಳೊಡನೆ ಸ್ವೀಕರಿಸಿ, ಕಣ್ಣಿಗೆವೊತ್ತಿಕೊಂಡು ಶಿರದಲ್ಲಿರಿಸಿ ಆದಿ ಶ್ರೀ ಶಂಕರಾಚಾರ್ಯರನ್ನೂ ಇನ್ನುಳಿದ ಗತಿಸಿದ ಪೀಠಾಚಾರ್ಯರುಗಳಿಗೆ ಭಕ್ತ್ಯಾ ವಂದಿಸಿ ತಮ್ಮ ನಿವಾಸಕ್ಕೆ ಆ ಕೃತಿಯನ್ನು ತಂದರು, ಅದೇ ಸಮಯದಲ್ಲಿ ಶ್ರೀ ಮಹಾ ಗುರುಗಳ ಸನ್ನಿಧಿಯಲ್ಲಿ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳ ಅಭೂತಪೂರ್ವವಾದ ಶಕ್ತಿ, ವಿದ್ವತ್, ಸಾಮರ್ಥ್ಯಗಳನ್ನು ಮುಕ್ತ ಕಂಠದಿಂದ ಹೊಗಳಿ ಕೊಂಡಾಡಿದರು.

ಶ್ರೀ ರಾಮಾ ಶಾಸ್ತ್ರಿಗಳು ಶ್ರೀ ಗುರುವಿನಾಜ್ಞೆಯನ್ನು ಶಿರಸಾವಹಿಸಿ, ಈ ನೂತನ ಮಹಾ ಕಾವ್ಯವನ್ನು ಕೆಲವು ದಿವಸಗಳು ಪೂರ್ಣವಾಗಿ ಕಣ್ಣಿಟ್ಟು ಪರಿಶೀಲಿಸಿ ಕಾವ್ಯವು ಆದ್ಯಂತ ಸತ್ಯಸುಂದರವಾದ ವ್ಯಾಖ್ಯಾನದೊಂದಿಗೆ ಅತಿ ರಮಣೀಯವು, ಪಾಂಡಿತ್ಯಪೂರ್ಣವಾಗಿರುವುದರೊಂದಿಗೆ ನಿರ್ದೋಷವಾಗಿ ರಾರಾಜಿಸುತ್ತಲಿವೆ ಎಂದು ಮಹಾ ವಿದ್ವಾನ್ ವೇ॥ ಬ್ರಂ॥ ಕುಣಿಗಲ್ ರಾಮಾ ಶಾಸ್ತ್ರಿಗಳು ಶ್ರೀ ಗುರುಗಳಲ್ಲಿ ನಿವೇದಿಸಿ ಆ ಕೃತಿಯನ್ನು ಶ್ರೀಗಳಿಗೆ ಪುನಃ ಹಿಂದಿರುಗಿಸಿ ನಮಸ್ಕರಿಸಿದರು. ಆಗ ಜಗದ್ಗುರುಗಳಿಗೆ ಮತ್ತಷ್ಟು ಆನಂದವಾಯಿತು. ಸ್ವಲ್ಪ ದಿವಸಗಳಾದ ನಂತರ ಗುರುಗಳು ತಮ್ಮ ಸಂಕಲ್ಪದಂತೆ ಒಂದು ದಿವಸ ವಿದ್ವದ್ ಸಭೆಯನ್ನೇರ್ಪಡಿಸಿ, ಪುರ ಜನರ, ಭಕ್ತರ ಹಾಗೂ ಅಧಿಕಾರಿಗಳು ನೆರೆದಿರುವ ಮಹಾ ಸಭೆಯಲ್ಲಿ ಈ ನೂತನ ಮಹಾ ಕೃತಿಯನ್ನು ಪೂಜಿಸಿ ಗ್ರಂಥ ಬಿಡುಗಡೆ ಮಹೋತ್ಸವ ಸಂದರ್ಭದಲ್ಲಿ ಸರ್ವರೂ ಮೆಚ್ಚುವಂತೆ ಈ ದಿವ್ಯ ಕೃತಿಗೆ " ಗುರುವಂಶ ಕಾವ್ಯ Guruvamsa Kavya " ಎಂಬ ನಾಮಕರಣ ಮಾಡಿ, ಈ ಕೃತಿರತ್ನ ವ್ಯಾಖ್ಯಾನದೊಂದಿಗೆ, ಆ ಚಂದ್ರಾರ್ಕ ಜೀವಂತ ಮಹಾ ಕಾವ್ಯವೆಂದೂ, ಮೂಲ ಕೃತಿಯಲ್ಲಿನ ಯಾವ ಅಕ್ಷರವೂ ಪದವೂ, ಗ್ರಂಥಕರ್ತರ ವ್ಯಾಖ್ಯಾನವೂ, ಯಾವ ಕಾರಣದಿಂದಲೂ ಯಾರೂ ಅಪಾರ್ಥಕ್ಕೆಡೆ ಮಾಡಿ ಲೋಪದೋಷಗಳನ್ನು ಆರೋಪಿಸಬಾರದೆಂದು ತಿದ್ದುಪಡಿ ಮಾಡಬಾರದೆಂದು ತಿಳಿಸಲು, ಸಭೆಯಲ್ಲಿದ್ದವರೆಲ್ಲಾ ಈ ನೂತನ ಕೃತಿ ಚಿಂತಾಮಣಿಯಂತಿದೆ ಎಂದು, ಗ್ರಂಥಕರ್ತರನ್ನು ಪ್ರಶಂಸಿಸಿದರು.

ಆಗ ಶ್ರೀ ಜಗದ್ಗುರು ಸಚ್ಚಿದಾನಂದ ಭಾರತಿ-2ರವರು ಆ ವಿದ್ವದ್ ಮಹಾ ಸಭೆಯಲ್ಲಿ ಆಸ್ಥಾನ ವಿದ್ವಾನ್ ವೇ॥ ಬ್ರಂ॥ ಕಾಶಿ ಲಕ್ಷ್ಮಣ ಶಾಸ್ತ್ರಿಗಳನ್ನು ಹೃದಯೊರ ಹರಸಿ ಗೌರವಿಸಿ, ಆನಂದ ತುಂದಿಲ ಹೃದಯ ಸ್ವಾಂತರಾಗಿ ಕೊಂಡಾಡಿದರು. ಆಗ ಮಹಾ ಸಭೆಯಲ್ಲಿ ಹರ್ಷೋದ್ಗಾರವಾಗಿ ಸಭಿಕರು ಶ್ರೀ ಲಕ್ಷ್ಮಣ ಶಾಸ್ತ್ರಿಗಳಿಗೆ ಪುಷ್ಪ ಮಾಲೆಗಳ ಸುರಿಮಳೆಯಿಂದ ಸತ್ಕರಿಸಿ ವಂದಿಸಿದರು.



## ಅಧ್ಯಾಯ 26

॥ ವಂದೇ ಸತ್ಪುರುಷಾನ್ ಲೋಕೇ । ಗುಣ ಗ್ರಹಣ ತತ್ಪರಾನ್ ।
ರಾಜ ಹಂಸಾ ನಿವ ಜಲಾತ್ । ಕ್ಷೀರ ಗ್ರಹಣ ಕೋವಿದಾನ್ ॥
॥ ಗುರು ಬ್ರಹ್ಮಾ ಗುರು ವಿಷ್ಣುಃ । ಗುರು ದೇವೊ ಮಹೇಶ್ವರಃ ।
ಗುರು ಸಾಕ್ಷಾತ್ಪರ ಬ್ರಹ್ಮ । ತಸ್ಮೈಶ್ರೀ ಗುರುವೇ ನಮಃ ॥

॥ ಅಖಂಡ ಮಂಡಲಾಕಾರಂ । ವ್ಯಾಪ್ತಂ ಯೇನ ಚರಾಚರಂ ।
ತತ್ಪದಂ ದರ್ಶಿತಂ ಯೇನ । ತಸ್ಮೈಶ್ರೀ ಗುರುವೇ ನಮಃ ॥

( ಇತಿ ವೇದಃ )

ಜಗತ್ಪತಿಯಾದ ಮಹಾ ದೇವನು ಸರ್ವವ್ಯಾಪಿ, ಸರ್ವಾಂತರ್ಯಾಮಿಯೂ ಸರ್ವಜ್ಞನೆನಿಸಿರುವನು, ಪರಶಿವಬ್ರಹ್ಮ ರೂಪಾತೀತ ನಾಮಾತೀತವೆನಿಸಿ ಶಿವನು ವೆನಿಸಿರುವುದು. ॥ ಸ್ವೇಚ್ಛಾ ವಿಗ್ರಹ ಯುಕ್ತಾಯ । ಸ್ವೇಚ್ಛಾ ವರ್ತನ ವರ್ತಿನೇ। ಸ್ವೇಚ್ಛಾ ಕೃತ ತ್ರಿಲೋಕಾಯ । ನಮಃ ಸಾಂಬಾಯ ಶಂಭವೇ ॥ ಎಂದು ಸ್ತುತ್ಯನಿರುವನು.



ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ–ಶ್ರೀ ಚಂದ್ರಮೌಳಿ ಲಿಂಗವನ್ನು ಅನುಗ್ರಹಿಸಿದ, ಶ್ರೀಮದಾದಿ ಜಗದ್ಗುರು ರೇವಣಸಿದ್ಧರ ಹಸ್ತದಲ್ಲಿನ ಶಿವಯೋಗ ದಂಡವು, ತ್ರಿಶೂಲವಾಗಿ, ಡಮರುಗದೊಂದಿಗೆ ವಿರಾಜಿಸಿದ ಕೌತುಕ.

॥ ಅಜಾಯ ಮಾನೋ । ಬಹುಧಾ ವಿಜಾಯತೇ ॥ ಇತಿ ವೇದಃ

ಜನನವಿಲ್ಲದ ಭಗವಂತನು, ತನ್ನಿಚ್ಛೆಯಂತೆ ಏಕಕಾಲದಲ್ಲಿ ಬಹ್ವಂಶಗಳಿಂದ ಆವಿರ್ಭವಿಸಬಲ್ಲನು. ॥ ಯೋ ಯೋ ಯಾಂ ಯಾಂ ತನುಂ ಭಕ್ತಃ । ಶ್ರದ್ಧಯಾರ್ಚಿತು ಮಿಚ್ಛತಿ । ತಸ್ಯ ತಸ್ಯಾ ಚಲಾಂ ಶ್ರದ್ಧಾಂ । ತಾಮೇವ ವಿಧ ಧಾಮ್ಯಹಂ ॥ ಕೈಲಾಸ ನಾಥನಾದ ಮಹಾ ದೇವನು॥ಅಪ್ರತ್ಯಕ್ಷೋ ಮಹಾ ದೇವಃ।ಸರ್ವೇಷಾಮಾತ್ಮಮಾಯ ಯಾ । ಪ್ರತ್ಯಕ್ಷೋ ಗುರುರೂಪೇಣ । ವರ್ತತೇ ಭಕ್ತಿ ಸಿದ್ಧಯೇ ॥ ಭಕ್ತಾನುಗ್ರಹ

ಲೀಲೆಗಾಗಿ ಅಪ್ರತ್ಯಕ್ಷನಾದ ಶ್ರೀ ಕೈಲಾಸನಾಥನು, ಇಚ್ಛಾಮಾತ್ರೇಣ ಶ್ರೀ ಮಹಾ ಗುರುರೂಪದಲ್ಲಿ ಶಿವಲಿಂಗದಿಂದ ಮಂತ್ರಮಯ ದಿವ್ಯ ದೇಹದೊಂದಿಗೆ ಆವಿರ್ಭವಿಸಿ ಲೋಕ ಕಲ್ಯಾಣಕರ ಧರ್ಮೋದ್ಧಾರ ಕಾರ್ಯಗಳನ್ನು ಸತತ ನೆರವೇರಿಸುವನು. ಅಂತಪ್ಪ ಜಗನ್ಮಂಗಳಮೂರ್ತಿ ಸದಾ ಮಾನವ ಧರ್ಮಕ್ಕೆ ಜಯವಾಗಲೆಂದು ಘೋಷಿಸುತ್ತ ಸಮಸ್ತ ಜಾತಿ, ಕುಲ, ವರ್ಣಗಳಿಗೆ ಅಧಿಪತಿಯೂ ಅತೀತನೂ ಆಗಿ ರಾರಾಜಿಸುವನು.

ಜಗದಾದಿ ಪರಮ ತ್ರಿಭುವನಾಚಾರ್ಯವರೇಣ್ಯರಾದ ಶ್ರೀ ರೇಣುಕಾದಿ ಪಂಚಾಚಾರ್ಯರು ॥ ವೇದಾಗಮ ಸಂಪ್ರದಾಯ । ಮಾಹೇಶ್ವರ ತತ್ವ । ವಿಶ್ವಂಚಾಚಾರ್ಯೇ ಭ್ಯೋ । ದೀಕ್ಷಿತಃ । ಲಿಂಗ ಸ್ಪರ್ಶನಃ ಸ ವಿವಾಹಂ ॥ ಪರಶಿವನ ಚಿತ್ಕಳೆಯೇ ಚಿನ್ಮಯದ ಜ್ಯೋತಿರ್ಲಿಂಗ ಸ್ಪರ್ಶ ಮಾತ್ರೇಣ ಶ್ರೀ ಜ॥ ಪಂಚಾಚಾರ್ಯರ ರೂಪದಲ್ಲಿ ಆವಿರ್ಭವಿಸಿ ಪಾಂಚ ಭೌತಿಕ ತತ್ವಕ್ಕೆ ಅಧಿಪತಿಗಳಾಗಿ ಸರ್ವಕ್ಕೂ ಆತೀತರೂ ಆಗಿ, ॥ ನ ಭೂತ ಸಂಘ । ಸಂಸ್ಥಾನೋ । ದೇವಸ್ಯ ಪರಮಾತ್ಮನಃ ॥ ಎಂಬಂತೆ ವಿರಾಜಿಸಿ ಶ್ರೀ ಮಹಾ ಗುರುಗಳನ್ನು ಶಿವನು ಶಿವೆಗೆ ಅರುಹುವಾಗ–

॥ ತಸ್ಮಾತ್ತ ಸ್ಮಾಚ್ಚ ಗಿರಿಜೇ । ಪಂಚಾನನ ಸಮುದ್ಭವಾಃ ।
ಮದಾದಿ ಸರ್ವ ಲೋಕಾನಾಂ । ಜಗದ್ಗುರು ವರೋತ್ತಮಾಃ ॥

( ಶಿವಾಗಮ.)

ದೇವಿ ! ನನ್ನ ಜ್ಯೋತಿರ್ಲಿಂಗ ಮುಖದಿಂದ ನನ್ನಿಚ್ಛೆಯಂತೆ ದಿವ್ಯ ಮಂತ್ರ ಮಯ ದೇಹದಿಂದ ಅವತರಿಸಿ ಚಿಜ್ಯೋತಿ ರೂಪದಲ್ಲಿ ಬೆಳಗುವ ಪಂಚ ಮಹಾಚಾರ್ಯರು, ॥ ಮದಾದಿ ಸರ್ವ ಲೋಕಾನಾಂ । ಜಗದ್ಗುರು ವರೋತ್ತಮಾಃ ॥ ನನ್ನ ಶ್ರೀ ಕೈಲಾಸವೇ ಮೊದಲು ಮಾಡಿ ನನಗೂ, ಗಿರಿಜೆ, ಗಣಪತಿ, ಷಣ್ಮುಖ, ವೀರ, ನಂದಿ, ಭೃಂಗಿ, ವೃಷಭ, ವಿಷ್ಣು, ಬ್ರಹ್ಮೇಂದ್ರಾದಿ ಸಮಸ್ಥ ದೇವ, ದಾನವ ಮಾನವರಿಗೆಲ್ಲಾ, ಎಲ್ಲಾ ಲೋಕದವರಿಗೂ ಸತತ ಶ್ರೀ ಮಹಾಗುರು ಸಾರ್ವ ಭೌಮರೆಂದು ಬೋಧಿಸಿರುವನು. ಜಗತ್ತು ಈ ವರ್ತಮಾನ ಕಾಲದಲ್ಲಿ ಈ ತತ್ವವನ್ನು ಭಕ್ತಿಪೂರ್ವಕ ನಿರಾಡಂಬರದಿಂದ ಅರಿತು ಮನಗಾಣ ಬೇಕು. ಏಕೆಂದರೆ ಪಶು ಜೀವಿಗಳು ( ಕೇವಲ ಲೌಕಿಕರು ).

॥ ಆಚಾರ್ಯಸ್ಯಾವ ಮಾನೇನ । ಶ್ರೇಯಃ ಪ್ರಾಪ್ತಿ ರ್ವಿಹನ್ಯತೆ ।
ತಸ್ಮಾನ್ನಿ ಶ್ರೇಯಸಃ ಪ್ರಾಪ್ತ್ಯೈ । ಪೂಜಯೇತ್ತಂ ಸಮಾ ಹಿತಃ ॥

( ಸಿ.ಶಿ.ಅ. 11 ಶ್ಲೋ. 23 )

ಶ್ರೀ ಪಂಚಾಚಾರ್ಯರ ಘನ ತತ್ವವನ್ನೂ, ನಿಲುವನ್ನು ಅರಿಯದೆ ಅವರ ಬಗೆಗೆ ಅವ್ಯವಸ್ಥಿತ ಮನೋಭಾವದಿಂದ, ಮನಬಂದಂತೆ ಅಪಲಪಿಸಿದರೆ, ಅಂಥವರ ಉತ್ತರೋತ್ತರವಾದ ಶ್ರೇಯಸ್ಸಿಗೆ ಭಂಗವಾಗುವುದರೊಂದಿಗೆ, ದುರ್ಗತಿಗೆ ಗುರಿಯಾಗಬೇಕಾಗುವುದು. ಧರ್ಮ ಅತಿ ಸೂಕ್ಷ್ಮವಿರುವುದು. ಕಲ್ಪತರುವಿನಡಿಯಲ್ಲಿ ನಿಂತವ, "ನಾನು ಧನ್ಯ, ಮುಕ್ತ, ಸುಖಿ" ಎಂದು ನುಡಿದರೆ ಅಂತೆಯೇ ಆನಂದಕ್ಕೆ ಭಾಗಿಯಾಗುವನು. ಇದಕ್ಕೆ ತದ್ವಿರುದ್ಧವಾಗಿ ಏನಾದರೂ ಭಾವಿಸಿದರೆ ಅದರಂತೆ ದುರ್ಗತಿಗೆ ಆಳಾಗುವನು.

॥ ಯದ್ಭಾವೋ ತದ್ಭವತಿ ॥

ಕೈಲಾಸನಾಥನೇ ಶ್ರೀ ಮಹಾ ಗುರುರೂಪದಲ್ಲಿ ಭುವಿಯಲ್ಲಿ ಶಿವಲಿಂಗ ಮುಖದಿಂದ ಅವತರಿಸಿದ ಶ್ರೀ ಆದಿ ಜಗದ್ಗುರು ರೇವಣಸಿದ್ಧರು ; ಧರ್ಮ ಜಾಗೃತಿಗಾಗಿ ಶ್ರಮಿಸಿದ ಆಚಾರ್ಯ ಶ್ರೀ ಆದಿ ಶಂಕರಾಚಾರ್ಯರಿಗೆ ಶ್ರೀ ರತ್ನಗರ್ಭ ಗಣಪತಿಯನ್ನು ಮತ್ತು ಶ್ರೀ ಚಂದ್ರಮೌಳಿ ಲಿಂಗವನ್ನು ಕರುಣೆಯಿಂದ ಅನುಗ್ರಹಿಸಿ **ಶಿವಶಕ್ತಿ ಸಂಪುಟದಿಂದ ವಿರಾಜಿಸುವ ಘನ ಲಿಂಗದ** ತತ್ವವನ್ನು, ಹಾಗೂ ತಮ್ಮ ಪೀಠದ ಮತ್ತು ತಾವ್ಯಾರೆಂಬ, ಬಗೆಗೆ ಸಂಕ್ಷಿಪ್ತವಾಗಿ ವಿವರಿಸಿ, "**ಶ್ರೀ ಚಂದ್ರಮೌಳಿ ಲಿಂಗ ತಮ್ಮ ನಿಜಾತ್ಮ ತೇಜಸ್ಸೆಂದೂ**", ಇದನ್ನು ಸತತ ಅವಧಾನ ಭಕ್ತಿಯಿಂದ ಪೂಜಿಸಿದರೆ, ಜೀವಿತ ಕಾಲದಲ್ಲೇ ಲಿಂಗಾಂಗ ಸಾಮರಸ್ಯವೆಂಬ ಸಾಯುಜ್ಯ ಮೋಕ್ಷಾನಂದವು "**ನಿಜ ಪದಂ ಕರ ಬಿಲ್ವ ಫಲಂ ಶಿವಾಥವಾ**" ಎಂಬಂತೆ ಪ್ರಾಪ್ತಿಯಾಗುವುದೆಂದು ಸ್ವಾರಸ್ಯವಾಗಿ, ಶ್ರೀ ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು, ಶ್ರೀ ಆದಿ ಶಂಕರಾಚಾರ್ಯರಿಗೆ ಬೋಧಿಸಿರುವರು.

ಇದು ಅನೇಕ ಶತಮಾನಗಳಿಂದ ಶ್ರೀ ಶೃಂಗೇರಿ ಸಂಸ್ಥಾನದ ಮೂಲ ಗ್ರಂಥ ಧಾರಗಳಿಂದ ಬೆಳಕಿಗೆ ಬಂದ ನಿತ್ಯ ಸತ್ಯಸುಂದರ ವಿಷಯುವಿದು. ಶ್ರೀಮದ್ರಂಭಾಪುರಿ ಯಲ್ಲೂ ಈ ಬಗೆಗೆ ಅನೇಕ ಶತಮಾನಗಳಿಂದಲೂ ಶ್ರೀ ವೀರೇಶನ ಸನ್ನಿಧಿಯ ಪಕ್ಕದ ಗರ್ಭಗುಡಿಯಲ್ಲಿ ಶ್ರೀ ಚಂದ್ರಮೌಳಿ ಲಿಂಗ ಪ್ರಧಾನದ ಮಂಗಳ ಮಯ ಶಿಲಾವಿಗ್ರಹ ವಿರಾಜಿತವಾಗಿರುವುದು ಕೋಟ್ಯಾನು ಕೋಟಿ ಭಕ್ತರಿಗೆ ತಿಳಿದ ವಿಷಯುವಿರುತ್ತೆ.

ಈ ವಿಷಯವನ್ನು ಅನೇಕ ಶತಮಾನಗಳಿಂದ ವೀರಶೈವ ಶಿವ ಯೋಗಿಗಳೂ, ಶಿವಶರಣರೂ, ಕವಿಗಳೂ, ಪಂಡಿತರೂ, ಚರಿತ್ರೆಕಾರರೂ ಮತ್ತು ಅಸಂಖ್ಯಾತ ಶಿವಾನುಭಾವಿಗಳೂ, ಸಾಹಿತಿಗಳೂ, ಕಾಲಕಾಲಕ್ಕೆ ಪ್ರತಿಪಾದಿಸುತ್ತಲೇ ಬಂದಿರುವರು ॥ ಯತ್ರ ಯತ್ರ ಧೂಮಃ । ತತ್ರ ತತ್ರ ಅಗ್ನಿಃ ॥. ಯದು ಕುಲ ವಂಶದ ಅನೇಕ ರಾಜ ಮಹಾರಾಜರೂ ವಿದ್ವಜ್ಜನರೂ ಶ್ರೀರಂಭಾಪುರಿಗೆ ಶ್ರೀ ಜ॥ ಗಳರವರ ಸಂದರ್ಶನಕ್ಕೆ ಬಂದಾಗ, ಶ್ರೀ ಕ್ಷೇತ್ರನಾಥ ವೀರೇಶನನ್ನು, ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ಶ್ರೀ ಮಹಾ ಪೀಠದ ಆದಿ ಜಗದ್ಗುರು ರೇವಣಸಿದ್ಧರು ಶ್ರೀ ಚಂದ್ರಮೌಳಿ ಲಿಂಗವನ್ನು ಅನುಗ್ರಹಿಸುತ್ತಲಿರುವ ಶಿಲಾಮಯ ಮಂಗಳ ಮೂರ್ತಿಗಳ ದಿವ್ಯ ದರ್ಶನ ಪಡೆದಿರುತ್ತಾರೆ. ಸಮುದ್ರದ ನೀರನ್ನು ಮುಚ್ಚಲಿಕ್ಕೆ ಮುಚಳವೆಲ್ಲಿದೆ. ಮುಚ್ಚಲು ಯಾರಿಂದ ಸಾಧ್ಯವಾದೀತು. ಅದರಂತೆ ಮೇಲುಕ್ತವಾದ ವಿಷಯ.

ಸತ್ಯಾಂಶ ಹೀಗಿರುವಾಲ್ಲಿ ಸುಮಾರು ಈಗ್ಗೆ 10-12 ವರ್ಷಗಳ ಹಿಂದೆ ಶ್ರೀ ಮಥುರಾ ಶಂಕರ ಮಠದ ವತಿಯಿಂದ ಪ್ರತಿ ತಿಂಗಳಲ್ಲೂ ಮುದ್ರಿತವಾಗುತ್ತಿದ್ದ ಮಾಸ ಪತ್ರಿಕೆಯ ಮುಖ ಪುಟದಲ್ಲಿ ಒಂದು ಸುಂದರವಾದ ಬಣ್ಣದ ಚಿತ್ರವನ್ನು ನೋಡಿ ಆಕರ್ಶಿತನಾದೆ. ಅದು ಭಗವತ್ಪಾದ ಶ್ರೀ ಆದಿ ಜಗದ್ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು, ಭದ್ರಾ ತೀರದಲ್ಲಿ ಶ್ರೀ ಶೃಂಗೇರಿ ಆದಿ ಶ್ರೀ ಶಂಕರಾಚಾರ್ಯರಿಗೆ ಪ್ರಸನ್ನ ಭಾವದಿಂದ ಅನುಗ್ರಹಿಸುತ್ತಲಿರುವ ಶ್ರೀ ಚಂದ್ರ ಮೌಳೀಶ್ವರ ಲಿಂಗ ಪ್ರದಾನವ ರಮ್ಯವಾದ ಚಿತ್ರ. ಈ ಚಿತ್ರದಲ್ಲಿ ಉಭಯಾಚಾರ್ಯರು ಎದುರು–ಬದರಾಗಿ ಮಂಡಿಸಿರುವರು. ಆದಿ ಶ್ರೀ ಜಗದ್ಗುರು ರೇವಣಸಿದ್ಧರು ವಾಮ ಹಸ್ತದಲ್ಲಿ ವೀರಸಿಂಹಾಸನದ ಅಶ್ವತ್ಥ ಯೋಗ ದಂಡವನ್ನು ಹಿಡಿದಿರುವರು. ಈ ಶಿವಯೋಗ ದಂಡದ ತುದಿಯಲ್ಲಿ ಮಹಾ ಪೀಠದ ಪೃಥ್ವಿ ತತ್ವವನ್ನು ಪ್ರತಿನಿಧಿಸುವ ಹಸರು ಕಂತೆ ಸಹಜವಾಗಿಯೇ ವಿರಾಜಿತವಾಗಿದೆ. ಈ ಸಂಕೇತ ಇಡಿ ಪೃಥ್ವಿ ತತ್ವಕ್ಕೆ ಪ್ರಸಿದ್ಧ ಜಗದ್ಗುರು ಸಾರ್ವಭೌಮರಾದ ಶ್ರೀ ಆದಿ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯವರೇಣ್ಯರಿಗೆ ಜಗದಾದಿಯಿಂದಲೂ " ಪೃಥ್ವಿ ತತ್ವವೇ ವೀರಸಿಂಹಾಸನ ವಾಗಿ " ರೂಪಗೊಂಡಿತು. ಆದರೂ ಜಗದಾಚಾರ್ಯರು " ಪ್ರಕೃತೇಃ ಪರಃ " ಪ್ರಕೃತಿ ತತ್ವಕ್ಕೆ ಒಡೆಯರೆನಿಸಿದರೂ ಪ್ರಕೃತಿ ಸಂಬಂಧವಿಲ್ಲದೆ ಅಂಟಿಯೂ ಅಂಟದ ಹಾಗೆ ಅತೀತರಿರುವರು, ಮತ್ತು ಜಗತ್ತಿಗೆ ಪ್ರಾಣಾಧಾರವಾದ ಹಸರು ಹುಲ್ಲು, ಗಿಡ, ಮರ, ಬಳ್ಳಿ ಇತ್ಯಾದಿ ವನಸ್ಪತಿ ವರ್ಗಗಳೂ, ಉಣವುದಿನಿಸಿಗಳಾದ ಅಕ್ಕಿ, ರಾಗಿ ಜೋಳ, ಗೋಧಿ ಇತ್ಯಾದಿ ಅನಂತ ಮುಖ ಹಾಗೂ ಸಪ್ತ ಧಾತುಗಳ ಉತ್ಪತ್ತಿಗೆ ಮಾನವಾದಿ 84 ಲಕ್ಷ ಜೀವಕೋಟಿಗಳ ಅನ್ನರಸದ ಜೀವಂತ ಹಸರು ಚಿತ್ಕಳಾ ತೇಜಸ್ಸೇ ಸದಾಶಿವನ ಸದ್ಯೋತ ಮುಖದಿಂದ ಹೊರಹೊಮ್ಮಿತು, " ಜನ್ಮಾದ್ಯಸ್ಯ ಯತಃ "

ಎಂಬ ಎರಡನೇ ಬ್ರಹ್ಮ ಸೂತ್ರಕ್ಕೆ ಅರ್ಥವತ್ತಾದ ಮೂಲಾದಾರ ಸ್ಥಂಭವೆಂಬುದನ್ನು ಮೇಲಿನ ಹಸರು ಕಂತೆ ಸೂಚಿತವಾಗಿದೆ.

ಇಂತಪ್ಪ ಮಹಿಮಾತೀತ ಮತ್ತು ಮಹೋನ್ನತವಾದ ಶ್ರೀ ಆದಿ ಜಗದ್ಗುರು ರೇವಣಸಿದ್ಧರ ಹಸ್ತದಲ್ಲಿನ ಶಿವಯೋಗ ದಂಡವನ್ನು ರೂಪಾಂತರಗೊಳಿಸಲು, ಮಘುರ ಶ್ರೀ ಶಂಕರ ಮಠದ ಸಂಚಿಕೆಯ ಮುಖಪುಟದ ಚಿತ್ರದಲ್ಲಿ ಯತ್ನಿಸಿರುವುದು ನಿಜಕ್ಕೂ ಒಂದು ಕೌತುಕವೆನಿಸಿದೆ.

ಶ್ರೀ ಶಿವಯೋಗದ ಅಶ್ವತ್ಥ ದಂಡದ ತುದಿ ಭಾಗವನ್ನು ಕರಕುಶಲತೆಯಿಂದ ತ್ರಿಶೂಲ ರೂಪದಲ್ಲಿ ಪರಿವರ್ತಿಸಿ, ನಂತರ ಹಸರು ಕಂತೆಯನ್ನು ಅದೇ ಬಣ್ಣಕ್ಕೆ ಸರಿಗಟ್ಟುವ ರೀತಿಯಲ್ಲಿ ಡಮರುಗದಂತೆ ತಿದ್ದಿ ಕೈತೀಡಿ ಚಮತ್ಕಾರವಾಗಿ ಸ್ಥೂಲ ದೃಷ್ಟಿಗೆ ಯಾರಿಗೂ ಗೋಚರವಾಗದಂತೆ ಕೈ ಚಳಕವನ್ನು ತೋರಿಸಿ, ಇದರಡಿಯಲ್ಲಿ "ಆದಿ ಶ್ರೀ ಶಂಕರಾಚಾರ್ಯರಿಗೆ, ಕೈಲಾಸನಾಥನು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸುತ್ತಲಿರುವರೆಂದು ಬರೆಯಲಾಗಿದೆ. ಈ ತರದ ಹಗರಣಕ್ಕೆ ಅವರ ಸಂಕುಚಿತ ಮನೋಭಾವವೇ ಕಾರಣವೆಂದು ಹೇಳದೇ ಬೇರೆ ವಿಧಿಯಿಲ್ಲ.

॥ ಮನೋಹಿ ದ್ವಿವಿಧಂ ಪ್ರೋಕ್ತಂ । ಶುದ್ಧಂ ಚಾ ಶುದ್ಧ ಮೇವಚಾ ।
ಅಶುದ್ಧಂ ಕಾಮ ಸಂಕಲ್ಪಂ । ಶುದ್ಧಂ ಕಾಮ ವಿವರ್ಜಿತಂ ॥

ಮೇಲ್ಕಂಡ ರೂಪಾಂತರ ಗೊಳಿಸಿದ ಕಾರ್ಯ "ಕಾಮ ಸಂಕಲ್ಪಂ" ಎಂದು ಸ್ಪಷ್ಟವಾಗಿ ವೇದ್ಯವಾಗುತ್ತೆ.

॥ ಗುರು ಸಾಕ್ಷಾತ್ಪರ ಬ್ರಹ್ಮ । ತಸ್ಮೈ ಶ್ರೀ ಗುರುವೇ ನಮಃ ॥

ಎಂಬ ಶೃತಿ ವಾಣಿಯಂತೆ ಜಗದಾದಿ ಶ್ರೀ ಜಗದ್ಗುರು ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು, ಶಿವೋಕ್ತಿಯಂತೆ ಲಿಂಗೋದ್ಭವ ಮಂಗಳ ಮೂರ್ತಿ ಯಾದ್ದರಿಂದ ಅವರೇ ನಿಜಕ್ಕೂ ಶ್ರೀಮತ್ಕೈಲಾಸನಾಥ ಸದೃಶರೆಂದು ಅರ್ಥೈಸಿದಾಗ, ಶ್ರೀ ರತ್ನಗರ್ಭ ಗಣಪತಿಯನ್ನು, ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಶ್ರೀ ಆದಿ ಶಂಕರರಿಗೆ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ರೇವಣಸಿದ್ಧರು ಅನುಗ್ರಹಿಸಿರುವರೆಂಬುದು, ಶ್ರೀ ಶೃಂಗೇರಿ ಪೀಠದ ಆಧಾರಗಳಿಂದಲೂ, ಗುರು ವಂಶ ಕಾವ್ಯ ಇತ್ಯಾದಿ ನಾನಾ ಪ್ರಾಚೀನ ದಿವ್ಯ ಕೃತಿಗಳಿಂದ, ರುಜುವತ್ತಾದ ಧಾರ್ಮಿಕ ವಿಷಯವೇ ಇರುತ್ತೆ.



## ಅಧ್ಯಾಯ 27

॥ ಅಪಾರೇ ಕಾವ್ಯ ಸಂಸಾರೇ । ಕವಿರೇವ ಪ್ರಜಾಪತಿಃ ॥

ಜಗತ್ತಿನಲ್ಲಿ ಕಾವ್ಯ ರಚನೆಯೊಂದು ಅಪಾರ ಸಂಸರವೇ ಸರಿ. ಕವಿಯೇ ಈ ಸಂಸಾರವೆಂಬ ಜಗತ್ಸೃಷ್ಟಿಗೆ ಕರ್ತನೆನಿಸಿರುವನು.

ಶ್ರೀ ಶೃಂಗೇರಿ ಸಂಸ್ಥಾನದ ಈಚಿನ ಘನ ವಿದ್ವಾಂಸರಲ್ಲಿ ಖ್ಯಾತಿ ಪಡೆದ, **ಗುರು ಭಕ್ತರತ್ನ ವೇ॥ ಬ್ರಂ॥ ಕೆ. ಆರ್. ವೆಂಕಟರಾಮರ್ಯ ಮಹೋದಯರು, "ಗುರುವಂಶ ಕಾವ್ಯದ"**, ತೃತೀಯಾಧ್ಯಾಯದ 33ನೇ ಶ್ಲೋಕದಲ್ಲಿನ **"ಸುಸಿದ್ಧ ದತ್ತಂ"** ಎಂಬ ಪದಕ್ಕೆ ತಮ್ಮದೇ ಆದ ಸ್ವಕಪೋಲ ಪ್ರೋಕ ವಿವರಣೆಯನ್ನು ನೀಡಿರುವುದು, ಕೌತುಕವೆನಿಸಿದೆ.



॥ ತೃಣಾದಪಿ ಸು ನೀಚೇನ । ತರೋರಪಿ ಸಹಿಷ್ಣುನಾ ।
ಅಮಾನಿನಾ ಮಾನದೇನ । ಕೀರ್ತನೀಯಃ ಸದಾಶಿವಃ ॥

( ಅಮಾನಿನಾ = ದುರಭಿಮಾನದಿಂದ ದೂರಾಗು. ಮಾನ ದೇನ = ಗೌರವ ವನ್ನು ಕೊಟ್ಟು ಗೌರವ ಪಡೆ ).

ಇಂದಿನ ಶ್ರೀ ಶೃಂಗೇರಿ ಸಂಸ್ಥಾನದ ಪಂಡಿತರುಗಳಲ್ಲಿ ಪ್ರಸಿದ್ಧರಾದವರೆಂದರೆ– ಗುರುಭಕ್ತರತ್ನ ವೇ॥ ಬ್ರಂ॥ ಕೆ. ಆರ್. ವೆಂಕಟರಾಮರ್ಯ ಮಹೋದಯರು. ತಿರುವಾಂಕೂರಿನ ಹಿಂದಿನ ಮುಖ್ಯ ಮಂತ್ರಿಗಳಾಗಿದ್ದ ಸರ್ ಸಿ. ಪಿ. ರಾಮಸ್ವಾಮಿ ಅಯ್ಯರ್ ಮತ್ತು ಇಂದಿನ ಶ್ರೀ ಶೃಂಗೇರಿ ಶಾರದಾ ಪೀಠಾಧಿಪತಿಗಳಾದ ಪರಮ ಪೂಜ್ಯ ಶ್ರೀ ಶ್ರೀ ಶ್ರೀ ಅಭಿನವಃವಿದ್ಯಾತೀರ್ಥ ಮಹಾ ಸ್ವಾಮಿಗಳೂ ಸಹ ಗುರುಭಕ್ತ ರತ್ನ ವೇ॥ ಬ್ರಂ॥ ಕೆ. ಆರ್. ವೆಂಕಟರಾಮರ್ಯರವರನ್ನು ಅವರ ಪಾಂಡಿತ್ಯಕ್ಕೆ ಮೆಚ್ಚಿ ಪ್ರಶಂಸಿಸಿರುವರು. ಇವರು ಸಂಸ್ಕೃತ, ತಮಿಳು, ಆಂಗ್ಲ ಭಾಷೆಗಳಲ್ಲಿ ಸಾಕಷ್ಟು ಪಾಂಡಿತ್ಯವನ್ನು ಪಡೆದು ಅದ್ವೈತ ಸಿದ್ಧಾಂತ ಪ್ರತಿಪಾದಕರೆನಿಸಿರುವರು. ಈ ಪಂಡಿತರು ಗುರುವಂಶ ಮಹಾ ಕಾವ್ಯವನ್ನೂ ಮತ್ತು ಈ ಗ್ರಂಥಕರ್ತೃಗಳಾದ ಆಸ್ಥಾನ ವಿದ್ವಾನ್ ವೇ॥ ಬ್ರಂ॥ ಕಾಶಿ ಲಕ್ಷ್ಮಣ ಶಾಸ್ತ್ರಿಗಳನ್ನು ಮುಕ್ತ ಕಂಠದಿಂದ ಪ್ರಶಂಸಿಸಿರುವರು, ಹೀಗಿದ್ದರೂ ಸಹ, ಸದರಿ ಮಹಾ ಕಾವ್ಯದ ಮೂರನೆ

ಅಧ್ಯಾಯದಲ್ಲಿನ 33ನೇ ಶ್ಲೋಕವಲ್ಲುಕ್ತವಾದ " ಸುಸಿದ್ಧ " ಎಂಬ ಪದಕ್ಕೆ ಗ್ರಂಥಕರ್ತರೇ ಸಾಧುವಾದ ವ್ಯಾಖ್ಯಾನವನ್ನು ನೀಡಿದ್ದರೂ, ಗುರುಭಕ್ತ ರತ್ನ ಕೆ. ಆರ್. ವೆಂಕಟರಾಮರ್ಯರವರು ತದ್ವಿರುದ್ಧವಾದ, ತಮ್ಮ ಸ್ವಕಪೋಲ ಕಲ್ಪಿತ ವ್ಯಾಖ್ಯಾನ ಒಂದನ್ನು ಸೃಷ್ಟಿಸಿ, ಸತ್ಯಕ್ಕೆ ದೂರವಾದ ಪ್ರಚಾರ ಕಾರ್ಯದಲ್ಲಿ ತಲ್ಲೀನರಾಗಿದ್ದಾರೆ.

ಇದು ಶೋಚನೀಯವೆನಿಸಿದೆ. ಶ್ರೀ ವೆಂಕಟರಾಮರ್ಯರವರು " ಸುಸಿದ್ಧ " ಪದಕ್ಕೆ ಶ್ರೀ ಗೋವಿಂದ ಭಗವತ್ಪಾದರೆಂದು ಅರ್ಥ ಮಾಡಿದ್ದಾರೆ. ಹೆಸರಾಂತ ಸಿದ್ಧರು ಅನೇಕರಿರುವರು. ಅವರಲ್ಲೊಬ್ಬರು, ಶ್ರೀ ಗೋವಿಂದ ಭಗವತ್ಪಾದರೆಂದು ಊಹಿಸೋಣ. ಕಾಶಿ ಲಕ್ಷ್ಮಣ ಶಾಸ್ತ್ರಿಗಳು " ಸುಸಿದ್ಧರೆಂದರೆ " ಶ್ರೀ ರೇವಣಸಿದ್ಧ ರೆಂದು ಸ್ಪಷ್ಟಪಡಿಸಿರುವರು. ಆಸ್ಥಾನ ವಿದ್ವಾನ್ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳ ವಿದ್ವತ್ಪೂರಿತವಾದ ಮೇಲುಕ್ತವಾದ ಶ್ಲೋಕದ ಘನ ವ್ಯಾಖ್ಯಾನವನ್ನು ಸತ್ಯಸಂಧರ ವಾಗಿ ಮುಂದಿನ ಅಧ್ಯಾಯ 28 ರಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ. ಶ್ರೀ ವೆಂಕಟರಾಮರ್ಯರವರು ಮುಂದುವರಿದು, " ರೇವಣಸಿದ್ಧ " ಎಂಬ ವ್ಯಾಖ್ಯಾನ ದಲ್ಲಿನ ಪದಕ್ಕೆ ಸಹ ಶ್ರೀ ಗೋವಿಂದ ಭಗವತ್ಪಾದರೆಂದೇ ಅರ್ಥ ಮಾಡಿದ್ದಾರೆ. ಗುರುಭಕ್ತ ರತ್ನರವರು ಕೊಡುವ ಸಮಾಧಾನವೇನೆಂದರೆ ನರ್ಮದಾ ನದಿಯ ಉಪನದಿ ರೇವಾ. ಈ ನದಿಯ ದಡದಲ್ಲಿ ಶ್ರೀ ಗೋವಿಂದ ಭಗವತ್ಪಾದಾಚಾರ್ಯರ ಆಶ್ರಮವಿರುವುದರಿಂದ, ರೇವಾ ಸಂಬಂಧದಿಂದಾಗಿ ಇವರಿಗೆ " ರೇವಣ " ಎಂಬ ಅನ್ವರ್ಥನಾಮ ಅನ್ವಯಿಸುವುದಾಗಿ ಹೇಳುತ್ತಾರೆ. ಶ್ರೀ ಗೋವಿಂದ ಭಗವತ್ಪಾದಾ ಚಾರ್ಯರು ಪರಮ ಶ್ರೀ ವೈಷ್ಣವ ಮತಾಚಾರ್ಯರು. ಅಂದಿನ ಕಾಲದಲ್ಲಿ ಶ್ರೀ ವೈಷ್ಣವರು ಶಿವ ದೇವಾಲಯಗಳತ್ತ ತಿರುಗಿ ನೋಡುತ್ತಿರಲಿಲ್ಲ. ಶಿವಲಿಂಗವನ್ನು ಸಹ ನೋಡಿ ವಂದಿಸುತ್ತಿರಲಿಲ್ಲ. ಇವರಲ್ಲಿ ಕೆಲವರು ಲಿಂಗವನ್ನು ಶಿಶ್ನವೆಂದು ಹೀಯಾಳಿಸಿ, " ಶಿಶ್ನ ದೇವೋ ಭವ " ಎಂದು ಮೌಢ್ಯತನದಿಂದ ಅಪಲಪಿಸುತ್ತಿದ್ದ ಕಾಲವದು. ಇಂತಪ್ಪ ಶ್ರೀ ವೈಷ್ಣವಾಚಾರ್ಯ ಗೋವಿಂದ ಭಗವತ್ಪಾದರು ಶ್ರೀ ಚಂದ್ರಮೌಳಿ ಲಿಂಗವನ್ನು ಆದಿ ಶ್ರೀ ಶಂಕರಾಚಾರ್ಯರಿಗೆ ಕೊಟ್ಟರೆಂದು ಶ್ರೀ ಕೆ.ಆರ್. ವೆಂಕಟರಾಮರ್ಯರವರು ತಮ್ಮದೇ ಆದ ವ್ಯಾಖ್ಯಾನವನ್ನು ಸಂಕ್ಷಿಪ್ತವಾಗಿ ಟಿಪ್ಪಣಿ ರೂಪದಲ್ಲಿ ಸದರಿ 33ನೇ ಶ್ಲೋಕದಡಿಯಲ್ಲಿ ಬರೆದಿರುತ್ತಾರೆ. ಗುರುವಂಶ ಮಹಾ ಕಾವ್ಯದ ಗ್ರಂಥಕರ್ತರ "ಮೂಲ ವ್ಯಾಖ್ಯಾನ ಬಿಟ್ಟಿದೆ" ಎಂದೂ ಟಿಪ್ಪಣಿಯಲ್ಲಿ ಕಾಣಿಸಿದ್ದಾರೆ. ಇಂತಪ್ಪ ಅವ್ಯವಸ್ಥೆ, ಇತ್ತೀಚಿನ ಅಂದರೆ ಪ್ರಾಯಶಃ 25, 30 ವರ್ಷಗಳ ಹಿಂದಿನ ಅಂದರೆ ಸುಮಾರು 1955 ರಿಂದೀಚೆಗೆ ಮರು ಮುದ್ರಣವಾದ ಗುರುವಂಶ ಕಾವ್ಯದ ಪ್ರತಿಗಳಲ್ಲಿ ಕಾಣಲಾಗಿದೆ. ಇದಕ್ಕೂ ಹಿಂದಿನ 1730 ರಿಂದ

1950 ರ ಕಾಲಾವಧಿಯಲ್ಲಿ ಶ್ರೀ ಶೃಂಗೇರಿ ಸಂಸ್ಥಾನ ಮಠದ ವತಿಯಿಂದ, ಪುನರಾವೃತ್ತಿ ಮುದ್ರಣವಾದ ಸದರಿ ಗ್ರಂಥದ ಸಾವಿರಾರು ಪ್ರತಿಗಳಲ್ಲಿ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳ " ಸುಸಿದ್ಧ " ಪದದ ನಿತ್ಯಸತ್ಯ ಶುದ್ಧ ಸುಂದರ ವ್ಯಾಖ್ಯಾನವನ್ನು ಆ ಪ್ರತಿಗಳಲ್ಲಿ ಈಗಲೂ ಕಾಣಬಹುದಾಗಿದೆ. ಇತ್ತೀಚಿನ ಸತ್ಯ ಸಂಧರಾದ ನಿಷ್ಠಾವಂತ ವಿದ್ವಾಂಸರು, ಕವಿ ಹೃದಯವನ್ನರಿತು, ಅದನ್ನೇ ಆದಷ್ಟು ಪ್ರತಿ ಪಾದಿಸಿ ಪುಣ್ಯಕ್ಕೆ ಭಾಗಿಗಳಾಗುತ್ತಾರೆ. ಅಂತಿಲ್ಲದವರು, ಎಷ್ಟೇ ವಿದ್ಯಾವಂತ ರಾಗಿದ್ದರೂ, ಕಾಮ ಸಂಕಲ್ಪದಿಂದಾಗಿ, ಕವಿ ಹೃದಕ್ಕೆ ತಿಲಾಂಜಲಿಯನ್ನು ನೀಡಿ, ಆ ಗಣ್ಯ ವ್ಯಾಖ್ಯಾನ ಯಿನ್ನಿಲ್ಲವೆಂದೆನಿಸಿ, ತಮ್ಮದೆ ಆದ ಹಾಗು ಸತ್ಯಕ್ಕೆ ದೂರವಾದ ಸ್ವಕಪೋಲಕಲ್ಪಿತ ವ್ಯಾಖ್ಯಾನವನ್ನು ಬೆಳಕಿಗೆ ತಂದು ಜನಮನವನ್ನು ಸೂರೆಗೊಳ್ಳುತ್ತಾರೆ. ಅಂದೋ ! ಕಲಿಕಾಲದ ಪ್ರಭಾವದ ಮುಂದೆ, ಸತ್ಯ ತಾನಾಗಿಯೇ ದೂರ ಸರಿಯುವಂತೆ ಭಾಸವಾಗುತ್ತೆ. ಭಯಂಕರವಾದೀ ಕಲಿಕಾಲ ದಲ್ಲಿ ಅಸತ್ಯ ತಲೆಯೆತ್ತಿ ಹೆಡೆಯಾಡಿಸುತ್ತಿರುವಾಗ, ಸತ್ಯ, ಧರ್ಮಗಳು ಹೆದರಿ, " ಧರ್ಮೋ ವನಾಂತರಾರ್ಗತಃ " ಕಾಡುಪಾಲಾಗಿ, ಅಲ್ಲಿ ಶಾಂತಿಯಿಂದ ನೆಲಸ ಬಹುದೆಂದು ಬಯಸಿರುವಂತೆ ಕಂಡುಬರುತ್ತೆ.

ಮೇಲುಕ್ತವಾದ ಮೂಲ ಶ್ಲೋಕದಲ್ಲಿ ಕಂಡ " ಸುಸಿದ್ಧ " ಮತ್ತು " ರೇವಣ ಸಿದ್ಧ " ಎಂಬ ಪದಗಳಿಗೆ ಬ್ರಂ॥ ಕೆ. ಆರ್. ವೆಂಕಟರಾಮ್ಯರವರ ಸ್ವಕಪೋಲಕಲ್ಪಿತ ಅರ್ಥಗಳು ಅವರಿಂದ ಹುಟ್ಟಿ ಪ್ರಕಟವಾದಂತೆ ಕಾಣುತ್ತಲಿದೆ. ಏನೇ ಇರಲಿ, ಗುರುವಂಶ ಮಹಾ ಕಾವ್ಯದ ಗ್ರಂಥಕರ್ತರ ಶುದ್ಧ ಮನಸ್ಸಿನ ಸ್ವಚ್ಛವಾದ ವ್ಯಾಖ್ಯಾನ ಚಿರಸ್ಮರಣೀಯವಿರುತ್ತೆ.

ಶ್ರೀ ಕೆ. ಆರ್. ವೆಂಕಟರಾಮ್ಯರವರ ಕಾಲಕ್ಕೂ ಮುಂಚೆ, ಬೇರೆ ಯಾವ ಪಂಡಿತರೂ ಹಾಗೂ ಶ್ರೀ ಶೃಂಗೇರಿ ಸಂಸ್ಥಾನದ ಕರ್ತರಾಗಲಿ " ಸುಸಿದ್ಧ " ಮತ್ತು ರೇವಣಸಿದ್ಧ ಎಂಬ ಪದಗಳಿಗೆ ಶ್ರೀ ಗೋವಿಂದ ಭಗವತ್ಪಾದರೆಂದು ಪ್ರಕಟಿಸಿ ಪ್ರಚಾರದಲ್ಲಿದ್ದ ಹಾಗೆ ಕಂಡುಬಂದಿಲ್ಲ. ಆಸ್ಥಾನ ವಿದ್ವಾನ್ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳೂ ಇಂಥಾ ವ್ಯಾಖ್ಯಾನ ರಚಿಸಿಲ್ಲ. ಇದಕ್ಕೆಲ್ಲಾ ಕೆಲವರ ಸಂಕುಚಿತ ಭಾವವೇ ಕಾರಣ, ಹೀಗಾಗಬಾರದು. ಚಿದ್ವಿಲಾಸೀಯ ಮತ್ತು ಮಾಧವೀಯ ಶಂಕರ ವಿಜಯಗಳು ಆದಿ ಅಧಿಕೃತ ಗ್ರಂಥಗಳೇನಲ್ಲ.

ಗುರುವಂಶ ಕಾವ್ಯದ ಗ್ರಂಥಕರ್ತರ " ಸುಸಿದ್ಧ ದತ್ತಂ " ಎಂಬ ಪದಕ್ಕೆ ಅವರ ಸ್ವತಃ ಸಿದ್ಧವಾದ ಸುಂದರ ವ್ಯಾಖ್ಯಾನವನ್ನು ಕೈ ಬಿಟ್ಟು, ಮೋಹವಶಾತ್ ಗುರುಭಕ್ತ ರತ್ನ ಬ್ರಂ॥ ಕೆ. ಆರ್. ವೆಂಕಟರಾಮ್ಯರವರ ಕೃತಕ ವ್ಯಾಖ್ಯಾನ ಸತ್ಯಕ್ಕೆ

ದೂರವಾದ ವಿಮರ್ಶೆಯೆಂದು ಹೇಳಬೇಕಾಗಿದೆ. ನಾನಾತ್ಮಕವಾದ ವ್ಯಾಖ್ಯಾನಗಳು ಸಂಶಯಗಳನ್ನು ಮತ್ತಷ್ಟು ಪ್ರಚೋದನೆಗೊಳಿಸುವುವು.

ಆದರೆ ಸತ್ಯ, ಸತ್ಯವಾಗಿಯೇ ಸದಾಕಾಲ ಉಳಿಯುವುದು, ಆ ಸತ್ಯ ನೆಲೆಕಾಣದಂತಾಗುವುದು.

" ಸತ್ಯ ಮೇವೋದ್ಧರಾಮ್ಯಹಂ "



## ಅಧ್ಯಾಯ 28

### ಪ್ರಥಮ ಭಾಗ

ಜ್ಯೋತಿರ್ಲಿಂಗಮಯ ಇಷ್ಟಲಿಂಗ ತತ್ವದ ನಿಲವು, ಅದೆಂತೆಂದೊಡೆ-

1) ॥ ಆದ್ಯಂತ ಶೂನ್ಯ ಮಮಲಂ । ಪರಿಪೂರ್ಣಮೇಕಂ ।
ಸೂಕ್ಷ್ಮಂ ಪರಾತ್ಪರ ಮನಾಮಯ । ಮಪ್ರಮೇಯಂ ।
ಭಾವೈಕ ಗಮ್ಯ ಮಜಡಂ । ಶಿವತತ್ವ ಮಾಹುಃ ।
ಚಿಚ್ಛಕ್ತಿ ಸಂಸ್ಫುರಣ ರೂಪ । ಮಹಾತ್ಮ ಲಿಂಗಂ ॥

2) ॥ ಮಹಾಲಿಂಗ ಮಿದಂ ದೇವಿ । ಮನೋತೀತ ಮಗೋಚರಂ ।
ನಿರ್ನಾಮ ನಿರ್ಗುಣಂ ನಿತ್ಯಂ । ನಿರಂಜನ್ಯಂ ನಿರಾಮಯಂ ।
ನಿರ್ಮಲಂ ನಿಷ್ಕಲಂಜ್ಞೇಯಂ । ನಿರ್ಭೇದ್ಯಂ ನಿರುಪಾಧಿಕಂ ।
ಅದ್ವೈತಾನಂದ ಮಕ್ಷೀಣಂ । ಅಸಾದೃಶ್ಯಮಿದಂ ಶೃಣು ॥

3) ಏನೆಂದೆನಲಿಲ್ಲದ ಮಹಾ ಘನವು, ತನ್ನ ಲೀಲೆಯಿಂದ ತಾನೇ ಸ್ವಯಂಭು ಲಿಂಗವಾಯಿತ್ತು. ಆ ಲಿಂಗದಿಂದಾಯಿತ್ತು ಶಿವ ಶಕ್ತ್ಯಾತ್ಮಕ ; ಆ ಶಿವಶಕ್ತ್ಯಾತ್ಮಕದಿಂದಾದುದು ಆತ್ಮ, ಆತ್ಮನಿಂದಾದುದು ಆಕಾಶ.

ಆಕಾಶದಿಂದಾದುದು ವಾಯು. ವಾಯುವಿನಿಂದಾದುದು ಅಗ್ನಿ. ಅಗ್ನಿಯಿಂದಾದುದು ಅಪ್ಪು. ಅಪ್ಪುವಿನಿಂದಾದುದು ಪೃಥ್ವಿ. ಪೃಥ್ವಿಯಿಂದಾದುದು ಸಕಲ ಜೀವವೆಲ್ಲಾ, ಇವೆಲ್ಲಾ ನಿಮ್ಮ ನೆನಹು ಮಾತ್ರದಿಂದಾದುವು ಚಿಮ್ಮಲಿಗೆಯ ಚನ್ನರಾಮಾ.

4) ಮರದೊಳಗಣ ಪತ್ರೆ ಫಲಂಗಳು, ಮರ ಕಾಲವಶದಲ್ಲಿ ತೋರುವಂತೆ, ಹರನೊಳಗಣ ಲೀಲಾ ಪ್ರಕೃತಿ ಸ್ವಭಾವಂಗಳು ಹರಲೀಲಾ ವಶದಲ್ಲಿ ತೋರುವುವು. ಲೀಲೆಯಾದೊಡುಮಾಪತಿ, ಲೀಲೆನಿಂದಡೆ ಸ್ವಯಂಭು ನಮ್ಮ ಗುಹೇಶ್ವರ ಲಿಂಗವು.

5) ಕರಸ್ಥಲವ ಲಿಂಗವು ಕಾಯಕ್ಕೆ ವೇಧಿಸಿದಲ್ಲಿ ಕಾಯ ಲಿಂಗವಾಯಿತ್ತು. ಅಂತಾದ ಮಹಾ ಘನಲಿಂಗವೇ ಪ್ರಾಣಕ್ಕೆ ವೇಧಿಸಿದಲ್ಲಿ, ಪ್ರಾಣಲಿಂಗ ವಾಯಿತ್ತು. ಅಂತಾದ ಮಹಾ ಘನಲಿಂಗವೇ ಜ್ಞಾನಕ್ಕೆ ವೇಧಿಸಿದಲ್ಲಿ ಜ್ಞಾನ ಲಿಂಗವಾಯಿತ್ತು. ಅಂತಾದ ಕಾರಣ ನಮ್ಮ ಗುಹೇಶ್ವರನ ಶರಣಂಗೆ, ಅರಿವರಿತು ಕುರುಹು ನಿಷ್ಪತ್ತಿಯಾಗಿ, ತಾನೆಂಬ ಭಾವವು ಉರಿಯುಂಡ ಕರ್ಪೂರದಂತಾಯಿತ್ತು.

6) ಕಣ್ಣಿಂದ ಕಣ್ಣಿಯ ನೋಡಿ, ಕಂಗಳೊಳಗಣ ಕಲೆಯ ಕಾಂಬಂತೆ ತನ್ನಿಂದ ತನ್ನ ನೋಡಿ, ತನ್ನನರಿಯಬೇಕು. ತನ್ನಿಷ್ಟಲಿಂಗಕ್ಕೆ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣವಾಗಿ. ಚಿದ್ರೂಪ ಚಿನ್ಮಯ ಸ್ವರೂಪದ ಚಿತ್ಪ್ರಕಾಶವನ್ನು ಕಂಡು ತನ್ಮಯನಾಗಬೇಕು, ಇದು ವಿಶೇಷಾದ್ವೈತಾಂತರ್ಗತ ಷಟ್ಸ್ಥಲ ಸಿದ್ಧಾಂತದ ಸಾರಾಮೃತವೆನಿಸಿದೆ.

॥ ಲಿಂಗಧಾರಣ ಮಾತ್ರೇಣ । ಶಿವತ್ವಂ ಪ್ರಾಪ್ತಿರೇವಹಿ ॥
॥ ಲಿಂಗಾಂಗಿ ಸಂಗಿನೋ ವತ್ಸ । ಪುನರ್ಜನ್ಮ ನ ವಿದ್ಯತೇ ॥
॥ ಲಿಂಗಂ ಚಿದಾತ್ಮಕಂ ಬ್ರಹ್ಮ । ತಚ್ಛಕ್ತಿಃ ಪ್ರಾಣ ರೂಪಿಣಿ ॥



ಶ್ರೀ ಶೃಂಗೇರಿ ಸಂಸ್ಥಾನದ ವತಿಯಿಂದ, ಸುಮಾರು ಕ್ರಿ. ಶ. 1730 ರಲ್ಲಿ ಸದರಿ ಸಂಸ್ಥಾನದ ಘನ ಆಸ್ಥಾನ ವಿದ್ವಾಂ ವೇ॥ ಬ್ರಂ॥ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳಿಂದ, ಅಧಿಕೃತನಾಗಿ ರಚಿಸಲ್ಪಟ್ಟ " ಶ್ರೀ ಗುರುವಂಶ ಕಾವ್ಯದ "

ಅಧ್ಯಾಯ 3ರಲ್ಲಿನ ಶ್ಲೋ. 33ರಲ್ಲಿ ಕಾಣುವ "ಸುಸಿದ್ಧ ದತ್ತಂ" ಎಂಬ ಪ್ರಪ್ರಂಚಕ್ಕೆ ಗ್ರಂಥಕರ್ತರೇ ನೀಡಿರುವ ನಿತ್ಯ ಸತ್ಯ ಸುಂದರವಾದ ವ್ಯಾಖ್ಯಾನದ ಅನುವಾದ.

ಆದಿ ಶ್ರೀ ಶಂಕರಾಚಾರ್ಯರು ತಮ್ಮ ಭಾಷ್ಯದ ಮಂದೆಡೆಯಲ್ಲಿ "ಲಿಂಗಿ ಚಕ್ರಿ ಪಾಖಂಡಿನಃ" ಎಂದು ಉಲ್ಲೇಖಿಸಿರುವರು. ಲಿಂಗಾಂಗಿಗಳಾದ ಪರಮ ವೀರಶೈವರು ವೈದಿಕ ಪಾಶುಪತರಿರುವರು. ಇವರು ಜಗದಾದಿಯಿಂದ, ಅತಪ್ತಲಿಂಗ ಮುದ್ರಾಂಕಿತರು. ಅಂದರೆ ತಮ್ಮ ಅಂಗದಲ್ಲಿ ಭಸ್ಮೋದ್ಧೂಳಿತ ಲಿಂಗ ಮುದ್ರೆಗಳಿಂದ ಅಲಂಕೃತರಾಗಿ, ಬಾಹ್ಯಾಭ್ಯಂತರಗಳಲ್ಲೂ ಸದಾ ಶಿವಲಿಂಗ ಸಂದರ್ಶನದಿಂದ, ಶಿವ ಧ್ಯಾನಾನುಸಂಧಾನದಲ್ಲಿ ತಲ್ಲೀನರಾಗಿರುತ್ತಿರುವರು. ಶಿರೋವ್ರತರೆನಿಸಿದ ಲಿಂಗಾಂಗಿಗಳು ತಪ್ತಲಿಂಗ ಮುದ್ರಾಂಕಿತವನ್ನು ಖಂಡಿಸಿ' ಆ ಪದ್ಧತಿ ಅವೈದಿಕವೆಂದೂ, ವಾಮಾಚಾರವೆಂದೂ ತಿರಸ್ಕರಿಸಿರುವರು. ಪ್ರಾಯಶಃ ಆದಿ ಶ್ರೀ ಶಂಕರಾಚಾರ್ಯರಿಗೆ ಪರಮ ವೈದಿಕ ವೀರಶೈವ ಸಂಪ್ರದಾಯ ಆಗ ತಿಳಿದಿರಲಿಲ್ಲವೆಂದು ಕಾಣುತ್ತೆ.

ಶಂಕರರು ಆಗ ಲಿಂಗವೆಂದರೆ ಅದೊಂದು ಪಾಷಾಣ, ಅದನ್ನು ದೇಹದಲ್ಲಿ "ತಪ್ತಲಿಂಗ ಮುದ್ರಾಂಕಿತ ಚಿನ್ಹೆಗಳಿಂದ" ಪೂಜಿಸುವವರು ಪಾಖಂಡಿಗಳೆಂಬುದು ಆಚಾರ್ಯರ ಅಭಿಮತವಾಗಿತ್ತೆಂದು ಕಾಣುತ್ತೆ. ಜಗದಾದಿಯಿಂದ ವೈದಿಕ ಪಾಶುಪತರು "ಅತಪ್ತಲಿಂಗ ಮುದ್ರಾಂಕಿತ" ಚಿನ್ಹೆಗಳಿಂದ ವಿರಾಜಿತರಾಗಿದ್ದರು. ಶರೀರವನ್ನು, ಅವೈದಿಕ ರೀತಿಯಲ್ಲಿ ತಪ್ತಗೊಳಿಸುವ ದುಷ್ಟ ಪದ್ಧತಿಯನ್ನು ಆದಿ ಶ್ರೀ ಶಂಕರಾಚಾರ್ಯರ ಕಾಲಕ್ಕಿಂತಲೂ ಸಹಸ್ರಾರು ವರ್ಷಗಳ ಪೂರ್ವದಿಂದಲೂ ಕಟುವಾಗಿ ಖಂಡಿಸಿ ಅಂಥವರನ್ನು ಸನಾತನ ವೈದಿಕ ಮಾರ್ಗಾನುವರ್ತಿಗಳಾದ ಪರಮ ಲಿಂಗಾಂಗಿ ವೀರಶೈವರು ದೂರೀಕರಿಸಿದ್ದರು ಸಾಮಾನ್ಯವಾಗಿ ಸ್ರಕ್ಚಾಂದ್ರಾಯಣಾದಿ ವ್ರತ ಪದ್ಧತಿಗಳಿಂದ, ಶರೀರವನ್ನು ದಂಡಿಸಿ ಶೋಷಣೆಗೊಳಿಸುವ ವಿಪ್ರರ ಕಾಠಿಣ್ಯಕರವಾದ ಕರ್ಮಕಾಂಡದ ಪದ್ಧತಿಯನ್ನೇ ಖಂಡಿಸುವ, ಲಿಂಗಾಂಗಿ ವೈದಿಕ ಧರ್ಮೀಯರಾದ ಪರಮ ವೀರಶೈವರು, ತಪ್ತ ಲಿಂಗಾಂಕಿತ ಕ್ರೂರಪದ್ಧತಿಯನ್ನು ಖಂಡಿಸಿ ಅದರಿಂದ ದೂರವಿರುವವರು. ಈ ರಹಸ್ಯ ಶ್ರೀ ಶಂಕರರಿಗೆ ಆಗಿನ ಕಾಲದಲ್ಲಿ ತಿಳಿದಿರಲಿಲ್ಲವೆಂದು ಸ್ಪಷ್ಟಪಡುತ್ತೆ.

ಈ ಕಾರಣದಿಂದ ಸರ್ವಜ್ಞ ಮೂರ್ತಿಗಳಾದ ಶಿವಲಿಂಗೋದ್ಭವ ಆದಿ ಜಗದ್ಗುರು ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರು ಆದಿ ಶ್ರೀ ಶಂಕರಾಚಾರ್ಯರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಸಾಕ್ಷಾತ್ತಾಗಿ ಅನುಗ್ರಹಿಸುವಾಗ, ಶಿವಶಕ್ತಿ ಸಂಪುಟದಿಂದ ವಿರಾಜಿಸುವ ಲಿಂಗ ತತ್ವವನ್ನು ಮತ್ತು ಲಿಂಗಾಂಗಿ ಧರ್ಮದ ತಿರುಳನ್ನು ಸಮೀಚೀನವಾಗಿ ಬೋಧಿಸಿರುವರು.

# ಶ್ರೀ ಗುರುವಂಶ ಮಹಾ ಕಾವ್ಯ

ಶ್ರೀ ಗುರುವಂಶ ಮಹಾ ಕಾವ್ಯ, ಶ್ರೀ ಶೃಂಗೇರಿ ಮಹಾ ಸಂಸ್ಥಾನ ಮೂಲ ಪೀಠದ ಪ್ರಾಚೀನ ಅಧಿಕೃತ ಕಾವ್ಯಗಳಲ್ಲಿ ರತ್ನ ಪ್ರಾಯವಾದ ಮಹಾ ಕೃತಿ. ಕ್ರಿ. ಶ. 1705 ರಿಂದ 1741 ರ ಸುಮಾರು 36 ವರ್ಷ ಕಾಲ ಶ್ರೀ ಶೃಂಗೇರಿ ಶ್ರೀ ಶಾರದಾ ಪೀಠದ ಅಧಿಪತಿಗಳಾಗಿದ್ದ ಶ್ರೀ ಜಗದ್ಗುರು ಸಚ್ಚಿದಾನಂದ ಭಾರತಿ-2 ರವರು ದೈವ ಪ್ರೇರಣೆಯಂತೆ, ತಮ್ಮ ಘನ ಆಸ್ಥಾನ ವಿದ್ವಾಂಸರಾಗಿದ್ದ ವೇ॥ ಬ್ರಂ॥ ಕಾಶಿ ಲಕ್ಷ್ಮಣ ಶಾಸ್ತ್ರಿಗಳನ್ನುದ್ದೇಶಿಸಿ, ಆದಿ ಶ್ರೀ ಶಂಕರಾಚಾರ್ಯರನ್ನು ಮೊದಲು ಮಾಡಿ, ತಮ್ಮ ಕಾಲದವರವಿಗೆ, ತಮ್ಮ ಪೀಠಕ್ಕೆ ಅಧಿಪತಿಗಳಾಗಿ ಆಗಿ ಹೋಗಿರುವ ಮಹಾಚಾರ್ಯರ ಪ್ರವರಗಳನ್ನೊಳಗೊಂಡಂತೆ ಸತ್ಯಸುಂದರವಾದ ಒಂದು ಕೃತಿಯನ್ನು ರಚಿಸುವಂತೆ ಆಜ್ಞಾಪಿಸಿದರು, ಈ ಸಂಬಂಧವಾದ ವಿಷಯ ಈಗಾಗಲೇ ಹಿಂದಿನ ಅಧ್ಯಾಯ 25ರಲ್ಲಿ ಸಾಕಷ್ಟು ವಿವರಣೆಯಿಂದ ವಿವರಿಸಲಾಗಿದೆ. ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ಆಧಾರ ಬದ್ಧವಾಗಿ ಸುಮಾರು ಕ್ರಿ.ಶ. 1730ರಲ್ಲಿ ರಚಿಸಿದ ಸದರಿ ಮಹಾ ಕಾವ್ಯ ಕೃತಿಯನ್ನು, ಶ್ರೀ ಜಗದ್ಗುರುಗಳು ಕೂಲಂಕಷವಾಗಿ ಪರಿಶೀಲಿಸಿ, ಅತುಲಾನಂದದಿಂದ ಈ ಕೃತಿಯನ್ನು " ಶ್ರೀ ಗುರುವಂಶ ಕಾವ್ಯ " ವೆಂದು ನಾಮಕರಣ ಮಾಡಿ ಆನಂದಿಸಿದರು.

ಹತ್ತೊಂಬತ್ತು ಸರ್ಗಗಳಿಂದ ವಿರಾಜಿಸುವ ಈ ಮಹಾ ಕಾವ್ಯದ, 3ನೇ ಸರ್ಗದ 33ನೇ ಶ್ಲೋಕದ ಪ್ರವರಕ್ಕೆ ಸಂಬಂಧಪಟ್ಟ ವಿಷಯ ಪ್ರಕೃತ, ಆಳವಾಗಿ ವಿಚಾರಾರ್ಹವಾಗಿದೆ.

॥ ಶ್ರೀ ಚಂದ್ರಮೌಳೀಶ್ವರ ಲಿಂಗ ಮಸ್ಮೈ ।
ಸದ್ರತ್ನಗರ್ಭಂ ಗಣನಾಯಕಂಚ ॥
ಸ ವಿಶ್ವರೂಪಾಯ ಸುಸಿದ್ಧ ವತ್ತಂ ।
ದತ್ವಾ ನ್ಯಗಾದೀಚ್ಚಿರ ಮರ್ಚಯೇತಿ ॥

( ಗು. ಕಾ. ಸರ್ಗ 3 ಶ್ಲೋ. 33 )

॥ ಸುರೇಶ್ವರಾಚಾರ್ಯ ಸರಸ್ವತೀಂ ।
ತ್ವಂ ಸಂಪೂಜಯನ್ನಾಸ್ವ ಚಿರಾದಿ ಹೇತಿ ॥
ದತ್ವಾಭ್ಯನು ಜ್ಞಾಂ ವಿನತಾಯ ತಸ್ಮೈ ।
ಶಿಷ್ಯೈಃ ಸಮಸ್ತೈಃ ಸ್ವಜಗಾಮಕಾಂಚೀಂ ॥

( ಗು. ಕಾ. ಸ. 3 ಶ್ಲೋ. 34 )

ಮೇಲುಕ್ತವಾದ 33ನೇ ಶ್ಲೋಕದ ಪ್ರಕಾರ ಶ್ರೀ ರತ್ನಗರ್ಭ ಗಣಪತಿಯನ್ನೂ ಹಾಗೂ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನೂ ಆದಿ ಶ್ರೀ ಶಂಕರಾಚಾರ್ಯರಿಗೆ " ಸುಸಿದ್ಧ ದತ್ತಂ " ಎಂದು ಪ್ರತಿಪಾದಿಸಲಾಗಿದೆ. " ದತ್ತಂ " ಎಂಬ ಪದ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಸುಪ್ರಸಿದ್ಧರಾದ ಸಿದ್ಧರೆನಿಸಿದ ಶಿವಯೋಗಿ ಚಕ್ರವರ್ತಿ ಅನುಗ್ರಹಿಸಿದುದಾಗಿ ಸ್ಪಷ್ಟಪಡುತ್ತೆ. ಆದಿ ಶ್ರೀ ಶಂಕರಾಚಾರ್ಯರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗ, ನರ್ಮದಾ ನದಿಯಲ್ಲಿ ಸ್ನಾನ ಮಾಡುವಾಗ ಅವರಿಗೆ ದೊರಕಿತೆಂಬ ಹೇಳಿಕೆಗಳನ್ನು ಮತ್ತು ಕೈಲಾಸನಾಥನು ಅನುಗ್ರಹಿಸಿದನೆಂಬ, ವದಂತಿ ಮತ್ತು ಶ್ರೀ ಶಂಕರರು, ಕೈಲಾಸದಿಂದ ಬರುವಾಗ ತಮ್ಮೊಂದಿಗೆ ತಂದರೆಂಬ ಅದ್ವೈತಿಗಳ ವಾದ, ಇವೆಲ್ಲಾ ಸ್ವಕಪೋಲಕಲ್ಪಿತವೆಂದು ಹೇಳದೆ ವಿಧಿಯಿಲ್ಲ. ಮಹಾ ಗುರು ತನ್ನ ಆತ್ಮೀಯ ಶಿಷ್ಯನಿಗೆ ಪ್ರೇಮ ಪೂರಿತ ಭಾವದಿಂದ ಲಿಂಗವನ್ನು ಅವರ ನಿತ್ಯಾರಾಧನೆಗಾಗಿ ಹಾಗೂ ಆತ್ಮೋದ್ಧಾರಕ್ಕಾಗಿ ಕರುಣೆಯಿಂದ ಅನುಗ್ರಹಿಸುವುದನ್ನು " ದತ್ತಂ " ಎಂಬ ಶಬ್ದ ಸೂಚಿಸುತ್ತದೆ. ಶಿಷ್ಯನಿಗೆ ಶ್ರೀ ಗುರುವಿನ ವಿನಃ ಇನ್ಯಾರೂ ಶಿವಲಿಂಗವನ್ನು ಅನುಗ್ರಹಿಸಲು ಸಮರ್ಥರಲ್ಲವೆಂಬುದನ್ನು ವೈದಿಕ ಧರ್ಮ ಶಾಸ್ತ್ರಗಳು ಘಂಟಾಘೋಷವಾಗಿ ಸಾರುತ್ತಲಿವೆ. " ಸುಸಿದ್ಧ " ಈ ಶಬ್ದ ಎಂದಿದ್ದರೂ ಬ್ರಾಹ್ಮಣರಲ್ಲಿ ಪ್ರಚೋದನೆಗೊಳಿಸುವ, ನಾನಾರ್ಥಗಳಿಗೆ ಎಡೆಮಾಡಿ ಕೊಡುವ ದ್ವಂದ್ವಾರ್ಥಗರ್ಭಿತವಾದುದು. ಅಭಿಮಾನಗ್ರಸ್ಥರಾದ ವಿದ್ವಾಂಸರು " ಸುಸಿದ್ಧ " ಪದಕ್ಕೆ ತಮ್ಮದೇ ಆದ ವ್ಯಾಖ್ಯಾನಗಳನ್ನು ಹೊರಹೊಮ್ಮಿಸಿ ಆಂದೋಳನವನ್ನೆಬ್ಬಿಸುವರೆಂದು, ಗುರುವಂಶ ಕಾವ್ಯದ ಗ್ರಂಥಕರ್ತರು ಕ್ರಿ. ಶ. 1730ರಲ್ಲೇ ದೂರ ದೃಷ್ಟಿಯಿಂದ ಮುನಗಂಡು, ಇಂತಪ್ಪ ಅಪಾರ್ಥಗಳಿಗೆ ಅವಕಾಶ ಕೊಡಬಾರದೆಂದು ನಿಶ್ಚಯಿಸಿ, ಅವರೇ " ಸುಸಿದ್ಧ " ಪದಕ್ಕೆ ಸುಂದರವಾದ ಸತ್ಯಾರ್ಥ ಪ್ರಕಾಶದಿಂದ ಕೂಡಿರುವ ವ್ಯಾಖ್ಯಾನವನ್ನು ರಚಿಸಿರುವರು.

ಆಸ್ಥಾನ ವಿದ್ವಾನ್ ಶ್ರೀ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ಗುರುವಂಶ ಕಾವ್ಯದ 3ನೇ ಸರ್ಗ, ಶ್ಲೋಕ 33ರಲ್ಲುಕ್ತವಾದ " ಸುಸಿದ್ಧ ದತ್ತಂ " ಎಂಬ ಪದಪುಂಜಕ್ಕೆ ಈ ಶ್ಲೋಕದಡಿಯಲ್ಲಿ ಸ್ವತಃ ವ್ಯಾಖ್ಯಾನವನ್ನು ನೀಡುತ್ತಾ, ಸುಸಿದ್ಧರಾರೆಂಬುದನ್ನು ವಾದಕ್ಕೆಡೆಯಿಲ್ಲದ ರೀತಿಯಲ್ಲಿ ವಿವರಿಸುತ್ತಾ–

**॥ ಸುಸಿದ್ಧೇನ ರೇವಣಸಿದ್ಧ ಮಹಾಯೋಗಿನಾ ದತ್ತಂ ಶ್ರೀ ಚಂದ್ರ ಮೌಳೀಶ್ವರ ಲಿಂಗಂ । ಸದ್ರತ್ನಂ ಮಾಣಿಕ್ಯಂ ಗರ್ಭೇ ಯಸ್ಯಸಃ । ತತೋಕ್ತಸ್ಥಂ ಗಣನಾಯಕಂ । ವಿಘ್ನೇಶ್ವರಂಚ ॥**

ಎಂಬುದಾಗಿ ಪ್ರಕಾಶಗೊಳಿಸಿದ್ದಾರೆ. ಈ ವ್ಯಾಖ್ಯಾನ ಶ್ರೀ ಶೃಂಗೇರಿ ಸಂಸ್ಥಾನದ ಮೂಲ ಅಧಿಕೃತವಾದ ಗ್ರಂಥಾಧಾರಗಳನ್ನೊಳಗೊಂಡಂತೆ ವಿರಾಜಮಾನ ವಾಗಿದೆ. ಇಲ್ಲಿ " ಸುಸಿದ್ಧ " ರೆಂದರೆ ರೇವಣಸಿದ್ಧರೆಂದೇ ಉಲ್ಲೇಖಿಸಿರುತ್ತಾರೆ. ಅಂದ ಬಳಿಕ " ಸುಸಿದ್ಧ ದತ್ತಂ " ಎಂದರೆ " ರೇವಣಸಿದ್ಧ ದತ್ತಂ " ಎಂಬುದು ಸ್ಪಷ್ಟವಿರುತ್ತೆ. ಯಾವ ರೇವಣಸಿದ್ಧರೆಂಬುದು ವಿಮರ್ಶಿಸಬೇಕಾಗಿದೆ.

ಷಟ್ಸ್ಥಲ ಸಿದ್ಧಾಂತ ಪ್ರತಿಪಾದಕವಾದ ಹಾಗೂ ನಿಗಮಾಗಮಗಳಲ್ಲಿ ಸ್ತುತ್ಯವಾದ ಪರಮ ವೀರಶೈವ ಸಿದ್ಧಾಂತವನ್ನು ಜಗದಾದಿಯಿಂದ ತ್ರಿಭುವನಂಗಳಲ್ಲೂ ವಿಶೃತಗೊಳಿಸಿ, ಆಚರಿಸಿ ಬೋಧಿಸಿ, ಸುವ್ಯವಸ್ಥಿತವಾಗಿ ಶಿವನಾಣತಿಯಂತೆ ಸ್ಥಾಪಿಸಿದ ತ್ರಿಭುವನಾಚಾರ್ಯವರೇಣ್ಯರಾದ ಶ್ರೀ ಆದಿ ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳಲ್ಲಿ ಪ್ರಥಮಾಚಾರ್ಯರೂ, ಪ್ರಥಮಾಶ್ರಮ ಸಂಭ್ರಮರೂ ಆದ ಶ್ರೀ ಜಗದ್ಗುರು ರೇಣವಸಿದ್ಧರು, ಶಿವನರಿಯುವಂತೆ, ಭುವನಾಂಡ ಕೋಟಿಗಳಲ್ಲಿ ಸುಪ್ರಸಿದ್ಧರಾದ " ರೇವಣಸಿದ್ಧರೆಂದು " ನಿಗಮಾಗಮಗಳಲ್ಲಿ ವಿಶ್ರುತರಿರುವರು, " ಜಗದೇಕೈಕ ಆದಿ ರೇವಣಸಿದ್ಧರೆಂದರೆ " ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಶಿವ ಲಿಂಗೋದ್ಭವ ಮಂಗಳ ಮೂರ್ತಿ ಆದಿ ಶ್ರೀ ಜಗದ್ಗುರು ರೇವಣಸಿದ್ಧರೆಂಬುದೇ, ಆಸ್ಥಾನ ವಿದ್ವಾನ್ ಕಾಶಿ ಲಕ್ಷ್ಮಣ ಶಾಸ್ತ್ರಿಗಳ ಅಭಿಮತವೆಂಬುದು ನಿರ್ವಿವಾದವೆನಿಸಿದ ವಿಷಯ. ಶಿವಾಗಮ ಕಾಲಗಳಿಂದಲೂ " ರೇವಣಸಿದ್ಧ " ಎಂಬ ಹೆಸರು ಜಗದಾದ್ಯಂತ ವ್ಯಾಪಕವಾಗಿ ಹರಡಿ ಜನಕೋಟಿಗಳ ಮಧ್ಯೆ ವ್ಯಾಪಕವಾಗಿ ಮನನೀಯ ವೆನಿಸಿವೆ. ವಿಶೇಷತಃ ದ್ವಾಪರ ಯುಗಾರಂಭ ಕಾಲದಿಂದಲೂ " ರೇಣುಕ - ರೇವಣಸಿದ್ಧ " ಎಂಬ ದಿವ್ಯ ನಾಮಂಗಳು ಹರಿ ಬ್ರಹ್ಮೇಂದ್ರಾದಿ ಸುರಾಸುರ, ನರರಾದಿಯಾಗಿ ಸರ್ವರಿಗೂ ಪೂಜನೀಯವಾದ, ಮಲತ್ರಯ ಧ್ವಂಸಕ, ಮುಕ್ತಿ ಪ್ರದವಾಗಿ ವಿರಾಜಿಸಿ ಮುಮುಕ್ಷುಗಳ ಹೃನ್ಮಂದಿರವನ್ನು ಸದಾ ಬೆಳಗು ವಂಥವುಗಳಾಗಿವೆ.

ಮುನಿಕುಲ ಚಂದ್ರರೆನಿಸಿದ ಕಲಸೋದ್ಭವ ಮಂಗಳ ಮೂರ್ತಿ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳು ರೇಣುಕರನ್ನು ಸ್ತುತಿಸುತ್ತಾ-

॥ ರೇಣುಕಂ ತ್ವಾಂ ವಿಜಾನಾಮಿ । ಗಣನಾಥಂ ಶಿವ ಪ್ರಿಯಂ ॥

ಎಂದು ಸ್ತುತಿಸಿರುವರು.

ಶ್ರೀಮದ್ಭಗವತ್ಪಾದಾಚಾರ್ಯವರ್ಯರೆನಿಸಿದ ಶ್ರೀ ಜಗದ್ಗುರು ರೇಣುಕರನ್ನು

ಲಂಕಾಧೀಶನಾದ ಶ್ರೀ ವಿಭೀಷಣ ಚಕ್ರವರ್ತಿಯು ಪ್ರಾರ್ಥನಪೂರ್ವಕ ತನ್ನರಮನೆಗೆ ಉತ್ಸವ ಪೂರ್ವಕ ಬಿಜಯಂಗೈಸಿಕೊಂಡು. ಪುಳುಕಾಂಕಿತ ಭಕ್ತಿಭಾವದಿಂದ-

॥ ತಮಾಗತಂ ಮಹಾ ಭಾಗಂ । ಸರ್ವಾಗಮ ವಿಶಾರದಂ ।
ವಿಭೀಷಣಃ ಸಮಾಲೋಕ್ಯ । ಸೌದಂ ಪ್ರಾವೇಶಯ ನ್ನಿಜಂ ॥
॥ ಭದ್ರಾಸನೇ ಮಹಾರಮ್ಯೇ । ನಿವೇಶ್ಯ ಗಣ ನಾಯಕಂ ।
ಅರ್ಘ್ಯ ಪಾದ್ಯಾದಿ ಭಿಃ ಸರ್ವೈ । ರುಪಚಾರೈರ ಪೂಜಯುತ್ ॥

ಈ ಪ್ರಕಾರ ರಾಜ ಮರ್ಯಾದೆಗಳಿಂದ ಅತ್ಯಂತ ಭಕ್ತಿಭಾವದಿಂದ ಶ್ರೀ ಮಹಾ ಗುರುವಿನ ಶ್ರೀ ಪಾದಪೂಜೆಯನ್ನು ಮಾಡಿದ ವಿಭೀಷಣ ಚಕ್ರವರ್ತಿ, ಪರಮಾಚಾರ್ಯ ರನ್ನು ಸ್ತುತಿಸುತ್ತಾ-

॥ ರೇಣುಕಂ ತ್ವಂ ಗಣಾಧೀಶ, ಶಿವ ಜ್ಞಾನ ಪರಾಯಣ ।

ಎಂಬುದಾಗಿ ಕೊಂಡಾಡಿ ಶರಣಾಗತನಾಗಿರುವನು.

ಭಗವಾನ್ ಶ್ರೀ ವೇದವ್ಯಾಸಾಚಾರ್ಯರು ತಮ್ಮಿಂದ ರಚಿತವಾದ ಮಹಾ ಸ್ಕಾಂದದಲ್ಲಿ ರೇವಣಸಿದ್ಧರನ್ನು ವಂದಿಸಿ ಪ್ರಶಂಸಿಸುತ್ತಾ-

॥ ರೇವಣಸಿದ್ಧಸ್ಯ ಜನನಂ ಕೊಲ್ಲೀಪಾಕಿ ಪುರೋತ್ತಮೆ ।
ಆವಾಸಃ ಕದಳೀ ಪುರೇ ॥

ಎಂದು ವರ್ಣಿಸಿರುವರು.

" ರೇಣುಕ-ರೇವಣ ", ಈ ಎರಡೂ ಜಗದಾದಿಯಿಂದಲೂ ಶ್ರೀ ಆದಿ ಜ॥ ರೇವಣಸಿದ್ಧರಿಗೆ ಅನ್ವಯಿಸುವ ಪ್ರವಿತ್ರವಾದ ನಾಮಗಳೆಂದರಿಯಬೇಕು. ಯುಗ ಯುಗಾಂತರಗಳಿಂದ ತ್ರಿಭುವನಂಗಳಲ್ಲೂ ಪ್ರಸಿದ್ಧವಾಗಿ ವ್ಯಾಪಕವಾದ ಮಹಾ ಗುರುವಿನ ನಾಮ '' ರೇವಣಸಿದ್ಧ '', ಇದು ಸಮಸ್ತ ಸುರೌಘವಂದಿತ ಪದಯುಗನ ಮಂಗಳ ನಾಮ ರೇವಣಸಿದ್ಧ. ಶ್ರೀ ಜಗದಾದಿ ರೇವಣಸಿದ್ಧರು " ಸಿದ್ಧ ಸ್ತೋಮ ಸುರಧ್ರುಮಃ " ಎಂದೂ ಮತ್ತು " ಸಿದ್ಧಾ ನಾಂ ಸಾರ್ವ ಭೌಮಃ ", ಎಂದರೆ ವಿಶ್ವದಲ್ಲಿನ ಸಮಸ್ತ ಸಿದ್ಧರ ಕುಲಕ್ಕೆ ಸಾರ್ವಭೌಮರು ಶ್ರೀ ಆದಿ ರೇವಣಸಿದ್ಧರು ಎಂದೂ ಮತ್ತು ಅಖಿಲ ಸಿದ್ಧರ ಸಮುದಾಯಕ್ಕೆ ಕಲ್ಪವೃಕ್ಷ ಸದೃಶರೆಂದು ಸ್ತುತ್ಯರಿರುವರು. ಹೆಚ್ಚೇನು ಶ್ರೀ ಆದಿ ಜಗದ್ಗುರು ರೇವಣಸಿದ್ಧರು

ಚಲಿಸುವ ದಿವ್ಯ ಪ್ರಜ್ಞಾನಮಯ ಕಲ್ಪವೃಕ್ಷವೆಂದು ಜಗತ್ತಿನಲ್ಲಿ ಧರ್ಮೋದ್ಧಾರಾರ್ಥ ಸಮಸ್ತ ಭಕ್ತೋದ್ಧಾರಾರ್ಥ ತಿರುಗಾಡುವ ದಿವ್ಯ ಮಂತ್ರಮಯ ಶಂಭು ಮೂರ್ತಿ ಶ್ರೀ ಜಗದ್ಗುರು ರೇವಣಸಿದ್ಧರೆಂದು ವಿದಿತವಿದೆ.

ಇಂತಪ್ಪ ಮಹಾ ಮಹಿಮಾನ್ವಿತರಾದ ಆದಿ ಶ್ರೀ ಜಗದ್ಗುರು ರೇವಣಸಿದ್ಧರನ್ನು " ಸುಸಿದ್ಧ ದತ್ತಂ " ಅರ್ಥಾತ್ " ರೇವಣಸಿದ್ಧ ದತ್ತಂ " ಎಂದೇ ಶ್ರೀ ಗುರು ವಂಶ ಮಹಾ ಕಾವ್ಯ ಕರ್ತೃ ವೇ॥ ಬ್ರಂ॥ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ತಮ್ಮ ಮಹಾ ಸಂಸ್ಥಾನದ ಪ್ರಾಚೀನ ಗ್ರಂಥಾಧಾರಗಳನ್ನೊಳಗೊಂಡಂತೆ ಮನಗಂಡು " ಸುಸಿದ್ಧ " ಎಂದರೆ ''ರೇವಣಸಿದ್ಧರೆಂದೇ'' ಸತ್ಯಾರ್ಥವನ್ನು ಸ್ಪಷ್ಟವಾಗಿ ಉಲ್ಲೇಖಿಸಿರುತ್ತಾರೆ.

ಶ್ರೀ ಶೃಂಗೇರಿ ಜಗದ್ಗುರು ವಿದ್ಯಾರಣ್ಯರು ತಾವು ರಚಿಸಿರುವ, " ಪಿತಾಮಹ ಸಂಹಿತೆಯಲ್ಲಿ " ಭಗವತ್ಪಾದ ಆದಿ ಜಗದ್ಗುರು ಶ್ರೀ ರೇವಣಸಿದ್ಧರ ಮಹಿಮೆಯನ್ನು ಸ್ವಾನುಭವದಲ್ಲಿ ಮನಗಂಡು; ತಮ್ಮ ಗುರುವರ್ಯ ಶ್ರೀ ಜಗದ್ಗುರು ಭಾರತಿಕೃಷ್ಣ ಯತಿಯವರ ಅಮೃತ ಹಸ್ತದಿಂದ ತಮಗೆ ಪ್ರಾಪ್ತಿಯಾದ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಪದ್ಧತಿಯಂತೆ ಅನುದಿನ ಪೂಜಿಸಿದ ಪ್ರಭಾವದಿಂದಾಗಿ ॥ ತತಃ ಸ ರೇವಣಾಸಿದ್ಧ ಸಂಪ್ರದಾಯ ಪ್ರವರ್ತಿನಾಂ । ಶಂಕರಾಚಾರ್ಯಾಣಾಂ ಪಾರಂಪರ್ಯ ಕ್ರಮಾಗತಂ ॥ ಎಂಬುದಾಗಿ ಕ್ರಿ. ಶ. 14ನೇ ಶತಾಬ್ಧಿಯಲ್ಲಿ ಭಕ್ತಿ ಪೂರ್ವಕ ಘೋಷಿಸಿರುತ್ತಾರೆ, ಕಾಶಿ ಲಕ್ಷ್ಮಣ ಶಾಸ್ತ್ರಿಗಳು ಇದನ್ನು ಮನಗಂಡು, ಮೇಲ್ಕಂಡ " ಸುಸಿದ್ಧ ದತ್ತಂ " ಎಂದರೆ " ರೇವಣಸಿದ್ಧ ದತ್ತಂ " ಎಂಬ ನಿತ್ಯ ಸತ್ಯ ಸುಂದರವಾದ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಶ್ರೀ ಶೃಂಗೇರಿ ಸಂಸ್ಥಾನದ ಅಂದಿನ ಧರ್ಮಾಧಿಕಾರಿ ಕುಣಿಗಲ್ ವೇ॥ ಬ್ರಂ॥ ಶ್ರೀ ರಾಮಾಶಾಸ್ತ್ರಿಗಳು ಇದನ್ನು ಪರಿಶೀಲಿಸಿ ಒಪ್ಪಿದ ನಂತರ, ಅಂದಿನ ಶ್ರೀ ಶೃಂಗೇರಿ ಶಾರದಾ ಪೀಠಾಧಿಪತಿಗಳಾದ ಶ್ರೀ ಜಗದ್ಗುರು ಸಚ್ಚಿದಾನಂದ ಭಾರತಿ-2ರವರು ಸಹ ಆಮೂಲಾಗ್ರವಾಗಿ ಸ್ವತಃ ಈ ಗ್ರಂಥವನ್ನು ಪರಿಶೀಲಿಸಿ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದ ನಂತರ, ಗುರುವಂಶ ಕಾವ್ಯದ ಸತ್ಯಾಂಶ, ಶ್ರೀ ಶೃಂಗೇರಿ ಪೀಠದ ವತಿಯಿಂದಲೇ ಜಗತ್ತಿಗೆ ಹೊರಬಿದ್ದಿರುತ್ತೆ. ಮೂಲ ವ್ಯಾಖ್ಯಾನದಲ್ಲಿ ಗೋವಿಂದ ಭಗವತ್ಪಾದರೆಂಬ ಶಬ್ಧವಿಲ್ಲ.

ಇತ್ಯಾದಿ ಪ್ರಸಿದ್ಧ ಪ್ರಮುಖ ಕಾರಣಗಳಿಂದ ಶ್ರೀ ಶೃಂಗೇರಿ ಮಹಾ ಸಂಸ್ಥಾನದ ಪ್ರಾಚೀನ ಗ್ರಂಥಾಧಾರಗಳನ್ನೇ ಆಧಾರವಾಗಿರಿಸಿ, ಆ ವ್ಯಾಖ್ಯಾನಗಳನ್ನು ಪೂರ್ಣ ಸತ್ಯವೆಂದು ನಂಬಿ, " ಸುಸಿದ್ಧ ದತ್ತಂ " ಎಂದರೆ ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ, ಶಿವಲಿಂಗೋದ್ಭವ ಮಂಗಳ ಮೂರ್ತಿ " ಆದಿ ಜಗದ್ಗುರು ರೇವಣಸಿದ್ಧ ದತ್ತಂ " ಎಂಬುದು ನಿತ್ಯ ಸತ್ಯವಾದ ಅಂಶವೆಂಬುದು ಭಾನುಕೋಟಿ

ಪ್ರಕಾಶಮಾನವಾಗಿ ಸ್ಪಷ್ಟವಿರುತ್ತೆ. ಈ ಕಾರಣದಿಂದ ಅಂದಿನಿಂದ ಈವರವಿಗೂ ಯಾವ ಚತುರಾಮ್ನಾಯ ಮಠಾಧೀಶ್ವರರಾಗಲಿ ಅಥವಾ ಶಿವಕಂಚಿ ಶ್ರೀ ಕಾಮ ಕೋಟಿ ಮಠಾಧೀಶ್ವರರಾಗಲಿ, ಮೇಲ್ಕಂಡ "ಸುಸಿದ್ಧ ದತ್ತಂ" ಅಂದರೆ ರೇವಣ ಸಿದ್ಧ ದತ್ತಂ ಎಂಬ ಕಾಶಿ ಲಕ್ಷ್ಮಣ ಶಾಸ್ತ್ರಿಗಳ ಘನ ವ್ಯಾಖ್ಯಾನವನ್ನು ಪ್ರಶ್ನಿಸಿಲ್ಲ, ಅಲ್ಲಗಳೆದೂ ಇಲ್ಲ. ವಿಪರೀತಾರ್ಥವನ್ನೂ ಮಾಡಿಲ್ಲ. ಶ್ರೀ ಜಗದ್ಗುರುಗಳ ಈ ಬಗೆಗೆ "ಮೌನಂ ಸಮ್ಮತಂ" ಎಂಬುದು ಸ್ವಾರಸ್ಯವಿರುತ್ತೆ.

## ದ್ವಿತೀಯ ಭಾಗ

ಕೆಲವರು ಶ್ರೀ ಶಂಕರಾಚಾರ್ಯರಿಗೂ ಶ್ರೀ ರೇವಣಸಿದ್ಧರಿಗೂ ಯಾವ ಸಂಬಂಧವೂ ಇಲ್ಲವೆಂದೂ, ಶ್ರೀ ಚಂದ್ರಮೌಳೀಶ್ವರ ಲಿಂಗವು ಶ್ರೀ ರೇಣುಕಾಚಾರ್ಯ ರಿಂದ ಕೊಡಲ್ಪಟ್ಟಿಲ್ಲವೆಂದೂ, ಇದು ನಂಬಲಿಕ್ಕೆ ಅರ್ಹವಾದುದಲ್ಲವೆಂದೂ ನುಡಿಯುತ್ತಿರುವರು. ಇದು ಅವರ ಭ್ರಮೆಯಲ್ಲದೆ ಯಥಾರ್ಥವಲ್ಲ ; ಏಕೆಂದರೆ- ಸಿದ್ಧನಾಥಶಿವಾಚಾರ್ಯರಿಂದ ರಚಿಸಲ್ಪಟ್ಟ ರೇಣುಕ ವಿಜಯದಲ್ಲಿ ಚಂದ್ರಮೌಳೀಶ್ವರ ಲಿಂಗ ಪ್ರದಾನ ವಿಷಯವು ವಿಶದವಾಗಿ ಬರೆಯಲ್ಪಟ್ಟಿರುವುದು ಮತ್ತು ಈ ವಿಷಯವು ಶಿವತತ್ತ್ವ ರತ್ನಾಕರ, ವೇದಾಂತಸಾರವೀರಶೈವ ಚಿಂತಾಮಣಿ ಮೊದಲಾದ ಗ್ರಂಥಗಳಲ್ಲಿಯೂ ಸಹ ಪ್ರತಿಪಾದಿಸಲ್ಪಟ್ಟಿರುವುದು. ಅಲ್ಲದೆ ಈಗ್ಗೆ ನೂರಾರು ವರ್ಷಗಳ ಪೂರ್ವದಲ್ಲಿ ಶ್ರೀ ಶೃಂಗೇರಿ ಮಠಕ್ಕೆ ಅಧಿಪತಿಗಳಾಗಿದ್ದ ಶ್ರೀ ಸಚ್ಚಿದಾನಂದ ಭಾರತಿ-2 ಸ್ವಾಮಿಗಳೆಂಬ ಮಹನೀಯರು, ಆ ಕಾಲದಲ್ಲಿ ತಮ್ಮ ಆಸ್ಥಾನ ವಿದ್ವಾಂಸರಾಗಿದ್ದ ಕಾಶಿ ಲಕ್ಷ್ಮಣ ಶಾಸ್ತ್ರಿಗಳೆಂಬ ಕವಿಪುಂಗವರಿಂದ ಆದಿ ಶಂಕರಾಚಾರ್ಯರಾದಿಯಾಗಿ ಸಕಲ ಸ್ವಾಮಿಗಳವರ ಚರಿತ್ರವನ್ನು "ಗುರುವಂಶ ಕಾವ್ಯ" ಎಂಬ ಹೆಸರಿನಿಂದ ಸಂಸ್ಕೃತ ಭಾಷೆಯಲ್ಲಿ ಪದ್ಯ ರೂಪವಾಗಿ ಬರೆಯಿಸಿದ್ದಾರೆ. ಈ ಗ್ರಂಥವು ಶೃಂಗೇರಿ ಮಠದ ಗ್ರಂಥಾಲಯದಲ್ಲಿ ದೊರೆತಿದ್ದು. ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನಧರ್ಮಾಧಿಕಾರಿ ಗಳಾದ ವಿದ್ಯಾವಿಶಾರದ ವೇ॥ ಕುಣಿಗಲ್ ರಾಮಾಶಾಸ್ತ್ರಿಗಳವರಿಂದ ಪರಿಶೋಧಿತವಾಗಿ ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ ಶ್ರೀರಂಗದಲ್ಲಿರುವ ವಾಣೀವಿಲಾಸ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿದೆ. ಈ ಗ್ರಂಥದ ಮೂರನೆಯ ಸರ್ಗದಲ್ಲಿ-

ಶ್ರೀ ಶಂಕರಾಚಾರ್ಯರು ಭರತ ಖಂಡವನ್ನೆಲ್ಲ ಸಂಚರಿಸಿ ಕಾಶ್ಮೀರ ದೇಶಕ್ಕೆ ಹೋಗಿ ಅಲ್ಲಿದ್ದ ಶಾರದಾ ದೇವಿಯನ್ನು ತಂದು ಶೃಂಗೇರಿಯಲ್ಲಿ ಸ್ಥಾಪಿಸಿದರೆಂದೂ ಅನಂತರ ತಾವು ಕಾಂಚಿ ಕ್ಷೇತ್ರಕ್ಕೆ ಹೊರಡಲು ಸಿದ್ಧರಾಗಿ ಸುರೇಶ್ವರಾಚಾರ್ಯರಿಂದ

ತಮ್ಮ ಪ್ರಥಮ ಶಿಷ್ಯನಿಗೆ ಶೃಂಗೇರಿ ಮಠದ ಪಟ್ಟವನ್ನು ಕಟ್ಟಿದರೆಂದೂ, ಆಮೇಲೆ ಸುರೇಶ್ವರಾಚಾರ್ಯರಿಗೆ " ಎಲೈ ಸುರೇಶ್ವರಾಚಾರ್ಯನೇ ! ನೀನು ಶ್ರೀ ರೇಣುಕಾಚಾರ್ಯರು ನನಗೆ ಮೊದಲು ಅನುಗ್ರಹಿಸಿರುವ **ಶ್ರೀ ಚಂದ್ರಮೌಳೀಶ್ವ ಲಿಂಗವನ್ನು ಮತ್ತು ರತ್ನಗರ್ಭ ಗಣಪತಿಯನ್ನೂ ಪೂಜಿಸು** " ಎಂದು ಆಜ್ಞೆಯನ್ನು ಮಾಡಿ ಕಾಂಚೀಕ್ಷೇತ್ರಕ್ಕೆ ತೆರಳಿದರೆಂದೂ ಹೇಳಲ್ಪಟ್ಟಿರುತ್ತದೆ. ಆ ಗ್ರಂಥದ ಶ್ಲೋಕಗಳು ಈ ಕೆಳಗೆ ಉದಾಹರಿಸಲ್ಪಟ್ಟಿವೆ. ಆಧಾರಕ್ಕಾಗಿ ಪುನಃ ಇಲ್ಲಿ " **ಶ್ರೀ ರೇಣುಕ ವಿಜಯ ಮಹಾ ಪುರಾಣದಿಂದ** " ಸಂಗ್ರಹಿಸಲಾಗಿದೆ :-

ಶ್ರೀ ಚಂದ್ರಮೌಳೀಶ್ವರಲಿಂಗಮಸ್ಮೈ ಸದ್ರತ್ನಗರ್ಭಂ ಗಣ ನಾಯಕಂಚ ।
ಸ ವಿಶ್ವರೂಪಾಯ ಸುಸಿದ್ಧದತ್ತಂ ದತ್ವಾ ನ್ಯಗಾದೀಚ್ಚಿರಮರ್ಚಯೇತಿ ॥

ಸುರೇಶ್ವರಾಚಾರ್ಯ ಸರಸ್ವತೀಂ ತ್ವಂ ಸಂಪೂಜಯನ್ನಾಸ್ಸ್ವ ಚಿರಾದಿಹೇತಿ ।
ದತ್ವಾಭ್ಯನುಜ್ಞಾಂ ವಿನತಾಯ ತಸ್ಮೈ ಶಿಷ್ಯೈಸ್ಸಮಸ್ತೈಸ್ಸಜಗಾಮ
ಕಾಂಚೀಂ ॥ 33 ॥

33ನೆಯ ಪದ್ಯದಲ್ಲಿರತಕ್ಕ " ಸುಸಿದ್ಧ ದತ್ತಂ " ಎಂಬ ಪದಕ್ಕೆ-

" ಸುಸಿದ್ಧೇನ ರೇವಣಸಿದ್ಧ ಮಹಾಯೋಗಿನಾ ದತ್ತಂ ಶ್ರೀ ಚಂದ್ರಮೌಳೀಶ್ವರ ಲಿಂಗಂ ಸದ್ರತ್ನಗರ್ಭಂ ಸದ್ರತ್ನಂ ಮಾಣಿಕ್ಯಂ ಗರ್ಭೇ ಯಸ್ಯ ಸಃ ತಥೋಕ್ತಸ್ತಂ ಗಣನಾಯಕಂ ವಿಘ್ನೇಶ್ವರಂಚ ".

ಎಂದು ಈ ಗ್ರಂಥವನ್ನು ರಚಿಸಿದ ಕವಿಗಳೇ ಸಂಸ್ಕೃತದಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾರೆ. ಅಲ್ಲದೇ ಈ ಚಂದ್ರಮೌಳೀಶ್ವರ ಲಿಂಗದ ವಿಷಯವು ಇದೇ ಕಾವ್ಯದ ಆರನೆಯ ಸರ್ಗದಲ್ಲಿಯೂ ಬಂದಿರುವುದು. ಈ ಗ್ರಂಥಕರ್ತರು ಗ್ರಂಥಾದಿಯಲ್ಲಿ-

ಪ್ರಾಯೇಣಾನ್ವಯ ಮಾರ್ಗೇಣ ವ್ಯಾಖ್ಯಾಯತ ಇಯಂ ಕೃತಿಃ ।
ಪ್ರಾಚಾಮಸಮ್ಮತಂ ನೈವ ಲಿಖ್ಯತೇತ್ರ ನಚಾಧಿಕಂ ॥

ಎಂದು ಪ್ರತಿಜ್ಞೆಯನ್ನು ಮಾಡಿ, ಪ್ರಾಚೀನ ಗ್ರಂಥಗಳಿಗೆ ಸಮ್ಮತವಾದ ವಿಷಯವನ್ನೇ ಬರೆಯುತ್ತೇನೆಂದು ಹೇಳಿರುವುದರಿಂದ, ಶಂಕರಾಚಾರ್ಯರ ವಿಷಯಕಗಳಾದ ಪ್ರಾಚೀನ ಗ್ರಂಥಗಳಲ್ಲಿ ಚಂದ್ರಮೌಳೀಶ್ವರ ಲಿಂಗ ಪ್ರದಾನ ವಿಷಯವು ವಿಶದವಾಗಿ ಬರೆಯಲ್ಪಟ್ಟಿರಬಹುದೆಂದು ತೋರುತ್ತದೆ. ಶಂಕರಾಚಾರ್ಯರ ವಿಷಯದಲ್ಲಿ " **ಬೃಹಚ್ಛಂಕರ ವಿಜಯ** " ವೆಂಬ ಗ್ರಂಥವು ಪ್ರಾಚೀನ ಪಂಡಿತರಿಂದ

ಬರೆಯಲ್ಪಟ್ಟಿರುವುದೆಂದೂ, ಆ ಗ್ರಂಥದಲ್ಲಿ ರೇವಣಸಿದ್ಧ ಶಂಕರಾಚಾರ್ಯರ ಸಂವಾದ ರೂಪವಾದ "ಸಿದ್ಧ ಶಂಕರ ಸಂವಾದ" ವೆಂಬುದೊಂದು ಭಾಗವುಂಟೆಂದೂ ಪ್ರವಂತಿಯುಂಟು.

ಮದ್ರಾಸ್ ಗೌರ್ನಮೆಂಟ್ ಸೀನಿಯರ್ ಟ್ರಾನ್ಸ್‌ಲೇಟರರಾದ ಮ॥ ರಾ॥ ಬಿ. ರಾಮರಾವ್, ಎಂ.ಎ: ಎಲ್‌ಎಲ್.ಬಿ; ಇವರು ಮತ್ತು ಮದ್ರಾಸ್ ಗೌರ್ನಮೆಂಟ್ ಓರಿಯಂಟಲ್ ಲೈಬ್ರೆರಿಯ ಅ॥ ಲೈಬ್ರೆರಿಯನ್ನರಾದ ಮ॥ ರಾ॥ ವಿದ್ವಾನ್ ಪಿ. ಸುಂದರ ಶಾಸ್ತ್ರಿಯರ್ ಇವರು "ಶಿವತತ್ತ್ವ ರತ್ನಾಕರ" ವೆಂಬ ಉದ್ಗ್ರಂಥವನ್ನು ದೇವನಾಗರೀ ಲಿಪಿಯಲ್ಲಿ ಮುದ್ರಣ ಮಾಡಿಸಿ, ಮೈಸೂರು ಶ್ರೀಮನ್ಮಹಾರಾಜರವರ ಸನ್ನಿಧಿಗೆ ಸಮರ್ಪಿಸಿದ್ದಾರೆ. ಈ ಗ್ರಂಥದ ನಾಲ್ಕನೆಯ ಕಲ್ಲೋಲದ ಹನ್ನೆರಡನೆಯ ತರಂಗದಲ್ಲಿ ವಿದ್ಯಾರಣ್ಯರ ವಿಷಯವನ್ನು ಬರೆಯುವಾಗ್ಗೆ—

ತತಃ ಸ ರೇವಣಾಸಿದ್ಧ ಸಂಪ್ರದಾಯ ಪ್ರವರ್ತಿನಾಂ ।
ಶಂಕರಾಚಾರ್ಯ ವರ್ಯಾಣಾಂ ಪಾರಂಪರ್ಯಕ್ರಮಾಗತಂ ॥ 9 ॥

ಸನ್ಯಾಸಿನಮುಪಾಶ್ರಿತ್ಯ ವಿನಯಾವನತೋಽಧಿಕಂ ।
ವೃತ್ತಾಂತಮಖಿಲಂ ತಸ್ಮೈಯತಯೇ ಸ್ವಂ ವ್ಯಜಿಜ್ಞಪತ್ ॥ 10 ॥

ಎಂದೂ,

ರೇವಣಾಸಿದ್ಧ ಸಂಪ್ರಾಪ್ತಂ ಚಂದ್ರಮೌಳೀಶಮಪ್ಯದಾತ್ ।
ಅಖ್ಯಾಪನೇನ ಲಿಂಗೇನ ತವಾಭೀಷ್ಟಾಪ್ತಿರಿತ್ಯಪಿ ॥

ಎಂದೂ ಬರೆಯಲ್ಪಟ್ಟಿದೆ. ಈ 12ನೆಯ ತರಂಗದಿಂದ ತಿಳಿದು ಬರುವುದೇನೆಂದರೆ-ಶಿವಧರ್ಮನೆಂಬ ಬ್ರಾಹ್ಮಣನು ಬಡತನದ ವ್ಯಸನದಿಂದ ರೇವಣಸಿದ್ಧ ಸಾಂಪ್ರದಾಯಿಕರಾದ ಶ್ರೀ ಶಂಕರಾಚಾರ್ಯರ ಪೀಠಕ್ಕೆ ಅಧಿಪತಿಗಳಾಗಿದ್ದ ವಿದ್ಯಾಶಂಕರ ತೀರ್ಥಸ್ವಾಮಿಗಳವರಲ್ಲಿ ಬಂದು ತನ್ನ ನಿಜ ಸ್ಥಿತಿಯನ್ನು ಹೇಳಿಕೊಂಡನೆಂದೂ, ಶ್ರೀ ಸ್ವಾಮಿಗಳವರು ಆತನಿಗೆ ಶ್ರೀ ಚಕ್ರವನ್ನನುಗ್ರಹಿಸಿ ಅದನ್ನು ಪೂಜಿಸಲು ಅಪ್ಪಣೆಯನ್ನು ಮಾಡಿದರೆಂದೂ, ಆ ಶ್ರೀ ಚಕ್ರಪೂಜೆಯ ಸಾಮರ್ಥ್ಯದಿಂದಲೇ ಆತನು ಮಹಾ ಜ್ಞಾನಿಯಾಗಿ ಆ ಸ್ವಾಮಿಗಳವರಿಂದ ಸನ್ಯಾಸ ದೀಕ್ಷೆಯನ್ನು ಪಡೆದುಕೊಂಡು ವಿದ್ಯಾರಣ್ಯನೆಂಬ ನಾಮಧೇಯದಿಂದ ಪ್ರಸಿದ್ಧನಾದನೆಂದೂ, ಶ್ರೀ ಸ್ವಾಮಿಗಳವರು ತಮ್ಮ ಶಿಷ್ಯರಾದ ಈ ವಿದ್ಯಾರಣ್ಯರಿಗೆ, ಆದಿಯಲ್ಲಿ ಶ್ರೀ

ರೇಣುಕಾಚಾರ್ಯರಿಂದ ಶ್ರೀ ಶಂಕರಾಚಾರ್ಯರಿಗೆ ಪ್ರಾಪ್ತವಾಗಿ ಗುರು ಪರಂಪರೆ ಯಿಂದ ಬಂದ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟು, "ನೀನು ಈ ಲಿಂಗವನ್ನು ಪೂಜಿಸು, ಇದರಿಂದ ನಿನ್ನ ಮನೋಭೀಷ್ಟವು ಪೂರ್ತಿಯಾಗುವುದು" ಎಂದು ಆಜ್ಞೆಯನ್ನಿತ್ತರೆಂದೂ ತಿಳಿದುಬರುತ್ತದೆ.

ಈ ಶಿವತತ್ತ್ವರತ್ನಾಕರ ಗ್ರಂಥಕ್ಕೆ ಭಾರತ ಸರ್ಕಾರದ ಪ್ರಾಚೀನ ಶಾಸನ ಶೋಧಕರಾದ ರಾವ್‌ಬಹದ್ದೂರ್ ಹೆಚ್. ಕೃಷ್ಣ ಶಾಸ್ತ್ರಿಯರ್, ಬಿ.ಎ. ಎಂಬುವರು ಆಂಗ್ಲ ಭಾಷೆಯಲ್ಲಿ ಬಹು ವಿಶಾಲವಾದ ಪ್ರಸ್ತಾವನೆಯನ್ನು ಬರೆದಿರುತ್ತಾರೆ. ಅವರು ತಮ್ಮ ಪ್ರಸ್ತಾವನೆಯ ಒಂದೆಡೆಯಲ್ಲಿ ಈ ರೀತಿಯಾಗಿ ಬರೆದಿದ್ದಾರೆ–

One very interesting point which must be particularly drawn attention in the story of Vidyaranya as given in the 12th Taranga of the 4th Kallola, is the "ರೇವಣಸಿದ್ಧ ಸಂಪ್ರದಾಯ" which the Acharyas of the Sankaracharya line that initiated our ವಿದ್ಯಾರಣ್ಯ, were then practising at Sringeri. The ಲಿಂಗ of ಚಂದ್ರಮೌಳೀಶ್ವರ which is still worshipped as the chief deity by the Acharyas of ಶೃಂಗೇರಿಮಠ, is also said to have been presented to ವಿದ್ಯಾರಣ್ಯ, by his direct Guru. ರೇವಣಸಿದ್ಧ, we know, is a well known Saiva teacher, whom the Veerasaiva still claim as one of their earliest Acharyas. The Keladi chiefs who were mostly followers of the Veerasaiva religion, were devout adherents of the ಶೃಂಗೇರಿ ಶಂಕರಾಚಾರ್ಯ ಮಠ, perhaps also for the same reason, viz, that the Shankara charyas were followers of the ರೇವಣಸಿದ್ಧ ಸಂಪ್ರದಾಯ. This explains perhaps why in the ಅದ್ವೈತ ಮಠ of ಶೃಂಗೇರಿ there is still a greater bias towards Saivism and Saiva worship, than towards Vaishnavism and Krishna worship though the founder, the great Shankaracharya was no respector of creeds nor of any distiinction between ಶಿವ and ವಿಷ್ಣು".

ಅಂದರೆ " ಈ ಗ್ರಂಥದ 4ನೆಯ ಕಲ್ಲೋಲದ 12ನೆಯ ತರಂಗದಲ್ಲಿರುವ ವಿದ್ಯಾರಣ್ಯರ ಚರಿತ್ರದಲ್ಲಿ, ವಿದ್ಯಾರಣ್ಯರಿಗೆ ಸನ್ಯಾಸವನ್ನಿತ್ತ ಶಂಕರಾಚಾರ್ಯರ ಪೀಠಾಧಿಪತಿಗಳಾಗಿದ್ದ ಆಚಾರ್ಯರು, ರೇವಣಸಿದ್ಧಸಂಪ್ರದಾಯವನ್ನು ಅನುಸರಿಸುತ್ತಿದ್ದರೆಂಬ ವಿಷಯವು ಸರ್ವರಿಂದಲೂ ಅತ್ಯವಶ್ಯಕವಾಗಿ ನೋಡಲ್ಪಡತಕ್ಕದಾಗಿದೆ. ಶೃಂಗೇರಿ ಮಠದಲ್ಲಿ ಇಂದಿನವರೆಗೂ ಆ ಪೀಠದ ಆಚಾರ್ಯರಿಂದ ಮುಖ್ಯೋಪಾಸ್ಯದೈವವಾಗಿ ಪೂಜಿಸಲ್ಪಡುತ್ತಿರುವ ಶ್ರೀ ಚಂದ್ರಮೌಳೀಶ್ವರ ಲಿಂಗವು ವಿದ್ಯಾರಣ್ಯರಿಗೆ ಅವರ ಗುರುಗಳಿಂದ ಕೊಡಲ್ಪಟ್ಟಿತೆಂದು ಹೇಳಿದೆ. ರೇವಣಸಿದ್ಧರು ಸುಪ್ರಸಿದ್ಧಶೈವಸಿದ್ಧಾಂತಸ್ಥಾಪಕರಾಗಿದ್ದಾರೆ. ಅವರನ್ನು ವೀರಶೈವರು ತಮ್ಮ ಮತದ ಅತ್ಯಂತ ಪ್ರಾಚೀನಾಚಾರ್ಯರಲ್ಲೊಬ್ಬರನ್ನಾಗಿ ಹೇಳುತ್ತಾರೆ. ಶಂಕರಾಚಾರ್ಯರು ರೇವಣಸಿದ್ಧ ಸಂಪ್ರದಾಯಕ್ಕೆ ಸೇರಿದವರಾದುದರಿಂದಲೇ, ವೀರಶೈವ ಮತಾನುಯಾಯಿಗಳಾದ ಕೆಳದಿರಾಜರು ಶೃಂಗೇರಿ ಶಂಕರಾಚಾರ್ಯರ ಮಠಕ್ಕೆ ಭಕ್ತಿಪೂರ್ವಕವಾಗಿ ನಡೆದುಕೊಳ್ಳುತ್ತಿದ್ದರು. ಶಂಕರಾಚಾರ್ಯರು ಶಿವ ವಿಷ್ಣುಗಳಲ್ಲಿ ಭೇದವನ್ನೆಣಿಸದಿದ್ದರೂ, ಇಂದಿಗೂ ಸಹ ಅದ್ವೈತ ಮಠಕ್ಕೆ ಸೇರಿದ ಆ ಮಠದಲ್ಲಿ ವೈಷ್ಣವ ಮತ, ಕೃಷ್ಣಪೂಜೆ ಇವುಗಳಿಗಿಂತ, ಶೈವ ಮತ ಮತ್ತು ಶಿವಲಿಂಗಪೂಜೆ ಇವುಗಳಿಗೇ ಹೆಚ್ಚು ಆಧಿಕ್ಯವಿರುವುದು ಈ ಕಾರಣದಿಂದಲೇ ಎಂದು ಕಂಡುಬರುತ್ತದೆ ".

ಈ ಶಿವತತ್ತ್ವರತ್ನಾಕರ ಗ್ರಂಥಕಾರನು ಶ್ರೀ ರೇಣುಕಾಚಾರ್ಯರು ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನನುಗ್ರಹಿಸಿದ ವಿಷಯವನ್ನು, ವಿದ್ಯಾರಣ್ಯರಿಂದ ವಿರಚಿತವಾದ ಪಿತಾಮಹಸಂಹಿತೆ ಮತ್ತು ಭಾರತೀಕೃಷ್ಣಯತಿಯಿಂದ ವಿರಚಿತವಾದ " ವಿದ್ಯಾರಣ್ಯ ಕೃತಿ " ಎಂಬೀ ಗ್ರಂಥಗಳ ಆಧಾರದ ಮೇಲಿಂದ ಬರೆದಿರುವೆನೆಂದು ಚತುರ್ಥ ಕಲ್ಲೋಲದ ಅಂತ್ಯದಲ್ಲಿ–

ವಿದ್ಯಾರಣ್ಯ ಕೃತಿಂ ಚೈವ ಪಿತಾಮಹಸುಸಂಹಿತಾಂ ।<br>
ವಿಲೋಕ್ಯಾಯಂ ವಿರಚಿತಃ ಕಲ್ಲೋಲೋಭೂಚ್ಚತುರ್ಥಕಃ ॥

ಎಂದು ಬರೆದಿದ್ದಾರೆ. ಇದರ ಮೇಲಿಂದ ವಿದ್ಯಾರಣ್ಯರು ಬರೆದ ಪಿತಾಮಹಸಂಹಿತೆಯಲ್ಲಿಯೂ ಮತ್ತು ಭಾರತೀಕೃಷ್ಣಯತಿಯು ಬರೆದ ವಿದ್ಯಾರಣ್ಯ ಕೃತಿಯಲ್ಲಿಯೂ ಚಂದ್ರಮೌಳೀಶ್ವರ ಲಿಂಗಪ್ರದಾನ ವಿಷಯವು ವಿಶದವಾಗಿ ಬರೆಯಲ್ಪಟ್ಟಿರುವುದೆಂದು ಸ್ಪಷ್ಟವಾಗುತ್ತದೆ. **ಶ್ರೀ ರೇಣುಕ ಮಹಾ ವಿಜಯ ಪುರಾಣದಿಂದ ಸಂಗ್ರಹಿಸಿದುದು.**



## ಅಧ್ಯಾಯ 29

॥ ವಂದೇ ಸತ್ಪುರುಷಾ ಲೋಕೇ । ಗುಣಗ್ರಹಣ ತತ್ಪರಾ ।
ರಾಜಹಂಸಾನಿವ ಜಲಾತ್ । ಕ್ಷೀರ ಗ್ರಹಣ ಕೋವಿದಾ ॥

॥ ಅಜ್ಞಃ ಸುಖಮಾರಾಧ್ಯಃ । ಸುಖತರಮಾರಾಧ್ಯಃ ವಿಶೇಷಜ್ಞಃ ।
ಜ್ಞಾನಲವ, ದುರ್ವಿದಗ್ಧಂ । ಬ್ರಹ್ಮಾಪಿ ನರಂ ನ ರಂಜಯತಿ ॥

॥ ಬೋದ್ಧಾರೋ ಮತ್ಸರಗ್ರಸ್ತಃ । ಪ್ರಭವಃ ಸ್ಮಯದೂಷಿತಃ ।
ಅ ಬೋಧಾಪಿ ಹತಾಶ್ಚಾನ್ಯೇ । ಜೀರ್ಣಮಂಗೇ ವಿಶೇಷತಃ ॥ (ಭರ್ತೃಹರಿ)

### ಶ್ರೀ ಆದಿ ಶಂಕರರಿಗೆ ಶ್ರೀ ಚಂದ್ರಮೌಳಿ ಲಿಂಗ ಪ್ರದಾನದ ವಿಷಯವಾಗಿ

ನಾನು ರಚಿಸಿರುವ ಬಗೆಗೆ, ಅದ್ವೈತಿಗಳೂ ಮತ್ತು ಇತರ ಪಂಡಿತರೂ ನನ್ನನ್ನು ಪ್ರಶ್ನಿಸಿ, ಬರೆದಿರುವ ಪತ್ರಗಳಿಗೆ ಗ್ರಂಥಕರ್ತರು ಇತ್ತ ಸಮುತ್ತರದ ಸಂಕ್ಷಿಪ್ತವಿಹಂಗಮ ನೋಟ.

ಪ್ರಶ್ನೆ :–ಹೊಳೆನರಸಿಪುರದ ಅಧ್ಯಾತ್ಮ ಪ್ರಕಾಶ ಕಾರ್ಯಾಲಯ ಸಂಸ್ಥಾಪಕ ಮಹಾ ಸ್ವಾಮಿಜಿ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತಿ ಶ್ರೀಗಳು ನನ್ನನ್ನು ಬೆಂಗಳೂರಿನ ತ್ಯಾಗರಾಜನಗರದಲ್ಲಿ ಸ್ಥಾಪಿಸಿರುವ ತಮ್ಮ ಶಾಖಾ ಮಠಕ್ಕೆ ತಾ॥ 24–5–1971 ರಂದು ಆಹ್ವಾನಿಸಿ, " ಶ್ರೀ ಆದಿ ಶಂಕರಾಚಾರ್ಯರಿಗೆ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಆದಿ ಜ॥ ಶ್ರೀ ರೇವಣಸಿದ್ಧ ರಿಂದ ದತ್ತವಾವ ಚಂದ್ರಮೌಳಿ ಲಿಂಗದ ನಿಜ ವೃತ್ತಾಂತ " ಎಂಬ ಗ್ರಂಥ, ಪ್ರಥಮ ಭಾಗವನ್ನು ರಚಿಸಿರು ವಿರಲ್ಲಾ ; ಇದನ್ನು ಯಾವ ಆಧಾರದ ಮೇಲೆ ರಚಿಸಿರುವಿರೆಂದು ಪ್ರಶ್ನಿಸಿದರು ?

ಉತ್ತರ :–ಆಗ ನಾನು ಎರಡು ಆಧಾರ ಗ್ರಂಥಗಳ ವಿಷಯವನ್ನು ವಿವರಿಸುತ್ತಾ– ಸಂಸ್ಕೃತ ಶ್ರೀ ರೇಣುಕ ವಿಜಯಪುರಾಣ, ಶ್ರೀ ಸಿದ್ದನಾಥ ಶಿವಾಚಾರ್ಯ ವಿರಚಿತ ಎಂಬ ಉದ್ಗ್ರಂಥದಲ್ಲಿ, ಆದಿ ಶ್ರೀ ಶಂಕರಾಚಾರ್ಯರು ಶ್ರೀಶೈಲ ಶಿಖರದಲ್ಲಿ ಅಂತರ್ಮುಖಿಗಳಾಗಿ ಧ್ಯಾನಾರೂಢರಾಗಿದ್ದ ಸಮಯದಲ್ಲಿ, ಪ್ರಸನ್ನನಾದ ಶ್ರೀ ಭ್ರಮರಾಂಭಾ ಸಮೇತ ಶ್ರೀಗಿರಿ ಮಲ್ಲಿಕಾರ್ಜುನನು, ಅಶರೀರವಾಣಿಯಿಂದ, ಶಂಕರರೆಸಗಿದ ಭಾಷ್ಯಾದಿ ಕೃತಿಗಳ ಹಾಗೂ ಸನಾತನ ಧರ್ಮೋದ್ಧಾರ ಕಾರ್ಯಗಳನ್ನು ಪ್ರಶಂಶಿಸಿ, ಆಚಾರ್ಯರನ್ನು ಗೌರವಿಸಲಿ ಕ್ಕಾಗಿ ಶ್ರೀಮದ್ರಂಭಾಪುರೀ ಮಹಾ ಗುರುವಿನ ಸನ್ನಿಧಿಗೆ ಬರುವಂತೆ ಆದೇಶ

ವಿತ್ತನು. ಇಂತಪ್ಪ ಮಂಗಳರವವನ್ನು ಲಾಲಿಸಿ ಕಣ್ ತೆರೆದು ಸುತ್ತಲೂ ನೋಡಿದಾಗ, ಆ ನಿರ್ಜನ ಪ್ರದೇಶದಲ್ಲಿ ಏನೂ ಗೋಚರಿಸಲಿಲ್ಲ. ಆಗ ಸ್ವಲ್ಪ ಆಲೋಚಿಸಿ, ಇದು ಶ್ರೀಮಲ್ಲಿಕಾರ್ಜುನನ ಸಂದೇಶವೆಂದರಿತು ತಕ್ಷಣ ಆಕಾಶ ಮಾರ್ಗವಾಗಿ ಶ್ರೀಮದಾಚಾರ್ಯ ಶಂಕರರು ಶ್ರೀರಂಭಾಪುರಿಗೆ ಆಗಮಿಸಿ, ಶಿವಲಿಂಗೋದ್ಭವ ಮಂಗಳ ಮೂರ್ತಿ ಆದಿ ಜಗದ್ಗುರು ಶ್ರೀ ರೇವಣಸಿದ್ಧ ರನ್ನು ಸಂದರ್ಶಿಸಿ ಭಕ್ತಿಭಾವದಿಂದ ಪುಳುಕಾಂಕಿತರಾದರು. ಉಭಯಾ ಚಾರ್ಯರ ಸಮಿಳನ, ತಾಯಿ-ಮಕ್ಕಳ ಭಾವಪೂರಿತ ಸಂಗಮದಂತೆ ಮಧುರ ವೆನಿಸಿತ್ತು. ಶಿವಾಂಶ ಸಂಭೂತರಾದ ಆದಿ ಶ್ರೀ ಶಂಕರಾಚಾರ್ಯರು, ಸಾಕ್ಷಾತ್ಪರಶಿವ ಮೂರ್ತಿಯಂತೆಸೆ ಮುಕ್ಕಣ್ಣೀಶ್ವರ ಶ್ರೀ ಆದಿ ಜಗದ್ಗುರು ರೇವಣಸಿದ್ಧರ ಸಂದರ್ಶನದಿಂದ ತಾವು ಧನ್ಯರಾದುದಾಗಿ ಸ್ಮರಿಸಿ ಆಹ್ಲಾದಿಸಿದರು.

ಶ್ರೀ ಶಂಕರರಿಗೆ ದತ್ತವಾದ ಶ್ರೀ ಚಂದ್ರಮೌಳಿ ಲಿಂಗ ಶ್ರೀ ರೇವಣಸಿದ್ಧರಿಂದ ಅನುಗ್ರಹಿಸಲ್ಪಟ್ಟಿತ್ತೆಂದು, ಗುರುವಂಶ ಮಹಾ ಕಾವ್ಯದಲ್ಲಿ, ಶ್ರೀ ಶೃಂಗೇರಿ ಮಠದ ಆಸ್ಥಾನ ವಿದ್ವಾನ್ ವೇ॥ ಬ್ರಂ॥ ಕಾಶಿಲಕ್ಷ್ಮಣ ಶಾಸ್ತ್ರಿಗಳು ಹೃದಯಂಗಮವಾಗಿ ಸತ್ಯವಾದ ಅಂಶಗಳನ್ನೊಳಗೊಂಡಂತೆ ರಚಿಸಿರುವರೆಂದನು.

ಮೇಲ್ಕಂಡ ಎರಡು ಪ್ರಧಾನ ಗ್ರಂಥಾಧಾರಗಳನ್ನು ಅನುಸರಿಸಿ ನಾನು; ಈ ಗ್ರಂಥವನ್ನು ಭಕ್ತಿಭಾವದಿಂದ ರಚಿಸಿದುದಾಗಿ ಶ್ರೀ ಸ್ವಾಮಿಗಳಲ್ಲಿ ವಿನಯ ಪೂರ್ವಕ ನಿವೇದಿಸಿಕೊಂಡೆನು.- ಶ್ರೀಗಳು ಎಲ್ಲವನ್ನೂ ಕಿವಿಗೊಟ್ಟು ಶ್ರವಣ ಮಾಡಿ ದರೂ, ಒಪ್ಪಲಿಲ್ಲ. ಶ್ರೀ ಶಂಕರರು ಶ್ರೀ ರೇಣುಕರ ಸಮಕಾಲೀನರಲ್ಲ ಎಂದು ತಮ್ಮ ಮಾತನ್ನು ಮುಗಿಸಿಕೊಂಡು, ನನ್ನನ್ನು ಪ್ರೀತಿಯಿಂದ ಆಶೀರ್ವದಿಸಿದರು.

ಪ್ರಶ್ನೆ :-ವಿಮರ್ಶನ ವಿಚಕ್ಷಣ ವೇ॥ ಬ್ರಂ॥ ಆರ್. ಚಕ್ರವರ್ತಿ, ನಿವೃತ್ತ ಶಾಸನ ಇಲಾಖಾ, ಸಹಾಯಕ ಕಾರ್ಯಕರ್ತ, ಓಂಟಿಕೊಪ್ಪಲ್, ಮೈಸೂರು, ಇವರು ತಮ್ಮ ಪತ್ರ ತಾ॥ 2-1-1981ರಲ್ಲಿ ನನಗ ಬರೆದಿರುವುದರಲ್ಲಿ ಶ್ರೀ ಶಂಕರಾ ಚಾರ್ಯರಿಗೆ ಶ್ರೀ ರೇವಣಸಿದ್ಧರು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನು ಗ್ರಹಿಸುತ್ತಿರುವ ಭಾವಚಿತ್ರವನ್ನು ನನ್ನ ಪುಸ್ತಕದಲ್ಲಿ ಪ್ರಕಟಿಸಿರುವುದರ ಬಗ್ಗೆ ಕೆಳಕಂಡಂತೆ ಬರೆದಿರುತ್ತಾರೆ- ಬ್ರಂ॥ ಆರ್. ಚಕ್ರವರ್ತಿಯವರು ನನಗೆ ಬರೆದಿರುವ ಪತ್ರದಲ್ಲಿ-

ನೀವು ರಚಿಸಿರುವ ಬೃಹದ್ಗ್ರಂಥ, " ಎಸೆನ್ಷಿಯಲ್ಸ್ ಆಫ್ ಸ್ಪಿರಿಚುಯಾಲಿಜಿ" ಎಂಬ ಪುಸ್ತಕವನ್ನು ಅವಲೋಕಿಸಿದೆನು. ಶೈವಸಿದ್ಧಾಂತದ ವಿಷಯವಾಗಿ

ನೀವು ರಚಿಸಿರುವ ಅಭಿಪ್ರಾಯಗಳನ್ನೆಲ್ಲಾ ನಾನು ನೋಡಲಿಲ್ಲ. ಪ್ರತಿಯೊಂದು ಮತದವರೂ ತಮ್ಮ ತಮ್ಮ ಮತಗಳ ಉತ್ಕರ್ಷವನ್ನು ಹೊಗಳುವುದು ಸಹಜ ಆದರೆ ಅನ್ಯ ಮತಗಳ ಅವಹೇಳನ ಮಾಡುವುದು ತರವಲ್ಲ. ಪ್ರಕೃತ ತಮ್ಮ ಮೇಲುಕ್ತವಾದ ಉದ್ಗ್ರಂಥದಲ್ಲಿ ಶ್ರೀ ರೇಣುಕಾಚಾರ್ಯರು ಶಂಕರಾಚಾರ್ಯರಿಗೆ ಚಂದ್ರಮೌಳಿ ಲಿಂಗವನ್ನು ಕೊಟ್ಟಂತೆ ಇರುವ ಚಿತ್ರವನ್ನು ಪ್ರಕಾಶಪಡಿಸಿರುವುದು ಗಣನೆಗೆ ತೆಗೆದುಕೊಂಡು ತಮ್ಮ ಭಾಷ್ಯಗಳಲ್ಲಿ ಉದಹರಿಸಿರುವಿರಿ. ಈ ಕಾರಣಗಳಿಂದ ಚಂದ್ರಮೌಳಿ ಲಿಂಗವನ್ನು ರೇವಣಸಿದ್ಧರು ಶಂಕರಾಚಾರ್ಯರಿಗೆ ಕೊಟ್ಟರೆಂದು ಹೇಳುವ ಅಭಿಪ್ರಾಯ ಸಾಧುವಾದದಲ್ಲ. ಈ ವಿಧವಾದ ಅಪಪ್ರಚಾರದಿಂದ ಅನ್ಯಮತದವರ ಅವಹೇಳನ ಮಾಡಿದಂತಾಗುವುದು.

ತಾವು ಈ ವಿಷಯಗಳನ್ನೆಲ್ಲಾ ಪರ್ಯಾಲೋಚಿಸಿ, ತಮ್ಮ ಗ್ರಂಥದಲ್ಲಿ,

" ಈ ವಿಷಯ ವಿವಾದಾಸ್ಪದವಾದುದೆಂದು, ಒಂದು ಲಘು ಟಿಪ್ಪಣಿಯನ್ನು ಬರೆದು ಪ್ರಕಾಶಿಸಬೇಕೆಂದು ಕೋರುತ್ತೇನೆ ".

ತಾ॥ 2-1-1981
ಮೈಸೂರು.

ಇತಿ,
ಆರ್. ಚಕ್ರವರ್ತಿ

## –: ವಿದ್ವಾಂಸರು ಜನತೆಯನ್ನು ಕೆಸರಿಗೆಳೆಯಬಾರದು :–

ಉತ್ತರ :–ಮೇಲ್ಕಂಡ ಬ್ರಂ॥ ಆರ್. ಚಕ್ರವರ್ತಿಯವರ ಪತ್ರಕ್ಕೆ ವಿನಯಪೂರ್ವಕ ತಾ॥ 4–1–1981 ರಂದು ಉತ್ತರವಿಯುತ್ತಾ, ನನ್ನ ಮೇಲುಕ್ತವಾದ ಗ್ರಂಥದ ಪುಟಗಳನ್ನು ತಾವು ಪೂರ್ಣ ಓದಿಲ್ಲವೆಂದು ತಿಳಿಸಿದ್ದೀರಿ. ಇರಲಿ ನನ್ನ ಪುಸ್ತಕದ ಮುಖ ಪುಟದಲ್ಲಿ ಕಂಡ ಶ್ರೀ ಚಂದ್ರಮೌಳೀಶ್ವರ ಲಿಂಗ ಪ್ರದಾನದ ಚಿತ್ರವನ್ನು ತಾವು ನೋಡಿ ತಮ್ಮ ಮನಸ್ಸಿನ ಅಳುಕನ್ನು ಪ್ರತಿಬಿಂಬಿಸುತ್ತಾ ಮೇಲ್ಕಂಡಂತೆ ನನಗೆ ತಾವು ಕೊಟ್ಟಿರುವ ಸಲಹೆ ಸಂಕುಚಿತ ಭಾವಕ್ಕೆ ಮತ್ತಷ್ಟು ನೀರೆರೆದಂತಿದೆ. " ಯದ್ಭಾವೋತದ್ಭವತಿ " ಭಾವ ಪರಿಶುದ್ಧವಾದಲ್ಲಿ ಎಲ್ಲವೂ ಮಂಗಳಾತ್ಮಕ ದೃಶ್ಯವಾಗುತ್ತೆ. ಸಂಕುಚಿತ ಭಾವ ಅಸಹಾಕಾರಕ್ಕೆ ನೆಲಗಟ್ಟೆಂಬುದು ಧೀಮಂತರಾದ ತಮಗೆ ತಿಳಿದ ವಿಷಯ.

ವೇದಾಗಮಗಳಾಧಾರದಂತೆ ಶ್ರೀ ಜಗದ್ಗುರು ರೇಣುಕಾಚಾರ್ಯರು ಕೊಲ್ಲೀಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗ ಮುಖದಿಂದ ಶಿವನಪ್ಪಣೆಯಂತೆ, ಮಂತ್ರ

ಮಯ ದಿವ್ಯ ದೇಹಧಾರಿಗಳಾಗಿ ದ್ವಾಪರಯುಗದಾದಿಯಲ್ಲಿ ಸ್ವೇಚ್ಛೆಯಿಂದ ಅವತರಿಸಿದರು. ಶಿವಲಿಂಗ ಸಂಭವರಾದ ಇವರು ಕುಂಭ ಸಂಭವರಾದ ಮಹರ್ಷಿ ಕುಲ ಚಂದ್ರರೆನಿಸಿದ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ವಿಶ್ವಧರ್ಮ ಪ್ರತಿಪಾದಕವಾದ ಆದಿಗಾದಿಯೆನಿಸಿದ ಶಿವಾದ್ವೈತ ಸಿದ್ಧಾಂತದ ತಿರುಳನ್ನು ಶ್ರೀ ಸಿದ್ಧಾಂತ ಶಿಖಾಮಣಿ ( ಶ್ರೀ ರೇಣುಕ ಗೀತೆ ) ಯಲ್ಲಿ ವಿಶಾಲಾರ್ಥ ಗರ್ಭಿತವಾಗಿ ಪ್ರತಿಪಾದಿಸಿದ್ದಾರೆ. ಇದು ದ್ವಾಪರ ಯುಗದಾದಿಯಲ್ಲಿ ಜರುಗಿದ ಸತ್ಯ ಸುಂದರವಾದ ಬೋಧಾಮೃತ.

ಚತುರ್ಯುಗಗಳಲ್ಲೂ ಶಿವೋಕ್ತಿಯಂತೆ ಸದ್ಧರ್ಮ ಪ್ರತಿಷ್ಠಾಪನೆಗಾಗಿ ಹಾಗೂ ತದ್ಧರ್ಮಾಚರಣೆಯಿಂದ ಸಮಸ್ತ ಲೋಕದವರಿಗೆ ಮಾರ್ಗದರ್ಶನ ನೀಡಲು ಶಿವಲಿಂಗ ಮುಖದಿಂದ ಶ್ರೀಮದಾಚಾರ್ಯ ಸಾರ್ವಭೌಮರು ಬೇರೆ ಬೇರೆ ಹೆಸರುಗಳಿಂದ ಆವಿರ್ಭವಿಸುವ ವಿಷಯ ವೇದೋಕ್ತವಾಗಿರುವುದು ಸರಿಯಷ್ಟೆ. ಇದರಂತೆ ಕಲಿಯುಗಾರಂಭದಲ್ಲಿ ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗ ಮುಖದಿಂದ ಲೀಲಾಜಾಲವಾಗಿ ಅವತರಿಸಿದಾಗ ಶ್ರೀ ಜ ರೇವಣಸಿದ್ಧರೆಂಬ ಹೆಸರಿನಿಂದ ವಿರಾಜಿಸಿದರು. ಇದರಿಂದ ಜಗತ್ತಿಗೆ ಕಂಡು ಬರುವುದೇನೆಂದರೆ, ಶ್ರೀಮದಾಚಾರ್ಯರು ಪ್ರಕೃತಿ ತತ್ವಕ್ಕತೀತರು, ಅಪ್ರಾಕೃತ ದಿವ್ಯ ಮಂಗಳ ಪರಂಜ್ಯೋತಿ ಸ್ವರೂಪರೆಂಬುದು ಕಂಡುಬರುತ್ತ. ಶಿವಾಗಮೋಕ್ತಿಯಂತೆ ಸರ್ವ ದೇವ, ದಾನವ, ಮಾನವ ಕುಲಕ್ಕೆ ಸರ್ವದಾ ತ್ರಿಭುವನಾಚಾರ್ಯವರೇಣ್ಯರು ಆದಿ ಶ್ರೀ ಜಗದ್ಗುರು ರೇವಣಸಿದ್ಧರೆಂಬುದು ಸುಸ್ಪಷ್ಟವಿರುತ್ತೆ.

ಇಂತಪ್ಪ ಚಿನ್ಮಯ ಸ್ವರೂಪಿಗಳಾದ ಜಗದಾದಿ ಶ್ರೀ ಜಗದ್ಗುರು ರೇವಣಸಿದ್ಧರ ಸಂದರ್ಶನ, ಸಂಭಾಷಣಾದಿಗಳಿಂದ ಮತ್ತಷ್ಟು ಪ್ರದೀಪ್ತರಾದ ಶ್ರೀ ಆದಿ ಶಂಕರಾಚಾರ್ಯರು " ಶಿಖಿ ಕರ್ಪೂರವತ್ " ಪರಮಾಚಾರ್ಯರ ದಿವ್ಯಾನುಗ್ರಹಬಲದಿಂದ ಪರುಷವ ಸ್ಪರ್ಶಿಸಿದ ಕಬ್ಬಿಣ ಬಂಗಾರವಾಗುವಂತೆ ಕ್ಷಣಾರ್ಧದಲ್ಲಿ ತಾವೂ ಚಿನ್ಮಯ ಸ್ವರೂಪಿಗಳಾಗಿ ಮಹಾಚಾರ್ಯ ಶ್ರೀ ರೇವಣಸಿದ್ಧರ ದಿವ್ಯ ಸನ್ನಿಧಿಯಲ್ಲ ವಿರಾಜಿಸಿದರೆಂಬ ನಿತ್ಯ ಸತ್ಯ ಸುಂದರ ಹಾಗೂ ಸಾಯುಜ್ಯ ಮೋಕ್ಷಪ್ರದವಾದ ಮಂಗಳ ದರ್ಶನ, ಶ್ರೀ ಚಂದ್ರಮೌಳೀಶ್ವರ ಲಿಂಗ ಪ್ರದಾನ ಭಾವಚಿತ್ರ ಎಂದು ನಿರ್ಮಲ ಭಾವದಿಂದ ಕಂಡು ಸರ್ವ ಮಾನವರೂ ಆನಂದಿಸಿ, ಶ್ರೀ ಉಭಯಾಚಾರ್ಯರ ಆಶೀರ್ವಾದಂಗಳಿಗೆ ಭಾಗಿಗಳಾಗಬೇಕು.

ಆದ್ದರಿಂದ ತಾವು ದಯವಿಟ್ಟು ನನ್ನನ್ನು ಕೆಸರಿಗೆಳೆಯಬಾರದು.

ತಾ॥ 4-1-1981
ಬೆಂಗಳೂರು.

ಇತಿ
ಟಿ. ಬಿ. ಬಸವರಾಜಯ್ಯ

ಮೈಸೂರಿನ ವೇ॥ ಬ್ರಂ॥ ಪಂಡಿತ ಲ. ನ. ಶಾಸ್ತ್ರೀ, ವಿದ್ಯಾಶಂಕರ ಪ್ರಕಾಶನ, ನಂ. 30, ದೇವೀರಮ್ಮಣ್ಣೀ ಅಗ್ರಹಾರ, ಮೈಸೂರು-4, ಇವರು "ಶಂಕರ ಚಂದ್ರಮೌಳೀಶ್ವರ ಶೃಂಗೇರಿ" (ಸಂಶೋಧನ ಪ್ರಬಂಧ) ಎಂಬ ಪುಸ್ತಕ (1982) ರಲ್ಲಿ ರಚಿಸಿ ಬೆಳಕಿಗೆ ತಂದಿರುತ್ತಾರೆ. ಶಾಸ್ತ್ರಿಗಳು ಪಂಡಿತರಾದ್ದರಿಂದ ಹತ್ತಾರು ಗ್ರಂಥಗಳನ್ನು ಪರಿಶೋಧಿಸಿ, ಮೇಲ್ಕಂಡ ಕೃತಿಯನ್ನು ಪ್ರಕಟಿಸಿರುವುದಾಗಿ ನಿರೂಪಿಸಿರುತ್ತಾರೆ.

ಇವರು ಶ್ರೀ ಶೃಂಗೇರಿ ಅದ್ವೈತ ಮಠವಲ್ಲಿ ಶ್ರೀ ಚಂದ್ರಮೌಳೀಶ್ವರ ಲಿಂಗಾರಾಧನೆ ಪರಮಾಚಾರ್ಯರುಗಳ ಅಮೃತ ಹಸ್ತದಿಂದ ದಿನವಹಿ ತ್ರಿಕಾಲಂಗಳಲ್ಲೂ ಭಕ್ತ್ಯಾ, ವಿಧಿವತ್ತಾಗಿ ಪ್ರಾಚೀನ ಕಾಲದಿಂದಲೂ, ಪೂಜಾಭಿಷೇಕಗಳು ಭಕ್ತರ ಸಮ್ಮುಖದಲ್ಲಿ ನಡೆಯುತ್ತಲಿವೆ ಎಂದು ಸ್ಪಷ್ಟಪಡಿಸಿರುತ್ತಾರೆ. ಶ್ರೀ ಚಂದ್ರಮೌಳೀಶ್ವರ ಲಿಂಗವು ಸ್ಫಟಿಕದಾಗಿದ್ದು, ಅದರ ಶಿಖರವು ಚಂದ್ರನಂತೆ ಪ್ರಕಾಶವುಳ್ಳದ್ದಾಗಿದೆ ಎಂದು ನಿರೂಪಿಸಿರುವರು. ಮತ್ತೂ ಈ ಪಂಡಿತರು ಹೇಳುವುದೇನೆಂದರೆ :-

"ಶ್ರೀ ಶಂಕರಾಚಾರ್ಯರಿಗೆ ಈ ಚಂದ್ರಮೌಳೀಶ್ವರ ಲಿಂಗವು, ಶೃಂಗೇರಿಯ ಸಮೀಪದಲ್ಲಿರುವ ಬಾಳೆಹಳ್ಳಿ ಶೈವಮಠದ ಸ್ಥಾಪಕರಾಗಿದ್ದ ಶ್ರೀ ರೇಣುಕಾಚಾರ್ಯ ಅಥವಾ ರೇವಣಸಿದ್ಧರಿಂದ ಕೊಡಲ್ಪಟ್ಟಿತೆಂದು ಪ್ರಚಾರ ಆಗಾಗ ನಡೆಯುತ್ತಿದೆ. ಶಂಕರರು ಕೈಯೊಡ್ಡಿ ಕುಳಿತಿರುವ-ರೇಣುಕರು ಲಿಂಗವನ್ನು ಕೊಡುತ್ತಿರುವ ಚಿತ್ರ ಪಟವೂ ಬರೆಸಲ್ಪಟ್ಟು ಅಚ್ಚಾಗಿ ಪ್ರಚಾರದಲ್ಲಿದೆ, ಎಂಬುದು ಶಾಸ್ತ್ರಿಗಳ ನಿಲವು. ಈ ಲಿಂಗವು ಶ್ರೀ ಶಂಕರ ಭಗವತ್ಪಾದರಿಂದಲೇ ಅರ್ಚಿಸಲ್ಪಟ್ಟು ಅನಂತರ ಶೃಂಗೇರಿ ಪೀಠವನ್ನಲಂಕರಿಸಿದ ಅವರ ಶಿಷ್ಯ ಪರಂಪರೆಯಿಂದ ಅವಿಚ್ಛಿನ್ನವಾಗಿ ಇಂದಿಗೂ ಪೂಜೆಗೊಳ್ಳುತ್ತಿರುವುದು ಎಲ್ಲರೂ ಅರಿತ ಸಂಗತಿಯಾಗಿದೆ ಎಂದು ಶಾಸ್ತ್ರಿಗಳು ಒಪ್ಪಿಕೊಂಡಿರುತ್ತಾರೆ. ಶ್ರೀ ಶಂಕರಾಚಾರ್ಯರಿಗೆ ಹಾಗೂ ಶೃಂಗೇರಿ ಮಠಕ್ಕೆ ಈ ಲಿಂಗವು ಹೇಗ ಲಭಿಸಿತು ? ಎಂಬುದು ಶಾಸ್ತ್ರಿಗಳ ವೈಚಾರಿಕ ವಿಮರ್ಶೆಯಾಗಿದೆ.

ಶ್ರೀ ಶಂಕರಾಚಾರ್ಯರಿಗೆ ಪರಶಿವನು ಸಾಕ್ಷಾತ್ತಾಗಿ ಪಂಚಲಿಂಗಗಳನ್ನು

ಅನುಗ್ರಹಿಸಿದನೆಂದು ತಿಳಿಸಿ, ಅವುಗಳಲ್ಲೊಂದಾದ ಯೋಗಲಿಂಗವನ್ನು ಆಚಾರ್ಯರು ತಮ್ಮ ಬಳಿಯೇ ಇಟ್ಟುಕೊಂಡು ಅರ್ಚನೆ ಮಾಡುತ್ತಿದ್ದರೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಶಿವನು ಯಾವಾಗ ಯಾವ ಸ್ಥಳದಲ್ಲಿ ಯೋಗಲಿಂಗವನ್ನು ಅನುಗ್ರಹಿಸಿದನೆಂಬುದಕ್ಕೆ ಶ್ರೀ ಲ. ನ. ಶಾಸ್ತ್ರಿಗಳು ವಿವರವಾಗಿ ತಿಳಿಸಿಲ್ಲ.

ಶಂಕರಾಚಾರ್ಯರಿಂದ ರಚಿತವಾದ ಯಾವ ಗ್ರಂಥದಲ್ಲೂ ಚಂದ್ರಮೌಳಿ ಲಿಂಗದ ಪ್ರಸ್ತಾಪಿಸಿಲ್ಲವೆಂಬುದು ಶಾಸ್ತ್ರಿಗಳ ಒಂದು ವಾದ. ಪರಶಿವನೇ ಸಾಕ್ಷಾತ್ತಾಗಿ ಪಂಚಲಿಂಗಗಳನ್ನು ಶಂಕರಾಚಾರ್ಯರಿಗೆ ಕೊಟ್ಟಿದ್ದರೆ ಶಂಕರರು ಇದನ್ನು ತಮ್ಮ ಅಪಾರ ಕೃತಿಗಳಲ್ಲಿ ಎಲ್ಲಿಯೂ ತಿಳಿಸಿಲ್ಲವ್ಯಾಕೆ ? ಇದು ಅನುಮಾನಕ್ಕಾಸ್ಪದ ನೀಡಿದೆ.

ಶಾಸ್ತ್ರಿಗಳ ಎರಡನೆ ಪ್ರಶ್ನೆ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಚಂದ್ರಮೌಳಿ ಲಿಂಗದ ವಿಷಯ ಎಲ್ಲೂ ಬಂದಿಲ್ಲವೆಂಬುದು ? ಆದಿ ಶ್ರೀ ಶಂಕರಾಚಾರ್ಯರಿಗೆ ಆದಿ ಶ್ರೀ ಜಗದ್ಗುರು ರೇವಣಸಿದ್ಧರು ಶ್ರೀ ಚಂದ್ರಮೌಳಿ ಲಿಂಗವನ್ನು ಅನುಗ್ರಹಿಸುವುದಕ್ಕೆ ಮೊದಲೇ, ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿಂದ್ಧಾಂತ ಶಿಖಾಮಣಿ ಬೃಹದ್ಗ್ರಂಥನ್ನು ರಚಿಸಿರುವ ಕಾರಣ, ಇದರಲ್ಲಿ ಚಂದ್ರಮೌಳಿ ಲಿಂಗ ಪ್ರದಾನದ ವಿಷಯ ಬರಲು ಹೇಗೆ ಸಾಧ್ಯ.

ಬ್ರಂ॥ ಲ. ನ. ಶಾಸ್ತ್ರಿಗಳು, " ಸುಸಿದ್ಧ " ಎಂದರೆ " ರೇವಣ ಮತ್ತೂ ರೇವಣಸಿದ್ಧ " ಎಂಬ ಶ್ರೀ ಗುರುವಂಶ ಕಾವ್ಯದಲ್ಲುಕ್ತವಾದ ಪದಗಳಿಗೆ ವ್ಯವಸ್ಥಿತಾರ್ಥವುಳ್ಳ ಮಾರ್ಗವನ್ನು ತಳ್ಳಿ ; ತಮ್ಮ ಪಾಂಡಿತ್ಯದ ವೈಖರಿಯಿಂದ ಮೇಲ್ಕಂಡ ಪ್ರಸಿದ್ಧ ಪದಗಳಿಗೆ ನಾನಾರ್ಥಗಳನ್ನು ಒಡ್ಡಿ, ವಿಪರೀತಾರ್ಥಕ್ಕೆ ಎಡೆ ಮಾಡಿದ್ದಾರೆ. ಮೇಲುಕ್ತವಾದ ಪ್ರಸಿದ್ಧ ಪದಗಳಿಗೆ ಕಾಲಕ್ರಮೇಣ ಶೃಂಗೇರಿ ಸಂಸ್ಥಾನದ ಪಂಡಿತರು, ಕೋಮುವಾರು ಅಸೂಯಾ ಭಾವನೆಯಿಂದ ನಾನಾರ್ಥ ಮಾಡಲು ಹೊರಡಬಹುದೆಂಬ ದೂರ ದೃಷ್ಟಿಯಿದ್ದ ವೇ॥ ಬ್ರಂ॥ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ( ಗುರುವಂಶ ಕಾವ್ಯದ ಕೃತಿಕರ್ತರು ) ಅದಕ್ಕವಕಾಶ ಇರಬಾರದೆಂದು ತಾವೇ ಖುದ್ದು ವ್ಯಾಖ್ಯಾನವನ್ನು ನೀಡಿರುತ್ತಾರೆ. ಗ್ರಂಥಕರ್ತರ ನಿತ್ಯ ಸತ್ಯ ಸುಂದರವಾದ ವ್ಯಾಖ್ಯಾನವನ್ನು ಇತ್ತೀಚಿನ ಶೃಂಗೇರಿ ಪಂಡಿತರು ಕೈ ಬಿಟ್ಟು, ಅದನ್ನು ಕಡೆಗಾಣಿಸಿ, " ರೇವಣಸಿದ್ಧ ಎಂದರೆ ಶ್ರೀ ಗೋವಿಂದ ಭಗವತ್ಪಾದಾಚಾರ್ಯರೆಂದು " ವ್ಯಾಖ್ಯಾನ ಮಾಡಲು ಹೊರಟಿದ್ದಾರೆ. ಪರಮ ವೀರ ವೈಷ್ಣವ ಮತಾಚಾರ್ಯರಿಗೂ ಶೈವ ವೀರಶೈವಾಚಾರ ಸಂಪನ್ನರಾದ ಭಗವತ್ಪಾದ ಶ್ರೀ ಆದಿ ಜಗದ್ಗುರು ರೇವಣಸಿದ್ಧರಿಗೂ ಹೋಲಿಕೆಯೆಲ್ಲಿಯದು.

ಗುರು ಭಕ್ತರತ್ನ ವೇ॥ 'ಬ್ರಂ॥ ಕೆ.ಆರ್. ವೆಂಕಟರಾಮ್ಮಯ್ಯರವರು ತಮ್ಮ ಕೃತಿಗಳಲ್ಲಿ " ಸುಸಿದ್ಧ " ಪದಕ್ಕೆ ಶ್ರೀ ಗೋವಿಂದ ಭಗವತ್ಪಾದರೆಂದೂ, " ರೇವಣಸಿದ್ಧ " ಎಂಬ ಪದಕ್ಕೂ ಶ್ರೀ ಗೋವಿಂದ ಭಗವತ್ಪಾದರೆಂದೇ ನೂತನ ವ್ಯಾಖ್ಯಾನ ಮಾಡಿರುವುದನ್ನನುಸರಿಸಿ, ಬ್ರಂ॥ ಲ. ನ. ಶಾಸ್ತ್ರಿಗಳೂ ಸಹ, ಮೇಲ್ಕಂಡ ಅರ್ಥವನ್ನೇ ಸಾಧಿಸಿ ಹಾಡಿದ್ದಾರೆ. ಈ ವ್ಯಾಖ್ಯಾನವೇ ಸರಿ ಎಂದು ಕಂಡುಬಂದಿದ್ದರೆ, ಕ್ರಿ. ಶ. 18ನೇ ಕಾಲಾವಧಿಯಲ್ಲೇ ಮಹಾ ಗ್ರಂಥಕರ್ತರಾದ ಆಸ್ಥಾನ ವಿದ್ವಾನ್ ಕಾಶಿ ಲಕ್ಷ್ಮಣ ಶಾಸ್ತ್ರಿಗಳು ಅಂದೇ " ಸುಸಿದ್ಧ " ಎಂದರೆ ಗೋವಿಂದ ಭಗವತ್ಪಾದರೆಂದು ಸ್ಪಷ್ಟಪಡಿಸುತ್ತಿದ್ದರು. " ರೇವಣಸಿದ್ಧ " ಶಬ್ದಕ್ಕೂ ರೇವಾ ಸಂಬಂಧ ರೇವಣ ಎಂದೂ ಸಹ ರಚಿಸುತ್ತಲಿದ್ದರು. ಕುಮಾರ್ಗದಲ್ಲಿ ಹೋಗದೆ, ಸ್ವಚ್ಛ ರಾಜ ಮಾರ್ಗದಲ್ಲಿ ಹೆಜ್ಜೆಯೂರಿದ ಮಹಾ ಗ್ರಂಥಕರ್ತರು " ಸುಸಿದ್ಧ " ಪದಕ್ಕೆ ವೀರಸಿಂಹಾಸನಾಧೀಶ್ವರರಾದ ಆದಿ ಜಗದ್ಗುರು ರೇವಣಸಿದ್ಧ ರೆಂಬ ವ್ಯಾಖ್ಯಾನವನ್ನು ಶ್ರೀ ಚಂದ್ರಮೌಳೀಶ್ವರ ಲಿಂಗ ಒಪ್ಪುವಂತೆ ರಚಿಸಿ, ಶ್ರೀ ಜಗದ್ಗುರು ಸಚ್ಚಿದಾನಂದ ಭಾರತಿ-2ರವರ ಹಾಗೂ ಆದಿ ಶ್ರೀ ಶಂಕರಾಚಾರ್ಯರ ದಿವ್ಯ ಕೃಪೆಗೆ ಪಾತ್ರರಾಗಿರುತ್ತಾರೆಂಬುದು ಗಮನೀಯ.

ಶಿವಲಿಂಗೋದ್ಭವ ಮಂಗಳ ಮೂರ್ತಿಗಳಾದ ಆದಿ ಶ್ರೀ ಜಗದ್ಗುರು ಸಾರ್ವಭೌಮರಾದ ಶ್ರೀ ರೇಣುಕಾದಿ ಪಂಚಾಚಾರ್ಯರ ಬಗೆಗೆ ಶ್ರೀ ಲ. ನ. ಶಾಸ್ತ್ರಿಗಳಿಗೆ ಏನೂ ತಿಳಿಯದುದಾಗಿದೆ ಎಂದು ಕಾಣುತ್ತೆ. ಚಾರಿತ್ರಿಕ, ಐತಿಹಾಸಿಕ ಆಧಾರಗಳಿಗೂ ಅಪೌರುಷೇಯವಾದ ನಿಗಮಾಗಮಗಳ ಆಧಾರಗಳಿಗೂ ; ಭುವಿಗೂ ಆಕಾಶಕ್ಕೂ ಇರುವಷ್ಟು ಅಂತರವಿದೆ.

॥ ವೇದೋಕ್ತಃ ಪ್ರಥಮೋಧರ್ಮಃ । ದ್ವಿತೀಯಸ್ತು ಧರ್ಮ ಶಾಸ್ತ್ರಂತು ।
ತೃತೀಯಂ ಲೋಕಸಂಗ್ರಃ ॥

॥ ತಸ್ಮಾಶ್ಶಾಸ್ತ್ರಂ ಪ್ರಮಾಣಂತೇ । ಕಾರ್ಯಾ ಕಾರ್ಯ ವ್ಯವಸ್ಥಿತೌ ॥

ಎಂಬಂತೆ, ನಿಗಮಾಗಮಗಳಲ್ಲಿ ಪ್ರೋಕ್ತವಾದ ನಿತ್ಯ ಸತ್ಯ, ಸುಂದರವಾದ ಮಹದಂಶಗಳೇ ಪ್ರಥಮ ಪ್ರಮಾಣಗಳೆನಿಸಿವೆ. ಧರ್ಮ ಶಾಸ್ತ್ರೋಕ್ತವಾದ ಅಂಶಗಳು ದ್ವಿತೀಯ ಪ್ರಮಾಣಗಳೆನಿಸಿವೆ. ಕಾವ್ಯ, ಚಾರಿತ್ರಿಕ, ಐತಿಹಾಸಿಕ ಮತ್ತು ಶಾಸನೋಕ್ತ ಪ್ರಮಾಣಗಳು ಮೂರನೇ ದರ್ಜೆಗೆ ಸೇರಿದ ಸಾಮಾನ್ಯ ಪ್ರಮಾಣಗಳೆನಿಸಿವೆ. ಪಂಡಿತ ಬ್ರಂ॥ ಲ.ನ. ಶಾಸ್ತ್ರಿಗಳು ಕನಿಷ್ಠ ದರ್ಜೆಗೆ ಸೇರಿದ ಐತಿಹಾಸಿಕ ಆಧಾರಗಳನ್ನು ನಿರೂಪಿಸಿ ತಮ್ಮ ವಾದವನ್ನು ಮುಕ್ತಾಯಗೊಳಿಸಿರುತ್ತಾರೆ. ಮತ್ತು

ಇವರ ಮನಸ್ಸಿನಲ್ಲಿ ಕೋಭುವಾರ ಭಾವನೆ ಗಾಢವಾಗಿದೆ. ಕ್ರಿ. ಶ. 12ನೇ ಶತಮಾನದಲ್ಲಿದ್ದ ಶ್ರೀ ರಂಭಾಪುರೀ ವೀರಸಿಂಹಾಸನಾಧೀಶ್ವರರಾದ ಶ್ರೀ ಜಗದ್ಗುರು ರೇವಣಸಿದ್ಧರ ವಿಷಯವನ್ನೇ ಮೇಲಿಂದ ಮೇಲೆ ಕುರಿತು ಪ್ರಸ್ತಾಪಿಸಿ, ಇವರ ಕಾಲಕ್ಕೂ ಕ್ರಿ. ಶ. 8ನೇ ಶತಮಾನದಲ್ಲಿದ್ದ ಆದಿ ಶಂಕರಾಚಾರ್ಯರಿಗೂ ಯಾವ ಸಂಬಂಧವೂ ಇಲ್ಲವೆಂಬ ವಾದ ಶಾಸ್ತ್ರಿಗಳದು. ಪಂಡಿತರಾದ ವೇ॥ ಬ್ರಂ॥ ಲ. ನ. ಶಾಸ್ತ್ರಿಗಳು ಸಮುದ್ರದಲ್ಲಿ ಈಜುವುದನ್ನು ಬಿಟ್ಟು ಕೆರೆ ನೀರಲ್ಲಿ ಈಜಾಡುತ್ತಲಿದ್ದಾರೆ. ನಾವು ಶಿವಾಚಾರ್ಯವರೇಣ್ಯರ ಶ್ರೀ ಪಾದಸ್ಮರಣೆಯೊಂದಿಗೆ ಶಿವಸಮುದ್ರದಲ್ಲಿ ಈಜುತ್ತಲಿದ್ದೇವೆ.

॥ ಯಾವಾನರ್ಥ ಉದಪಾನೇ । ಸರ್ವತಃ ಸಂಪ್ಲುತೋದಕೇ ।
ತಾವಾರ್ನ್ ಸರ್ವೇಷು ವೇದೇಷು । ಬ್ರಾಹ್ಮಣಸ್ಯ ವಿಜಾನ ತಃ ॥

(ಗೀ. ಅ. 2 ಶ್ಲೋ. 46)

ಎಂಬ ಗೀತೋಪದೇಶ ಸ್ಮರಣೀಯವಿರುತ್ತೆ.

ಅರ್ಥ = ಉದಪಾನೇ = ಬಾಯಾರಿಕೆಯಿಂದ ಬಳಲಿದಾತ ನೀರಿಗಾಗಿ ಅಲೆದಾಡಿ ಭಾವಿಯೊಂದನ್ನು ಆಶ್ರಯಿಸಿ ಸಂತೋಷಿಸುವನು. ಮುಂದೆ ಸ್ವಲ್ಪ ದೂರ ಹೋದಾಗ ಹರಿಯುವ ಹಳ್ಳವನ್ನು ಕಂಡು, ಭಾವಿಯನ್ನು ಮರೆಯುವನು. ಅಲ್ಲಿಂದ ಮುಂದೆ ಸಾಗಿದಾಗ, ಅನತಿ ದೂರದಲ್ಲಿ ತುಂಬಿ ಪ್ರವಹಿಸುತ್ತಿರುವ ನದಿಯನ್ನು ಕಂಡು ಅದರ ಪ್ರಯೋಜನದಿಂದ ತನ್ನ ನೀರಿನ ಅವಶ್ಯಕತೆ ಪೂರ್ಣ ಇಲ್ಲಿದೆ ಎಂದು ನೆನೆದು ಹಳ್ಳದ ಯೋಚನೆಯನ್ನು ಮರೆಯುವನು. ಹೆಚ್ಚು ಹೆಚ್ಚಾದ ನೀರಿನ ಸೌಲಭ್ಯ ದೊರೆತಾಗ, ಕೊರೆತೆ ಇದ್ದ ಭಾಗಗಳನ್ನು ಕೈ ಬಿಡುವನು. ಅಲ್ಲಿಂದ ಮುಂದೆ ಪ್ರಯಾಣ ಮಾಡುತ್ತಾ ಎದುರುಗಡೆ ಕಾಣುವ "ಸರ್ವತಃ ಸಂಪ್ಲುತೋದಕೆ" ಮಹಾ ಸಾಗರವನ್ನು ಕಂಡು ನೀರಿನ ಕೊರತೆಯ ಹಿಂದಿನ ಸ್ಮರಣೆಗಳನ್ನೆಲ್ಲಾ ಮರೆತು, ಮಹಾ ಜಲಾಷಯದೆದುರುಗಡೆ ಸಂತೃಪ್ತನಾಗಿ ಆನಂದಿಸುವನು. ಇದರಂತೆ ॥ ತಾವಾರ್ನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥. ಷಟ್ಸ್ಥಲ ಸನ್ಮಾರ್ಗದ ಸಾಧಕನು ಮೊದ ಮೊದಲು ವೇದಾಗಮ ಪುರಾಣೇತಿಹಾಸಗಳಲ್ಲಿ ಆಸಕ್ತಿವಹಿಸುವನು. ಕ್ರಮೇಣ ಶ್ರೀ ಗುರುಕಟಾಕ್ಷ ಬಲದಿಂದ ಅಷ್ಟಾವರಣ, ಪಂಚಾಚಾರಗಳಲ್ಲಿ ಅಭ್ಯಾಸ ಯೋಗೇನ ಸಾಕಷ್ಟು ನೈಪುಣ್ಯವನ್ನು ಸ್ವಾತ್ಮದಲ್ಲಿ ಪಡೆದೊಡನೆ ಮೇಲುಕ್ತವಾದ ಎಲ್ಲಾ ಸಾಧನೆಗಳನ್ನೂ ಗರ್ಭೀಕರಿಸಿಕೊಂಡು ಮಹೋನ್ನತವಾದ ॥ ಬ್ರಾಹ್ಮಣಸ್ಯ ವಿಜಾನತಃ ॥ ಅಂದರೆ ಲಿಂಗಾಂಗೈಕ್ಯವೆಂಬ ಸಾಕ್ಷಾತ್ಕಾರ ಅಥವಾ ಸ್ವಸ್ವರೂಪಾನುಸಂಧಾನವೆಂಬ ಶಿವ ಸಮುದ್ರದಲ್ಲಿದ್ದು

ಪರಮಾನಂದ ಪ್ರಾಪ್ತಿಯನ್ನು ಹೊಂದುವನು. ಪರಮೋತ್ಕೃಷ್ಟವಾದೀ ಶುದ್ಧಾಂತರಂಗದ ಉನ್ನತ ಸ್ಥಿತಿಯಲ್ಲಿ ವೇದಾಗಮೋಪನಿಷದಾದಿ ಪುರಾಣೇತಿಹಾಸಗಳ ಅವಶ್ಯಕತೆ ಸರ್ವಥಾ ಇರುವುದಿಲ್ಲವೆಂಬುದು ಮನನೀಯವಿರುತ್ತೆ. ಅಸ್ತು.



## ಅಧ್ಯಾಯ 30

### ಪ್ರಥಮ ಭಾಗ

॥ ಓಂ ಗುರೂಣಾಂ ಗುರುವೇ ನಮಃ ॥

### ಶ್ರೀಮದ್ರಂಭಾಪುರೀ ಪರಮ ವೀರಸಿಂಹಾಸನ ಪೀಠದ ಶ್ರೀ ಮಹಾಗುರುವರ್ಗ ದರ್ಪಣ.

॥ ಪೂಜಾ ಮೂಲಂ ಗುರೋರ್ಪಾದಂ ।
ಭಕ್ತಿ ಮೂಲಂ ಗುರೋರ್ಮಂತ್ರಃ ॥
ಧ್ಯಾನ ಮೂಲಂ ಗುರೋರ್ಮೂರ್ತಿಃ ।
ಮೋಕ್ಷ ಮೂಲಂ ಗುರೋಕೃಪಃ ॥ ॥ 1 ॥

॥ ಗುರೂಣಾ ದೀಯತೇ ಲಿಂಗಂ ।
ಗುರೂಣಾ ದೀಯತೇ ಕ್ರಿಯಾಃ ॥
ಗುರೂಣಾ ದೀಯತೇ ಮಂತ್ರಃ ।
ಸದ್ಗುರುಃ ಸರ್ವ ಕಾರಣಂ ॥ ॥ 2 ॥

॥ ಗುರು ದೇವೋ ಮಹಾದೇವೋ ।
ಗುರು ದೇವಸ್ಸದಾಶಿವಃ ॥
ಗುರು ದೈವಾತ್ಪರಂ ನಾಸ್ತಿ ।
ತಸ್ಮೈಶ್ರೀ ಗುರುವೇ ನಮಃ ॥ ॥ 3 ॥

॥ ಆಚಿನೋತಿ ಹಿ ಶಾಸ್ತ್ರಾರ್ಥ ।
ನಾಚಾರೇ ಸ್ಥಾಪಯತ್ಯಪಿ ॥
ಸ್ವಯಮಾಚರತೇ ಯಸ್ತು ।
ಸ ಆಚಾರ್ಯ ಇತಿಸ್ಮೃತಃ ॥ ॥ 4 ॥

॥ ಪ್ರಸಾದವೇ ಜೀವನ ಸತ್ವ ॥ ಓಂ ॥ ಶಿವಾದ್ವೈತವೇ ಜೀವನ ತತ್ವ ॥

ಕ್ರಿ. ಪೂ. 1885 ರಿಂದ (ಅಂದರೆ ಕಲಿಯುಗ ಪ್ರಾರಂಭವಾದುದು ಕ್ರಿ. ಪೂ. 3102ಕ್ಕೆ ಶ್ರೀ ಆದಿ ಜಗದ್ಗುರು ರೇವಣಸಿದ್ಧರು, ಕೊಲ್ಲೀಪಾಕಿ ಸೋಮನಾಥ ಜ್ಯೋತಿರ್ಲಿಂಗ ಮುಖದಿಂದ ಶಿವನಪ್ಪಣೆಯಂತೆ ಆವಿರ್ಭವಿಸಿದುದು ಕ್ರಿ. ಪೂ. 1885 ರಲ್ಲಿ, ಅಷ್ಟು ಹೊತ್ತಿಗೆ ಕಲಿಗತಾಬ್ಧಃ 1217 ವರ್ಷಂಗಳು) ಶ್ರೀಮದ್ರಂಭಾಪುರೀ ವೀರಸಿಂಹಾಸನಾಧ್ಯಕ್ಷ ಶ್ರೀ ಆದಿ 1008 ಜಗದ್ಗುರು ಶಿವಲಿಂಗೋದ್ಭವ ಜಗನ್ ಮಂಗಳ ಮೂರ್ತಿ ಶ್ರೀ ಶ್ರೀ ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರನ್ನು ಮೊದಲು ಮಾಡಿ, ಈವರವಿಗೂ ವೀರಸಿಂಹಾ ಸನದ ಪೀಠಾಧಿಪತಿಗಳಾಗಿ ವಿರಾಜಿಸಿದ, ಜಗದಾಚಾರ್ಯ ಮಹೋದಯರ ಶ್ರೀ ಗುರು ಪರಂಪರೆಯ ವಿವರ :—

॥ ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋ ನಮಃ ॥

## ಶ್ರೀ ಮಹಾಗುರುವರ್ಗ ದರ್ಪಣ

॥ ಪಂಚಾಸ್ಯಾನನ ಪಂಕಜಾತ ಜನಿತರ್ । ಪಂಚಾಸ್ಯ ಪೀಠಾಧಿಪರ್ ।
ಪಂಚಕ್ಲೇಶ ವಿನಾಶಕರ್ । ಪರತರ ಶ್ರೀ ಪಂಚ ಲಿಂಗೋದ್ಭವರ್ ॥
ಪಂಚಾಚಾರ ನಿಯಾಮಕರ್ । ಪರಿಲಸತ್ಪಂಚಾಕ್ಷರೀ ಬೋಧಕರ್ ।
ಪಂಚಾಚಾರ್ಯ ಜಗದ್ಗುರೂತ್ತಮರವರ್ ಪಾಲಿಪ್ಪುದೀ ಲೋಕಮಂ ॥

## ಶ್ರೀ ಜಗದ್ಗುರು ಪಂಚ ಪೀಠಗಳ ಪರಿಚಯ

ಶ್ರೀಮತ್ಕೈಲಾಸದಲ್ಲಿ ಶ್ರೀಮತ್ಪರಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನವೆಂಬ ಪಂಚ ಮುಖಗಳಿಂದ ಅನುಕ್ರಮ ವಾಗಿ ರೇಣುಕ, ದಾರುಕ ಘಂಟಾಕರ್ಣ, ದೇನುಕರ್ಣ, ಮತ್ತು ವಿಶ್ವಕರ್ಣರೆಂಬ ಪಂಚಗಣಾಧೀಶ್ವರರು ಉದಯವಾದರು. ಬಳಿಕ ಈ ಮಹಾತ್ಮರು ಪರಶಿವನ ಆಜ್ಞಾನುಸಾರವಾಗಿ ಪ್ರತಿಯೊಂದು ಯುಗದ ಆದಿಯಲ್ಲಿಯೂ ದಿವ್ಯದೇಹಧಾರಿಗಳಾಗಿ

ಭೂಲೋಕದಲ್ಲಿ ಸನಾತನಕಾಲದಿಂದಲೂ ಪರಮ ಪುಣ್ಯ ಕ್ಷೇತ್ರಗಳಾದ ಶ್ರೀ ಕೊಲ್ಲಿಪಾಕಿ, ಉಜ್ಜಯಿನೀ, ಕೇದಾರ, ಶ್ರೀಶೈಲ ಮತ್ತು ಶ್ರೀ ಕಾಶೀ ಎಂಬಲ್ಲಿ ಶ್ರೀ ಸೋಮನಾಥ, ಸಿದ್ಧೇಶ್ವರ, ರಾಮನಾಥ, ಮಲ್ಲಿಕಾರ್ಜುನ, ಮತ್ತು ಶ್ರೀ ವಿಶ್ವನಾಥರೆಂಬ ಮಹಾ ಜ್ಯೋತಿರ್ಲಿಂಗ ಮುಖಗಳಿಂದ ಅವತರಿಸಿದರು.

## ಶ್ರೀ ಪಂಚ ಪೀಠಗಳನ್ನು ಸ್ಥಾಪನೆ ಮಾಡಿದ್ದು

1) ಆದಿ ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು:- ಕರ್ನಾಟಕ ರಾಜ್ಯದಲ್ಲಿರುವ ರಂಭಾಪುರೀ ( ಬಾಳೆಹೊನ್ನೂರು ) ಪುಣ್ಯ ಕ್ಷೇತ್ರದಲ್ಲಿ ವೀರಪೀಠ ( ಸಿಂಹಾಸನ ) ವನ್ನೂ ;

2) ಶ್ರೀ ಜಗದ್ಗುರು ದಾರುಕ ಶಿವಾಚಾರ್ಯರು, ಮಧ್ಯಪ್ರದೇಶದ ಕುರುಕ್ಷೇತ್ರಕ್ಕೆ ಸಮೀಪದಲ್ಲಿರುವ, ಶ್ರೀ ಉಜ್ಜಯಿನಿ ವಟ ಕ್ಷೇತ್ರದಲ್ಲಿ ತಾವು ಉದ್ಭವಿಸಿದ ಶ್ರೀ ಸಿದ್ದೇಶ್ವರ ಜ್ಯೋತಿರ್ಲಿಂಗದ ಸ್ಥಳದಲ್ಲಿ ತಮ್ಮ ಸನಾತನ ಸದ್ಧರ್ಮ ಸಿಂಹಾಸನವನ್ನು ಸ್ಥಾಪಿಸಿದರು. ಕಾರಣಾಂತರಗಳಿಂದ ಈ ಮಹಾ ಪೀಠವನ್ನು ಆದಿನ ಮಹಾಚಾರ್ಯರು ; ಉಳಿದ ಚತುರಾಚಾರ್ಯರ ಅನುಮತಿ ಪಡೆದು, ಈಗ್ಗೆ 1200 ವರ್ಷಗಳ ಹಿಂದೆ ತಮ್ಮ ಸನಾತನ ಸದ್ಧರ್ಮ ಪೀಠವನ್ನು (ಸಿಂಹಾಸನವನ್ನು) ಬಳ್ಳಾರಿ ಜಿಲ್ಲೆಗೆ ಸೇರಿದ ಉಜ್ಜಯಿನಿಯಲ್ಲಿ ನೂತನವಾಗಿ ನಿರ್ಮಿಸಿ ವಾಸ್ತವ್ಯಮಾಡುತ್ತಾ ಬಂದಿರುವರು.

3) ಶ್ರೀ ಜಗದ್ಗುರು ಏಕೋರಾಮಾರಾಧ್ಯ ಶಿವಾಚಾರ್ಯರು:- ಹಿಮವತ್ ಕೇದಾರ ಕ್ಷೇತ್ರದಲ್ಲಿ ವೈರಾಗ್ಯ ಪೀಠ (ಸಿಂಹಾಸನ) ವನ್ನೂ

4) ಶ್ರೀ ಜಗದ್ಗುರು ಪಂಡಿತಾರಾಧ್ಯ ಶಿವಾಚಾರ್ಯರು:- ಕರ್ನೂಲು ಜಿಲ್ಲೆಯಲ್ಲಿರುವ ಶ್ರೀಶೈಲ ಕ್ಷೇತ್ರದಲ್ಲಿ ಸೂರ್ಯ ಪೀಠ (ಸಿಂಹಾಸನ) ವನ್ನೂ

5) ಶ್ರೀ ಜಗದ್ಗುರು ವಿಶ್ವಾರಾಧ್ಯ ಶಿವಾಚಾರ್ಯರು:- ಶ್ರೀ ಕಾಶೀ ಕ್ಷೇತ್ರದಲ್ಲಿ ಜ್ಞಾನಪೀಠ (ಸಿಂಹಾಸನ) ವನ್ನೂ

ಈ ಪ್ರಕಾರ ಪಂಚ ಪೀಠ (ಸಿಂಹಾಸನ) ಗಳನ್ನು ಏರ್ಪಡಿಸಿ ವೀರಶೈವ ಮತವನ್ನು ಸ್ಥಾಪಿಸಿದರು.

ಈ ಮಹಾಚಾರ್ಯರು ಸ್ಥಾಪಿಸಿರುವ ಧರ್ಮ ಪೀಠಗಳು ಅನಾದಿಕಾಲ

ದಿಂದಲೂ ಇಂದಿನವರೆಗೂ ರಾಜಾಧಿರಾಜಮಾನ್ಯಗಳಾಗಿ ಆಯಾ ಪುಣ್ಯ ಕ್ಷೇತ್ರದಲ್ಲಿ ಅತ್ಯಂತ ವೈಭವದಿಂದ ಮೆರೆಯುತ್ತಿರುವುವು.

ಈ ವೀರಶೈವ ಮತವು ಬಹು ಪ್ರಾಚೀನ ಕಾಲದಿಂದಲೂ ಬಂದುದಾಗಿದೆ. ಋಗಾದಿ ವೇದಗಳೂ, ಕಾಮಿಕಾದಿ ಶಿವಾಗಮಗಳೂ, ಈಶಾವಾಸ್ಯಾದ್ಯುಪನಿಷತ್ತುಗಳೂ ಈ ಮತದ ಸ್ವರೂಪವನ್ನು ವಿಶದವಾಗಿ ಪ್ರತಿಪಾದಿಸುತ್ತಿರುವುವು. ಮತ್ತು ವ್ಯಾಸಮಹರ್ಷಿಗಳು ತಮ್ಮಿಂದ ರಚ್ಚಿಸಲ್ಪಟ್ಟ ಸ್ಕಾಂದ, ಲಿಂಗ, ಶಿವಮಹಾ ಪುರಾಣಾದಿಗಳಲ್ಲಿ ಈ ಮತದ ಸಿದ್ಧಾಂತವನ್ನು ಸ್ಫುಟವಾಗಿ ವಿವರಿಸಿದ್ದಾರೆ.

ವೀರಶೈವ ಧರ್ಮ ಸಾಮ್ರಾಜ್ಯವನ್ನು ಚೆನ್ನಾಗಿ ಪರಿಪಾಲನೆ ಮಾಡಿಕೊಂಡು ಹೋಗಲು ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು. ತಮ್ಮ ತಮ್ಮ ಧರ್ಮ ಪೀಠಗಳಿಗೆ ಉತ್ತರಾಧಿಕಾರವನ್ನು (ಪಟ್ಟವನ್ನು) ಬಂಧಿಸಿ ಮಹಾ ಲಿಂಗಗಳಲ್ಲಿಯೇ ಐಕ್ಯರಾದುದ್ದು ಪ್ರಸಿದ್ಧವಾಗಿದೆ.

ಸದ್ಯಃ ಶ್ರೀ ರಂಭಾಪುರೀ ವೀರಸಿಂಹಾಸನ ಮಹಾ ಪೀಠದ ಶ್ರೀ ಮಹಾಗುರು ಪರಂಪರೆಯ ವಿವರಗಳನ್ನು ತಿಳಿಸಲಾಗುವುದು.

॥ ಶ್ರೀ ಜಗದ್ಗುರು ರೇಣುಕಾಚಾರ್ಯಾಃ ಪ್ರಸಿಕದಂತು ॥

ಜೀಯಾಚ್ಛ್ರೀರೇಣುಕಾಚಾರ್ಯಃ ಶಿವಾಚಾರ್ಯ ಶಿಖಾಮಣಿಃ ।
ಯೋ ವೀರಶೈವ ಸಿದ್ಧಾಂತಂ ಸ್ಥಾಪಯಾಮಾಸ ಭೂತಲೇ ॥

## ಶ್ರೀ ಜಗದ್ಗುರು ಪಂಚ ಪೀಠಗಳ ಪರಿಚಯ

( ವಿಶ್ವ ಧರ್ಮ ಸಿದ್ಧಾಂತ ಪ್ರದವಾದುದು ಶಿವಾದ್ವೈತ ಸಿದ್ಧಾಂತ.
Sivdwaitha Philosophy is a Great Tower of Spiritualism )

### ರಂಭಾಪುರೀ ಪೀಠ

ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯ ದೇಶಿಕೇಂದ್ರರಾದಿಯಾಗಿ ಪರಂಪರೆಯಿಂದ ವೀರ ಸಿಂಹಾನವನ್ನಾರೋಹಣ ಮಾಡುತ್ತಾ ಬಂದಿರುವ ಜಗದ್ಗುರುಗಳವರ ಸಂಖ್ಯೆ ಇಷ್ಟೇ ಎಂದು ನಿರ್ಣಯಿಸಲು ಸಾಧ್ಯವಿಲ್ಲದಿದ್ದರೂ, ನಮಗೆ ದೊರೆತ ಗ್ರಂಥಾಧಾರಗಳ ಮೇಲಿಂದ ಇಲ್ಲಿಯವರೆಗೆ ( 119 ) ನೂರಾಹತ್ತೊಂಬತ್ತು

ಸದ್ಯದ ಪೀಠಾಧೀಶ್ವರರು ಸೇರಿ (120) ನೂರಾಯಿಪ್ಪತ್ತು, ಎಂಬುದಾಗಿ ತಿಳಿದು ಬಂದಿದೆ. ಇವರ ಹೆಸರುಗಳನ್ನು ಕೆಳಗೆ ಕೊಡಲಾಗಿದೆ.

ಓಂ



ಶಿವಲಿಂಗೋದ್ಭವ ಮಂತ್ರಮಯ ಮಂಗಳಮೂರ್ತಿ ಶ್ರೀ ಆದಿ ಜ॥ ರೇವಣಸಿದ್ಧರು

## ಶ್ರೀಮದ್ರಂಭಾಪುರೀ ಜಗದಾದಿ ಜಗದ್ಗುರು "ವೀರಸಿಂಹಾಸನ" ಮಹಾ ಪೀಠದ ಗುರುಪರಂಪರೆಯು ಕೆಳಗಿನಂತಿದೆ :

1 ಶಿವಲಿಂಗೋದ್ಭವ ಜಗದಾದಿ ಶ್ರೀ 1008 ಜಗದ್ಗುರು ರೇವಣಸಿದ್ಧ ಶಿವಾಚಾರ್ಯರು
2 ಜಗದ್ಗುರುಗಳು ರುದ್ರಮುನೀಶ್ವರ ,,
3 ,, ಮುಕ್ತಿಮುನೀಶ್ವರ ,,
4 ,, ದಿಗಂಬರ ಮುಕ್ತಿಮುನೀಶ್ವರ ,,
5 ,, ತ್ರಿಲೋಚನ ಶಿವಾಚಾರ್ಯರು
6 ,, ಯೋಗಿನಾಥ ,,
7 ,, ಮೃತ್ಯುಂಜಯ ,,
8 ,, ರುದ್ರಮುನೀ ,,
9 ,, ಗುರುಪಾದ ,,
10 ,, ಷಣ್ಮುಖ ,,
11 ,, ಶಿವಲಿಂಗ ,,

| | | | |
|---|---|---|---|
| 12 | ಜಗದಾದಿ ಶ್ರೀ 1008 ಜಗದ್ಗುರು | ನಿತ್ಯಾನಂದ | ಶಿವಾಚಾರ್ಯರು |
| 13 | ,, | ಮುಕ್ತಿನಾಥ | ,, |
| 14 | ,, | ಷಡಕ್ಷರ | ,, |
| 15 | ,, | ಗುರುಸಿದ್ಧ | ,, |
| 16 | ,, | ಶಿವಲಿಂಗ | ,, |
| 17 | ,, | ನೀಲಕಂಠ | ,, |
| 18 | ,, | ಕೈವಲ್ಯನಾಥ | ,, |
| 19 | ,, | ಪಂಚಾಕ್ಷರ | ,, |
| 20 | ,, | ಸರ್ವೇಶ್ವರ | ,, |
| 21 | ,, | ಶಂಭುದೇವ | ,, |
| 22 | ,, | ಕಾಲಾಂತಕ | ,, |
| 23 | ,, | ಶಾಂತವೀರ | ,, |
| 24 | ,, | ಮುಕ್ತಿನಾಥ | ,, |
| 25 | ,, | ಶಂಕರಸ್ವಾಮಿ | ,, |
| 26 | ,, | ಸದಾಶಿವ | ,, |
| 27 | ,, | ಮಹಾದೇವ | ,, |
| 28 | ,, | ಗುರುಲಿಂಗ | ,, |
| 29 | ,, | ರೇವಣಸಿದ್ಧ | ,, |
| 30 | ,, | ಪಶುಪತಿ | ,, |
| 31 | ,, | ಶಂಭುಲಿಂಗ | ,, |
| 32 | ,, | ಗುರುಪಾದ | ,, |
| 33 | ,, | ಶ್ರೀಕಂಠಮೂರ್ತಿ | ,, |
| 34 | ,, | ಸಿದ್ಧನಾಥ | ,, |
| 35 | ,, | ಮೃತ್ಯುಂಜಯ | ,, |
| 36 | ,, | ನೀಲಕಂಠ | ,, |
| 37 | ,, | ಸೋಮಶೇಖರ | ,, |
| 38 | ,, | ವೀರಭದ್ರ | ,, |
| 39 | ,, | ಜಗನ್ನಾಥ | ,, |
| 40 | ,, | ಪಂಚಾನನ | ,, |
| 41 | ,, | ಕೆಂಜೆಡೆ ರಾಜಶೇಖರ | ,, |
| 42 | ,, | ನಗರಾರಂಭ | ,, |

195 ಶ್ರೀ ಶೃಂಗೇರಿ ಶಂಕರರಿಗೆ ದತ್ತವಾದ ಶ್ರೀ ಚಂದ್ರಮೌಳಿ ಲಿಂಗ

| | | | | |
|---|---|---|---|---|
| 43 | ಜಗದಾದಿ ಶ್ರೀ 1008 ಜಗದ್ಗುರು | ಸಿದ್ಧನಾಥ | ಶಿವಾಚಾರ್ಯರು | II |
| 44 | ,, | ರುದ್ರಮುನೀಶ್ವರ | ,, | II |
| 45 | ,, | ಕಲ್ಯಾಣ ಸುಂದರ | ,, | |
| 46 | ,, | ಗಂಗಾಧರ | ,, | |
| 47 | ,, | ಪಂಚಾಕ್ಷರ | ,, | |
| 48 | ,, | ಚಿದಂಬರದೇವ | ,, | |
| 49 | ,, | ಶಿವಪ್ರಸಾದ | ,, | |
| 50 | ,, | ವೀರಭದ್ರ | ,, | II |
| 51 | ,, | ಶಿವಾನಂದ | ,, | |
| 52 | ,, | ಅವಿಮುಕ್ತಕ | ,, | |
| 53 | ,, | ರೇವಣಸಿದ್ಧ | ,, | III |
| 54 | ,, | ಮಲ್ಲಿಕಾರ್ಜುನ | ,, | I |
| 55 | ,, | ಪಶುಪತಿ | ,, | II |
| 56 | ,, | ರೇವಣಸಿದ್ಧ | ,, | IV |
| 57 | ,, | ಪ್ರಮಥನಾಥ | ,, | |
| 58 | ,, | ಗುರುದೇವ | ,, | I |
| 59 | ,, | ಗಂಗಾಧರ | ,, | II |
| 60 | ,, | ನಂದಿನಾಥ | ,, | |
| 61 | ,, | ಮುಕ್ತಿಮುನೀಶ್ವರ | ,, | |
| 62 | ,, | ಶಂಭುದೇವ | ,, | II |
| 63 | ,, | ತಾಡವಾಲೆ ಪಂಚಾಕ್ಷರ | ,, | |
| 64 | ,, | ಗುರುದೇವ | ,, | II |
| 65 | ,, | ಜಟಾವೀರಭದ್ರ | ,, | |
| 66 | ,, | ಶಿವಲಿಂಗ | ,, | III |
| 67 | ,, | ವಿರೂಪಾಕ್ಷ | ,, | |
| 68 | ,, | ಶ್ರೀಕಂಠ | ,, | |
| 69 | ,, | ಅಘೋರ | ,, | |
| 70 | ,, | ಗುರುಪಾದ | ,, | III |
| 71 | ,, | ಈಶಾನದೇವ | ,, | |
| 72 | ,, | ಮಲ್ಲಿಕಾರ್ಜುನ | ,, | II |
| 73 | ,, | ಚರಲಿಂಗ | ,, | |

74 ಜಗದಾದಿ ಶ್ರೀ 1008 ಜಗದ್ಗುರು ಪುಣ್ಯಶ್ಲೋಕ ಶಿವಾಚಾರ್ಯರು
ಗಂಗಾಧರ
75 " " III
ಸೋಮನಾಥ
76 " "
ಪೃಥ್ವಿಧ್ವಜ ಮಹೇಶ್ವರ "
77 "
ವೀರೇಶ್ವರ
78 " "
ಘಂಟಾಸಿದ್ಧ
79 " "
ವೃಷಭೇಂದ್ರ
80 " " I
ಸದಾನಂದ
81 " "
ಗುರುಲಿಂಗ
82 " " II
ರುದ್ರಮುನೀಶ್ವರ
83 " " III
ವೀರಭದ್ರ
84 " " II
ಗಣನಾಥ
85 " "
ಮಲ್ಲಿಕಾರ್ಜುನ
86 " " II
ಶಕ್ತಿಧರ
87 " "
ಸಿದ್ಧಲಿಂಗ
88 " "
ಚಿತ್ಪ್ರಕಾಶ
89 " "
ಶಂಭುದೇವ
90 " " III
ರುದ್ರಮುನೀಶ್ವರ
91 " " IV
ಸಾರಂಗಧರ
92 " "
ಕುಮಾರದೇವ
93 " "
ಶಿವಪ್ರಸಾದ
94 " " II
ಚಂದ್ರಶೇಖರ
95 " " I
ಚನ್ನವೀರದೇವ
96 " "
ವಾಮದೇವ
97 " "
ನೀಲಕಂಠದೇವ
98 " "
ರೇವಣಸಿದ್ಧ
99 " " V
ಶಿವಲಿಂಗ
100 " " IV
ಚಿದ್ಘನದೇವ
101 " "
ನಾಗನಾಥ
102 " "
ಗಂಗಾಧರ
103 " " IV
ಚಂದ್ರಶೇಖರ
104 " " II

105 ಜಗದಾದಿ 1008 ಶ್ರೀ ಜಗದ್ಗುರು ಪೂರ್ಣಜ್ಞಾನ ಶಿವಾಚಾರ್ಯರು
106 .. ಶಂಭುಲಿಂಗ .. ||
107 .. ಚೆನ್ನವೃಷಭಲಿಂಗ ..
108 .. ಜಟಾವೃಷಭಲಿಂಗ ..
109 .. ಶಾಂತದೇವ ..
110 .. ಗುರುವೃಷಭರಾಜೇಂದ್ರ ..
111 .. ಪಂಚಾಕ್ಷರ ..
112 .. ಗುರುಸಿದ್ಧಸ್ವಾಮಿ ..
113 .. ಚಂದ್ರರಾಜೇಂದ್ರ ..
114 .. ಚಂದ್ರಶೇಖರ ದೇಶಿಕೇಂದ್ರ .. ||
115 .. ಶಿವಾನಂದ ರಾಜೇಂದ್ರ ..
116 .. ಗುರು ವೃಷಭರಾಜೇಂದ್ರ ..
117 .. ಪಂಚಾಕ್ಷರ ಶಿವಾಚಾರ್ಯರು ..
118 .. ಅಭಿನವ ರೇಣುಕ ಶಿವಾನಂದ ..
119 .. ಪ್ರಸನ್ನ ರೇಣುಕ ವೀರಗಂಗಾಧರ V
120 .. * ಪ್ರಸನ್ನ ರೇಣುಕ
ವೀರ ರುದ್ರಮುನಿದೇವ .. ||
(ಇಂದಿನ ಪೀಠಾಧೀಶರು)

* ಶ್ರೀ ಜಗದ್ಗುರುಗಳ ಪಟ್ಟಾಧಿಕಾರ ತಾ|| 15–5–1972 ಸೋಮವಾರ ವೈಶಾಖ ಶುಕ್ಲ 3ರಲ್ಲಿ ನೆರವೇರಿತು.

ಶ್ರೀ ರಂಭಾಪುರೀ ಮಹಾ ಗುರು ಪೀಠದಲ್ಲಿ ಶಿವಲಿಂಗೋದ್ಭವ ಶ್ರೀ ಆದಿ ಜ. ರೇವಣಸಿದ್ಧರು ಕ್ರಿ. ಪೂ. 1885ರಲ್ಲಿ ಕೊಲ್ಲಿಪಾಕಿ ಸೋಮನಾಥ ಶಿವಲಿಂಗ ಮುಖದಿಂದ ಆವಿರ್ಭವಿಸಿ 1400 ವರ್ಷಗಳು ಅಂದರೆ ಕ್ರಿ. ಪೂ, 485ರ ಕೊನೆಯಲ್ಲಿ ಆ ಲಿಂಗ ಮುಖದಲ್ಲಿ ಅಂತರ್ಧಾನರಾದ ನಂತರ ಇಂದಿನವರೆವಿಗೂ 119 ಗುರುಗಳು ಶ್ರೀ ರಂಭಾಪುರಿಯ ಶ್ರೀ ವೀರಸಿಂಹಾಸನಾಧಿಪತಿಗಳಾಗಿ ಆಗಿರುವರೆಂದು ಕಂಡು ಬರುತ್ತೆ. (ಅಂದರೆ ಒಟ್ಟು 120 ಜಗದ್ಗುರುಗಳು).

–●–

ಇಲ್ಲಿ ಗಮನೀಯವಾದ ಅಂಶವೆಂದರೆ

ಕೆಲವು ಸಂದರ್ಭಗಳಲ್ಲಿ ಶ್ರೀ ರಂಭಾಪುರೀ ಜ. ಮಹಾಪೀಠದಲ್ಲಿ ಏಕಕಾಲದಲ್ಲಿ "ಸ್ಥಿರ" ಮತ್ತು "ಚರ" ಪಟ್ಟಾಧಿಕಾರಿ ಮಹಾಚಾರ್ಯದ್ವಯರು ಸಮಾನ ಸ್ಪಂದ.

ರಾಗಿ ಒಮ್ಮನಸ್ಸಿನಿಂದ, ಪ್ರಭುತ್ವ ನಡೆಸಿರುವ ಕಾರಣ, ಈ ಪೀಠದಲ್ಲಿ ಕ್ರಿ. ಪೂ. 485 ರಿಂದ ಇಂದಿನ 1985ರ ವರೆವಿಗೆ ಅಂದರೆ 2470 ವರ್ಷಗಳ ಕಾಲಾವಧಿಯಲ್ಲಿ 119 ಆಚಾರ್ಯರು ಪ್ರಕಾಶಿತರಾಗಿದ್ದಾರೆ.

"ಸ್ಥಿರ ಮತ್ತು ಚರ" ಮೂರ್ತಿದ್ವಯರಿಗೂ ಏಕಕಾಲದಲ್ಲಿ ಶ್ರೀ ಮಹಾಗುರು ಪೀಠ ಒಂದೇ ಆದ್ದರಿಂದ, ಈರ್ವ ಮಹಾಚಾರ್ಯರೊಬ್ಬರೆಂದೇ ಪರಿಗಣಿಸಲಾಗಿದೆ. ಇದರಂತೆ ನೋಡಿದಾಗ ಕ್ರಿ. ಪೂ. 485 ರಿಂದ ಕ್ರಿ. ಶ. 1985ಕ್ಕೆ 2470 ವರ್ಷಗಳಾಗುವುವು.

ಈ ಮಹಾಪೀಠದಲ್ಲಿ ಮೇಲಿನಂತೆ ಸರಾಸರಿ 70 ಮಹಾಚಾರ್ಯರು ವೀರ ಸಿಂಹಾಸನಾಧಿಪತಿಗಳಾಗಿದ್ದರೆಂದು ನೋಡಿದಾಗ, ಈ ಪ್ರತಿ ಪೀಠಾಧಿಪತಿಗಳು ಸರಾಸರಿ 35 ವರ್ಷ ಅಧಿಕಾರಾ ರೂಢರಾಗಿದ್ದರೆಂದು ಪರಿಗಣಿಸಿದಾಗ 35 ವರ್ಷ × 70 ಪೀಠಾಧಿಪತಿಗಳು. ಗತಿಸಿದ 2450 ವರ್ಷಗಳ ಕಾಲಾವಧಿಯಲ್ಲಿ ಶ್ರೀ ರಂಭಾಪುರೀ ಮಹಾಪೀಠದಲ್ಲಿದ್ದರೆಂದು ಹೇಳಬಹುದು. ಒಮ್ಮೊಮ್ಮೆ ಆಚಾರ್ಯದ್ವಯರಿರುತ್ತಿದ್ದರು.

ಈ 2470 ವರ್ಷಗಳ ಕಾಲಾವಧಿಯಲ್ಲಿ ಶ್ರೀ ಶೃಂಗೇರಿ ಇತ್ಯಾದಿ ಚತುರಾಮ್ನಾಯ ಮಠಗಳಲ್ಲೂ 70 ರಿಂದ 74 ಆಚಾರ್ಯರುಗಳು ಪ್ರತಿ ಮಠದಲ್ಲೂ ಪೀಠಾಧಿಪತಿಗಳಾಗಿದ್ದರೆಂಬ ಬಗೆಗೆ ಶ್ರೀ ಕಂಚಿ ಕಾಮಕೋಟಿ ಪೀಠಾಧೀಶ್ವರರು ಪ್ರತಿ ಶಂಕರ ಮಠಗಳ ಪ್ರಾಚೀನ ಗ್ರಂಥಾಧಾರಗಳನ್ನು ಪರಿಗಣಿಸಿ ಅಭಿಪ್ರಾಯ ಪಟ್ಟಿರುತ್ತಾರೆ. ಮೇಲುಕ್ತವಾದ ಸುದೀರ್ಘ ಕಾಲಾವಧಿಯಲ್ಲಿ ಶ್ರೀ ಕಂಚಿಕಾಮಕೋಟಿ ಪೀಠದಲ್ಲಿ ಅಧಿಕೃತವಾಗಿ ತಿಳಿದು ಬಂದಿರುವಂತೆ 69 ಆಚಾರ್ಯ ಮಹಾಪುರುಷರು ಪ್ರಕಾಶಿತರಾಗಿರುವರು. ಅಸ್ತು.

ಪೂರ್ವ ಕಾಲದಲ್ಲಿ ವಾಹನ ಸಂಚಾರಗಳಿಲ್ಲದ್ದರಿಂದ ಅಂದಿನ ಚರಪಟ್ಟಾಧಿಕಾರಿ ಶ್ರೀ ಜಗದ್ಗುರುಗಳು, ಬೋವಿಗಳು ಹೊತ್ತ ಮೇನಾದಲ್ಲಿ ಕುಳಿತು ಧರ್ಮಪ್ರಚಾರ ಭಕ್ತೋದ್ಧಾರ ಕಾರ್ಯಗಳ ನಿಮಿತ್ತ ಹೊರಟು ದೂರದ ದೇಶಗಳಲ್ಲಿ ಸಂಚರಿಸಿ, ಶಿಷ್ಯರಿಗೆ ದರ್ಶನಾಶೀರ್ವಾದಗಳನ್ನಿತ್ತು ಹಿಂದಿರುಗಲು ಕೆಲವು ವರ್ಷಗಳಾಗುತ್ತಲಿದ್ದವು. ಇಂಥಾ ಸಂದರ್ಭಗಳಲ್ಲಿ ಸ್ಥಿರ ಪಟ್ಟಾಧಿಕಾರಿಗಳು ಶ್ರೀ ಪೀಠದಲ್ಲಿದ್ದು ಮಠದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಾ ಭಕ್ತೋದ್ಧಾರ ಕಾರ್ಯವೆಸಗುತ್ತಿದ್ದರು. ಒಮ್ಮೊಮ್ಮೆ ಆಚಾರ್ಯದ್ವಯರಿರುತ್ತಿದ್ದರು.

॥ ಶಿವಂ ಶಾಂತಂ ॥

## ದ್ವಿತೀಯ ಭಾಗ

ಮೋಹೋ ಬ್ರಹ್ಮಣಿ ಬಧ್ಯತಾಂ । ತದಿತರೇಭಾಧಂ ಸಮುತ್ಸೃಜ್ಯತಾಂ ॥
ಸರ್ವಂ ಶೈವ ಮಿತೀರ್ಯತಾಂ । ಪರಶಿವಾದ್ವೈತೇ ಮತಿರ್ಯುಜ್ಯತಾ ॥
ಕೈವಲ್ಯಂ ಪರಿಮೃಗ್ಯತಾಂ । ವರಪರಬ್ರಹ್ಮೈಕ್ಯತ್ಯಹಂ ಭಾವ್ಯತಾಂ ॥
ಪಂಚಾಚಾರ್ಯ ಪದಾಂಬು ಜೇಷು । ಸತತಂ ಚೇತಸ್ಸಮಾಧೀಯತಾಂ ॥ 1 ॥

ಕೈಲಾಸಾಚಲ ಕಂದರಾಲಯಕರೀ । ಗೌರೀ ಶಿವಾ ಶಂಕರೀ ॥
ಕೌಮಾರೀ ನಿಗಮಾರ್ಥ ಗೋಚರ ಕರೀ ಓಂಕಾರ ಬೀಜಾಕ್ಷರೀ
ಮೋಕ್ಷದ್ವಾರ ಕವಾಟ ಪಾಟನಕರೀ ಕಾಶೀಪುರಾಧೀಶ್ವರೀ ।
ಭಿಕ್ಷಾಂದೇಹಿ ಕೃಪಾವಲಂಬನಕರೀ ಮಾತಾನ್ನ ಪೂರ್ಣೇಶ್ವರೀ ॥ 2 ॥

ಅಯಿ ಗಿರಿ ನಂದಿನಿ ನಂದಿತಮೋದಿನಿ ನಂದಿನುತೇ ।
ಗಿರಿ ವರ ವಿಂಧ್ಯ ಶಿರೋಧಿನಿ ವಾಸಿನಿ ಶಂಭುವಿಲಾಸಿನಿ ವಿಶ್ವನು ತೇ ।
ಭಗವತಿ ಹೇ ಶಿತಿಕಂಠ ಕುಟುಂಬಿನಿ ಭಕ್ತಜನಾವಳಿ ಕಲ್ಪಲತೇ ॥
ಜಯ ಜಯ ಹೇ ಮಹಿಷಾಸುರ ಮರ್ಧಿನಿ ರಮ್ಯಕಪರ್ದಿನಿ ಶೈಲಸುತೇ ॥3॥

ಶಿವಾಧಿಪಂ ವೃಷಾಧಿಪಂ ಗಣಾಧಿಪಂ ಗುಣಾಧಿ ಪಂ ।
ಧರಾಧಿಪಂ ಚರಾಧಿಪಂ ನರಾಧಿಪಂ ಸುರಾದಿಪಂ ।
ಭಗಾಧಿಪಂ ಬುಧಾಧಿಪಂ ಸುಧಾಧಿಪಂ ಶುಭಾಧಿತಂ ।
ಜಯಾಧಿಪಂ ಲಯಾಧಿಪಂ ಭಜಾಮಿ ಚಿತ್ಸುಖಾಧಿಪಂ ॥ 4 ॥

ಕ್ಷಮಾಕರಂ ಪ್ರಮಾಕರಂ ಪ್ರಭಾಕರ ಪ್ರಭಾಕರಂ ।
ಮಹಸ್ಕರಂ ಯಶಸ್ಕರಂ ಶಿವಾಮನೋಬ್ಜ ಭಾಸ್ಕರಂ ।
ಶಿವಂಕರಂ ಪರಾತ್ಪರಂ ದಿಗಂಬರಂ ಚಿದಂಬರಂ ।
ಮಹೇಶ್ವರಂ ನಟೇಶ್ವರಂ ಭಜಾಮಿ ಚಂದ್ರಶೇಖರಂ ॥ 5 ॥

## ಶ್ರೀ ಜಗದ್ಗುರು

## ರೇಣುಕಾಚಾರ್ಯಾಷ್ಟೋತ್ತರ ಶತನಾಮಾವಲಿಃ

ಸದ್ಯೋಜಾತ ಮುಖೋದ್ಭೂತಂ ಸದ್ಯೋ ವೈಭವ ದಾಯಕಂ ।
ಸಿದ್ಧಿದಂ ಸಿದ್ಧವೃಂದಸ್ಯ ವಂದೇ ಶ್ರೀರೇಣುಕಂ ಗುರುಂ ॥

ಓಂ
ಶ್ರೀ ರೇಣುಕಾಚಾರ್ಯಾಯ ನಮಃ
ರೇವಣಸಿದ್ಧಾಯ ನಮಃ
ರೇಚಕಾದಿನಿರತಾಯ ನಮಃ
ಅಣುರೂಪಾಯ ನಮಃ
ಅಪಾರಮಹಿಮ್ನೇ ನಮಃ
ಅಪ್ರಾಕೃತಾಯ ನಮಃ
ಅಪ್ರಾಕೃತವರ್ಣಾಶ್ರಮಸ್ಥಾಪಕಾಯ [ನಮಃ
ಅಶ್ವತ್ಥದಂಡಧರಾಯ ನಮಃ
ಅಸಂಖ್ಯಲೀಲಾಯ ನಮಃ
ಅಖಂಡಾಯ ನಮಃ ॥10॥
ಆಖಂಡಲಸಮಿತಾಯ ನಮಃ
ಆಗಮಸ್ತುತಾಯ ನಮಃ
ಉಪನಿಷದ್ವಂದ್ಯಾಯ ನಮಃ
ಏಕಾಕ್ಷರಶಿವಾಚಾರ್ಯಾಯ ನಮಃ
ಏಕಮುಖಾಚಾರ್ಯಾಯ ನಮಃ
ಗಗನಾಯನಾಯ ನಮಃ
ಗೋರಕ್ಷನಾಥಗರ್ವಹರಾಯ ನಮಃ
ತ್ರಿಕೋಟಿಗುರುರೂಪಧರಾಯ ನಮಃ
ತ್ರಿಲೋಕೀತಿಲಕಾಯಮಾನಾಯನಮಃ
ತ್ರಿಗುಣಾತೀತಾಯ ನಮಃ ॥ 20 ॥
ತ್ರಿದಶವಂದಿತಾಯ ನಮಃ
ತ್ರಿಲೋಚನಾಯ ನಮಃ
ತ್ರಿಲೋಚನಧರಾಯ ನಮಃ
ತ್ರಿಲೋಚನಪೂಜಾಪರಾಯ ನಮಃ
ತ್ರಿಮಲಮೂಲೋತ್ಪಾಟಕಾಯ ನಮಃ
ತ್ರಿಪುಂಡ್ರಧಾರಿಣೇ ನಮಃ
ತ್ರಿಪುಟೀಸಂಧಾನದಾಯಿನೇ ನಮಃ
ತ್ರಿಭೇದಿಮತಮರ್ದನಾಯ ನಮಃ
ತ್ರಿಲಿಂಗಜ್ಞಾನದಾಯ ನಮಃ
ತ್ರಿಲಿಂಗಿಜನಪೂಜಿತಾಯ ನಮಃ ॥30॥
ತ್ರಿಜನ್ಮದುರಿತದಾರಾಯ ನಮಃ
ತ್ರಿಮೂರ್ತಿಪ್ರಭವೇ ನಮಃ
ತ್ರಿಕಾಲಜ್ಞಾನಿನೇ ನಮಃ
ತ್ರಿಶಕ್ತಿರೂಪಾಯ ನಮಃ
ತ್ರಿವಿಧದುಃಖಧ್ವಂಸಕಾಯ ನಮಃ
ತ್ರಿರೂಪಧರಾಯ ನಮಃ
ದೀಕ್ಷಾಗುರವೇ ನಮಃ
ಶಿಕ್ಷಾಗುರವೇ ನಮಃ
ಮೋಕ್ಷಗುರವೇ ನಮಃ
ಜಗದ್ಗುರವೇ ನಮಃ ॥40॥
ನಿಗಮಗಮ್ಯಾಯ ನಮಃ
ನಿರಂಜನಾಯ ನಮಃ
ನಿರೂಢಾದ್ವೈತಾಯ ನಮಃ
ನಿಷ್ಕಲಾಯ ನಮಃ
ನಿರ್ಮೋಹಾಯ ನಮಃ
ನಿರ್ದ್ವಂದ್ವಾಯ ನಮಃ

ನಿರಾಭಾರಿಣೇ ನಮಃ
ನಿರಾಭಾರಿಶಿಷ್ಯ ಸಮೂಹಾಲಂಕೃತಾಯ [ನಮಃ
ಪಂಚಕ್ಲೇಶ ನಾಶಾಯ ನಮಃ
ಪಂಚತ್ವದೂರಾಯ ನಮಃ ॥50॥
ಪಂಚತ್ವದಾರಾಯ ನಮಃ
ಪಂಚಾಯುಧ ಧ್ವಂಸಕಾಯ ನಮಃ
ಪಂಚಾನನ ಪ್ರಭಾಯ ನಮಃ
ಪಂಚಾನನ ಪೀಠಾಯ ನಮಃ
ಪಂಚಾಚಾರಪ್ರಬೋಧಕಾಯ ನಮಃ
ಪರಬ್ರಹ್ಮಸ್ವರೂಪಾಯ ನಮಃ
ಪವಿತ್ರಕರಾಯ ನಮಃ
ಪ್ರಸಾದಪಂಚಾಕ್ಷರೋಪದೇಶಕಾಯ [ನಮಃ
ಪ್ರತಾಪಸಿಂಹಾಸನ
ಪ್ರತಿಷ್ಠಾಪಕಾಯ ನಮಃ
ಪ್ರಮಥಪುಂಗವಾಯ ನಮಃ ॥60॥
ಪ್ರಥಮಾಚಾರ್ಯಾಯ ನಮಃ
ಪೂರ್ವಕಲಶಾಧೀಶಾಯ ನಮಃ
ದ್ವಾದಶಸಹಸ್ರಚರಲಿಂಗಾಧ್ಯಕ್ಷಾಯ [ನಮಃ
ದ್ವಾದಶಸಹಸ್ರಕನ್ಯಾಪ್ರಾಣ
ಪ್ರದಾಯಿನೇ ನಮಃ
ದುಷ್ಟನಿಗ್ರಹಾಯ ನಮಃ
ದೃಷ್ಟಾಂತಾದೃಷ್ಟಾಯ ನಮಃ
ದೈತ್ಯದ್ವಯಧ್ವಂಸಿನೇ ನಮಃ
ಭದ್ರದಾಯ ನಮಃ
ಭದ್ರಾತೀರವಾಸಿನೇ ನಮಃ
ಭವರೋಗಭಿಷಜೇ ನಮಃ ॥70॥
ಭಗವಚ್ಚರಣಾಯ ನಮಃ
ಭಸ್ಮಘುಂಟಿಕಾಲಂಕೃತಾಯ ನಮಃ
ಭಸ್ಮಮಯಾಯ ನಮಃ
ಭಾಷ್ಯಕರ್ತ್ರೇ ನಮಃ
ಭಾವಗಮ್ಯಾಯ ನಮಃ
ಮಲಯಪರ್ವತಪವಿತ್ರಕರಾಯ ನಮಃ
ರಂಭಾಪುರೀನಿವಾಸಾಯ ನಮಃ
ವರದರಾಜಶಿರಃ ಸ್ಥಿರಕರಾಯ ನಮಃ
ವಿಕ್ರಮಮನೋಽಭೀಷ್ಟದಾಯ ನಮಃ
ವಿಭೀಷಣಾಭೀಷ್ಟವರಪ್ರದಾಯ ನಮಃ ॥80॥
ವಿಶ್ವರೂಪಾಯ ನಮಃ
ವಿಧಿವಿಧಾಯಿನೇ ನಮಃ
ವೀರಗೋತ್ರಾಧಿನಾಥಾಯ ನಮಃ
ವೀರಶೈವಸಿದ್ಧಾಂತಸ್ಥಾಪಕಾಯ ನಮಃ
ವೈರಾಗ್ಯಶೀಲಾಯ ನಮಃ
ಲಿಂಗಯಜ್ಞೋಪವೀತಿನೇ ನಮಃ
ಶಂಕರಾಚಾರ್ಯಲಿಂಗಪ್ರದಾಯಿನೇ [ನಮಃ
ಶಾಂತಸ್ವರೂಪಾಯ ನಮಃ
ಶಿವತತ್ತ್ವಾನುಗ್ರಾಹಕಾಯ ನಮಃ
ಶಿವಲಾಂಛನಧಾರಕಾಯ ನಮಃ ॥90॥
ಸರ್ವಲೋಕಸಂಚಾರಿಣೇ ನಮಃ
ಸರ್ವತಂತ್ರಸ್ವತಂತ್ರಾಯ ನಮಃ
ಸಮಸ್ತಕ್ಷೇತ್ರಪವಿತ್ರಕರಾಯ ನಮಃ
ಸದ್ಯೋಜಾತಮುಖೋದ್ಭವಾಯ ನಮಃ
ಸೂರ್ಯಕೋಟಿಪ್ರಕಾಶಾಯ ನಮಃ
ಸೋಮೇಶ್ವರಲಿಂಗಸಂಭವಾಯ ನಮಃ
ಸ್ವೇಚ್ಛಾವಿಗ್ರಹಾಯ ನಮಃ
ಷಟ್ತ್ರಿಂಶಜ್ಜಟಾಮುಕುಟಮಂಡಿತಾಯ [ನಮಃ
ಷಟ್ತ್ರಿಂಶತ್ತತ್ತ್ವಸ್ವರೂಪಾಯ ನಮಃ
ಷಟ್ಸ್ಥಲಜ್ಞಾನಕಾರಣಾಯ ನಮಃ ॥100॥
ಷಡಧ್ವಸ್ವರೂಪದರ್ಶಕಾಯ ನಮಃ

ಹರಿತ್ಕಂಥಾಯ ನಮಃ
ಹರಿದ್ವರ್ಣಾಯ ನಮಃ
ಹರಿದ್ವರ್ಣಕಮಂಡಲುಧಾರಿಣೇ ನಮಃ
ಹರಿವಂದ್ಯಾಯ ನಮಃ
ಹರಿಸಂಪದ್ದಾಯಿನೇ ನಮಃ
ಕ್ಷಾಂತಿಮಯಾಯ ನಮಃ
ಕಾಶೀನಾಥಮನಸ್ಸರೋಜ
ಹಂಸಾಯ ನಮಃ॥ 108 ॥

ಅಷ್ಟೋತ್ತರಶತಂ ನಾಮಧೇಯಾನಿ ಶ್ರೀ ಜಗದ್ಗುರೋಃ ।
ಭಕ್ತ್ಯಾ ಪಠಂತಿ ಯೇ ನಿತ್ಯಂ ತೇ ಯಾಂತಿ ಪರಮಾಂ ಗತಿಂ ॥

ನಾಮಾನ್ಯೇತಾನಿ ದಿವ್ಯಾನಿ ಮುಮುಕ್ಷೋರ್ಮೋಕ್ಷಸಿದ್ಧಯೇ ।
ಪ್ರೋಕ್ತವಾನ್ ಪರಯಾ ಭಕ್ತ್ಯಾ ಕಾಶೀನಾಥಕವಿರ್ವರಃ ॥

ಇತಿ ಶ್ರೀ ಕಾಶೀನಾಥ ಪಂಡಿತವಿರಚಿತಾ
ಶ್ರೀ ಜಗದ್ಗುರು ರೇಣುಕಾಚಾರ್ಯಾಷ್ಟೋತ್ತರ ಶತನಾಮಾವಲಿಃ ಸಂಪೂರ್ಣಾ

— ೦ —

## ಶ್ರೀ ಜಗದ್ಗುರು ರೇಣುಕಪಂಚಕಂ

ಸೋಮಸೋಮಧಾರಿಣಂ ಸುಕಾಮಪೂರ್ಣಕಾರಿಣಂ
ಧಾಮಧಾಮಪೂರಿಣಂ ಕುಕಾಮಮಾನಹಾರಿಣಂ ।
ಭೀಮಭೀಮರೂಪಿಣಂ ಶಿವಾಗಮಸ್ವರೂಪಿಣಂ
ರಾಜರಾಜಪೂಜಿತಂ ಭಜಾಮಿ ರೇಣುಕಂ ಗುರುಂ ॥ 1 ॥

ಕ್ಲೇಶಮೂಲಶೋಷಣಂ ಪ್ರಕಾಶಮಾನಭಾಷಣಂ ।
ಕಾಂಚಿಕೃಷ್ಣಪೋಷಣಂ ಪರಿಸ್ತುವದ್ವಿಭೀಷಣಂ ।
ಕಾಲಕಾಲತೋಷಣಂ ವಿಶಾಲವೇಷಭೂಷಣಂ ।
ರಾಜರಾಜಪೂಜಿತಂ ಭಜಾಮಿ ರೇಣುಕಂ ಗುರುಂ ॥ 2 ॥

ಸೋಮನಾಥಸಂಭವಂ ವಿಬುದ್ಧಕುಂಭಸಂಭವಂ ।
ಸಂಪ್ರಸಕ್ತಶಾಂಭವಂ ನಿಬದ್ಧನಿತ್ಯಶಾಂಭವಂ
ಶಾಂತಿದಾಂತಿಸಂಭವಂ ಪರೀತಸರ್ವವೈಭವಂ ।
ರಾಜರಾಜಪೂಜಿತಂ ಭಜಾಮಿ ರೇಣುಕಂ ಗುರುಂ ॥ 3 ॥

ಚೋಲಭೂಪಸೇವಿತಂ ಸುಭಾಲನೇತ್ರಶೋಭಿತಂ ।
ಶಂಕರಾರ್ಯಕೀರ್ತಿತಂ ಕಲಂಕಶೂನ್ಯಮೂರ್ತಿತಂ ।
ವಿಕ್ರಮಾದಿವಂದಿತಂ ತ್ರಿವಿಕ್ರಮಾದಿನಂದಿತಂ ।
ರಾಜರಾಜಪೂಜಿತಂ ಭಜಾಮಿ ರೇಣುಕಂ ಗುರುಂ ॥ 4 ॥

ವೇದತತ್ತ್ವಶೋಧಕಂ ತ್ರಿವೇದಭಾಷ್ಯಕಾರಕಂ ।
ಮುಕ್ತಿಮಾರ್ಗಬೋಧಕಂ ಷಡಧ್ವರೂಪದರ್ಶಕಂ ।
ವೀರವೃತ್ತಿಧಾರಕಂ ವಿರಕ್ತವೃಂದಪಾಲಕಂ ।
ರಾಜರಾಜಪೂಜಿತಂ ಭಜಾಮಿ ರೇಣುಕಂ ಗುರುಂ ॥ 5 ॥

ಕಾಶೀನಾಥಕವಿಪ್ರೋಕ್ತಂ ರೇಣುಕಾಚಾರ್ಯಪಂಚಕಂ ।
ಯಃ ಪಠೇತ್ಪರಯಾ ಭಕ್ತ್ಯಾ ಸ ಪ್ರಾಪ್ನೋತಿ ಪರಂ ಪದಂ ॥

ಇತಿ ಶ್ರೀ ಕಾಶೀನಾಥಪಂಡಿತ ವಿರಚಿತಂ ಶ್ರೀ ರೇಣುಕಪಂಚಕಂ ಸಂಪೂರ್ಣಂ

# ಶ್ರೀ ರೇಣುಕಾಚಾರ್ಯಸ್ತೋತ್ರಂ

ನಮೋನಮಸ್ತೇ ಶಿವಭಕ್ತಪಕ್ಷ ನಮೋನಮಸ್ತೇ ಸುಜನಾಲಿರಕ್ಷ ।
ನಮೋನಮಸ್ತೇ ಪರವಾದಿರೂಕ್ಷ ನಮೋನಮಸ್ತೇ ವಿಜಿತಾಖಿಲಾಕ್ಷ ॥ 1 ॥

ನಮೋನಮೋ ಮೋಕ್ಷವಿಚಾರದಕ್ಷ ನಮೋನಮೋ ವೇದವಿಧಾನಶಿಕ್ಷ ।
ನಮೋನಮಃ ಪಾಪಕೃತಾಂ ವಿಪಕ್ಷ ನಮೋನಮೋ ರೇವಣಕಲ್ಪವೃಕ್ಷ ॥ 2 ॥

ಭದ್ರಾಂಕುರಾಯ ಭಜತಾಮಭಯಂಕರಾಯ ।
ಮೋಹಾಂಧಕಾರರವಯೇ ಕವಯೇ ಮಾನೂನಾಂ ॥
ಕೈವಲ್ಯಕಲ್ಪತರವೇ ಗುರವೇ ಗುರೂಣಾಂ ॥
ಶ್ರೀರೇಣುಕಾಯ ಗಣಪಾಯ ನಮೋಽಸ್ತು ತುಭ್ಯಂ ॥ 3 ॥

ನ ಸೇವೇ ರಮೇಶಂ ನ ಸೇವೇ ಪ್ರಜೇಶಂ ।
ನ ಸೇವೇ ಸುರೇಶಂ ನ ಸೇವೆ ಗಣೇಶಂ ॥
ಮಹೇಶಪ್ರಭಾವಂ ಮಹಾಚಾರ್ಯದೇವಂ ।
ಮಹೋಬದ್ಧದೇಹಂ ಭವಂತಂ ಭಜೇಹಂ ॥ 4 ॥

ಸಂಸಾರ ಮಾಯಸದ್ವೈದ್ಯ ಜ್ಞಾನಸಾಗರವರ್ಧನ ।
ಸರ್ವಜ್ಞ ಸಕಲಾಧಾರ ಸರ್ವಾಭೀಷ್ಟಫಲಪ್ರದ ॥ 5 ॥

ಕೇನಚಿತ್ಕಾರಣೇನಾಹಂ ಶಿವವಾಕ್ಯಾನುಸಾರತಃ ।
ಗುರೋ ತ್ವದಂತಿಕಂ ಪ್ರಾಪ್ತಃ ಪ್ರಸೀದ ಕರುಣಾನಿಧೇ ॥ 6 ॥

ಇತಿ ಶ್ರೀ ಶಂಕರಾಚಾರ್ಯಕೃತಂ
ಶ್ರೀ ಭಗವತ್ಪಾದ ರೇಣುಕಾಚಾರ್ಯಸ್ತೋತ್ರಂ ಸಂಪೂರ್ಣಂ

– ● ● –

ತೃತೀಯ ಭಾಗ

ಮಾನವಧರ್ಮಕ್ಕೆ ಜಯವಾಗಲಿ । ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ॥

ವಂದೇ ರೇಣುಕಂ ವಂದೇ ಮಾತರಂ

"ಸೋಹಂ । ಶಿವೋಹಂ" ಎಂಬುದೆಲ್ಲಾ ಹಮ್ಮಿನಮಾಲೆ,
"ನಿಶ್ಶಬ್ಧಂ ಬ್ರಹ್ಮಮುಚ್ಯತೆ" ॥ 1 ॥

ಅವಿದ್ಯಾ ಮೂಲನಾಶಾಯ, ಜನ್ಮಕರ್ಮನಿವೃತ್ತಯೇ ।
ಜ್ಞಾನವೈರಾಗ್ಯ ಸಿದ್ಧ್ಯರ್ಥಂ । ಶ್ರೀಗುರುಪಾದೋದಕಂ ಪಿಬ ॥
ಶೋಷಣಂ ಪಾಪ ಪಂಕಸ್ಯ । ದೀಪನಂ ಜ್ಞಾನತೇಜಸಾಃ ॥
ಶ್ರೀ ಗುರುಪಾದೋದಕಂ ಚಿತ್ರಂ । ಸಂಸಾರ ಧೃಮನಾಶನಂ ॥
ನಾಶಿವಸ್ಯ । ಶಿವೋಪಾಸ್ತಿರ್ಘಟತೇ । ಜನ್ಮಕೋಟಿಭಿಃ ॥
ಶಿವಸ್ಯೈವ ಶಿವೋಪಾಸ್ತಿರಿತಿ । ನಾನಾಶ್ರುತಿ ಸ್ಥಿತಿಃ ॥ 2 ॥
ಪ್ರಸಾದಂ ಪರಮಂಬ್ರಹ್ಮ । ಪ್ರಸಾದಾಜ್ಞಾಯತೇಃ ಸರ್ವಂ ।
ಪ್ರಸಾದೋಪಿ ಮಹೇಶಸ್ಯ । ದುರ್ಲಭಃ ಪರಿಕೀರ್ತ್ಯತೇ ॥
ಘೋರಸಂಸಾರ ಸಂತಾಪ । ನಿವೃತ್ತಿರ್ಯೇನ ಜಾಯತೇ ।
ಪ್ರಸಾದಾ ದೇವಸಾಭಕ್ತಿಃ । ಪ್ರಸಾದೋಭಕ್ತಿ ಸಂಭವಃ ॥
ಪ್ರಸಾದಾಪೂರ್ವಿಕಾಯೇಯಂ । ಭಕ್ತಿರ್ಮುಕ್ತಿವಿಧಾಯಿನೀ ॥
ಕ್ರಿಯಾಜ್ಞಾನ ಸಮಾಯುಕ್ತಂ । ವೀರಶೈವಸ್ಯಲಕ್ಷಣಂ ॥
ವೀರಶೈವೈಕ ಸಿದ್ಧಾಂತೇ । ಸರ್ವಶೃತಿ ಸಮನ್ವಯಃ ॥
ನ ವೀರಶೈವ ಸದೃಶ । ಮತಮಸ್ತಿ ಜಗತ್ರಯೇ ॥
ಸರ್ವ ಭೋಗಪ್ರದಂ ಪುಣ್ಯಂ । ಶಿವಸಾಯುಜ್ಯದಾಯಕಂ ॥
ಅಲ್ಪಕ್ರಿಯ ಬಹುಫಲಂ । ವೀರಶೈವಂ ಮಹತ್ತರಂ ॥
ಇತರೇ ಶಾಂತು ಶೈವಾನಾಂ । ಮುಕ್ತಿಜನ್ಮತ್ರಯಂಭವೇತ್ ॥
ವೀರಶೈವಧರ್ಮಃ ಸರ್ವ ಧರ್ಮೋತ್ತಮಃ ॥
ಶೈವಂ ಚತುರ್ವಿಧಾಜ್ಞೇಯಂ । ಸಾಮಾಸಾಚ್ಛೃಣು ಷಣ್ಮುಖಾ ।
ಸಾಮಾನ್ಯಂ ಮಿಶ್ರಕಂ ಚೈವ । ಶುದ್ಧಂ ವೀರಂ ಯಥಾಕ್ರಮಂ ॥
ಸರ್ವೇಷಾಮಪಿ ಶೈವಾನಾಂ । ವೀರಶೈವಂ ಮಹತ್ತರಂ ॥
ಏಕೇನ ಜನ್ಮನಾಮುಕ್ತಿಃ । ವೀರಶೈವಂ ಮಹೇಶ್ವರಿ ॥ 4

ಶೈವಧರ್ಮದ ಹೃದಯ ಪರಮವೀರಶೈವ. ಶೈವಧರ್ಮದಸಾರಸರ್ವಸ್ವ ವೀರಶೈವ. ಅಂತರ್ಗತ ಶೈವವು ವೀರಶೈವ ಧರ್ಮದಲ್ಲಿ "ಗಂಗಾಸಾಗರ ಸಂಗಮ ಭಕ್ತಿಯಂತೆ". ಹೊಂದಿವಾಗಿ ಪರಿಪೂರ್ಣತೆಯನ್ನು "ಮಯೂರಾಂಡ ರಸನ್ಯಾಯದಂತೆ" ಪ್ರಕಾಶಿತವಾಗಿದೆ.

ಶೈವ–ಹಾಲು ವೀರಶೈವ–ತುಪ್ಪ

ಆಧ್ಯಾತ್ಮಿಕವಾಗಿ ವೀರಶೈವವೆಂದರೆ ಅದೊಂದು ಜಾತಿಯಲ್ಲ, ಪಂಥವಲ್ಲ, ಕೋಮೂ ಅಲ್ಲ. ಆಶ್ರಮಧರ್ಮ, ಪ್ರಾಕೃತಿಕ ಚಾತುರ್ವರ್ಣ್ಯಾತೀತವಾದ ಶಿವ ಯೋಗದ ನೆಲೆ. ಇಹ ಪರಗಳಿಗೆ ಆಶ್ರಯಭೂತವಾದ ಪರಮೋತ್ಕೃಷ್ಟವಾದ ದಿವ್ಯ ನೆಲೆ.

ಶ್ರೀ ಭಗವತ್ಪಾದ ಆದಿ ಜಗದ್ಗುರು ರೇಣುಕಾಚಾರ್ಯರು, ಮುನಿಚಂದ್ರನಾದ ಆದಿಶ್ರೀ ಅಗಸ್ತ್ಯ ಮಹರ್ಷಿಗಳಿಗೆ ಅವರ ಮಲಯಾಚಲ ಪ್ರದೇಶದ ಪ್ರಶಾಂತ ವಾತಾವರಣದಲ್ಲಿ ವೀರಶೈವ ಧರ್ಮ ಅನಾದಿಸಂಸಿದ್ಧವಾದ ಹಾಗೂ ನಿಗಮಾಗಮ ಗಳಲ್ಲಿ ಅಖಂಡವಾಗಿ ಶಿವನಿಂದ ಲೋಕಮಾತೆ ಶ್ರೀ ಗಿರಿಜೆಗೆ ಹೇಳ್ದ ಸಾರಸರ್ವಸ್ವವನ್ನು ತ್ರಿಭುವನಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ದ್ವಾಪರ ಯುಗಾರಂಭದ ಪರ್ವಕಾಲದಲ್ಲಿ ಪ್ರಸನ್ನ ಭಾವದಿಂದ ಉಪದೇಶಿಸುತ್ತಾ—ಹೇಮುನೇ ಶೃಣು ಎಂದು ಹೇಳುತ್ತಾ—

ವಿಶಬ್ದೇನೋಚ್ಯತೇ ವಿದ್ಯಾ । ಶಿವಜೀವೈಕ್ಯಬೋಧಿಕಾ ॥
ತಸ್ಯಾಂ ರಮಂತೇ ಯೇ ಶೈವಾ । ವೀರಶೈವಾಸ್ತು ತೇಮತಾಃ ॥
ವೇದಾಂತಜನ್ಯಂ ಯದ್‌ಜ್ಞಾನಂ । ವಿದ್ಯೇತಿ ಪರಿಕೀರ್ತ್ಯತೇ ॥
ವಿದ್ಯಾಯಾಂ ರಮತೇ ಯಃ ಸಾ । ವೀರ ಇತ್ಯಭಿಧೀಯತೇ ॥
ವಿದ್ಯಾಯಾಂ ಶಿವರೂಪಾಯಾಂ। ರಮಂತೇ ಯೇ ವಿಶೇಷತಃ ।
ತಸ್ಮಾದೇತೇ ಮಹಾಭಾಗಾ । ವೀರಶೈವಾ ಇತಿಸ್ಮೃತಾಃ ॥
(ಸ. ಶ. ಅ. 5 ಶ್ಲೋ 15 ರಿಂದ 18)

## ಶೈವ–ವೀರಶೈವ

ಇತ್ತೀಚೆಗೆ ಹೊಸದಾಗಿ ರಚಿಸಿ ಪ್ರಕಟಿಸಿರುವ ಮೈಸೂರು ಸರ್ಕಾರ ವಿಶ್ವ ವಿದ್ಯಾಲಯದಲ್ಲಿ ದೊರೆಯುವ "ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ" ವೆಂಬ ಅಧಿಕೃತ ಬೃಹದ್ಗ್ರಂಥದಲ್ಲಿ "ಶೈವ"ವನ್ನು ಕುರಿತು ವಿವರಿಸಿರುವ ಪುಟಗಳಲ್ಲಿ, ವೀರಶೈವದ ಬಗ್ಗೆ ರಚಿಸಿರುವುದೇನೆಂದರೆ.

"ಶೈವದಲ್ಲಿನ" ಒಂದು ಶಾಖೆ ಅಥವಾ ಪ್ರಭೇದ, "ವೀರಶೈವ" ವೆಂದು ಅರ್ಥೈಸಿರಲಾಗಿದೆ. ಅನಾದಿ ಶೈವಧರ್ಮದಲ್ಲಿ, ಆದಿಗಾದಿ ಅನಾದಿಯೆನಿಸಿರುವ "ವೀರಶೈವಧರ್ಮವು ಶೈವದ ಸಾರಸರ್ವಸ್ವವೆನಿಸಿದೆ. ವೀರಶೈವವು ಕೇವಲ ಶೈವ ಧರ್ಮದ ಒಂದು ಶಾಖೆಯೋ ವಿಭಾಗವೋ ಮಾತ್ರ ಆಗಿರದೆ, ಹಾಲಿನೊಳಗಣ ನವ ನೀತದಂತೆ ಅಂತರ್ಗತವಾದುದು, ವೀರಶೈವವೆಂದರಿಯಬೇಕು. ಹಾಲಿನ ಹನಿ ಹನಿ

ಯಲ್ಲಿ ನವನೀತದ ಅಂಶಗಳು "ಅಣೋರಣೀಯಾನ್" ಎಂಬಂತೆ ಅವಿನಾಭಾವ ಸಂಬಂಧದಿಂದ ಹಾಸು ಹೊಕ್ಕಾಗಿ ಬಳಸಿರುವಾಗ, ವೀರಶೈವ ಶೈವದ ಒಂದು ಶಾಖೆ ಯೆಂದು ನಿರ್ಧರಿಸಲು ಬರುವಂತಿಲ್ಲ.

"ಶೈವಧರ್ಮ ಕ್ಷೀರಾಮೃತದ" ಹಾಗೆಂದು ಭಾವಿಸಿದಾಗ "ವೀರಶೈವ ಅದ ರೊಳಗಣ ಕಂಪಿಲ್ಲದ ತುಪ್ಪವೆಂದು" ಶಿವಾಗಮಗಳಲ್ಲಿ ಸಮೀಚೀನವಾಗಿ ನಿರ್ಧರಿಸ ಲಾಗಿದೆ. ಹಾಲು, ತುಪ್ಪ ಇವುಗಳ ಬೆಲೆಗಳಲ್ಲೂ, ಗುಣಮಟ್ಟದಲ್ಲೂ ಅಪಾರ ಅಂತರವುಂಟು. ಹಾಲಿನಿಂದ ಆಯುವೃದ್ಧಿಕರವಾದ ಅಂಶಗಳು ಕಂಡುಬಂದರೆ, ಘೃತ, ತುಪ್ಪದಲ್ಲಿ ಚೇತನಶಕ್ತಿ, ಜ್ಞಾನಶಕ್ತಿ, ಜ್ಞಾಪಕಶಕ್ತಿ, ಕಾಂತಿ ಇತ್ಯಾದಿಗಳು ಸ್ವಭಾವಸಿದ್ಧವಾಗಿ ವಂದುಗೂಡಿರುವುವು. ಹಾಲಿನೊಳಗಣ ಶತಾಂಶ ಶಕ್ತಿ ತುಪ್ಪದ ಒಂದು ಹನಿಯಲ್ಲಡಗಿರುವುದು. ಹಾಲು ತುಪ್ಪಗಳೊಳಗಿರುವ ನಿಕಟ ಸಂಬಂಧದಂತೆ ಶೈವ ವೀರಶೈವ ಧರ್ಮಗಳೊಳಗಿನ ಸಂಬಂಧ ಅನಾದಿ ಅವಿನಾಭಾವದಿಂದ ಕೂಡಿದೆ. ಅಖಂಡ ವೀರಶೈವ ಧರ್ಮದ ವ್ಯಾಪ್ತಿಯಿಂದಾಗಿ ಶೈವಧರ್ಮವು ತನ್ನ ಪರಿಪೂರ್ಣತ್ವ ವನ್ನು ಇಲ್ಲಿ ಕಾಣುವುದು. ಪರಮ ವೀರಶೈವವು "ಶಿವಶಕ್ತಿಸೌಂದರ್ಯ ಸಂಪರ್ಕದಿಂ ಸತತ ರಂಜಿತವಾದುದು". "ಶೈವ ವೀರಶೈವ ಧರ್ಮಗಳಿಗಿರುವ ಔನ್ನತ್ಯವನ್ನು ಪ್ರತಿ ಪಾದಿಸುವಾಗ ಶೈವದ ಹೃದಯ ವೀರಶೈವವೆಂದು ನಿರ್ಧರಿಸಲಾಗಿದೆ. ಶೈವಧರ್ಮ ಶಿವನ ಕಾಣುವ ಹೊರ ಮೈ ಯಂತಾದರೆ ವೀರಶೈವ ಪರಶಿವಬ್ರಹ್ಮದ ಆತ್ಮಜ್ಯೋತಿ, ಅದೇ ಪರಂಜೋತಿಯೆನಿಸಿದೆ. ಈ ಕಾರಣದಿಂದ ಶಿವನು ವೀರಾಗಮ ಸ್ವಾಯಂಭು ವಾಗಮ, ಸುಪ್ರಭೇದಾಗಮಾದಿಗಳಲ್ಲಿ ಘೋಷಿಸಿರುವಂತೆ, "ದೇವಿ! ಸರ್ವೇಷಾಮಪಿ ಶೈವಾನಾಂ ವೀರಶೈವಂ ಮಹತ್ತರಂ" ಎಂದು ನಿರ್ಧರಿಸಲಾಗಿದೆ. ಸತ್ಯಾಂಶ ಹೀಗಿರು ವಾಗ, "ಕರ್ನಾಟಕ ವಿಶ್ವಕೋಶ"ದಲ್ಲಿ "ಶೈವದ ಒಂದುಶಾಖೆ ವೀರಶೈವವೆಂದು ಬಹು ಲಘುವಾಗಿ ನಿರೂಪಿಸಿರುವುದು, ಪ್ರಾಜ್ಞರಲ್ಲಿ ಸಖೇದಾಶ್ಚರ್ಯವನ್ನುಂಟು ಮಾಡಿದೆ, ಕರ್ನಾಟಕ ವಿಶ್ವಕೋಶವನ್ನು ಅಧಿಕೃತವಾಗಿ ರಚಿಸಿದ ಸಂಬಂಧಪಟ್ಟ ಕಮಿಟಿಯ ಧೀಮಂತರಿಗೆ, ಮೇಲುಕ್ತವಾದ ಅಮೋಘತರವಾದ ಮಹದ್ವಿಷಯ ವಿಶಾಲಾರ್ಥ ಗರ್ಭಿತವಾಗಿ ರಾರಾಜಿಸುತ್ತಲಿದೆ ಎಂಬುದು ಹೊಳೆಯಲಿಲ್ಲವೇಕೆ ? ಎಂದು ವಿನಯಪೂರ್ವಕ ವಿನಂತಿಸಿಕೊಳ್ಳುತ್ತೇನೆ.

– o –

ಶ್ರೀ ಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯಾಃ ಪ್ರಸೀದಂತು ॥
ಓಂ ಇತ್ಯೇಕಾಕ್ಷರಂ ಬ್ರಹ್ಮ ನಮಃಶಿವಾ ಯೇತ್ಯಜಾಯತ

(ಶಿವಸೂತ್ರ)

ಅನಾದಿ ಕಾಲದಿಂದ ನಿಗಮಾಗಮುಗಳು, ಜಗದಾದಿ ಪರಮ ಜಗದ್ಗುರು ಸರ್ವಭೌಮರಾದ ಶ್ರೀ ರೇಣುಕಾದಿ ಪಂಚಾಚಾರ್ಯರನ್ನು–

"ಶೈವಾಗಮಾಂಬುಜ ಭಾಸ್ಕರರೆಂದು"

ಮುಕ್ತಕಂಠದಿಂದ ಸತತ ಸ್ತುತಿಸುತ್ತಲಿರುವುವು. ಶೈವಾಗಮಾಂಬುಜ ಭಾಸ್ಕರರೆಂದರೆ, ಕಾಮಿಕಾದಿವಾತುಲ ಪರ್ಯಂತವುಳ್ಳ ಇಪ್ಪತ್ತೆಂಟು ಶಿವಾಗಮ ಗಳೆಂಬ ಕಮಲಗಳು, ಯಾವ ಚಿದಾದಿತ್ಯ ಸ್ವರೂಪಿಗಳಾದ ಶ್ರೀ ಪಂಚಾಚಾರ್ಯರ ದಿವ್ಯ ತೇಜಸ್ ಶ್ರೀಪಾದಸಂದರ್ಶನ ಮಾತ್ರೇಣ, ಸ್ವಯಂ ಅರಳಿ ಪರಿಮಳಯುಕ್ತವಾದ ಗಂಧದಿಂದ ಘಮ ಘಮಿಸುವುವೋ, ಅಂತಪ್ಪ ಮಹಿಮಾ ಸಂಪನ್ನರು ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಎಂಬುದಾಗಿ ಶೃತಿವಾಣಿಯಿರುತ್ತೆ.

ಶ್ರೀ ಮದ್ರಂಭಾಪುರೀ ವೀರಸಿಂಹಾಸನ ಮೂಲ ಮಹಾಪೀಠದಲ್ಲಿ ಅನಾದಿ ಕಾಲದಿಂದ ಶ್ರೀ ಮಹಾವೀರೇಶನ ಗರ್ಭಗುಡಿಯ ಪಕ್ಕದ ಮಂಟಪದಲ್ಲಿ ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ – ಶ್ರೀ ಆದಿಜಗದ್ಗುರು ಶಿವಲಿಂಗೋದ್ಭವ ಮಂಗಳ ಮೂರ್ತಿ, ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯ ದೇಶಿಕೇಂದ್ರರು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಪ್ರಸನ್ನಭಾವದಿಂದ ಅನುಗ್ರಹಿಸುತ್ತಿರುವ ಜಗನ್ಮಂಗಳ ಶಿಲಾ ವಿಗ್ರಹವು ರಾರಾಜಿಸುತ್ತಲಿದೆ. "ಉಭಯಾಚಾರ್ಯರ ದೃಶ್ಯ ಸದ್ಭಕ್ತರಿಗೆ ಸಾಯುಜ್ಯ ಮೋಕ್ಷಪ್ರದವಾದುದು. ॥ ಮೋಕ್ಷಮೂಲಂ ಗುರೋಃ ಕೃಪಾ ॥ (ಇತಿ ವೇದಃ) ಭುವನಾಂಡ ಕೋಟಿಗಳ ಅಖಿಲ ಸಂಪತ್ತನ್ನೂ ಪ್ರಭುತ್ವವನ್ನೂ ತೃಣ ಪ್ರಾಯವೆಂದೆಣಿಸಿ, ಕೂಡಲೇ ತ್ಯಜಿಸಿ ಶ್ರೀ ಮಹಾಗುರುವಿನಾಜ್ಞೆಯನ್ನು ಶಿವನಾಜ್ಞೆ ಯೆಂದರಿತು ತಕ್ಷಣ ನಿರಾಸಕ್ತಿಯಿಂದ ಸತತ ನೆರವೇರಿಸುವಾತಂಗೆ "ನಿಜಪದಂ ಕರ ಬಿಲ್ವಫಲಂ ಶಿವಾಥವಾ".

## ಕರ್ನಾಟಕ ಕನ್ನಡ ವಿಷಯ ವಿಶ್ವಕೋಶದ ಒಂದು ದರ್ಶನ

ಇತ್ತೀಚೆಗೆ ಹೊಸದಾಗಿ ಅಧಿಕೃತವಾಗಿ ರಚಿಸಿ ಪ್ರಕಟಿಸಿರುವ ಕರ್ನಾಟಕ ವಿಶ್ವ ಕೋಶ Available at the Mysore Government Oriental Library, Mysore. ಮೈಸೂರಿನ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿ ದೊರೆಯುವ ಈ ಮಹಾ ಕೃತಿ ಅನರ್ಘ್ಯ ರತ್ನಪ್ರಾಯವೆನಿಸಿದೆ. ಇದರಲ್ಲಿ ಕರ್ನಾಟಕದಲ್ಲಿನ ಅನೇಕ ಸಾರ್ವಜನಿಕ ಧಾರ್ಮಿಕ, ಸಾಮಾಜಿಕ, ನೈತಿಕ ವಿಷಯಗಳ ಮತ್ತು ಪ್ರಸಿದ್ಧ ಅರಮನೆ ಗುರುಮನೆಗಳ, ಪುಣ್ಯ ಕ್ಷೇತ್ರಗಳ, ಪ್ರಮುಖ ನಾಯಕರ ಮಹಾತ್ಮರ, ಅವತಾರ ಪುರುಷರುಗಳ, ಹಾಗೂ ಶ್ರೀ ಗುರುಮಠಮಂದಿರಗಳ

ಇತ್ಯಾದಿ ಚಾರಿತ್ರಿಕ ಪ್ರಮುಖ ವಿಷಯುಗಳನ್ನು ಸಂಗ್ರಹವಾಗಿಯೂ ಸಾರವತ್ತಾಗಿಯೂ ಪ್ರತಿಪಾದಿಸಿರುವ ಅಧಿಕೃತ ಬೃಹದ್ಗ್ರಂಥವಿದು. ಈ ಪ್ರಸಿದ್ಧ ಕನ್ನಡ ವಿಷಯ ವಿಶ್ವಕೋಶದ ಒಂದೆಡೆ, ಚಿಕ್ಕಮಗಳೂರು ಜಿಲ್ಲೆಗೆ ಸೇರಿದ ಶ್ರೀ ರಂಭಾಪುರೀ (ಬಾಳೇಹಳ್ಳಿ ಅಥವಾ ಬಾಳೆಹೊನ್ನೂರು) ಕ್ಷೇತ್ರ, ಯುಗಾಂತರಗಳಿಂದ ಮಲಯಾಚಲ ಪುಣ್ಯ ಪ್ರದೇಶದ, ಮಹಾ ಜಗದ್ಗುರು ಕೇಂದ್ರವೆಂದು ಪ್ರಸಿದ್ಧಿ ಪಡೆದು ಪರಿಶೋಭಿಸುತ್ತಲಿರುವುದನ್ನು ಸೂಕ್ಷ್ಮವಾಗಿ ಕಾಣಿಸಲಾಗಿದೆ. ಈ ಕೇಂದ್ರದಲ್ಲಿ ಸ್ಥಾಪಿತವಾಗಿರುವ ಆದಿ ಶ್ರೀ ಜಗದ್ಗುರು ರೇಣುಕಾಚಾರ್ಯರ ಮಹಾ ವೀರಸಿಂಹಾಸನದ ಬಗೆಗೂ, ಶ್ರೀ ಮಹಾಪೀಠದ ಮಹತ್ವದ ಬಗೆಗೂ, ಇಲ್ಲಿ ನೆಲಸಿರುವ ಶ್ರೀ ವೀರಭದ್ರಸ್ವಾಮಿಯ ದೇವಾಲಯದ ಹಾಗೂ ಶ್ರೀ ವೀರೇಶನ ಮಹಿಮೆಯ ಬಗೆಗೆ ಕಿಂಚಿತ್ ವರ್ಣಿಸಲಾಗಿದೆ. ಈ ದೇವಾಲಯದಲ್ಲಿನ ಮಹತ್ವದ ಸಂಗತಿಗಳನ್ನು ಸ್ವಲ್ಪ ನಿರೂಪಿಸಲಾಗಿದೆ. ಈ ಮಹಾಪೀಠದ ಸನಾತನ ಸಿದ್ಧಾಂತವನ್ನೊಳಗೊಂಡಿರುವ ಶ್ರೀ ಸಿದ್ಧಾಂತ ಶಿಖಾಮಣಿ ಮಹಾನ್ ಶಾಸ್ತ್ರದ ಹೆಸರನ್ನು ಸೂಚಿಸಿರುವುದು ಅಭಿನಂದನೀಯವಿರುತ್ತೆ. ಇಷ್ಟೆಲ್ಲಾ ವಿಷಯುಗಳನ್ನು ಕರ್ನಾಟಕ ವಿಶ್ವಕೋಶದಲ್ಲಿ ಸಂಗ್ರಹವಾಗಿ ಪ್ರಕಟಿಸಿದ್ದರೂ, ಶ್ರೀ ಮಹಾರುದ್ರಾಂಶ ಸಂಭೂತನಾದ ಶ್ರೀ ವೀರೇಶನ ಗರ್ಭಗುಡಿಗೆ ಹೊಂದಿಕೊಂಡಂತೆ ಇರುವ ಮಂಟಪದಲ್ಲಿ ವಿರಾಜಮಾನವಾದ "ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ಆದಿಶ್ರೀ ಜ|| ರೇವಣಸಿದ್ಧರು ಪ್ರಸನ್ನಭಾವದಿಂದ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸುತ್ತಲಿರುವ, ಜಗನ್ಮಂಗಳಮಯ ಶಿಲಾವಿಗ್ರಹದ ಉಭಯಾಚಾರ್ಯರ ಸಮ್ಮಿಳನದ ಬಗೆಗೆ, ಹಾಗೂ ಶ್ರೀ ಮಹಾಚಾರ್ಯದ್ವಯರ ಮಧ್ಯೇ–ಮಧ್ಯಮಣಿ ನ್ಯಾಯಾನುಸಾರ–ಶ್ರೀಮದಾಚಾರ್ಯರುಗಳ "ಆತ್ಮಶ್ರೀಃ" ಚಂದೋಬದ್ಧವಾಗಿ ಶ್ರೀ ಚಂಧ್ರಮೌಳಿಲಿಂಗದ ರೂಪದಲ್ಲಿ ಹೊರ ಹೊಮ್ಮಿ, ಶ್ರೀ ಮದ್‌ಜಗದಾಚಾರ್ಯವರೇಣ್ಯ ಆದಿಶ್ರೀ ರೇವಣಸಿದ್ಧರ ಅಮೃತಹಸ್ತದಿಂದ ಶ್ರೀ ಶೃಂಗೇರಿ ಆದಿ ಶಂಕದಾಚಾರ್ಯರಿಗೆ ಅನುಗ್ರಹಿಸುತ್ತಲಿರುವ, **ಜಗನ್ಮಂಗಳಮಯ ಶಿಲಾವಿಗ್ರಹದ** ಬಗೆಗೆ ಮೇಲುಕ್ತವಾದ ವಿಶ್ವಕೋಶದಲ್ಲಿ ಒಂದು ಚಕಾರವನ್ನೂ ಎತ್ತದೆ ಈ ವಿಷಯುವಾಗಿ ಏನನ್ನೂ ರಚಿಸದೆ, ಸ್ಮರಿಸದೆ, ಸದರಿ ವಿಶ್ವಕೋಶದ ಸಂಪಾದಕರು ಮೌನಮುದ್ರೆಯಿಂದಿರುವುದು ಸಖೇದಾಶ್ಚರ್ಯವೆನಿಸಿದೆ.

ಈ ಮಹಾನ್ ಕೃತಿ ರಚನೆಯಲ್ಲಿ ಭಾಗಿಗಳಾದ ಪ್ರಾಜ್ಞರು ಶ್ರೀಮದ್ರಂಭಾಪುರೀ ಮಹಾಪೀಠದಲ್ಲಿ ತಾವು ಕಂಡ ಎಲ್ಲಾ ದೃಶ್ಯಗಳ ಬಗೆಗೆ ಸಾರವತ್ತಾಗಿ ಸಂಕ್ಷಿಪ್ತವಾಗಿ ವರ್ಣಿಸಿದ್ದರೂ ಸಹ, ಶ್ರೀ ವೀರೇಶನ ಗರ್ಭಗುಡಿಗೆ ಹೊಂದಿಕೊಂಡಂತೆ ಇರುವ ಅಭೂತ ಪೂರ್ವವಾದ "ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ದತ್ತವಾದ

ಶ್ರೀ ಚಂದ್ರಮೌಳೀಶ್ವರ ಲಿಂಗಪ್ರಧಾನ ಶಿಲಾವಿಗ್ರಹ ಅಲ್ಲೇ ನೆಲಸಿರುವ ಮಹತ್ವದ ವಿಷಯವನ್ನು ಈ ವಿಶ್ವಕೋಶದಲ್ಲಿ ಕಿಂಚಿತ್ತೂ ಕಾಣಿಸದಿರುವುದು ಕೌತುಕವೇ ಸರಿ. ಹೀಗೇಕಾಯಿತು.

## ಶ್ರೀ ಮಜ್ಜಗದ್ಗುರು ರೇಣುಕಾಚಾರ್ಯಾಷ್ಟೋತ್ತರ ಶತನಾಮಾವಲಿಃ

ಶ್ರೀ ಮದ್ಗುರುವರ ರೇಣುಕ ಪಾಹಿ
ಸೋಮನಾಥ ಭವ ರೇಣುಕ ಪಾಹಿ
ಕಾಮಮದಾಂತಕ ರೇಣುಕ ಪಾಹಿ
ಕಾಮಿತದಾಯಕ ರೇಣುಕ ಪಾಹಿ
ತ್ರಿಭುವನವಿನಮಿತ ರೇಣುಕ ಪಾಹಿ
ಅಭಯ ವರಪ್ರದ ರೇಣುಕ ಪಾಹಿ
ಫಾಲವಿಲೋಚನ ರೇಣುಕ ಪಾಹಿ
ಲೀಲಾ ವಿಗ್ರಹ ರೇಣುಕ ಪಾಹಿ
ಪರಮ ಜಗದ್ಗುರೋ ರೇಣುಕ ಪಾಹಿ
ಶರಣ ಜನೇಷ್ಟದ ರೇಣುಕ ಪಾಹಿ
ಹರಮತ ಕಾರಣ ರೇಣುಕ ಪಾಹಿ
ಪರಮ ಪರಾತ್ಪರ ರೇಣುಕ ಪಾಹಿ
ಜನಿಮೃತಿ ವಿರಹಿತ ರೇಣುಕ ಪಾಹಿ
ಮುನಿಹೃದಯಾಲಯ ರೇಣುಕ ಪಾಹಿ
ಶ್ರೀತಜನ ಪಾಲಕ ರೇಣುಕಪಾಹಿ
ಅತುಲ ಮಹಿಮಯುತ ರೇಣುಕ ಪಾಹಿ
ಸಿತಭಸ್ಮಾಂಕಿತ ರೇಣುಕ ಪಾಹಿ
ಪತಿತೋದ್ಧಾರಕ ರೇಣುಕ ಪಾಹಿ
ಪ್ರಮಥ ಗಣಾವೃತ ರೇಣುಕ ಪಾಹಿ
ಕಮಲ ಭವಾರ್ಚಿತ ರೇಣುಕ ಪಾಹಿ
ಶ್ರೀಪತಿಸನ್ನುತ ರೇಣುಕ ಪಾಹಿ
ಭೂಪತಿ ಸೇವಿತ ರೇಣುಕ ಪಾಹಿ
ಗಗನಮಾರ್ಗಗತ ರೇಣುಕ ಪಾಹಿ

ನಿಗಮಾಗಮನುತ ರೇಣುಕ ಪಾಹಿ
ರವಿಕೋಟಿಪ್ರಭ ರೇಣುಕ ಪಾಹಿ
ವಿವಿಧ ವಿನೋಧನ ರೇಣುಕ ಪಾಹಿ
ಸಿದ್ಧಿ ಮಹಾಖನಿ ರೇಣುಕ ಪಾಹಿ
ಸಿದ್ಧಜನಾರ್ಚಿತ ರೇಣುಕ ಪಾಹಿ
ಸ್ಥಾಪಿತ ಷಟಸ್ಥಲ ರೇಣುಕ ಪಾಹಿ
ತಾಪತ್ರಯಹರ ರೇಣುಕ ಪಾಹಿ
ಗುಣಮಣಿಮಂಡಿತ ರೇಣುಕ ಪಾಹಿ
ಅಣಿಮಾದಿಪ್ರದ ರೇಣುಕ ಪಾಹಿ
ಭವಜಲಧಿಪ್ಲವ ರೇಣುಕ ಪಾಹಿ
ಕವಿಸುರ ಭೂರುಹ ರೇಣುಕ ಪಾಹಿ
ಬುಧವೃಂದಾರ್ಚಿತ ರೇಣುಕ ಪಾಹಿ
ವಿಧಿ ಸಂಶಾಸಕ ರೇಣುಕ ಪಾಹಿ
ಪಿಂಗ ಜಟಾಧರ ರೇಣುಕ ಪಾಹಿ
ಜಂಗಮ ವಲ್ಲಭ ರೇಣುಕ ಪಾಹಿ
ಯೋಗಪಲಾಯಿತ ರೇಣುಕ ಪಾಹಿ
ಯೋಗಿಜನಾಶ್ರಯ ರೇಣುಕ ಪಾಹಿ
ಸಕಲ ನಿಷ್ಕಲ ರೇಣುಕ ಪಾಹಿ
ಪ್ರಕಟಿತ ಚಿತ್ಕ್ರಿಯ ರೇಣುಕ ಪಾಹಿ
ಕುಮತ ವಿಭಂಜನ ರೇಣುಕ ಪಾಹಿ
ಸುಮತಸ್ಥಾಪಕ ರೇಣುಕ ಪಾಹಿ
ಕೃತಕನ್ಯಾವನ ರೇಣುಕ ಪಾಹಿ
ಅತುಲ ಶಕ್ತಿಯುತ ರೇಣುಕ ಪಾಹಿ
ಶಾಂಭವ ಸಂಸ್ತುತ ರೇಣುಕ ಪಾಹಿ
ಕುಂಬಜ ಪೂಜಿತ ರೇಣುಕ ಪಾಹಿ
ಮುದ್ರಾಭೂಷಣ ರೇಣುಕ ಪಾಹಿ
ಕ್ಷುದ್ರಜನಾರ್ಧನ ರೇಣುಕ ಪಾಹಿ
ಶಿವ ತತ್ವಾಕರ ರೇಣುಕ ಪಾಹಿ
ಶಿವಮನುಭೋಧಕ ರೇಣುಕ ಪಾಹಿ
ಧರ್ಮೋದ್ಧಾರಕ ರೇಣುಕ ಪಾಹಿ
ನಿರ್ಮಲಭಾವನ ರೇಣುಕ ಪಾಹಿ

ವಿಶ್ವವ್ಯಾಪಕ ರೇಣುಕ ಪಾಹಿ
ಶಾಶ್ವತ ಸುಖಕರ ರೇಣುಕ ಪಾಹಿ
ಗಾನ ರಸಪ್ರೀಯ ರೇಣುಕ ಪಾಹಿ
ಜ್ಞಾನ ಕಲಾನಿಧೆ ರೇಣುಕ ಪಾಹಿ
ವೀರ ಗೋತ್ರದವ ರೇಣುಕ ಪಾಹಿ
ವೀರ ಪೀಠಗತ ರೇಣುಕ ಪಾಹಿ
ತ್ರಾತ ವಿಭೀಷಣ ರೇಣುಕ ಪಾಹಿ
ಭೂತದಯಾರಸ ರೇಣುಕ ಪಾಹಿ
ವಿಜಿತ ಷಡರಿಕುಲ ರೇಣುಕ ಪಾಹಿ
ವೃಜಿನ ನಾಶಕ ರೇಣುಕ ಪಾಹಿ
ಶಿಕ್ಷಾ ಕಾರಣ ರೇಣುಕ ಪಾಹಿ
ಮೋಕ್ಷಾಧೀಶ್ವರ ರೇಣುಕ ಪಾಹಿ
ವಿರತಿ ವಿಭೂಷಿತ ರೇಣುಕ ಪಾಹಿ
ವಿರತಿ ಜನೇಷ್ಟದ ರೇಣುಕ ಪಾಹಿ
ಆದಿಗುರೋತ್ತಮ ರೇಣುಕ ಪಾಹಿ
ಸಾಧುಸಮರ್ಚಿತ ರೇಣುಕ ಪಾಹಿ
ಮಾಯಾ ವಿರಹಿತ ರೇಣುಕ ಪಾಹಿ
ಗೇಯಗುಣಾರ್ಣವ ರೇಣುಕ ಪಾಹಿ
ರುಧ್ರಾಕ್ಷಾವೃತ ರೇಣುಕ ಪಾಹಿ
ರುದ್ರ ಪರಾಕ್ರಮ ರೇಣುಕ ಪಾಹಿ
ಅಷ್ಟಮದಾಂತಕ ರೇಣುಕ ಪಾಹಿ
ಅಷ್ಟೈಶ್ವರ್ಯದ ರೇಣುಕ ಪಾಹಿ
ವಿಗತ ದುರೀಷಣ ರೇಣುಕ ಪಾಹಿ
ಮೃಗಧರ ಶೇಖರ ರೇಣುಕ ಪಾಹಿ
ಭುಕ್ತಿ ಮುಕ್ತಿದ ರೇಣುಕ ಪಾಹಿ
ಭಕ್ತವತ್ಸಲ ರೇಣುಕ ಪಾಹಿ
ಸನಕಾದಿಸ್ತುತ ರೇಣುಕ ಪಾಹಿ
ಕನಕ ಕವಚಧರ ರೇಣುಕ ಪಾಹಿ
ಕಾಲಮದಾಪಹ ರೇಣುಕ ಪಾಹಿ
ಶೀಲ ವಿರಾಜಿತ ರೇಣುಕ ಪಾಹಿ
ಕ್ಷಿತಿಪತಿ ಪೂಜಿತ ರೇಣುಕ ಪಾಹಿ

ಯತಿತತಿ ವಂದಿತ ರೇಣುಕ ಪಾಹಿ
ನಿತ್ಯನಿರಂಜನ ರೇಣುಕ ಪಾಹಿ
ಸತ್ಯಸಮಾಶ್ರಯ ರೇಣುಕ ಪಾಹಿ
ಯೋಗಾನಂದಿತ ರೇಣುಕ ಪಾಹಿ
ತ್ಯಾಗ ಗುಣಾನ್ವಿತ ರೇಣುಕ ಪಾಹಿ
ನಿರುಪಮ ನಿಶ್ಚಲ ರೇಣುಕ ಪಾಹಿ
ಸುರನಿಕರ ಸ್ತುತ ರೇಣುಕ ಪಾಹಿ
ದುರಿತ ವಿದಾರಕ ರೇಣುಕ ಪಾಹಿ
ಹರಮತ ಸುಖಕರ ರೇಣುಕ ಪಾಹಿ
ಸಂಕರ ನಾಶಕ ರೇಣುಕ ಪಾಹಿ
ಸಂಕಟ ಪರಿಹರ ರೇಣುಕ ಪಾಹಿ
ಸಿದ್ಧ ಸುರದ್ರುಮ ರೇಣುಕ ಪಾಹಿ
ಸಿದ್ಧಾಂತಾತ್ಮಕ ರೇಣುಕ ಪಾಹಿ
ವಿಶ್ವರೋಷಹರ ರೇಣುಕ ಪಾಹಿ
ವಿಶ್ವ ರೂಪಧರ ರೇಣುಕ ಪಾಹಿ
ಪಂಚವರ್ಣಮಯ ರೇಣುಕ ಪಾಹಿ
ಸಂಚಿತಾಘಹರ ರೇಣುಕ ಪಾಹಿ
ಆನಂದಾಕುಲ ರೇಣುಕ ಪಾಹಿ

ಧೀನಜನಾವನ ರೇಣುಕ ಪಾಹಿ
ಪ್ರೀಯ ಸಂದರ್ಶನ ರೇಣುಕ ಪಾಹಿ
ಸ್ಮಯಕರ ಸುಚರಿತ ರೇಣುಕ ಪಾಹಿ
ದಾಮನಿರ್ಮಿತ ರೇಣುಕ ಪಾಹಿ
ಸೋಮನಾಥಗತ ರೇಣುಕ ಪಾಹಿ

॥ ಓಂ ಶ್ರೀ ಗುರೂಣಾಂ ಗುರವೇ ನಮಃ ॥

ತೃತೀಯ ಭಾಗ

ಓಂ



ಟಿ. ಬಿ. ಬಸವರಾಜಯ್ಯ

## ಶಿವಯೋಗ

ಹಲವಾರು ಯೋಗಗಳಲ್ಲಿ ಶಿವಯೋಗ ಅತ್ಯಂತ ಉತ್ಕೃಷ್ಟವಾದುದು. ಶುದ್ಧಾಂತಃಕರಣ ಚತುಷ್ಟಯಗಳೊಂದಿಗೆ ಓಮ್ಮುಖವಾಗಿ ಅಂಗನು (ಜೀವಾತ್ಮನು) ತನ್ನ ಹೃತ್ಪುಂಡರೀಕವಲ್ಲಿ ಪ್ರಜ್ವಲಿಸುವ ಪ್ರಾಣಲಿಂಗರೂಪಿ ಪರಶಿವನೊಂದಿಗೆ, ಅವ್ಯಭಿಚಾರಿಣೀ ಭಕ್ತಿಯಿಂದಲೂ, ಅವಿನಾಭಾವ ಸಂಬಂಧದ ನಿಕಟ ಸ್ವಸ್ವರೂಪಾನುಭವದಿಂದ, ಸ್ವಾನುಭೂತಿಯಲ್ಲಿ ಸತತ ಅನುಸಂಧಾನ ಮಾಡುವ ಪರಮೋಚ್ಚ ಸ್ಥಿತಿಯನ್ನು ಶಿವಯೋಗದಿಂದ ಲಿಂಗಾಂಗಿ ಮಹಾಶಿರೋವ್ರತರು, ಜೀವಂತ ಕಾಲದಲ್ಲೇ ಶ್ರೀ ಮಹಾಗುರುವಿನ ಕಟಾಕ್ಷದಿಂದ ಹೊಂದುವರು, "ಸ್ವಸ್ವರೂಪೈಕ ಚಿಚ್ಛಯಿಂ ಸ್ಫುರಿಸುತಿರ್ದುದ ದ್ವೈತ ಪರಮಾತ್ಮ ತತ್ವಂ". ನಮ್ಮ ಹೃನ್ಮಂದಿರದಲ್ಲಿ ಸದಾ ಶಿವಾಭಿನ್ನದಿಂದ ಸ್ಫುರಿಸುತ್ತಿರುವ ನಿಜಾತ್ಮನ ಸ್ವಸ್ವರೂಪದರ್ಶನವನ್ನು, ಶ್ರೀ ಮಹಾಗುರುವಿನ ದಿವ್ಯಾನುಗ್ರಹದಿಂದ ಅಂತರಂಗದಲ್ಲಿ ಜೀವಂತರಾಗಿರುವಾಗಲೇ ಕಂಡನುಭವಿಸಿ "ನ ಚ ಪುನರಾವರ್ತತೇ ನ ಚ ಪುನರಾವರ್ತತೇ" ಎಂಬ ಪರಮ ಕೈವಲ್ಯ ಧಾಮವನ್ನು ಹೊಂದಬೇಕು. ಇದನ್ನು ಸಾಧಿಸುವುದಕ್ಕಾಗಿಯೇ, ದಯಾಮಯನಾದ ಭಗವಂತನು ನಮಗೆ ಉನ್ನತ ಮಟ್ಟದ ಮಾನವ ದೇಹವನ್ನು ಕರುಣಿಸಿರುವನು. ಇದನ್ನರಿತು ನಾವು ಕಾಲ ವಿಳಂಬ ಮಾಡದೆ ಶಿವಯೋಗದಲ್ಲಿ "ಧ್ಯಾನಾವಸ್ಥಿತ

ತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನಃ" ಎಂಬ ಭಗವದುಕ್ತಿಯಂತೆ ಶಿವ ಯೋಗದಲ್ಲಿ ಗಾಢವಾಗಿ ತಲ್ಲೀನರಾಗಬೇಕು.

ಈ ಯೋಗಕ್ಕೆ ಪ್ರತಿಬಂಧಕವಾದವು ಯಾವುವೆಂದರೆ

1. ಕನಕ ಕಾಮಿನಿ ಕಾಂಚನಗಳಲ್ಲಿನ ಮೋಹ,
2. ದಾರೇಷಣ, ಪುತ್ರೇಷಣ, ವಿತ್ತೇಷಣಗಳೆಂಬ ಈಶಣತ್ರಯಗಳು,
3. ಧನ, ಕನಕ, ವಸ್ತುವಾಹನಾದಿಗಳೂ, ಯವ್ವನ, ಧನಸಂಪತ್ತೂ, ಪ್ರಭುತ್ವ, ಅವಿವೇಕಾದಿಗಳು ; ಕುಡಿ, ಜೂಜು, ದುರ್ಜನ ಸಂಘಗಳೂ
4. ಮಾಯಾಮಲ, ಕಾರ್ಮಿಕಮಲ ಅಣವ ಮಲತ್ರಯಂಗಳು ;
5. ಅಹಂಕಾರ, ಮಮಕಾರ, ಕಾಮ, ಕ್ರೋಧ, ಅಸೂಯೆ, ಅಭಿನಿವೇಷಾದಿಗಳು ನಮ್ಮ ಸ್ವಾತ್ಮ ಸಾಕ್ಷಾತ್ಕಾರಕ್ಕೆ ಪ್ರತಿಬಂಧಕವಾದ ಅಂತರ್‌ಶತೃಗಳೆಂದರಿತು, ಇವುಗಳಿಂದ, ಶಿವಯೋಗದ ಪ್ರಭಾವದಿಂದಾಗಿ ನಾವು ಎಚ್ಚರದಿಂದ ನಮ್ಮನ್ನು ನಾವೇ ಸದಾ ರಕ್ಷಿಸಿಕೊಳ್ಳಬೇಕು. ಇದು ಅತ್ಯಾವಶ್ಯಕವೆಂದರಿಯಬೇಕು.

॥ ಉದ್ಧರೇ ದಾತ್ಮನಾತ್ಮಾನಂ । ನಾತ್ಮಾನ ಮವಸಾದಯೇತ್ ॥
ಅತ್ಮೈವ ಹ್ಯಾತ್ಮನೋ ಬಂಧು । ರಾತ್ತ್ಮೈವ ರಿಪುರಾತ್ಮನಃ ॥
(ಗೀತ. ಅ. 6. ಶ್ಲೋ. 5.)

ಮಾನವ ತನ್ನ ಆತ್ಮವನ್ನು ಮುಂಜಾಗ್ರತೆಯಿಂದ ತಾನೇ ರಕ್ಷಿಸಿಕೊಳ್ಳಬೇಕು. ಸ್ವಪ್ರಯತ್ನದಿಂದ ತನ್ನನ್ನು ತಾನೇ ಉದ್ಧಾರ ಮಾಡಿಕೊಳ್ಳಬೇಕು. ತಾನು ಊಟ ಮಾಡಿದರೆ ತನ್ನ ಹಸಿವು ಹೋಗುವುದು. ಇದರಂತೆ ತನ್ನ ಸತತ ಸತ್ಕ್ರಿಯೆ, ಸದಾ ಚಾರ, ಸುಜ್ಞಾನ, ಶ್ರೀ ಗುರುಸೇವ, ಈಶ್ವರಾರಾಧನೆ, ಸತ್ಸಂಘ, ಆತ್ಮಚಿಂತನೆ ಸದ್ಗುಣ, ದಯ, ದಾನ, ಧರ್ಮ, ಪರೋಪಕಾರ, ಧ್ಯಾನಧಾರಣ ಸಮಾದಿಯೋಗಗಳ ನಿತ್ಯಾನು ಸಂಧಾನದಿಂದ, ಶಿವಾನುಗ್ರಹಬಲದಿಂದ ಹಾಗೂ ಓಂಕಾರೋಪಾಸನೆಯಿಂದ ತಮ್ಮ ಆತ್ಮಕ್ಕೆ ನಿತ್ಯಶಾಂತಿ ತೃಪ್ತಿಗಳ ಮೂಲಕ, ತನ್ನ ಆತ್ಮನನ್ನು ತಾನೇ ಉದ್ಧಾರ ಮಾಡಿಕೊಂಡಂತಾಗುವುದು. ಅಷ್ಟೇ ಅಲ್ಲ ತನ್ನ ಆತ್ಮಕ್ಕೆ ತಾನೇ ಬಂಧು ಭಾವದಿಂದ ಮಧುರವಾದ ವಾತಾವರಣದಲ್ಲಿ ಆನಂದವಾಗಿರಬಹುದು. ಹೀಗಿಲ್ಲವಾದರೆ, ದುಷ್ಟ ದೂರ್ತ ಸ್ವಭಾವಗಳಿಂದಾಗಿ, ರಾಕ್ಷಸೀ ಕೃತ್ಯಗಳಿಂದ ತನ್ನ ಆತ್ಮಕ್ಕೆ ತಾನೇ ಘಾಸಿ ಗೊಳಿಸಿ, ತನ್ಮೂಲಕ ತನಗೆ ತಾನೇ ಶತೃವಾಗುತ್ತಾನೆ. ಇದರಿಂದ ಅನಂತಕಾಲ ಭಯಂಕರವಾದ ನರಕದಲ್ಲಿಬಿದ್ದು ಬಳಲಿ ನೊಂದು ಹೋಗುತ್ತಾನೆ. ಕೇಡಿಗನಾಗಿ ತನ್ನಿಂದ ತಾನೇ ಪರಮ ಶತೃವಾಗುತ್ತಾನೆ. ಇದನ್ನರಿತು ಶ್ರೇಯೋಮಾರ್ಗದಲ್ಲಿ ಬಾಳಬೇಕು.

ಶಿವಯೋಗವೆಂದರೆ ಅಂಗ ಸತಿ ಲಿಂಗ ಪತಿದೇವನೊಂದಿಗೆ ಒಂದಾಗಿ ಕೂಡಿ ಸಮರಸ ಭಕ್ತಿಭಾವದಿಂದ ರಂಜಿಸುವುದೇ ಲಿಂಗಾಂಗಗಳ ನಿತ್ಯ ಕಲ್ಯಾಣವೆಂದರಿಯ ಬೇಕು. ಕೋಟಿಗೊಬ್ಬ ಶರಣನೆಂಬಂತೆ ಷಟ್ಸ್ಥಲ ಸಿದ್ಧಾಂತದ ಚೌಕಟ್ಟಿನಲ್ಲಿ ಆಚಾರ ಯುಕ್ತನಾದ ಕೋಟಿಗೊಬ್ಬ ಶಿವಯೋಗದ ನಿಜಫಲವನ್ನು ಅನುಭವಿಸಲು ಅರ್ಹ ನಾಗುವನು. ಶಿವಯೋಗಾನುಷ್ಠಾನದಿಂದ ಶರಣನು ನೇರವಾದ ಆತ್ಮಸಾಕ್ಷಾತ್ಕಾರ ವನ್ನು ಹೊಂದುವನು. "ಲಿಂಗಪತಿ ಅಂಗ ತಾ ಮಹಾಸತಿ" ಭಾವವೇ ನಿತ್ಯ ಕಲ್ಯಾಣ.

The purpose of yoga is to gain the divine knowledge of Parashiva Brahma within one's own self by dint-of direct perception. ಅಖಿಲೇಂದ್ರಿಯಗಳ ಒಮ್ಮುಖದ ಏಕೀಕರಣವೇ ಯೋಗವೆನಿಸುವುದು. ಮನೋಬುದ್ಧಿವಾಕ್ಕಾಯಾದಿ ಗಳು ಗಂಗಾ ಯಮುನ ಸರಸ್ವತಿ ತ್ರಿವೇಣಿ ಸಂಗಮದಂತೆ ಸಮುದ್ರಾಭಿಮುಖವಾಗಿ ಪ್ರವಹಿಸಿ ಶಿವಸಮುದ್ರವನ್ನು ಹೊಂದುವ ಮಹೋನ್ನತವಾದ ಶುದ್ಧಾಂತರಂಗದ ಪರಿಪಕ್ವವಾದ ಸ್ಥಿತಿ ಶಿವಯೋಗವೆನಿಸುವುದು. ಇಂತಪ್ಪ ಸ್ಥಿತಿ ಕ್ರಿಯಾಜ್ಞಾನ ಸಮಸಮುಚ್ಚಯ ಯೋಗವನ್ನು ಗರ್ಭೀಕರಿಸಿಕೊಂಡಿರುತ್ತೆ.

The saturated mind should be established in Parashiva Brahma within us. This state of transcendental God consciousness (divine consciousness) is known as Sivayoga. One who is in this path of salvation indeed ultimately attains Athma Sakshath kara of his own accord by the Grace of Mahacharya.

This kind of transcendental process within through deep meditation is hailed as establishing one's mind in the Absolute.

This is the gist of Shivayoga in brief.

### ಇಷ್ಟಲಿಂಗದ ಸ್ವರೂಪದರ್ಶನ

ಸ್ಥಾವರಲಿಂಗಕ್ಕಿಂತಲೂ ಶ್ರೀ ಗುರುದೇವನ ಅಮೃತ ಹಸ್ತದಿಂದ ವಿಧಿ ಪೂರ್ವಕವಾಗಿ ಶಿಷ್ಯನ ಕರಕಮಲವನ್ನು ನಿತ್ಯಾರಾಧನೆಗಾಗಿ ಅಲಂಕರಿಸಿದ ಇಷ್ಟಲಿಂಗ, ಜೀವಂತ ಕಾಲದಲ್ಲೇ ಸಾಯುಜ್ಯಮೋಕ್ಷಾನುಗ್ರಹಕ್ಕೆ ಅತ್ಯಂತ ಫಲಪ್ರದವೆನಿಸಿದೆ.

"ಸರ್ವಲಿಂಗಂ ಸ್ಥಾಪಯೇತಿ" ಎಂದಿದೆ ಶಿವಾಗಮ, ಶಿವಾಗಮಗಳೆಂದರೆ ಶಿವನ ತತ್ಪುರುಷ ಮುಖದಿಂದ ಕಾಂತಾ ಸಂಹಿತೆಯೆಂತೆ ಜಗನ್ಮಾತೆ ಶ್ರೀ ಗಿರಿಜೆಗೆ ಬೋಧಿಸಿದ ಅಥವಾ ಪರಮಾತ್ಮನ ಶ್ರೀ ಮುಖದಿಂದ ಹೊರಹೊಮ್ಮಿ ಆಗಮಿಸಿದ. ಉಪದೇಶಾಮೃತವೆಂದರ್ಥ :

## ಇಷ್ಟಲಿಂಗದಲ್ಲಿ ಷಡ್ಲಿಂಗದರ್ಶನ

1. ಇಷ್ಟಲಿಂಗದ ಶಕ್ತಿ ಪೀಠದಲ್ಲಿ ಆಚಾರಲಿಂಗ ಸ್ಥಾಪಿತವಾಗಿದೆ
2. ಇಷ್ಟಲಿಂಗದ ಕಟಿ ಪ್ರದೇಶದಲ್ಲಿ ಗುರುಲಿಂಗ ,,
3. ಇಷ್ಟಲಿಂಗದ ವರ್ತುಳದಲ್ಲಿ ಶಿವಲಿಂಗ ,,
4. ಇಷ್ಟಲಿಂಗದ ಗೋಮುಖದಲ್ಲಿ ಜಂಗಮಲಿಂಗ ,,
5. ಇಷ್ಟಲಿಂಗದ ನಾಳದಲ್ಲಿ ಪ್ರಸಾದಲಿಂಗ ,,
6. ಇಷ್ಟಲಿಂಗದ ಗೋಳಕದಲ್ಲಿ ಮಹಾಲಿಂಗ ,,

## ಇಷ್ಟಲಿಂಗದಲ್ಲಿ ಪಂಚಭೂತಗಳ ದರ್ಶನ

1. ಇಷ್ಟಲಿಂಗದ ಶಕ್ತಿಪೀಠದಲ್ಲಿ ಪೃಥ್ವಿತತ್ವ ಅಂತರ್ಗತವಾಗಿದೆ
2. ಇಷ್ಟಲಿಂಗದ ಕಟಿ ಪ್ರದೇಶದಲ್ಲಿಅಪ್‌ತತ್ವ ,,
3. ಇಷ್ಟಲಿಂಗದ ವರ್ತುಳದಲ್ಲಿ ಅಗ್ನಿತತ್ವ ,,
4. ಇಷ್ಟಲಿಂಗವ ಗೋಮುಖದಲ್ಲಿ ವಾಯುತತ್ವ ,,
5. ಇಷ್ಟಲಿಂಗದ ನಾಳದಲ್ಲಿ ಆಕಾಶತತ್ವ ,,
6. ಇಷ್ಟಲಿಂಗದ ಗೋಳಕವಲ್ಲಿ ಆತ್ಮತತ್ವ ,,

ಇಷ್ಟಲಿಂಗ ಕೇವಲ ಶಿಲೆಯಲ್ಲ. ಕ್ರಿಯಾವಂತ ಶ್ರೋತ್ರೀಯ ಬ್ರಹ್ಮನಿಷ್ಠಾ ಗರಿಷ್ಠನಾದ ಶ್ರೀ ಮಹಾಗುರುವಿನ ಅಮೃತ ಹಸ್ತದಿಂದ ಪೂರ್ವಾಶ್ರಯ ದೂರವಾಗಿ, ಶಿವಪಂಚಾಕ್ಷರೀ ಮಹಾ ಮಂತ್ರದಿಂದ ಮಹಾದೇವನ ದಿವ್ಯಕಲೆ ಅಲ್ಲಿ ಪ್ರಾದುರ್ಭವಿಸುವುದು. ಪೂರ್ವಾಶ್ರಯ ದೂರವಾದಲ್ಲಿ ಎಂದರೆ ಪಡ್ವಡಿ, ವೃಷ್ಟಿ, ಲಂಬನ, ಮುಕ್ತಾಗುಚ್ಛ, ಪಂಚವರ್ಣ, ಎಂಬೀ ಪಂಚಸೂತ್ರಗಳೆಂದರಿಯ ಬೇಕು.

ಪಂಚಲಕ್ಷಣ ಸಂಯುಕ್ತ । ಪಂಚಸೂತ್ರ ಸಮನ್ವಿತಂ ॥
ಮಚ್ಛಿಖಾಚಕ್ರಗಲಿತಂ । ಇಷ್ಟಲಿಂಗಂ ಮಹೇಶ್ವರಿ ॥

(ಶಿವಾಗಮ)

ASTHANA VIDWAN
M. G. Nanjundaradhya
Professor of Shakti Vishistadwaita
Maharaja Samskrit College, MYSORE.

Date : 12-3-70

ಶ್ರೀಮಾನ್ ಟಿ. ಬಿ. ಬಸವರಾಜಯ್ಯನವರ ಸ|| ಕ್ಕೆ||

ಶರಣಾರ್ಥಿಗಳು,

ನೀವು ವಿಶ್ವಾಸದಿಂದ ಕಳುಹಿಸಿದ ದಿನಾಂಕ 5-3-70ರ ಪತ್ರ, ಕೆಲವು ಅಭಿಪ್ರಾಯಗಳ ಮುದ್ರಿತ ಪ್ರತಿಗಳು ಮತ್ತು ಪ್ರಸ್ತಾವನೆ (ಪು. 325) ಪುಸ್ತಕ ಸಹ ತಲುಪಿದವು.

ನೀವು ಮನೆಗೆ ಬಂದಿದ್ದಾಗ ಎರಡು ಸಲವೂ ಕಾರ್ಯಗೌರವದಿಂದ ಭೇಟಿಯಾಗಲು ಅವಕಾಶವಾಗದುದಕ್ಕಾಗಿ ತುಂಬಾ ವಿಷಾದವಾಯಿತು.

ಪ್ರಕೃತ ತಾವು 11-3-70ರ ಪತ್ರದಲ್ಲಿಯೂ ಸಹ ಮುನ್ನುಡಿಯನ್ನು ಕಳಿಸಲು ಸೂಚಿಸಿರುತ್ತೀರಿ. ನೀವು ಆರಂಭಿಸಿರುವ ಕೆಲಸವು ಪವಿತ್ರವಾದುದು ಮತ್ತು ಅತ್ಯಾವಶ್ಯಕವಾದುದು. ಪ್ರಸ್ತಾವನೆಯನ್ನು ಓದಿದೆನು. ನನ್ನ ಮುನ್ನುಡಿ ಮುಖ್ಯ ಗ್ರಂಥಕ್ಕೆ ಅಗತ್ಯವಾಗಿ ಬರೆಯುತ್ತೇನೆ.

ತಾವು ಇದೇ ಉತ್ಸಾಹದಿಂದ ಪ್ರಮಾಣಬದ್ಧವೂ ಯುಕ್ತಿ ಯುಕ್ತವೂ ಆದ ವಿಷಯಗಳನ್ನು ಸಂಗ್ರಹಿಸಿ ಸುಮಾರು 300 ಪುಟಗಳಿಗೂ ಮೇಲ್ಪಟ್ಟ ಬೃಹದ್ಗ್ರಂಥವನ್ನು ಈ ಬಗ್ಗೆ ಬರೆಯಲಿರುವುದು ತುಂಬಾ ಸಂತೋಷ. ತಮ್ಮ ಪ್ರಯತ್ನವು ಯಶಸ್ವಿಯಾಗಲೆಂದು ಹಾರೈಸುತ್ತೇನೆ.

ಮೂಲಗ್ರಂಥವು ಶೃಂಗೇರಿಯ ಆದಿ ಶಂಕರಾಚಾರ್ಯರಿಗೆ ದತ್ತವಾದ ಚಂದ್ರಮೌಳೀಶ್ವರ ಲಿಂಗದ ನಿಜವೃತ್ತಾಂತ ಮುದ್ರಿತವಾದ ತರುವಾಯ ಒಂದು ಪ್ರತಿ ಕಳುಹಿಸಿರಿ. ಮುನ್ನುಡಿಯನ್ನು ಕಳುಹಿಸುತ್ತೇನೆ. ತಮ್ಮ ವಿಶ್ವಾಸಕ್ಕೆ ಕೃತಜ್ಞ.

ಇಂತು ತಮ್ಮ
ಎಂ. ಜಿ. ನಂಜುಂಡಾರಾಧ್ಯ

॥ ಓಂ ನಮೋ ಶ್ರೀ ಉಮಾಮಹೇಶ್ವರ ದೇವತಾ ಸಾರ್ವ ಭೌಮಾಯ ॥

**Dr. T. G. Siddapparadhya, M.A., Ph.D.,**
Vidwan, Samaskrutaadhyapaka,
University of Mysore.

Manasa Gangotri,
MYSORE–2

Date 14–3–1970

## ಮುನ್ನುಡಿ

ಶ್ರೀ ಟಿ. ಬಿ. ಬಸವರಾಜಯ್ಯನವರು ಶ್ರೀ ಜಗದ್ಗುರು ರೇಣುಕಾಚಾರ್ಯರ ಲೀಲಾ ವಿಭೂತಿಯನ್ನು ಜಗತ್ತಿಗೆ ತಿಳಿಸಲು ಬರೆಯುತ್ತಿರುವ ಮಹಾ ಗ್ರಂಥವ "ಪ್ರಸ್ತಾವನೆಗೆ" ಮುನ್ನುಡಿಯನ್ನು ಬರೆಯಲು ಹೊರಟಿರುವುದು ನನಗೊಂದು ದೊಡ್ಡ ಸಾಹಸವೇ ಆಗಿದೆ. ಅವರೀ ಪ್ರಸ್ತಾವನೆಯಲ್ಲಿಯೇ ಆಚಾರ್ಯರ ದಿವ್ಯೋಪ ದೇಶವನ್ನು ಹೃದಯಂಗಮವಾಗಿ ನಿರೂಪಿಸಿದ್ದಾರೆ. ಮುಂದೆ ಬರೆಯಲಿರುವ ಮಹಾ ಗ್ರಂಥದಲ್ಲಿ ಇನ್ನೂ ಯಾವ ಹೆಚ್ಚಿನ ಅಂಶವನ್ನು ಹೊರಗೆಡಹುವರೆಂಬುದೇ ದೊಡ್ಡ ಕುತೂಹಲ. ಅವರು ವರ್ತಕರಂತೆ ಆಧ್ಯಾತ್ಮ ಜ್ಞಾನ ಸಂಪತ್ತನ್ನು ಸಂಗ್ರಹಿಸಿಟ್ಟು ಕೊಂಡು, ಜನರಲ್ಲಿ ಆಧ್ಯಾತ್ಮದ ಹಸಿವನ್ನು ಹುಟ್ಟಿಸಿ ಬೆಳೆಸಲಿಕ್ಕಾಗಿ ಸಕಾಲದಲ್ಲಿ ಅದನ್ನು ಹೊರಗೆಡಹಿದ್ದಾರೆ. ಪ್ರಸ್ತಾವನೆಯಲ್ಲಿಯೇ ಆಧ್ಯಾತ್ಮ ವಸ್ತುವಿನ ಸಂಗ್ರಹವು ಇಷ್ಟು ಮಹತ್ವದ್ದಿರುವಾಗ, ಮುಂದಿನ ಮಹಾ ಗ್ರಂಥದ ಪ್ರಕಾಶ ಇನ್ನೆಷ್ಟು ಹೆಚ್ಚಿನ ಸಂಗ್ರಹವಾಗಿದೆಯೋ ತಿಳಿಯಬೇಕಾಗಿದೆ. ಶೃತ್ಯಾಗಮಗಳ ಮತ್ತು ಗೀತಾದಿ ಸ್ಮೃತಿ ಗಳ ಸಾರವನ್ನು ಮತ ತತ್ವಕ್ಕೆ ಹೊಂದಿಕೆಯಾಗುವಂತೆ ಪ್ರಸ್ತಾವನೆಯಲ್ಲಿ ನಿರೂಪಿಸಿದ್ದಾರೆ.

ಇವರ ಪ್ರಸ್ತಾವನೆಯನ್ನು ಓದಿದವರೆಲ್ಲರಿಗೂ, ವೀರಶೈವ ಧರ್ಮದ ಉಜ್ವಲತೆ, ವೈಶಾಲ್ಯ, ವ್ಯಾಪಕತೆ, ಪ್ರಾಚೀನತೆ ಮೊದಲಾದ ವಿಶೇಷಗಳು ಮನವರಿಕೆಯಾಗ ದಿರವು. ಇದು ಸಾಧಕನಿಗೆ ದೇಹವನ್ನೇ ದೇವಾಲಯವನ್ನಾಗಿ ಮಾರ್ಪಡಿಸಿ, ಜೀವ ನನ್ನು ದೇವನನ್ನಾಗಿ ಮಾಡುವ ಸಾಮರ್ಥ್ಯವನ್ನು ಸಹಜವಾಗಿ ಪಡೆದಿದೆ. ಮಾನವನ ಆಸುರೀ ಸಂಪತ್ತನ್ನು ದೈವೀ ಸಂಪತ್ತನ್ನಾಗಿ ಪರಿಣಾಮಗೊಳಿಸುವುದರ ಮೂಲಕ, ಇದು ಅವನನ್ನು ಇಲ್ಲಿಯೇ ಈ ದೇಹದಲ್ಲಿಯೇ ಬಂಧನದಿಂದ ಪಾರು ಮಾಡಬಲ್ಲದು. ಮಾನವನು ದೈವಾಂಶನೆಂಬುದನ್ನು ಇದು ಅವನಿಗೆ ಗುರುವಿನಿಂದ ತಿಳಿಸಿ ಆ ದೇವನಲ್ಲಿ ಆತನನ್ನು ಸಮರಸವಾಗಿ ಬೆರೆಸಲು, ಅನುಕೂಲವಾದ ಸನ್ನಿವೇಶವನ್ನು ಕಲ್ಪಿಸುತ್ತದೆ. ತಾನು ಶಿವನಾಗಿದ್ದರೂ ಶಿವನಿಂದ ಬೇರೆಯಾಗಿದ್ದು ಅನುಭವಿಸುತ್ತಿರುವ ದುಃಖ

ಕ್ಲೇಶಗಳನ್ನು ಅವನಿಗೆ ತಿಳಿಸಿಕೊಟ್ಟು, ಅಷ್ಟಕ್ಕೆಲ್ಲಾ ಕಾರಣವಾಗಿರುವ ಮನಸ್ಸನ್ನು ಹವಗೊಳಿಸಿ, ಆ ಮನಸ್ಸಿಗೆ ಇಂದ್ರಿಯಗಳ ಮೇಲೆ ಅಧಿಕಾರವನ್ನು ನಡೆಸಲಿಕ್ಕಾಗದಂತೆ ಮಾಡಿ, ಅದನ್ನು ಮಹಾದೇವನ ಚಿಂತೆಯಲ್ಲಿ ತೊಡಗಿಸುವ ಗುರುತರವಾದ ಹೊರೆಯನ್ನು ವೀರಶೈವ ಧರ್ಮವು ಹೊತ್ತು ನಿಂತಿದೆ.

ಮನಸ್ಸನ್ನು ಹಸನು ಮಾಡಿ ಇಂದ್ರಿಯಗಳನ್ನು ವಿಷಯಗಳ ಕಡೆಗೆ ಹರಿಯುದಂತೆ ಮಾಡಿ, ಅವೆಲ್ಲದರ ಸಹಕಾರದಿಂದ ಮಾನವನನ್ನು ಪ್ರಸಾದ ಭೋಗಿಯನ್ನಾಗಿ ಮಾಡುವ ಪ್ರಯುಕ್ತ ವೀರಶೈವ ಧರ್ಮವು ಸರ್ವದಾ ಆಕರ್ಷಣೀಯವಾಗಿದೆ. ಇದನ್ನು ತಿಳಿಯಲಿಕ್ಕೂ ಆಚರಿಸಲಿಕ್ಕೂ ಸಾಧಕನು ಏಕಾಂತದಲ್ಲಿ ನೆಲೆಸಬೇಕಾಗಿಲ್ಲ. ಅವರವರು ತಮ್ಮ ವೃತ್ತಿಯಲ್ಲಿಯೇ ಇದ್ದುಕೊಂಡು ಆಗಾಗ ನೇರವಾಗಿ ತಮ್ಮ ಇಂದ್ರಿಯಗಳಿಗೆ ತೋರುವ, ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳನ್ನು ಆಗಾಗಲೇ ತಮ್ಮ ಜೊತೆಯಲ್ಲಿಯೇ ಇರುವ ಶಿವನಿಗೆ ಅರ್ಪಿಸುವುದನ್ನು ಕಲಿತುಕೊಂಡರೆ ಆಗಲೇ ಅವೆಲ್ಲವೂ ಅವನಿಗೆ ಪ್ರಸಾದವಾಗಿ ಮಾರ್ಪಡುತ್ತವೆ. ಈ ಅರ್ಪಣ ಮನೋಭಾವವನ್ನು ಅಭ್ಯಾಸದಿಂದ ಬೆಳೆಸಿಕೊಂಡವರಿಗೆ ಯಾವತ್ತೂ ಪದಾರ್ಥ ಭೋಗದ ಅವಶ್ಯಕತೆಯೇ ಇರುವುದಿಲ್ಲ. ಅವರಿಗೆ ಪ್ರತಿ ನಿಮಿಷವೂ ಪ್ರಸಾದವೇ ದೊರೆಯುತ್ತಲಿರುವುದು.

ಮಾನವನು ದೇಹದ ಐದು ಇಂದ್ರಿಯಗಳಲ್ಲೂ ತಾನೊಬ್ಬನೇ ಇರುವುದಾಗಿ ತಿಳಿದು, ತನ್ನೊಡನೆ ತನಗಾಗಿ ಇರುವ ಮಹಾದೇವನನ್ನು ಮರೆತಿರುವುದರಿಂದ ಅವನಿಗೆ ಇಂದು ದುಃಖಪ್ರಾಪ್ತವಾಗಿದೆ. ದೇಹವೆಂಬ ಮನೆಯನ್ನು ಕಟ್ಟಿಸಿ ಜೀವನನ್ನು ಅಲ್ಲಿ ವ್ಯವಹರಿಸಲು ಬಿಟ್ಟು, ಮಹಾದೇವನು ಅವನೊಡನೆ ನಿರ್ಲಿಪ್ತನಾಗಿ ನೆಲಸಿರುವನು. ಅವನಿರುವುದನ್ನು ಯಾವಾಗಲೂ ನೆನೆಸಿಕೊಂಡು ಆಗಾಗ ಒದಗುವ ಸುಖದುಃಖಗಳನ್ನು ಅವನಿಗೆ ಅರ್ಪಿಸುವುದನ್ನು ಮಾನವನು ಕಲಿತರೆ ಆಗಲೇ ಅವನ ಜೀವನ ಪಾವನವಾಗತೊಡಗುವುದು. ಅವನನ್ನು ಮರೆತವನು ಕೆಡುವನು, ಅರಿತವನು ಬದುಕುವನು. ಅರಿತವನು ನಿಮಿತ್ತ ಮಾತ್ರ ಇಹಲೋಕದ ವ್ಯವಹಾರಗಳನ್ನು ನಡೆಸುವ ಪ್ರಯುಕ್ತ ಅವನಿಗೆ ಆಗ್ರಹ ಅಭಿಮಾನಗಳು ಸುಳಿಯುವುದಿಲ್ಲ. ಯಾವ ಕೆಲಸಕ್ಕೆ ಏನು ಮಾಡಬೇಕಾಗಿ ಬಂದರೂ ಅದೆಲ್ಲವನ್ನೂ ಅವನ ಸೇವೆಯೆಂದು ಶ್ರದ್ಧೆಯಿಂದ ನಡೆಸುತ್ತ ಅರಿತವನು ನಿತ್ಯ ಸುಖಿಯಾಗಿರುವನು. ಮಾನವರೆಲ್ಲರೂ ಹೀಗೆ ಬಾಳಬೇಕೆಂಬುದೇ ವೀರಶೈವ ಧರ್ಮದ ಆಶಯ.

ಈ ಧರ್ಮವು ಶೃತ್ಯಾಗಮಗಳಲ್ಲೂ ಭಗವದ್ಗೀತೆ ಮೊದಲಾದ ಸ್ಮೃತಿಗಳಲ್ಲೂ ಸ್ಪಷ್ಟವಾಗಿ ನಿರೂಪಿತವಾಗಿದೆ. ಆದರೆ ಸಾಮಾನ್ಯ ಮಾನವನು ಅದೆಲ್ಲವನ್ನು

ಸಂಗ್ರಹಿಸಿಟ್ಟುಕೊಂಡು, ಪರಿಶೀಲಿಸಿ ಮನನ ಮಾಡಿ ಅನುಭವಿಸಬೇಕೆಂದರೆ ಬಹಳ ಕಷ್ಟವಾಗುತ್ತದೆ. ಆದಿಶ್ರೀ ಅಗಸ್ತ್ಯರಂತಹ ಮಹರ್ಷಿಗೆ ಪ್ರಸಾದ ಜೀವನವು ಅಳವಟ್ಟಿರಲಿಲ್ಲ. ಅವನಿಗೆ ಮಾಂಸದೇಹವನ್ನು ಮಂತ್ರಪಿಂಡವನ್ನಾಗಿ ಮಾಡಲು ಗುರುವೊಬ್ಬನು ಬೇಕಾಯಿತು. ಅದಕ್ಕಾಗಿ ಜಗದ್ಗುರು ಭಗವತ್ಪಾದ ಶ್ರೀ ರೇಣುಕಾಚಾರ್ಯರ ಅವತಾರ ಆಗಬೇಕಾಯಿತು. ಅವರಾದರೋ ತಾಯಿ ಗರ್ಭದಲ್ಲಿ ಅವತರಿಸದೆ, ಶಿವಲಿಂಗದಲ್ಲಿ ಉದ್ಭವಿಸಿದ್ದರಿಂದ ಹಿಂದಿನ ತತ್ವಜ್ಞಾನದ ಸಂಸ್ಕಾರ ಪರಿಪೂರ್ಣವಾಗಿ ಉಳಿದು ಪ್ರಕಾಶಿತವಾಗಿತ್ತು. ಆದ್ದರಿಂದ ಅವರು ದಿವ್ಯ ತತ್ವವನ್ನು ಶ್ರೀ ಅಗಸ್ತ್ಯ ಮಹರ್ಷಿಗೆ ಉಪದೇಶಿಸಿ, ಆ ಮೂಲಕ ವಿಶ್ವವೆಲ್ಲಕ್ಕೂ ಸಾರಿದರು.

ಆದಿ ಅಗಸ್ತ್ಯರು ಇದ್ದುದು ಶ್ರೀ ಮದ್ರಾಮಾಯಣ ಕಾಲದಲ್ಲಿ ಎಂಬುದು ಇತಿಹಾಸದಲ್ಲಿ ಸ್ಪಷ್ಟವಿದೆ. ಆಗ ವೀರಶೈವ ಧರ್ಮವನ್ನು ಸುಗಮವಾಗಿ ಶ್ರೀ ಜಗದ್ಗುರು ರೇಣುಕಾಚಾರ್ಯರು ವಿಮರ್ಶನಪೂರ್ವಕ ವಿವರಿಸಿದ್ದ ಪ್ರಯುಕ್ತ, ಅನೇಕ ಮಹರ್ಷಿಗಳು ಪ್ರತಿಷ್ಠಿತ ಲಿಂಗದ ಅರ್ಚನೆಗಿಂತಲೂ ಇಷ್ಟ ಲಿಂಗದ ಅರ್ಚನೆಯೇ ತಮ್ಮ ಪ್ರಸಾದ ಜೀವನಕ್ಕೆ ಸಾಧಕವೆಂದು ನಂಬಿ ಲಿಂಗಧಾರಿಗಳಾದರು. ಆದರೆ ಎಲ್ಲರೂ ಲಿಂಗವನ್ನು ಧಾರಣೆ ಮಾಡಿ ಆಗಾಗ ಒದಗಿದ್ದೆಲ್ಲವನ್ನೂ ಆ ಲಿಂಗಕ್ಕೆ ಅರ್ಪಿಸಲು ಸಾಮರ್ಥ್ಯವನ್ನು ಪಡೆಯಲಾರರು. ಭೋಗ ಜೀವನಕ್ಕೆ ದಾಸರಾಗಿರುವವರಿಗೆ ಪ್ರಸಾದ ಜೀವಿಗಳಾಗಲು ಬಹಳ ಅಡಚಣೆಗಳಿವೆ. ಆದರೂ ಶ್ರೀ ಮನ್ಮಹಾಭಾರತ ಕಾಲದಲ್ಲೂ ವಿರಳವಾಗಿಯಾದರೂ ಲಿಂಗಧಾರಿಗಳಿದ್ದರೆಂಬುದೂ, ಅವರೂ ಸಹ ಆಲಿಂಗಿ ಬ್ರಾಹ್ಮಣರಂತೆಯೇ ತಪಸ್ವಿಗಳೆಂತಲೂ, ಹಾಗೂ ದಾನ ಸ್ವೀಕಾರಕ್ಕೆ ಅರ್ಹರೆಂಬುದು ಅನುಶಾಸನಿಕ ಪರ್ವದಿಂದ ತಿಳಿದು ಬರುತ್ತದೆ. ಇದರಿಂದ ಹಿಂದೆ ವೀರಶೈವರೇ ಇರಲಿಲ್ಲವೆಂದೂ ಶ್ರೀ ಬಸವಣ್ಣನ ಕಾಲದಿಂದ ವೀರಶೈವರು ಬಂದರೆಂದು ಹೇಳುವುದು ಸರಿಯಲ್ಲವೆಂಬುದು ಎಲ್ಲರಿಗೂ ಮನವರಿಕೆಯಾಗಲಿದೆ.

ಇಷ್ಟೊಂದು ಪ್ರಾಚೀನವೂ ಮಹತ್ತರವೂ ಆದ ಪರಮ ವೀರಶೈವ ಧರ್ಮವನ್ನು ಎಲ್ಲರೂ ತಿಳಿಯಲೆಂಬ ಸದಾಶಯದಿಂದ "ವೀರಶೈವ ಧರ್ಮ" ಯೆಂಬ ಹೆಸರಿನಲ್ಲಿಯೇ, ಅದರ ಸಿದ್ಧಾಂತ ಸಾಧನ ಮಾರ್ಗಗಳನ್ನು ಪರಿಶೀಲಿಸಿ ಹಿಂದೆಯೇ ಈ ಸೇವಕನು ಪ್ರಕಟಿಸಿದ್ದ ಪ್ರಯುಕ್ತ, ಶ್ರೀ ಟಿ. ಬಿ. ಬಸವರಾಜಯ್ಯನವರು ತಮ್ಮ ಮಹದ್ಗ್ರಂಥದ ಪ್ರಸ್ತಾವನೆಗೆ ಒಂದು ಮುನ್ನುಡಿಯನ್ನು ಬರೆಯುವಂತೆ ಕೇಳಿಕೊಂಡಿರುವ ಹಾಗೆ ಕಾಣುತ್ತದೆ. ಈ ಸೇವಕನು ರೈತನಂತೆ ಆಧ್ಯಾತ್ಮ ಸಂಪತ್ತನ್ನು ಬೆಳೆದು ಅನುಭವಿಸಿ, ಸೋದರ ಸೋದರಿಯರೆಲ್ಲರೂ ಅನುಭವಿಸಲೆಂಬ ಸದಾಶಯದಿಂದ "ವೀರಶೈವ ಧರ್ಮ"ದ ಜೊತೆಗೆ ಪ್ರಸಾದ ಜೀವನವನ್ನೂ ಈಗಾಗಲೇ ಸಾಧಕರ ಎದುರಿಗೆ ಇಟ್ಟಿರುವನು. ಈ ವೀರಶೈವ ಧರ್ಮವು ಶ್ರೀ ಕೃಷ್ಣಪ್ರೋಕ್ತ

ಭಗವದ್ಗೀತೆಯಲ್ಲೂ ಸಾಕಷ್ಟು ಅಡಕವಾಗಿದೆ ಎಂಬ ಮಹದಂಶವನ್ನು ಭಗವದ್ಗೀತಾ ವೀರಶೈವ ಭಾಷ್ಯದಲ್ಲೂ ಈಗಾಗಲೇ ತೋರಿಸಿಯಾಗಿದೆ. ಆದರೆ ಇವೆಲ್ಲವನ್ನೂ ಸಂಗ್ರಹಿಸಿ, ಬೆಂಗಳೂರು ಕಂಟೋನ್ಮೆಂಟ್ ನಿವಾಸಿ, ತರೀಕೆರೆ, ಶ್ರೀ ಟಿ. ಬಿ. ಬಸವರಾಜಯ್ಯನವರು–"ಶ್ರೀ ಶೃಂಗೇರಿ ಜಗದ್ಗುರು ಆದಿ ಶಂಕರಾಚಾರ್ಯರಿಗೆ ದತ್ತವಾದ-ಚಂದ್ರಮೌಳೀಶ್ವರ ಲಿಂಗವ ನಿಜ ವೃತ್ತಾಂತ" ವೆಂಬ ಹೆಸರಿನಲ್ಲಿ ತಮ್ಮಿಂದ ರಚಿತವಾಗಲಿರುವ ಪವಿತ್ರ ಮೂಲಗ್ರಂಥಕ್ಕೆ "ಪ್ರಸ್ತಾವನೆ"ಯೆಂಬ ಹೆಸರಿನ ಅಮೋಘ ಗ್ರಂಥವನ್ನು ಸಾಧಕರ ಮಡಲಿಗೆ ಇಟ್ಟಿರುತ್ತಾರೆ. ಬೇಕಾದ ವಸ್ತುಗಳನ್ನು ಅಂಗಡಿ ಯಲ್ಲಿ ಕಂಡು ಆಸಕ್ತಿಯಿಂದ ಯಾರಾದರೂ ಕೊಳ್ಳಬಹುದು. ಅದರಂತೆಯೇ ಇವರ "ಪ್ರಸ್ತಾವನೆ" ಎಂಬ ಸದ್ಗ್ರಂಥದಲ್ಲೂ ಸಾಧಕರಿಗೆ ಬೇಕಾದ್ದೆಲ್ಲವೂ ರಾಮಣೀಯಕವಾಗಿ ದೊರೆಯಲಿದೆ. ಅದನ್ನು ಸಾಧಕರು ಆಸಕ್ತಿಯಿಂದ ಸ್ವೀಕರಿಸಿ ಅವರನ್ನು ಪ್ರೋತ್ಸಾಹಿಸಿ, ತಮ್ಮೊಳಗೆ ತಾವಾಗಿರುವ ಪರಮಾತ್ಮನಿಗೆ ಸುಖದುಃಖಗಳನ್ನು ಅರ್ಪಿಸುತ್ತ ಮತ್ತವೆಲ್ಲವನ್ನೂ ಪ್ರಸಾದರೂಪವಾಗಿ ಭೋಗಿಸುವ ಮೂಲಕ ನಿರ್ಲಿಪ್ತರೂ, ನಿತ್ಯತೃಪ್ತರೂ, ಶಾಂತರೂ ಆಗುವರೆಂದು ದೃಢವಾಗಿ ನಂಬಲಾಗಿದೆ.

ಮಾನಸಗಂಗೋತ್ರಿ
ಮೈಸೂರು–2. ಟಿ. ಜಿ. ಸಿದ್ದಪ್ಪಾರಾಧ್ಯ

॥ ಕರಸ್ಥಲದಲ್ಲಿ ಲಿಂಗವಿರ್ದು । ಮತ್ತಾವ ಚಿಂತೆಯೇಕೆ ।
ಭ್ರಾಂತಿಯೇಕೆ ಹೇಳಾ ಗುಹೇಶ್ವರಾ ॥

॥ ಲಿಂಗವ ನರಿಯದೆ ಏನನರಿದಡೆಯು ಫಲವಿಲ್ಲ ।
ಲಿಂಗವ ನರಿದ ಬಳಿಕ । ಮತ್ತೇನ ನರಿದಡೆಯೂ ಫಲವಿಲ್ಲ ॥
ಸರ್ವಕಾರಣ ಲಿಂಗವೆಂಬುಧಾಗಿ ಆ ಲಿಂಗವನೆ ಅರಿದೆ ।
ಅರಿದರಿದು ಲಿಂಗ ಸಂಗವನೇ ಮಾಡುವೆ ।
ಆ ಸಂಗದೊ ಳೋಲಾಡುವೆ ॥

---

॥ ಸರ್ವದಾ ಸರ್ವಭಾವೇನ ।
ನಿಶ್ಚಿಂತೈಃ ಭಗವಾನೇವ ಭಜನೀಯಃ ॥
(ಶ್ರೀ ನಾರದ ಭಕ್ತಿಸೂತ್ರ)

---

॥ ಸರ್ವತ್ರ ಸಂಪದಸ್ಸಂತು ।
ನಸ್ಯಂತು ವಿಪದಸ್ಸದಾ ॥

# ESSENTIALS OF SPIRITUALISM

( A Philosophical Enterprise in English )

---

Essentials of Spiritualism is a piece of an enlightening maiden enterprise attempted by me with faith and devotion' in order to gain a personal knowledge of Brahma through constant contemplation and contribution of self awakening thoughts iust to enrich the cognizance of Athman within.

Hinduism (our Sanathana Dharma), Mother of all Religions, has been loudly hailed by men of integrity, spiritual insight and divine wisdom, as a Universal Religion, in all its entirity and is a most primitive one among innumerable ancient Religions. It traces its origin in Vedas, Upanishads and Sivagamas which date back to the den of dim yore of steep antiquity. While Vedas and Upanishads are considered as the very Divine Breath of Providence, Sivagamas do enjoy a peerless privilege in the hierarchy of spiritual eternal chantings of God Almighty. Sivagamas are hailed as the very articulation (Spoken Words) of Living God Almighty Parasiva, fully pregnent with the richness of fathomless Treasure of direct wisdom Divine. Although there is no much difference or any inferiority complexion attached to, in between them, yet, Sivagamas do occupy a predominent place, in vividly expressing and expounding the most lofty and sublime tenets of Viswa Dharma and the Divine path

to perfection. It is a matter of matured consideration that the word of mouth carries more meaningful weight and is really impressive beyond all doubts, in indicating or rather asserting the primordial purpose and aim in the spiritual (Adhyatmic) field and is imminently helpful in the attainment of Goal Supreme (Athma Sakshaathkara), rather than mere (hymns) spontaneously emerged out from the Divine Breath of Lord, God Almighty, Hence, Sivagamas occupy pre-eminently a predominent place in the order of avocations of the Spiritual Kingdom of Living God Almighty.

In the spiritual book under reference, I have strived every nerve of mine to bring to light some Universal traits and aspects of Adhyathmic Dharma, substantiating the same with authentic Vedic and Agamic authorities of antiquity, as are flashed out within my comprehension and calibre, in a convincing manner to the best of my ability and sobriety. Although different Religions teach and preach different paths, I have stressed here that the GOAL of all of them is ONE and the same. It is worthy to bear in mind that the paths and pursuits do vary and differ. Diversity and multiplicity are the apparent key notes launched in the creation of this Universe. Upholding this sublime notion aloft, I have ventured by the Grace of God Almighty, to dwell upon the abstract philosophic tenets of Dwaita, Visistadwaita, Saiva Siddhantha, Adwaita and Sivadwaita (Veerasaivism) etc., respectively, in brief to the best

of my ability and capacity with an unbiased mind and in doing so, I have touched here and there sincerely some salient aspects of Christianity too, to the extent I know. The natural love that I cherish since my boyhood for acquainting with and realising more and more of Spiritual Knowledge from within and my ardent devotional reverence and prayer at the Lotus Divine Feet of Bhagawan Srimad Jagadguru Sri RENUKACHARYA, the paramount pontifical Head of Sivadwaita School of Thought and Founder Mahacharya of Veerasaiva Religion, has indeed pushed me to come to the fore front in this laudable spiritual pursuit and has actuated me to solemnly undertake this noble cause as it were, and to bring out this piece of literary work in English and as well as the Kanarese work (Book) written by me under the name and style of "Sri SHRINGERI JAGADGURU ADI Sri SANKARACHARYARIGE DATTAVADA, CHANDRA MOULEESWARA LINGADA, NAIJA VRUTTAANTA". The latter having comprised of two parts, at present only the first part is printed and ready for release.

Essentials of Spiritualism may cover about 600 pages in English and 2000 books are being printed. Although prominence is given to Viswa Dharma and the propounders of the same, I have freely and frankly with an open heart, dwelt upon the tenets enunciated in Sanathana Dharma, individually and collectively as appertaining to different Schools of Thought, broadly coming under the universally glorified roof of Hinduism.

I have pointedly brought to light in Essentials of Spiritualism that all the salient aspects hailed in so many tongues, under the roof of varying Schools of Thought are found merged in the Great Womb of SIVADWAITA School of Thought which profusely propounds Viswa Dharma (Universal Dharma). This effort taxed me much because I have had to keenly apply my mind with a sense of tranquility of mind in concentrating upon the abstract facinating philosophy of our Sanatana Dharma. The commentaries written on Prasthana Thrayas by the Pontifical Heads of various Schools of Thoughts and their expositions thereof are also referred to in brief. The frontispiece portion of about 30 pages is an introduction to Essentials of Spiritualism, which propounds chiefly on Bhakti Yoga and its importance in the realm of Spiritualism in general.

The opening chapter in Essentials of Spiritualism starts with a simple poem expounding the great significance of DANCE of Lord Nataraja who is the Sole King among the celestial Dancers and the Master of the Universe. The Westerners are lovers of dance. This fine art has captivated them so much that their chief recreation in life is nothing but dance. They dance daily merrily in order to enchant each other and for the gratification of their organs of senses. It is a regular feast unto their insatiable senses and their summumbonum in life. In order to draw the Western mind closer to the spiritual cult of fine art of Oriental Dance and its d u e l significance in

embellishing both moral and spiritual faces of the same, the celestial DANCE of the Lord, God Sri Nataraja is dwelt upon in short. The expositions of attainment of Moksha as has been propounded by the illustrious pontifical Heads of varicus Schools of Thought, such as Ananda Teertha Sriman Madhwacharya, Bhagawathpada Sri Ramanujacharya, the FOUR great Saiva Samayacharyas viz., Saint Appar, St. Sundarar, St. Tirugnana Sambandar and St. Sri Manicka Vachagar, and of Jagadguru Adi Sri Sankara charya and as well as the expositions of the paramount pontifical Heads of Veerasaivism viz., Srimad Jagadguru RENUKADI PANCHACHARYAS are also dwelt upon by me one after another, to the extent that I have gained personal knowledge of the same through my experience and realisation. The same is really self awakening by cutting asunder, the inner veil of ignorance and intricate knots of Avidya.

I am happy to state here that I have listed about 200 foreign and Indian Universities' addresses in order to send this spiritual book of Universal Spiritualism, for the exposition of which, Mother India is hailed from time immemorial as the birth place. A few Universities in London, in South & North America, Paris, Belgium, Holland, Poland West Germany, East Germany, (Bonn & Berlin) Dublin in Ireland and Scotland, Universities in Scandinevian Countries such as Norway, Sweden, Denmark, Greece, Athens, Zechoslavakia, Yugoslavia Universities in Russia, Japan, Australia,

are some which come under my purview and to whom I intend despatching the books directly to their respective addresses.

May it please the Lord God Almighty

ಶಿವಶರಣಂಗೆ ಮರಣವೇ ಮಹಾ ನವಮಿ ಮತ್ತು ಮಹಾ ಶಿವರಾತ್ರಿ
"Shiva Sharanange Maranave Maha Navami and Mahasivaratri" i.e., The closure of mortal eye here is overwhelmed by the unfoldment of Gnana-Netra-ಜ್ಞಾನ-ನೇತ್ರ, Wisdom Divine unto a God intoxicated holy Seer before Lord Shiva in Mount Kailas.



Indian Express, Saturday June 1980

# A Review

## ESSENTIALS OF SPIRITUALISM

By :

Adhyathmik Shirorathna T. B. BASAVARAJAYYA

600 pp. 1980 Edition Rs. 45/—

The book seeks to propound a universal philosophy (Vishwa Dharma) and is the result of the author's painstaking, arduous and intensive study extending over 12 years.

Philosophy and spiritualism have always been difficult to understand and comprehend ; but Mr. Basavarajayya has made this task easier for the readers, and his book would certainly serve as a bridge linking Gnana and Vignana, and dispel Agnana.

Though the Hindu concept of spiritualism has been dealt with in general, prominence is given to Sri Jagadguru Renukacharya's Veerasaiva or Sivadwaita philosophy. The origin of the Veerasaivas and their philosophy have been elaborated in detail in this compendium which also contains chapters on the age and period of Adi Sri Sankaracharya.

Incontrovertible evidence has been adduced in proof of Adi Sri Sankaracharya's period as the 5th century B.C. and his life of 32 years from 509 BC to 477 BC. As referred to by the author, there has

been obviously a mix-up between Adi Sri Sankaracharya and the Sri Abhinava Sankaracharya, the 38th Acharya in the line of Sri Kamakoti Peeth, who lived in the 8th century A.D.

The chapter on Lord Siva Nataraja - His eternal dance and its significance will be read with abounding interest.

The author has laudable plans to send free copies of this useful publication to all educational institutions of higher philosophy in and out of India ; and in order to fulfil this ambitious projeet he has sought donations from the public, even as he could bring out 2000 copies of this first edition, out of generous contributions from the public.

Copies of the book can be had from the author, care of Sri Mahanthara Mutt, Chickpet, Bangalore (Pin code 560 053)

—R.V.



GOVERNMENT OF MYSORE

S. Shankarappa, M A., B.T.,

Office of
PRINCIPAL
Sree Chamarajendra Samskrita College
Bangalore–18

Date 3–8–1968

To

Sri T. B. Basavarajayya
Bangalore–2.

I feel extremely grateful to the efforts made by Sri T B. Basavarajayya of Bangalore in bringing out a very useful work on the life and doings of the Great Acharyas of Veerasaiva Panth, particularly in Karnataka and in Bharath as a whole, His writing is one of the intuition, bestowed to him by the Acharyas and as such, the research works deserve the attention of all the Veerasaivas and the philosophical minded persons of India.

I wish the writer a long life to bring out the hidden Treasure of Veerasaiva Philosophy.

S. Shankarappa
Principal
Sree Chamarajendra Samskrita College
Bangalore-18.

# SRI RAMANASRAMAM

T.N. VENKATARAMAN
President

Sri Ramanasramam P O.
Tiruvannamalai
South India

March 19, 1971.

**Obeisance to Bhagavan Sri Ramana**

Dear Sri Basavarajayya,

We are happy to acknowledge the receipt of your kind letter of the 16th instant, enclosing some specimen pages from your forthcoming book: ESSENTIALS OF SPIRITUALISM and a chart of the Sacred Tree: 'Shat Sthala'. We have also today received by registered book post a copy of the first part of your book on "Sri Chandra Mouleeswara Linga". We have pleasure in keeping this beautifully printed and bound book in our Ashram Library.

May the Grace of Bhagavan Sri Ramana Maharshi be ever with your and yours!

With our warm regards and PRASAD from the sacred shrine of Sri Bhagâvan,

Ever yours in Sri Bhagavan,

(T.N. Venkataraman)
President.

## BUCKINGHAM PALACE

**LONDON.**

From : Rear–Admiral Sir Hugh Janion KCVO

10th September 1981

Dear Mr. Basavarajayya,

The Prince and Princess of Wales have asked me to send you their sincere thanks for your book " Essentials of Spiritualism ".

Their Royal Highnesses much appreciate your thoughtfulness and ask me to thank you most warmly.

Yours sincerely,
Hugh Janion

---

## ಕರ್ನಾಟಕ ಸರ್ಕಾರ

**ಸಿ. ನಿಜಲಿಂಗಪ್ಪ**
(ಕರ್ನಾಟಕದ ಮಾಜಿ ಮುಖ್ಯ ಮಂತ್ರಿ)

ವಿ.ಪಿ. ಬಡಾವಣೆ, ಚಿತ್ರದುರ್ಗ.
2–4–1982.

ಶ್ರೀ ಬಸವರಾಜಯ್ಯನವರಿಗೆ ನಮಸ್ಕಾರಗಳು,

ತಮ್ಮ 30-3-1982ರ ಕಾಗದ ಬಂದಿದೆ. ಅದಕ್ಕೆ ಎರಡು ದಿನಗಳಿಗೆ ಮುಂಚೆ 28ನೇ ದಿನಾಂಕ ತಾವು ಬರೆದು ಪ್ರಕಟಿಸಿರುವ "Essence of Spiritualism" ಎಂಬ ಗ್ರಂಥವನ್ನು ಕೊಟ್ಟಿರುವಿರಿ. ಇದಕ್ಕಾಗಿ ಧನ್ಯವಾದ ಗಳು, ನನ್ನನ್ನು ಸಾಕಷ್ಟು ಹೊಗಳಿದ್ದೀರಿ ಮತ್ತು ನನ್ನ ವಿಷಯವಾಗಿ ಒಳ್ಳೆಯ ಮಾತುಗಳನ್ನಾಡಿದ್ದೀರಿ. ತಮಗೆ ನಾನು ಋಣಿ.

ತಮ್ಮ ಗ್ರಂಥವು ಒಂದು ಶ್ರೇಷ್ಠ ಗ್ರಂಥ. ತಾವು 30 ವರ್ಷಗಳಿಗೂ ಹೆಚ್ಚು ಕಾಲ ಶತಮಾನಗಳಿಂದ ಬೆಳೆದು ಬಂದಿರುವ ಸಂಸ್ಕೃತ ಮತ್ತು ಕನ್ನಡ ಸಾಹಿತ್ಯದ ಆಳವಾದ ಅಭ್ಯಾಸ ಮಾಡಿ ಪ್ರಯೋಗಗಳನ್ನು ನಡೆಸಿ ಈಗ್ರಂಥದಕರ್ತೃವಾಗಿದ್ದೀರಿ. ತಮಗೆ ಹೆಮ್ಮೆ ತರತಕ್ಕಂತಹದ್ದಾಗಿದೆ ಶೈವರೂ ಮೇಲಾಗಿ ವೀರಶೈವರೂ ಇದನ್ನು ಹೆಚ್ಚು ಹೆಚ್ಚಾಗಿ ಹಿಂದುಸ್ಥಾನದ ಒಳಗೂ, ಹೊರಗೂ ಅಂತರಾಷ್ಟ್ರೀಯ ದೇಶಗಳಲ್ಲೂ ಪ್ರಸಿದ್ಧಪಡಿಸಲು ನೇರವಾಗಬೇಕಾದ ಅವಶ್ಯವಿದೆ. ಆ ರೀತಿ ಮಾಡಲೆಂದು ಹಾರೈಸುತ್ತೇನೆ. ತಮ್ಮ ಪ್ರಯೋಗಗಳು ಮುಂದುವರಿಯಲಿ, ತಾತ್ವಿಕ ಬೆಳವಣಿಗೆಗೆ ಸಹಾಯವಾಗಲಿ

ಇತಿ ತಮ್ಮ,
ಸಿ. ನಿಜಲಿಂಗಪ್ಪ

**GOVERNMENT OF INDIA**

Prime Minister's Office
New Delhi-110 011.
September 27, 1982.

Information Adviser
to the Prime Minister

Dear Shri Basavarajayya,

The Prime Minister thanks you for your letter and has noted the point you have made. A correction will be carried out when the book is reissued.

Yours sincerely,
H. Y. Sharada Prasad

---

Prime Minister's House
New Delhi.
September 29, 1982

Dear Basavarajayya,

I have seen your letter of the 24th August I believe my office have already written to you

I am glad you have drawn my attention regarding Basava and Lingayat sects.

Perhaps you know that the book was actually of the photographer's who asked me to do a brief text. I had little time at my disposal and could take off only four or five days in Mercara where I did not have the facility of a reference library,

Yours sincerely,
*Indira Gandhi*

EL JEFE DE LA CASA DE
S. M. EL REY

Palacio de la Zarzuela
MADRID, 2 noviembre 1981

SENOR T. B. BASAVARAJAYYA
BANGALORE

HIS MAJESTY KING CHARLOS' PALACE
Madrid City, Spain.

MADRID, 2 Novembor 1981

To

Shri T B. BASAVARAJAYYA,
BANGALORE

My dear friend,

His Majesty the King asked me to convey to you; his most sincere gratitude for the courtesy of sending your book "Essentials of Spiritualism".

At the same timc, he asked me to greet you on his behalf with affection.

Doing so with much pleasure.

I remain, sincerely yours,
Maquis Of Mondejar

GOVERNMENT OF INDIA

S. B. CHAVAN

Home Minister
India.
New Delhi
Date 6th June 1985

Dear Shri Basavarajayya,

Thank you for sending me the book on " Essentials of Spiritualism ". I will go through the same at my convenience.

With regards,

Yours sincerely,
S. B Chavan

Y. V CHANDRACHUD
Chief Justice of India

5, Krishna Menon Marg
New Delhi-110 011.
July 13, 1984.

Dear Shri Basavarajayya,

I am thankful to you for sending me a copy of titled "Essentials of Spiritualism". It has not been possible for me to go through the book carefully but I find that you have devoted considerable time and thought to the subject which you have dealt with in the book.

Yours sincerely,
Y. V. Chandrachud

॥ ಹೃದಯಂ ತದ್ವಿಜಾನೀಯಾತ್, ವಿಶ್ವಸ್ಯ ಆಯತನ ಮುಚ್ಯತೇ ॥
ಹೃದಯ ಕಮಲ

ಪ್ರಣವಮಯ
"ಶಿ"ಕಾರ ಬೀಜಾಕ್ಷರ
ಮಹಾಮಂತ್ರಸ್ಥಾನ
ಶಿವಾಗ್ನಿ ರೂಪ



ಓಂ
ಪ್ರಾಣಲಿಂಗದ
ಅನಾಸಸ್ಥಾನ
ಅನಾಹತಚಕ್ರ

ಶಿವನ ಸೃಷ್ಟಿಯಲ್ಲಿ ಮಾನವ ದೇಹ ಪರಮೋತ್ಕೃಷ್ಟವಾದುದು. ಶ್ರೀ ಕೃಷ್ಣನು ॥ ಇದಂ ಶರೀರಂ ಕೌಂತೇಯ । ಕ್ಷೇತ್ರ ಮಿತ್ಯಭಿಧೀಯತೇ ॥ ಇದೊಂದು ನವ ಧ್ವಾರಗಳಿಂದ ಕೂಡಿರುವ ಪುಣ್ಯ ಕ್ಷೇತ್ರವೆಂದಿರುವನು. ಶ್ರೀ ಶಂಕರಾಚಾರ್ಯರು ಈ ದೇಹ ವಂದು ದೇವಾಲಯ, ಇದರೊಳಗೆ ಸನಾತನನಾದ ಜೀವಾತ್ಮನು ನೆಲಸಿರುವನೆಂದು ಅರುಹಿರುವರು. ಜೀವಾತ್ಮನಿಗೆ ಮಾನವದೇಹ ಲಭಿಸುವುದು ದುರ್ಲಭವಿರುತ್ತೆ ಇದು ನೀರ್ಗುಳ್ಳೆಯಂತೆ ಕ್ಷಣಭಂಗುರವೆನಿಸಿದೆ.

ದೇಹವಿಲ್ಲದ ಆತ್ಮ, ಅತ್ಮವಿಲ್ಲದ ದೇಹ ಈ ಎರಡೂ ಪ್ರಯೋಜನಕಾರಿಯಾಗಲಾರವು. ಆತ್ಮನಿಂದೊಡಗೂಡಿದ ಮಾನವ ಶರೀರ ಸರ್ವದುಃಖ ನಿವೃತ್ತಿಪರಮಾನಂದ ಪ್ರಾಪ್ತಿಗೆ ಸಾಧನೀಭೂತವಾಗಿದೆ. "ಶರೀರ ಮಾದ್ಯಂ ಖಲು ಧರ್ಮ ಸಾಧನಂ" ಎಂದು ಶೃತಿ ಎಚ್ಚರಿಸುತ್ತಲಿದೆ.

ಮಾನವ ದೇಹದಲ್ಲಿ ಹೃದಯ ಮಧ್ಯ ಮಣಿನ್ಯಾಯದಂತೆ ಮಧ್ಯೆ ಪ್ರತಿಷ್ಠಿತವಾಗಿದೆ. ಇದನ್ನು ಹೃದಯಕಮಲವೆನ್ನುತ್ತಾರೆ. ಈ ಪವಿತ್ರವಾದ ದೇಹದಲ್ಲಿ ಅನೇಕ ಕಮಲಗಳಿವೆ. ಪಾದಕಮಲ, ಮುಖಕಮಲ, ನೇತ್ರಕಮಲ, ನಾಭಿ ಕಮಲ, ಶಿರಸ್ಸಿನ ಸಹಸ್ರಾರ ಕಮಲ. ಹೃದಯ ಕಮಲ ಇವುಗಳಲ್ಲೆಲ್ಲಾ ಪರಮೋತ್ಕೃಷ್ಟವಾದುದು. ದೇಹವೆಂಬ ದೇವಾಲಯದಲ್ಲಿ ಹೃದಯ ಕಮಲ ದೇವರಿರುವ ಗರ್ಭಗುಡಿಯಂತೆ ಪರಿಶೋಭಿತವಾಗಿದೆ. ಹೃದಯವನ್ನು ಹೃನ್ಮಂದಿರವೆಂದೂ, ದಹರಾಕಾಶವೆಂದೂ, ಪರಾಕಾಶವೆಂದೂ ಶಾಸ್ತ್ರದಲ್ಲಿ ಪ್ರತಿಪಾದಿಸಲಾಗಿದೆ. ಹೃದಯ ಸ್ಥಂಭನವೇ ಮರಣ. ಹೃದಯದ ಚಲನೆ ಜೀವಿತಕ್ಕೆ ಮೂಲಸ್ಥಂಭಾಯಮಾನವಾಗಿದೆ. ಹೃದಯ ದೇಹದ ಎಡ ಪಾರ್ಶ್ವದ ಎದೆಗೆ ಮಧ್ಯಗತವಾಗಿದೆ. ಹೃದಯ ಕಮಲ ಹೆಬ್ಬೆರಳಿನ ಗಾತ್ರದಲ್ಲಿ ಬಂಗಾರದ ಹೊಂಬಣ್ಣದಿಂದ ಮಿರುಗುತ್ತಲಿದೆ.

ಭಕ್ತಿಪ್ರವಾಹ ಹೃದಯಕುಹರದಿಂದ ಶಿವನ ಇಚ್ಛೆಯೋ ಎಂಬಂತೆ ಉದ್ಭವಿಸಿ ಗಂಗಾವತರಣದಂತೆ ಪ್ರವಹಿಸಿ ಹೊರಬರುವುದು. ಈ ಪೂರ್ಣಪ್ರವಾಹ, ಭವಸಾಗರ ದಲ್ಲಿ ಏಳೇಳು ಜನ್ಮಗಳಿಂದ ಬಿದ್ದು ಪರಿತಪಿಸುವ ಅನಂತ ಜೀವಕೋಟಿಗಳನ್ನು, ಅವ ರವರ ಅಘಮೋಚನೆಗಾಗಿ, ಶಿವನ ಜಟಾಭಾರದಿಂದ ಇಳಿದು ಬಂದ ಭಕ್ತಿಗಂಗೆಯಂತೆ ಕಾಣುತ್ತೆ. ಭಕ್ತ ಭಗವಂತನೊಂದಿಗೆ ಕೂಡಿ, ಸಂಭಾಷಿಸಿ, ಗಂಗಾ ಸಾಗರ ತರಂಗ ಗಳ, ಸಂಗಮದಂತೆ ಐಕ್ಯವಾಗಲು ಭಕ್ತಿ ಸೇತುವೆಯಂತೆ ನೆರವಾಗುವುದು. ಹೃದಯ ಕಮಲದ ಊರ್ಧ್ವಗತ ಉಚ್ಚಸ್ಥಾನದಿಂದ, ಪರಶಿವಬ್ರಹ್ಮದ ಸಾಕ್ಷಾತ್ಕಾರದ ನೆಲೆಯ ವರುವಿಗೆ ಸಂಘಟನೆ ಏರ್ಪಡಿಸಿ ಅಂತರಂಗವನ್ನು ಶಿವನೊಂದಿಗೆ ಒಂದುಗೂಡಿಸುವುದ ರಲ್ಲಿ, ಪರಭಕ್ತಿ ನಿಜಕ್ಕೂ Divine transcendental Bridge ವಿಷಯಾತೀತ ವಾದ ಅಪ್ರಾಕೃತ ದಿವ್ಯ ಸೇತುವೆಯಂತೆ ಪರಿಶೋಭಿತವಾಗಿದೆ. ಭಕ್ತ ಭಗವಂತ ನೊಡನೆ ಹೃದಯ ತಂತುಗಳ ಮೂಲಕ ಧ್ಯಾನಾವಸ್ಥಿತ ಶಿವಯೋಗದಲ್ಲಿ ಸಂಭಾಷಣೆ ಸಂಸ್ಮರಣೆ ಸಂಪರ್ಕಗಳ ಸಂಸರ್ಗದಿಂದ ಐಕ್ಯವಾಗಬೇಕೆಂದು ಬಯಸುವ ಅಭೀಪ್ಸೆ ಯನ್ನು ವ್ಯಕ್ತ ಪಡಿಸುವನು. ಊರ್ಧ್ವಾಭಿಮುಖವಾಗಿ ತಲೆ ಎತ್ತಿ ನಿಂತಿರುವ ಒಂಭತ್ತು ದಿವ್ಯ ಎಸಳುಗಳ ತೇಜಸ್ಸಂಪನ್ನವಾದ ವರ್ತುಳದಲ್ಲಿ, ಅಂಗನು (ಜೀವಾ ತ್ಮನು), ಅಧೋ ಮುಖದ ಮೂರು ದಳಗಳ ವ್ಯಾಪ್ತಿಯನ್ನು ಕಡೆಗಾಣಿಸಿ, ಅಲ್ಲಿಂದ ಊರ್ಧ್ವಗತಿಯ ಬಯಲಿನೊಳಗೆ ಶ್ರೀ ಗುರುವಿನ ಕೃಪೆಯಿಂದ ಮೇಲೇರಿ ಪ್ರವೇಶಿಸಲು ಭಕ್ತಿ ಭರಿತನಾಗಿ ಮುಕ್ತಿಯನ್ನು ಯಾಚಿಸುವನು. ।ಭಕ್ತಿ ಮುಕ್ತಿ ವಿಧಾಯಿನೀ ॥ ಎಂದಿದೆ ಭಕ್ತಿ ಸೂತ್ರ. ಮುಕ್ತಿ ದೊರೆಯಬೇಕಾದರೆ ಸಾಮಾನ್ಯವಲ್ಲ. ಶ್ರೀ ಶಂಕರಾ ಚಾರ್ಯರು "ಮುಕ್ತಿರ್ನೋ ಶತಜನ್ಮ ಕೋಟಿ ಸುಕೃತೈಃ। ಪೂಣ್ಯೈರ್ವಿನಾ ಲಭ್ಯತೇ" ಎಂದಿರುವರು. ಹೃದಯದ ಪಾವಿತ್ರತೆ, ಪರಿಪಕ್ವ ಸ್ಥಿತಿ ಅತ್ಯಾವಶ್ಯಕ ವೆನಿಸಿದೆ.

ಜೀವಾತ್ಮನು ಆಣವಾದಿ ಮುಮ್ಮಲಗಳ ಸಂಬಂಧದಿಂದ, ಅನೇಕ ಜನ್ಮಾಂತರ ಗಳ ವಾಸನಾದೋಷದಿಂದ, ಘೋರ ಸಂಸಾರದ ಜಂಜಾಟದಲ್ಲಿ ಸಿಕ್ಕಿಬಿದ್ದು ತತ್ತಳಿಸು ತ್ತಿಹನು. ॥ ಅನಾದ್ಯವಿದ್ಯಾ ಸಂಬಂಧಾತ್, ತದಂಶೋ ಜೀವನಾಮಕಃ ॥ ಎಂದಿದೆ ಶೃತಿವಾಣಿ. ಹೃದಯದ ಅಜ್ಞಾನ ಗ್ರಂಥಿಗಳು ಜೀವಾತ್ಮನನ್ನು ಮೇಲೇಳದಂತೆ ಕಾಮ ಕ್ರೋಧ ಮೋಹ, ಲೋಭ, ಅಸೂಯೆ ಇತ್ಯಾದಿ ಆಸುರೀಗುಣಗಳ ಮಡುವಿನಲ್ಲಿ ತಳ್ಳಿ ಪತಿತನನ್ನಾಗಿ ಮಾಡಿವೆ.

ಹೃದಯಕಮಲ ಕೋಮಲಾತಿ ಕೋಮಲವಾದ ಸುಂದರತರ ಅಪೂರ್ವ ದಿವ್ಯ

ಕಮಲ. ಹೃದಯ ಕಮಲದಲ್ಲಿ ಮೃದು ಮಧುರವಾದ ದ್ವಾದಶ (ಹನ್ನೆರಡು) ದಳಗಳು ಪರಿಶೋಭಿತವಾಗಿವೆ. ಇವುಗಳಲ್ಲಿ ಮೂರು ಎಸಳುಗಳು ಅಧೋಭಿ ಮುಖವಾಗಿದ್ದರೆ, ಉಳಿದ ಒಂಭತ್ತು ದಳಗಳು ಊರ್ಧ್ವಾಭಿ ಮುಖವಾಗಿ ಹರಡಿ ತೇಜಸ್ವಿಯಾಗಿವೆ. ಜೀವಾತ್ಮನು ತನ್ನ ಪೂರ್ವಾರ್ಜಿತ ಪಾಪ ಪುಣ್ಯಗಳಿಗನುಸಾರ ಹೃತ್ಕಮಲದ ದ್ವಾದಶ ದಳಗಳ ವ್ಯಾಪ್ತಿಯಲ್ಲಿ ಸಂಚರಿಸುವ ಅರ್ಹತೆಯುಳ್ಳವನಾಗಿರುವನು. ಆದರೆ ಶತಕೋಟಿ ಜನ್ಮಗಳಲ್ಲೆಸಗಿದ ಪಾಪದ ಫಲವಾಗಿ, ಜೀವಾತ್ಮನು ತನ್ನ ಊರ್ಧ್ವಗತಿಯ ದಿವ್ಯ ದೃಷ್ಟಿಯನ್ನು ಕಳೆದುಕೊಂಡು, ಕಾಲ ಕರ್ಮ ಸಂಯೋಗದ ದೋಷದಿಂದ, ಹೃತ್ಕಮಲದ ಅಧೋಮುಖವಾಗುಳ್ಳ ಮೂರು ಮುಮ್ಮಲಾತ್ಮಕ ಅಂದರೆ ಆಣವ ಮಾಯಾ, ಕಾರ್ಮಿಕ ಮಲಗಳ ಸಂಬಂಧದಿಂದಾಗಿ, ಅಧೋಮುಖವಾದ ಮೂರು ಎಸಳುಗಳ ಅಜ್ಞಾನದ ವ್ಯಾಪ್ತಿಯಲ್ಲೇ ಇದ್ದು ಕ್ಷಣಿಕ ಸುಖ ದುಃಖಗಳ ಹೊಡೆತದಿಂದ ತತ್ತಳಿಸುತ್ತಾ, ವಿಮೋಚನಾ ಮಾರ್ಗವರಿಯದೆ, ಸಂಸಾರವೇ ಸಾರವೆಂಬ ಸಿದ್ಧಾಂತಕ್ಕೊಳಗಾಗಿರ್ಪನು. ಅಧೋ ಮುಖದ ಮೂರು ದಳಗಳ ತಮೋಗುಣ, ಮತ್ತು ರಜೋಗುಣ ಮಿಶ್ರವಾದ ತಮೋಗುಣದ ಆಧಿಕ್ಯದಲ್ಲಿ ಹೆಚ್ಚು ಅಭಿರುಚಿ ತೋರಿಸುವನು. ದಾರೇಶಣ, ಪುತ್ರೇಶಣ, ವಿತ್ತೇಶಣಗಳೆಂಬ ಈಶಣ ತ್ರಯಗಳು, ಸಂಸಾರ ಸಾಗರದಲ್ಲಿನ ಮೊಸಳೆ, ತಿಮಿಂಗಿಲಗಳಂತೆ ಭಯೋತ್ಪಾದಕವೆನಿಸಿವೆ. ಇವುಗಳೊಂದಿಗೆ, ಮನಮೋಹಕ ಲಾವಣ್ಯತರದ, ಕನಕ, ಕಾಮಿನಿ, ಕಾಂಚನಾದಿಗಳು ಬೇರೊಂದು ಕಡೆಯಿಂದ ಜೀವಾತ್ಮನನ್ನು ತಮ್ಮತ್ತ ಸಂಪೂರ್ಣವಾಗಿ ಆಕರ್ಶಿಸಿ ಕಪಿಮುಷ್ಠಿಯಿಂದ ಬಿಗಿ ಹಿಡಿದು ತಮ್ಮ ದಾಸನನ್ನಾಗಿಸಿಕೊಂಡಿವೆ. ಅಸಂಖ್ಯಾತ ಜನ್ಮಗಳಿಂದ ರೊಚ್ಚಿನಲ್ಲಿ ಬಿದ್ದ ಎಮ್ಮೆಯಂತೆ ಇದೇ ಸುಖವೆಂದು ನಂಬಿ, ಬೆಂದು ಬೆಂಡಾದ ಮಾನವನಿಗೆ ಊರ್ಧ್ವ ಮುಖವಾಗುಳ್ಳ ಒಂಭತ್ತು ಕಮಲಗಳ ದಿವ್ಯ ವ್ಯಾಪ್ತಿಯಲ್ಲಿ ಏನೆಲ್ಲಾ ಅಖಂಡ ಸಂಪತ್ತಿನ ಸೌಭಾಗ್ಯವಿದೆ ಎಂಬುದನ್ನು ಕ್ವಚಿತ್ ಅರಿಯಲೂ ಸಹ ಮನಸ್ಸಿಲ್ಲದವನಾಗಿ, ಅನಿತ್ಯ, ಅಸುಖ, ಅತೃಪ್ತಿ ಎಂಬುವ ದುಃಖಮಯವಾದ ಅಧೋಮುಖದ ಮೂರು ದಳಗಳ ವ್ಯಾಪ್ತಿಯಲ್ಲಿಯೇ ಸದಾ ರಮಿಸುತ್ತಲಿರ್ಪನು.

ಇದರಂತಲ್ಲದೆ ಭಕ್ತಿ ಪರನಾದ ಅಂಗನು (ಜೀವಾತ್ಮನು) ಸರ್ವ ದುಃಖ ನಿವೃತ್ತಿ । ಪರಮಾನಂದ ಪ್ರಾಪ್ತಿಗಾಗಿ ಆಶಿಸುತ್ತಾ, ಪರಭಕ್ತಿ ಯೋಗದಲ್ಲಿ ಆಸಕ್ತನಾಗುವನು. ಭಕ್ತ ಭಕ್ತಿ ಭಗವಂತ ಈ ಮೂರು ನಿಕಟ ಸಂಬಂಧವುಳ್ಳ ವಂದೇ ಶಿವಶಕ್ತಿ ಸಂಪುಟಕ್ಕೆ ಸೇರಿವೆ. ಭಕ್ತಿ, ಮುಕ್ತಿ ಮಂದಿರವನ್ನು ಮುಟ್ಟಲು

ದಿವ್ಯ ಏಣಿಯೆನಿಸಿದೆ. Devotion is a divine ladder to climb up the Abode of Perfection. ಈ ಏಣಿಯನ್ನು ಹತ್ತಲು ಷಟ್ಸ್ಥಲಾತ್ಮಕ ಆರು ಮೆಟ್ಟಲುಗಳಿವೆ. ಭಕ್ತಸ್ಥಲ, ಮಾಹೇಶ್ವರ ಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿ ಸ್ಥಲ, ಶರಣಸ್ಥಲ ಮತ್ತು ಐಕ್ಯಸ್ಥಲ ಎಂಬೀ ಆರು ಮೆಟ್ಟಲುಗಳನ್ನು ಒಂದೊಂದಾಗಿ ಏರುತ್ತಾ ಪ್ರತಿ ಹಂತದಲ್ಲೂ ಅಲ್ಲಲ್ಲಿಯ"ಸ್ಥಲರೂಪಿ"ಸರ್ವಾಂತರ್ಯಾಮಿಯಾದ ಪರಶಿವ ಬ್ರಹ್ಮದ ತತ್ವಾನು ಸಂಧಾನದಿಂದ, ಹೆಚ್ಚು ಹೆಚ್ಚಾದ ದಿವ್ಯ ಪರಂಜ್ಯೋತಿರ್ಮಂಡಲದ ಅರಿವು ಅನುಭವಗಳನ್ನು ಶುಕ್ಲಪಕ್ಷದ ವೃದ್ಧಿ ಚಂದ್ರನ ಕಲೆಗಳೋ ಪಾದಿ ಸಂವೃದ್ಧಿಗೊಳಿಸುತ್ತಾ, ಮೇಲಿನ ಐಕ್ಯ ಸ್ಥಲದಲ್ಲಿ ಲಿಂಗಾಂಗ ಸಾಮರಸ್ಯಾನಂದವನ್ನು ಹೊಂದಲು, ಭಕ್ತಿ ರೂಪದ ಏಣಿ ಅತಿ ಮುಖ್ಯವೆನಿಸಿದೆ. ಭಕ್ತಿ (ಪರಭಕ್ತಿ) ಹೃದಯ ಕಮಲದ ಮೇಲ್ಮೈ ಭಾಗದ ಒಂಭತ್ತು ಊರ್ಧ್ವಮುಖ ದಳಗಳ ಪ್ರಾಂತ್ಯವನ್ನು ಆಕ್ರಮಿಸಿದೆ. ಭಕ್ತಿ ಕಾಂತಾಮಣಿಯು ಅಂತಃಪುರದ ಮಹಾದ್ವಾರದಲ್ಲಿ ಮುಕ್ತಿ ಕಾಂತಾಮಣಿ ಸೇವಾ ಮನೋಭಾವದಿಂದ ಸದಾ ಸಿದ್ಧಳಾಗಿ ನಿಂತಿರುವಳು. ಅಂದ ಬಳಿಕ "ಭಕ್ತಿರ್ಮುಕ್ತಿರ್ವಿಧಾಯಿನಿ । ಭಗವತಃ ಶ್ರೀ ಚಂದ್ರಾರ್ಧಶೇಖರಸ್ಯ" ಭಕ್ತಿ ಪ್ರಭಾವವು ವರ್ಣನಾತೀತವಾಗಿದೆ. ಇಂತಪ್ಪ ಭಕ್ತಿಗೆ ಜನ್ಮಸ್ಥಾನ ಹೃದಯ ಕುಹರ. ಆದ್ದರಿಂದ

1. " ಚಿರಂ ಯಾಚೇ ಶಂಭೋ । ಶಿವತವ ಪದಾಂಭೋಜ ಭಜನಂ "

2. " ಪದಾಂಭೋಜಂ ಶಂಭೋ । ಭಜ ಪರಮ ಸೌಖ್ಯಂ ವ್ರಜಸುಧೀಃ "

3. " ಮಹಾದೇವಂ ದೇವಂ ಮಹಾ । ಸದಯಭಾವಂ ಪಶುಪತಿಂ ।। ಚಿದಾಲಂಬಂ ಸಾಂಬಂ ಶಿವ । ಮತಿ ವಿಡಂಬಂ ಹೃದಿಭಜೇ ॥

4. " ಅಗಣಿತ ಫಲದಾಯಕಃ । ಪ್ರಭು ರ್ಮೇ ಜಗದಧಿಕೋ ಹೃದಿ ರಾಜ ಶೇಖರೋಸ್ತಿ "

5. " ಸ್ವಾಮಿನಿ, ಗಿರಿಜಾನಾಥೇ । ಮಾಮಕ ಹೃದಯಂ । ನಿರಂತರಂ ರಮತಾಮ್ " ಎಂಬುದಾಗಿ ಶ್ರೀ ಆದಿಶಂಕರರು ಹೃತ್ಪೂರ್ವಕ ಶಿವನನ್ನು ಭಕ್ತಿಯಿಂದ ಸ್ತುತಿಸಿ, ಭಕ್ತಿಪ್ರಿಯನು ಶಂಕರನೆಂದು ಅಖಂಡವಾಗಿ ಶಿವಾನಂದ ಲಹರಿಯಲ್ಲಿ ಭಕ್ತಿಯ ಹಿರಿಮೆಯನ್ನು ಪ್ರಶಂಶಿಸಿರುವರು.

6. ॥ ಭಕ್ತಿಃ ಕಿಂ ನ ಕರೋತ್ಯಹೋ ।
ವನಚರೋ ಭಕ್ತಾತ್ಯ ತಂ ಸಾಯತೇ ॥

ಭಕ್ತಿಯ ಪ್ರಭಾವದಿಂದ ಕಾಡು ಮನುಷ್ಯ ಬೇಡರಕಣ್ಣಪ್ಪ ; ಭಕ್ತಾಗ್ರೇಸರ ನೆನಿಸಿ, ಶಿವಾನುಗ್ರಹಕ್ಕೆ ಸಾಕ್ಷಾತ್ತಾಗಿ ಪಾತ್ರನಾದನು. ಆದ್ದರಿಂದ ಭಕ್ತಿಯ ಹಿರಿಮೆಯನ್ನು ಶ್ರೀ ಶಂಕರಾಚಾರ್ಯರು ವರ್ಣಿಸುತ್ತಾ,

॥ ಮೋಕ್ಷ ಸಾಧನ ಸಾಮಗ್ರ್ಯಾಂ ।
ಭಕ್ತಿ ರೇವ ಗರೀಯಸಿ ॥ ಸ್ವಸ್ವರೂಪಾನು ಸಂಧಾನಂ
ಭಕ್ತಿರಿತ್ಯಭಿಧೀಯತೇ ॥ ಎಂದು ಪ್ರಶಂಶಿಸಿರುವರು.

“ ಹೃತ್ಪದ್ಮ ಮಧ್ಯೇ ಪುರುಷಃ ಪ್ರಮಾಣಂ ।
ನಿತ್ಯಾತ್ಮಕಂ ಸರ್ವಜಗತ್ಸ್ವರೂಪಂ ।
ಧ್ಯಾಯಾಮಿ ನಿತ್ಯಂ ಪರಮಾತ್ಮ ಸೌಜ್ಞಂ ।
ಚಿದ್ರೂಪಮೇಕಂ ವಚಸಾಮಗಮ್ಯಂ ॥
“ ಅಂಗುಷ್ಟಮಾತ್ರಃ ಪುರುಷೋಂತರಾತ್ಮ ॥
ಸದಾ ಜನಾನಾಂ ಹೃದಯೇ ಸನ್ನಿವಿಷ್ಠಃ ॥

(ಕಠೋಪನಿಷತ್)

॥ ಗಭೀರೆ ಕಾಸಾರೇ ವಿಶತಿ ವಿಜನೇ ಘೋರ ವಿಪಿನೇ
ವಿಶಾಲೆ ಶೈಲೇಚ ಭ್ರಮತಿ ಕುಸುಮಾರ್ಥಂ ಜಡಮತಿಃ ॥
ಸಮರ್ಪೈಕಂ ಚೇತಸ್ಸರಸಿಜ । ಮುಮಾನಾಥ ಭವತೇ ।
ಸುಖೇನ್ಯೈವ ಸ್ಥಾತುಂ ಜನ ಇಹ ನ ಜಾನಾತಿ, ಕಿಮಹೋ ॥

ಹೇ ಶಂಭೋ ! ನಿನ್ನ ನನು ದಿನ ಪೂಜಿಸಲು ತಮ್ಮ ಹೃದಯ ತಟಾಕದಲ್ಲಿರುವ ಕಮಲವನ್ನು ನಿನಗೆ ಭಕ್ತಿಯಿಂದ ಅರ್ಪಿಸುವುದನ್ನು ತ್ಯಜಿಸಿ, ಆಳವಾದ ತಟಾಕದಲ್ಲಿರುವ ಕಮಲವನ್ನು ಮತ್ತು ಘೋರಾರಣ್ಯವನ್ನು ಹೊಕ್ಕು ಕಮಲಕ್ಕಾಗಿ ಸುತ್ತಾಡಿ ಬಳಲುತ್ತಿರುವರಲ್ಲಾ ! ಹೇ ಉಮಾನಾಥ ! ತಮ್ಮ ಹೃದಯ ತಟಾಕದಲ್ಲಿನ ಬಾಡದ ಕಮಲವನ್ನು ನಿನ್ನ ಪಾದದಲ್ಲಿ ಭಕ್ತಿಯಿಂದ ಸಮರ್ಪೈಕಂ ॥ ಸಮರ್ಪಿಸಿ ಸುಖವಾಗಿರಲು ಮಂದಭಾಗ್ಯರು ಕಲಿಯಲಿಲ್ಲವಲ್ಲಾವೆಂದು ಶ್ರೀ ಶಂಕರಾಚಾರ್ಯರು ಪರಿತಪಿಸಿರುವರು.

ಹೃದಯ ಕಮಲದ ಅಧೋ ಮುಖ ವಾಗುಳ್ಳ ಮೂರು ಪ್ರಬಲವಾದ ದಳಗಳ ಘೋರ ವ್ಯಾಪ್ತಿಯ ಹಿಡಿತಕ್ಕೆ ಸಿಕ್ಕಿ ಸುದೀರ್ಘಕಾಲದ್ರಿಂದ ತತ್ತರಿಸಿ, ನುಚ್ಚು ನೂರಾಗಿ ಬೆಂದು ಬೆಂಡಾದ ಜೀವಾತ್ಮನು, ಅನಾತ್ಮ ವಸ್ತುವಿನ ಮೋಹಪಾಶದಿಂದ ಗತಿ ಮೋಕ್ಷಗಳನ್ನು ಕಾಣದೆ ಕಂಗೆಟ್ಟಿರುವಾಗ; ದೈವೇಚ್ಛೆಯೋ ಏನೋ ಎಂಬಂತೆ, ಯಾವುದೋ ಒಂದು ಸುಕೃತವು ತಲೆಯೆತ್ತಿ ಶಿವಾನುಗ್ರಹ ಬಲದಿಂದ ಹಾಗೂ ಶ್ರೀ ಮಹಾಗುರುವಿನ ದಿವ್ಯ ಕಟಾಕ್ಷದಿಂಡಾಗಿ, ಈ ಭಯಂಕರವಾದ ಅಜ್ಞಾನ ತಿಮಿರಿನ ಅಧೋ ಮುಖದ ಗೆರೆಯನ್ನು ದಾಟಿ, ಹೃತ್ಕಮಲದ ಮೇಲ್ಮೈಯೊಳಗಿನ ಹೊಂಬಣ್ಣದಿಂ ಪ್ರಶಾಂತ ಪ್ರಕಾಶಮಾನವಾದ ಬಯಲಿನೊಳಗೆ, ಊರ್ಧ್ವಾಭಿ ಮುಖವಾಗುಳ್ಳ ಒಂಭತ್ತು ಅತಿಕೋಮಲವಾದ, ದಳಗಳ ದೈವೀಯೋಗದ ಪ್ರಭಾವಲಯದೊಳಗೆ ಅಂಗನು ಪ್ರಥಮತಃ ಮೆಲ್ಲಗೆ ಹೆಜ್ಜೆಯೂರಿ ಶಿವಾನಂದ ಲಹರಿಯಲ್ಲಿ ಆನಂದಿಸಲುಪಕ್ರಮಿಸುವನು. ಇಂತಪ್ಪ ಸುಯೋಗವು ಜೀವಾತ್ಮನಿಗೆ ಹೇಗೆ ಮೊದಗಿತೆಂದರೆ—

॥ ಅರ್ಥ— ಅನೇಕ ಜನ್ಮಾರ್ಜಿತ ಶಿವಪೂಜಾದಿ ಸತ್ಕರ್ಮ ಮಹಿಮ್ನಾ ಸಂಪ್ರಾಪ್ತ । ಶಮದಮಾದಿ ಸಾಧನ ಸಂಪನ್ನಸ್ಯಾಧಿಕಾರಿಣಃ । ಮೋಕ್ಷ ವಿಷಯ ಕಾತ್ಯುತ್ಕಟೇಚ್ಛಾ । ಶಕ್ತ್ಯಾವಿರ್ಭಾವಾನಂತರಂ। ಅತಃ ಅಥಾತೋ ಧರ್ಮಜಿಜ್ಞಾಸಾ ॥ ಅಂದರೆ—

ತಾಂತ್ರಿಕ ವೈದಿಕ ಶಾಸ್ತ್ರದಲ್ಲಿ ವಿಹಿತವಾಗಿರುವ ಸಮಸ್ತ ಸತ್ಕರ್ಮಗಳೂ ಪರಶಿವ ಬ್ರಹ್ಮದ ಆರಾಧನ ಸ್ವರೂಪವಾಗಿರುವುದೆಂದೇ ಅವಗತವಾಗಿರುವ ಪ್ರಯುಕ್ತ, ಅನೇಕ ಜನ್ಮಗಳಲ್ಲಿ ಭಕ್ತ್ಯಾ ಆಚರಿಸಲ್ಪಟ್ಟ ಶಿವಪೂಜೆ ಇಷ್ಟಲಿಂಗ ಪೂಜೆಯೇ ಮೊದಲಾದ ಅನೇಕ ಸತ್ಕರ್ಮಗಳ ಪ್ರಭಾವದಿಂದ ಗಳಿಸಲ್ಪಟ್ಟು, ಶಮದಮಾದಿ ಸಾಧನ ಸಂಪತ್ತಿಯುಳ್ಳ ಅಧಿಕಾರಿಗೆ, ಮೋಕ್ಷ ವಿಶಯ ಕಾತಿಪ್ರಭಲೇಚ್ಛಾ ರೂಪವಾದ ದೈವೀಶಕ್ತಿಯು ಆವಿರ್ಭವಿಸಿದ ನಂತರ, ಅತಃ ಮುಂದೆ ಹೃತ್ಕಮಲದ ಮೇಲ್ಮುಸುಕಿನಲ್ಲಿ ಊರ್ಧ್ವಾಭಿ ಮುಖವಾಗಿ ಹೊರಹೊಮ್ಮಿ ಉಜ್ವಲವಾಗಿ ಪ್ರಜ್ವಲಿಸುವ ಒಂಭತ್ತು ನವ ನವೋಲ್ಲಾಸಕರವಾದ ದಿವ್ಯ ಮಿಸಳುಗಳ ಪರಮಪರತರವಾದ ವ್ಯಾಪ್ತಿಯಲ್ಲಿ ಪ್ರವೇಶಿಸಿ, ಕ್ರಮೇಣ ಶಿವಯೋಗದಲ್ಲಿ ನಿಷ್ಠಾ ಗರಿಷ್ಠನಾಗಿ ರಂಜಿಸುತ್ತಿರ್ಪನು.

ಸೂಕ್ಷ್ಮಾತ್ಮತಿ ಸೂಕ್ಷ್ಮವಾದ ಕೋಮಲತರ ಒಂಭತ್ತು ಊರ್ಧ್ವ ಮುಖದ ಹೃತ್ಕಮಲದಲ್ಲಿನ ದಿವ್ಯ ಪರಂಜ್ಯೋತಿರ್ಮಯ ದಳಗಳು ಯಾವುವೆಂದರೆ, ಇಷ್ಟಲಿಂಗ,

ಆಚಾರಲಿಂಗ, ಗುರುಲಿಂಗ, ಪ್ರಾಣಲಿಂಗ. ಶಿವಲಿಂಗ, ಜಂಗಮಲಿಂಗ, ಭಾವಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗ ಇವು ಆತ್ಮಸ್ವರೂಪದ ಸಂಕೇತಗಳೆನಿಸಿ ಬೆಳಗುತ್ತಲಿರುವುವು. ಇಷ್ಟಲಿಂಗವೆಂದರೆ ಅಖಂಡ ಚೈತನ್ಯ "ಚೈತನ್ಯಂ ಬ್ರಹ್ಮ" ಎಂದಿದೆ. ವೇದ ಲಿಂಗವೆಂದರೆ, ಪರಂಜ್ಯೋತಿರ್ಮಯ ಅರಿವು. "ಪ್ರಜ್ಞಾನಂ ಬ್ರಹ್ಮ । ಸತ್ಯಂ ಜ್ಞಾನಮನಂತಂ ಬ್ರಹ್ಮ" ಯೆಂದಿದೆ ಶೃತಿವಾಣಿ.

ಇಷ್ಟಲಿಂಗವೆಂದರೆ—ನಿಜಾನಂದ ಆತ್ಮಾನಂದ ಶಿವಾನಂದಗಳ ಸ್ವರೂಪ.

"ಆನಂದಂ ಬ್ರಹ್ಮೇತಿ ವಿಜಾನಾತ್" ಎಂದಿದೆ ಅಪೌರುಷೇಯವಾಣಿ. ಅಂದಬಳಿಕ, ದಿವ್ಯಚೈತನ್ಯ, ಅರಿವು ಮತ್ತು ಆನಂದಗಳ ಪ್ರತೀಕ ಇಷ್ಟಲಿಂಗವೆಂದು ಶ್ರೀ ಮಹಾ ಗುರು ಮುಖೇಣ ಎಚ್ಚತ್ತ ಮಾನವ ಅರಿಯಬೇಕು. ಇದು ಚಿನ್ಮಯ ಚಿದ್ಬಿಂದು ಚಿದಾನಂದವನ್ನೀಯುವ ಹೃತ್ಕಮಲದಲ್ಲಿನ ಊರ್ಧ್ವ ಮುಖದ ನವದಳಗಳ ಮಧ್ಯ ಗತ ಸುಂದರ ಸೌರಭದ ಭವ್ಯ ದಿವ್ಯ ಮಕರಂದ.

ಶ್ರೀಮಜ್ಜಗದ್ಗುರು ರೇಣುಕಾಚಾರ್ಯರು ಹೃತ್ಕಮಲದ ಪ್ರಾಶಸ್ತ್ಯವನ್ನು ಆದಿ ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸುತ್ತಾ, ಹೇ ಮುನಿಕುಲ ಲಲಾಮ !

॥ ಸಮಸ್ತ ಜಗದಾತ್ಮಾಪಿ, ಶಂಕರಃ ಪರಮೇಶ್ವರಃ ।
ಭಕ್ತಾನಾಂ ಹೃದಯಾಂ ಭೋಜೋ । ವಿಶೇಷೇಣ ವಿರಾಜತೆ ॥

(ಸಿ.ಶಿ.ಅ. 10 ಶ್ಲೋಕ, 67)

ಅಂದರೆ ಭಗವಂತನು ಸರ್ವಾಂತರ್ಯಾಮಿ ಸರ್ವವ್ಯಾಪಿಯಾಗಿದ್ದರೂ, ವಿಶೇಷತಃ ಸದ್ಭಕ್ತರ ಹೃತ್ಕಮಲದಲ್ಲಿ ಪ್ರಸನ್ನಭಾವದಿಂದ ವಿಜೃಂಭಿತನಾಗಿರುವನೆಂದಿರುವರು. ಯಾವ ತರದಲ್ಲಿದ್ದಾನೆಂದರೆ

॥ ಅಂಗುಷ್ಠ ಮಾತ್ರಂ ಪುರುಷೋಂತರಾತ್ಮ ।
ಸದಾ ಜನಾನಾಂ ಹೃದಯೇ ಸನ್ನಿವಿಷ್ಠ ; ॥

(ಕಠೋಪನಿಷತ್ತು.)

ಏನೆಂದರೆ ಸರ್ವಾಂತರ್ಯಾಮಿಯಾದ ಪರಶಿವನು, ಹೆಬ್ಬೆರಳಿನ ಗಾತ್ರದ ಮಾನವ ಹೃದಯದಲ್ಲಿ ಸದಾ ಪ್ರಕಾಶಮಾನನಾಗಿ ನೆಲಸಿರುವನೆಂದು ಕಠೋಪನಿಷತ್ತಿನ

ಮಂತ್ರವನ್ನು ಸಾರವತ್ತಾಗಿ ಉದಹರಿಸಿದರು ಸರ್ವಶಕ್ತನಾದ ಪರಮಾತ್ಮನು || ಅಣೋರಣೀಯಾನ್ | ಮಹತೋಮಹೀಯಾನ್ || ಎಂಬಂತೆ ಅಣುವಿಗೆ ಪರಮಾಣು ವಾಗಿಯೂ, ಮಹತ್ತಿಗೆ ಮಹೋನ್ನತವಾಗಿಯೂ, ಸಮೀಪಕ್ಕೆ ಅತಿ ಸಮೀಪವೆನಿಸಿ, ವೊಳಗಣ್ಣಿನಿಂದ ಭಕ್ತ್ಯಾ ವೀಕ್ಷಿಸಿದಾಗ ನಮ್ಮ ಆತ್ಮವೇ ತಾನಾಗಿ ಹೃನ್ಮಂದಿರದಲ್ಲಿ ಕೋಟಿ ಸೂರ್ಯ ಪ್ರಕಾಶದಂತೆ ಉಜ್ವಲವಾಗಿ ಪ್ರಜ್ವಲಿಸುತ್ತಿಹನು. ಹೃತ್ಕಮಲ ದಲ್ಲಿ ನ ಸೂರ್ಯ, ಭೌತಿಕ ಸೂರ್ಯನಂತಲ್ಲದೆ ಚಿದಾದಿತ್ಯನಾದ್ದರಿಂದ

|| ಹೃದಾಕಾಶೇ ಚಿದಾದಿತ್ಯಃ | ಸದಾ ಭಾಸತಿ ಭಾಸತಿ |
ಉದಯಾಸ್ತ ಮಾನಂ ನಾಸ್ತಿ | ಕುತಃ ಸಂಧ್ಯಾ ವಿಧೀಯತೇ ||

ಹೃದಯಾಕಾಶದಲ್ಲಿ ಉದಯಾಸ್ತ ಮಾನಂಗಳಿಲ್ಲದಂತೆ ಸರ್ವದಾ ದೇದೀಪ್ಯ ಮಾನನಾಗಿ ಹೊಳೆಯುತ್ತಿರುವುದರಿಂದ ಸಂಧ್ಯಾಕಾಲಗಳಿಗೆ ಅವಕಾಶವೆಲ್ಲಿಯದು? ಎಂಬುದಾಗಿ ಜಗದಾಚಾರ್ಯರು ಬೋಧಿಸಿದ್ದನ್ನು ಆಸಕ್ತಿಯಿಂದ ಶ್ರವಣ ಮಾಡಿದ ಸಪ್ತರ್ಷಿ ಮಂಡಲದಧಿಪತಿ ಅಗಸ್ತ್ಯ ಮಹರ್ಷಿ, ಪರಮಾನಂದ ತುಂದಿಲ ಹೃದಯ ಸ್ವಾಂತನಾಗಿ, ಮಹಾಗುರೂಪದೇಶದ ದೆಶೆಯಿಂದ ತನ್ನಂತರಂಗದಲ್ಲಿ ತಾನೇ ಆಗಿ ಬೆಳಗುವ ಆತ್ಮಶ್ರೀಯನ್ನು ಸ್ವಾತ್ಮದಲ್ಲಿ ಸಂದರ್ಶಿಸಿ ತತ್ಫಲವಾಗಿ ಸ್ವಾನು ಭೂತಿಯ ಆನಂದವನ್ನು ಶ್ರೀಗುರುವಿನಲ್ಲಿ ಅರ್ಪಿಸುತ್ತಾ ಭೋ ಭೋ ! ತ್ರಿಭುವನಾ ಚಾರ್ಯವರ್ಯ

|| ಅವತೀರ್ಣಮಿದಂ ಶಾಸ್ತ್ರ | ಮನವದ್ಯಂ ತ್ವದಾನನಾತ್ |
ಶೃತ್ವಾ ಮೇ ಮೋದತೇ ಚಿತ್ತಂ ಜ್ಯೋತಿಃ ಪಶ್ಯಾಚ್ಛಿವಾಭಿಧಂ ||
(ಸಿ.ಶಿ.ಅ. 20 ಶ್ಲೋ. 66)

ಶ್ರೀ ಮಹಾಗುರುದೇವನ ದಿವ್ಯಾನುಗ್ರಹದಿಂದ ತನ್ನ ಅಂತರಂಗದ ವೊಳಗಣ್ಣಿಗೆ ವೇದ್ಯವಾದ ಸ್ವಯಂಜ್ಯೋತಿ ರೂಪದ ಆತ್ಮ ದರ್ಶನದಿಂದ ಪ್ರಸ್ಫುರಿತನಾದ ತಪೋ ಧನನು, "ಆತ್ಮ ಸ್ಫುರತಿ ದೀಪವತ್" ಪರಂಜ್ಯೋತಿ ರೂಪದಲ್ಲಿ ನನ್ನ ಆತ್ಮ ಬೆಳಗು ತ್ತಿರುವುದೆಂಡು ಕಂಡು, ಗುರುಸಾರ್ವಭೌಮ ! ನಿನ್ನನುಗ್ರಹದಿಂದ ನನ್ನ ಹೃತ್ಕಮಲ ದಲ್ಲಿ || ಜ್ಯೋತಿಃ ಪಶ್ಯಾಚ್ಛಿವಾಭಿದಂ || ಎಂದುಗ್ಗಡಿಸಿ, ಗುರು ದೇವನಡಿದಾವರೆಗಳಲ್ಲಿ ಶರಣಾಗತನಾದನು ಮುನಿಕುಲ ತಿಲಕ ಪ್ರಾಯನಾದ ಆದಿಅಗಸ್ತ್ಯನು—

ನಮ್ಮೆಲ್ಲರ ದೇಹಗಳಲ್ಲಿ ಕೋಮಲಾತಿ ಕೋಮಲ ಹೃದಯಕಮಲ ಪ್ರತಿಷ್ಠಿತವಾಗಿದೆ. ಜೀವಾತ್ಮನು ಶ್ರೀ ಗುರುವಿನ ಅನುಗ್ರಹ ಮತ್ತು ತನ್ನ ಆತ್ಮಬಲದಿಂದ, ಹೃತ್ಕಮಲದ ಅಧೋಮುಖವಾಗುಳ್ಳ ಮಲತ್ರಯಂಗಳನ್ನು ಪ್ರತಿನಿಧಿಸುವ ಮೂರು ದಳಗಳ ಗಭೀರವಾದ ವ್ಯಾಪ್ತಿಯಿಂದ ಪಾರಾಗಿ— ಹೃದಯಕಮಲದ ಮೇಲ್ಮುಖದ ಒಂಭತ್ತು ದಿವ್ಯ ದಳಗಳ ಊರ್ಧ್ವ ಮುಖದ ಪರಂಜ್ಯೋತಿರ್ಮಯ ಮಂಡಲದ ವ್ಯಾಪ್ತಿಯ ಪ್ರಭಾವಕ್ಕೆ ನಾವುಗಳು ತಕ್ಷಣ ಒಳಗಾಗಲು, ಕ್ಷಣ ಭಂಗುರವಾದ ಈ ಉತ್ತಮ ದೇಹವಿರುವಾಗಲೇ ಅಂದರೆ ಈ ಜನ್ಮದಲ್ಲೇ ಶ್ರಮಿಸಿ ನಮ್ಮ ಅಂತರಂಗದಲ್ಲಿನ ಹೃದಯಕಮಲದಲ್ಲಿ ಸ್ವಸ್ವರೂಪ ದರ್ಶನವನ್ನು ಶ್ರೀ ಗುರುವಿನ ಕರುಣಾ ಕಟಾಕ್ಷದಿಂದ ಅರಿತು ಆನಂದಿಸಬೇಕು "ಅಂತರಂಗದಲ್ಲಿ ಪರಶಿವನ ಕಾಣದವ ಹುಟ್ಟು ಕುರುಡ" ಕಣ್ ಎರಡಿದ್ದೂ ಇಲ್ಲದ ಕುರುಡ ಇವ. ॥ ಉದ್ಧರೇದಾತ್ಮನಾತ್ಮಾನಂ ॥ ಎಂದು ಎಚ್ಚರಿಸಿದೆ ಗೀತೆ. ನಿನ್ನ ಆತ್ಮವನ್ನು ಸ್ವಾತ್ಮ ಬಲದಿಂದ, ದೈವೀಯೋಗದ ಸಂಪತ್ ಭರಿತ ಸಾಮ್ರಾಜ್ಯದ ಒಲವಿನಿಂದ ಉದ್ಧರಿಸಿಕೊಳ್ಳಬೇಕೆಂಬುದೇ ಗೀತಾಹಿತವಾಕ್ಯ. ಆದ್ದರಿಂದ ಉತ್ತಿಷ್ಠತಾ ಉತ್ತಿಷ್ಠತಾ । ಜಾಗ್ರತ ಜಾಗ್ರತ । ಪ್ರಾಪ್ಯವರಾನ್ನಿಭೋಧತ ಎಂದಿದೆ ಕಠೋಪನಿಷತ್ತು.

ಶ್ರೀ ಶೃಂಗೇರಿ ಆದಿಶಂಕರಾಚಾರ್ಯರ ಶ್ರೀಪಾದಕಮಲಗಳನ್ನು ನನ್ನೊಂದು ಹಸ್ತದಲ್ಲಿ ಭಕ್ತಿಪೂರ್ವಕ ಹಿಡಿದು ಮತ್ತೊಂದು ಹಸ್ತದಿಂದ ಶ್ರೀ ಭುವನಾಚಾರ್ಯ ವರೇಣ್ಯ ಶಿವಲಿಂಗೋದ್ಭವ ಮಂಗಳ ಮೂರ್ತಿ ಆದಿ ಶ್ರೀ ಮಹಾ ರೇವಣಸಿದ್ಧ ಶಿವಾಚಾರ್ಯರ ಶ್ರೀಪಾದ ಕಮಲಗಳನ್ನು ಹಿಡಿದು ಉಭಯಾಚಾರ್ಯರುಗಳ ಶ್ರೀ ಚರಣ ಕಮಲಗಳಲ್ಲಿ ಶಿರಸಾ ಮನಸಾ ಭಕ್ತಿ ಭಾವೇನ ಶರಣಾಗಿ, ಶ್ರೀ ಶೃಂಗೇರಿ ಆದಿಶಂಕರರಿಗೆ ದತ್ತವಾದ ಚಂದ್ರಮೌಳಿ ಲಿಂಗ ನೆಂಬೀ ಬಾಡದ ಭಕ್ತಿಭರಿತ ಪರಿಮಳಯುಕ್ತವಾದ ಗ್ರಂಥ ಕುಸುಮವನ್ನು ಶಿವಪ್ರೇರಣೆಯಂತೆ ನಿರ್ಮಲ ಹೃದಯದಿಂದ ರಚಿಸಿ ಪ್ರಕಾಶಗೊಳಿಸಿರುತ್ತೇನೆ. ಓಂ ಶಾಂತಿಃ ಶಾಂತಿಃ ಶಾಂತಿಃ

ಆರ್ಥಿಕ ನೆರವಿತ್ತವರಿಗೆ ಮತ್ತು ನನ್ನೀ ಗ್ರಂಥಕ್ಕೆ ಕರುಣೆಯಿಂದ ಮುನ್ನುಡಿಗಳನ್ನಿತ್ತು ಪ್ರೋತ್ಸಾಹಿಸಿದ ವಿದ್ವಜ್ಜನರಿಗೆ ನಾನು ಋಣಿಯೆಂದು ಅವರನ್ನು ಅಭಿನಂದಿಸುತ್ತೇನೆ.

ಈ ಗ್ರಂಥ ಪ್ರಕಟನೆಗೆ ಉದಾರವಾಗಿ ಧನ ಸಹಾಯದೊಂದಿಗೆ ನನ್ನನ್ನು ಪ್ರೋತ್ಸಾಹಿಸಿ ಆಶೀರ್ವದಿಸಿದ ಪರಮ ಪೂಜ್ಯರಾದ ಶ್ರೀ ಶ್ರೀಗಳಿಗೂ ಶಿವಾಚಾರ್ಯರು

ಗಳಿಗೂ ನನ್ನ ಭಕ್ತಿ ಪೂರ್ವಕವಾದ ಅನಂತ ಪ್ರಣಾಮಗಳನ್ನು ಸಲ್ಲಿಸಿ, ಬೆಂಗಳೂರಿನ ಕೆಲವು ಧಾರ್ಮಿಕ ಸಂಸ್ಥೆಗಳಿಗೂ, ಬೆಂಗಳೂರು, ತುಮಕೂರು ಹಾಗೂ ಭದ್ರಾವತಿ ಗಳಲ್ಲಿನ ಪ್ರಮುಖ ವರ್ತಕ ಮಂಡಲಿಯವರಿಗೂ ಮತ್ತು ನನ್ನ ಸನ್ಮಿತ್ರರಿಗೂ ಅವ ರೆಸಗಿದ ಸ್ಮರಣೀಯ ಸಹಾಯಕ್ಕೆ ಹೃತ್ಪೂರ್ವಕ ವಂದಿಸುತ್ತೇನೆ.

॥ ಸಮಸ್ತ ಸರ್ವಮಂಗಳಾನಿಭವಂತು । ಸರ್ವೇಜನಾಃ ಸುಖಿನೋಭವಂತು ॥

॥ ಗುರುಬ್ರಹ್ಮ ಗುರುವಿಷ್ಣುಃ ।
ಗುರುದೇವೋ ಮಹೇಶ್ವರಃ ॥
ಗುರು ಸಾಕ್ಷಾತ್ಪರಬ್ರಹ್ಮ ।
ತಸ್ಮೈ ಶ್ರೀ ಗುರುವೇನಮಃ ॥

(ಇತಿವೇದಃ)

ಓಂ ಅಂಬಿಕಾಪತಯೇ ಉಮಾಪತಯೇ ಪಶುಪತಯೇ ನಮೋ ನಮಃ

ಬೆಂಗಳೂರು-53
9-10-1985

ಟಿ. ಬಿ. ಬಸವರಾಜಯ್ಯ
ಶ್ರೀ ಮಹಂತಿನ ಮಠ, ರೂಂ ನಂ. 19
ಚಿಕ್ಕಪೇಟೆ

ಶಿವಂ ಶಾಂತಂ

॥ ಶಿವಂ ಭೂಯಾತ್ ॥



ಓಂ

ಓಂ ಪೂರ್ಣಮದಃ ಪೂರ್ಣಮಿದಂ । ಪೂರ್ಣಾತ್ಪೂರ್ಣ ಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ । ಪೂರ್ಣಮೇವಾ ವಶಿಷ್ಯತೇ ॥

ಶಾಂತಿ ಮಂತ್ರ

॥ ಸರ್ವಸ್ತರತು ದುರ್ಗಾಣಿ । ಸರ್ವೇ ಭದ್ರಾಣಿ ಪಶ್ಯತು ।
ಸರ್ವಸ್ಸದ್ಬುದ್ಧಿಮಾಪ್ನೋತು । ಸರ್ವಸ್ಸರ್ವತ್ರನಂದ ತು ।
ಸರ್ವೇ ಭವಂತು ಸುಖಿನಃ । ಸರ್ವೇ ಸಂತು ನಿರಾಮಯಾಃ ।
ಸರ್ವೇ ಭದ್ರಾಣಿ ಪಶ್ಯಂತು । ಮಾಕಶ್ಚಿ ದುಃಖ ಭಾಗ್ಭವೇತ್ ।
ದುರ್ಜನ ಸ್ಸಜ್ಜನೋ ಭೂಯಹಾತ್ । ಸಜ್ಜನ ಶ್ಯಾಂತಿ ಮಾಪ್ನುಯಾತ್ ।
ಶಾಂತೋ ಮುಚ್ಯೇತ ಬಂಧೇ ಭ್ಯೋ । ಮುಕ್ತಶ್ಚಾನ್ಯಾನ್ ವಿಮೋಚಯೇತ್॥

(ಶಾಂತಿ ಸೂಕ್ತ)

॥ ಪರಾತ್ಪರತರಂ ಬ್ರಹ್ಮ । ತತ್ಪರಾತ್ಪರ ತರೋಹರಿಃ ।
ಯತ್ಪರಾತ್ಪರತೋ ಈಶ । ಸ್ತನ್ಮೇಮನಶ್ಶಿವ ಸಂಕಲ್ಪಮಸ್ತು ॥

(ಶಿವ ಸಂಕಲ್ಪೋಪನಿಷತ್)

ಮೇಲುಕ್ತವಾದ ಶಾಂತಿ ಸೂಕ್ತದ ಮಹಾ ಶಾಂತಿ ಮಂತ್ರಗಳಿಂದ ಕಂಡು ಬರುವುದೇನೆಂದರೆ ಶಿವಯೋಗಿಗಳ ಶಿವಶರಣರ ಆರ್ಷೇಯವಾದ ಹಾರೈಕೆ ಅಭಿವ್ಯಕ್ತ ವಾಗುತ್ತದೆ. ತಾವು ಮುಕ್ತರಾದರೆ ಸಾಲದು. ಸರ್ವರೂ ಮುಕ್ತಿಗಾಗಿ ಕಾಯಾ ಮನಸಾ, ಸತತ ಶ್ರದ್ಧಾಭಕ್ತಿಗಳಿಂದ ಯಾವಜ್ಜೀವವೂ ಶ್ರಮಿಸುತ್ತಿರಬೇಕು. ಎಲ್ಲರೂ ಶಿವಪದವೆನಿಸಿದ ಮುಕ್ತಿಯನ್ನು ಹೊಂದಲು ಹಾರೈಸುತ್ತಿರಬೇಕು. ಶಿವಾನು ಗ್ರಹದಿಂದ ಹಾಗೂ ಶ್ರೀ ಮಹಾ ಗುರುವಿನ ಹಸ್ತಮಸ್ತಕ ಸಂಯೋಗ ದೀಕ್ಷೆಯಿಂದ, ಅವನ ಕರುಣಾ ಕಟಾಕ್ಷ ಲವಲೇಶದಿಂದ ಮುಕ್ತನಾಗಿ ಅಘರನಾದ, ಅಂದರೆ ಅಮೃತ ಸ್ವರೂಪಿಯಾದ ಪುರುಷನು, ಸಮಸ್ತ ಮಾನವರ ಜೀವನ್ಮುಕ್ತಿಗಾಗಿ ಅನವರತ ಹಾರೈಸಿ ಮಾರ್ಗದರ್ಶನವನ್ನು ಆದರಾಭಿಮಾನಗಳಿಂದ ಹೃದಯಂಗಮವಾಗಿ ನೀಡುತ್ತಿರಬೇಕು. ತತ್ವವೇತ್ತರೂ ಮತ್ತೂ ಆತ್ಮಾನುಸಂಧಾನಿಗಳೂ, ಕಲ್ಯಾಣಾದ್ಭುತ ಕರವೆನಿಸಿದ ಮುಕ್ತ ಸ್ಥಿತಿಯಲ್ಲೂ, ಪ್ರಾರಬ್ಧ ಕರ್ಮ ಕೊನೆಗಾಣುವವರವಿಗೂ, ಲಿಂಗಾಚಾರದಿಂದ ಭೃತ್ಯಾಚಾರದವರವಿಗೂ ಹಮ್ಮಿರುವ ದಾಸೋಹಂ ಭಾವದಿಂದ ಕಾಯಕದಲ್ಲಿ ತತ್ಪರರಾಗಿರಬೇಕು. ಇದು ನಿಜ ಭಕ್ತಿಯ ಪರಾಕಾಷ್ಠತೆ. ಇಲ್ಲಿ ಜ್ಞಾನ ಕ್ರಿಯೆಗಳ ಸಮನ್ವಯವನ್ನು ಮನಗಾಣಬಹುದಾಗಿದೆ. ಇಂತಪ್ಪ ಸಮನ್ವಯ ಧರ್ಮಾಚರಣೆ ಸಾಧಕರಿಗೂ ಹಾಗೂ ಶೋಧಕರಿಗೂ ಅತ್ಯಾವ್ಯಕವಿರುವುದು. ಸಮನ್ವಯ ಭಾವವಿಲ್ಲದ ವಿಧಿ ವಿಧಾನಗಳು ಅನರ್ಥ ಹೇತುವೆಂದು ಜಗದಾದಿ

ಕಾಲದಲ್ಲೇ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಗಂಭೀರವಾಗಿ ಘೋಷಿಸಿರುತ್ತಾರೆ.

॥ ಓಂ ಶಾಂತಿಃ ಶಾಂತಿಃ ಶಾಂತಿರಿತಿ । ತ್ರಿರುಚ್ಚಾರಣಂ
ತಾಪತ್ರಯ ಶಮನಾರ್ಥಂ । ತ್ರಿಮಲ ವಿಲಯಾರ್ಥಂ ವೇತಿ ಬೋಧ್ಯಂ ॥

Peace be with us from heavenly Wrath,
Peace be with us from the Phenominal cruelties,
Peace be with us from bodily Obstacles,
Peace is the Crown for the Structure of Human Life
May the Peace that passeth all understanding ever reign
Supreme in our God/divine Consciousness.
Oh ! Peace be to one and all for ever. Om.

ಕೋರಿಕೆ :- ಧೀಮಂತರು ಶ್ರೀಮಂತರೂ ಶ್ರೀ ಉಭಯ ಮಹಾಚಾರ್ಯರ ದಿವ್ಯ ನಾಮ ಸ್ಮರಣೆಯೊಂದಿಗೆ, ಐದು ಸಾವಿರ ಈ "ಶ್ರೀ ಚಂದ್ರಮೌಳಿ ಲಿಂಗ ಪ್ರದಾನ" ವೆಂಬ ಪ್ರತಿಗಳನ್ನು ಗ್ರಂಥ ಕರ್ತರ ಅನುಮತಿಯಿಂದ ಮುದ್ರಿಸಿ, ವಿಶ್ವಾದ್ಯಂತ ಕನ್ನಡಿಗರ ಕೈಪಿಡಿಯಾಗುವಂತೆ ಮಾಡಿ, ಈ ತತ್ವ ಆ ಚಂದ್ರಾರ್ಕ ಪರ್ಯಂತರ ಜೀವ ನದಿಯಂತೆ ಸರ್ವತ್ರ ಬೆಳಗುವಂತೆ ಮಾಡಿ, ಮಹಾಗುರುವಿನ ಕೃಪಾಕಟಾಕ್ಷಕ್ಕೆ ಪಾತ್ರರಾಗಬೇಕೆಂದು ಬಿನ್ನೈಸಿಕೊಳ್ಳುತ್ತೇನೆ.

॥ ಇಡಬೇಕೀಶ್ವರನಲ್ಲಿ ಭಕ್ತಿ ರಸಮಂ ।
ಕೊಡಬೇಕುತ್ತಮನಾದವಂಗೆ ದಾನಮಂ ಧನಮಂ ದೀಕ್ಷೆಯಂ ॥ ಶಿವ.

ಲೋಕಾಸ್ಸಮಸ್ತಾ ಸರ್ವ ಮಂಗಳಾನಿ ಭವಂತು.

॥ ವಂದೇ ರೇಣುಕಂ ॥

॥ ವಂದೇ ಮಾತರಂ ॥



ಟಿ. ಬಿ. ಬಸವರಾಜಯ್ಯ
38, ನೇತಾಜಿ ರೋಡು, ಫ್ರೇಜರ್ ಟೌನ್,
ಬೆಂಗಳೂರು-560 005.

॥ ಶಿವಂ ಭೂಯಾತ್ ॥

ಓಂ



ಗ್ರಂಥಕರ್ತರು.

## ಧ್ಯಾನ

॥ ಯೋಗಿನಾಥನೆ ಜಗದ್ಗುರು ರೇಣುಕೇಶ್ವರನೆ ।
ಯೋಗಿಜನ ವಿನುತ ಚರಣಾಂಬು ಜಾತದ್ವಯನೆ ।
ಭೋಗಿ ಭೂಷಣ ವದನ ಜಾತನೇ ।
ಕೊನಲು ಪಾಕದ ಸೋಮಲಿಂಗ ಭವನೇ ॥ ॥ ೧ ॥

ಯೋಗಿ ಕುಂಭಜಗೆ ಷಟ್‌ಸ್ಥಲ ಸುಬೋಧಕನೆ ।
ಭವರೋಗ ವೈದ್ಯನೆ ಭಕ್ತಿ ವಿಜ್ಞಾನ ವೇದ್ಯನೇ ।
ಆಗಮಾಚಾರ್ಯನೇ ಕರುಣದಿಂ ಪಾಲಿಸೈ ।
ಶ್ರೀ ರೇವಣಾ ಸಿದ್ಧ ಪ್ರಭುವೇ ॥ ॥ ೨ ॥

॥ ಓಂ ಶ್ಯಾಂತಿಃ ಶ್ಯಾಂತಿಃ ಶ್ಯಾಂತಿ ರಿತಿ ।
ತ್ರಿ ರುಚ್ಚಾರಣಂ । ತಾ ಪತ್ರಯ ಶಮನಾರ್ಥಂ ।
ತ್ರಿಮಲ ವಿಲಯಾರ್ಥಂ ವೇತಿ ಬೋಧ್ಯಂ ॥

ಓಂ ಶಾಂತಿಃ ಶಾಂತಿಃ ಶಾಂತಿಃ ಓ ದೇವ ! ಆದಿ ಭೌತಿಕ ಆದಿ ದೈವಿಕ ಆಧ್ಯಾತ್ಮಿಕ ದುಃಖಗಳಿಂದಲೂ ಮತ್ತು ಅವಿದ್ಯಾಮಯ ಆಣವ, ಮಾಯಾ ಮತ್ತು ಕಾರ್ಮಿಕ ಮಲತ್ರಯಂಗಳಿಂದ ನಮ್ಮನ್ನು ಮುಕ್ತರನ್ನಾಗಿಸಿ ಕಾಪಾಡು, ರಕ್ಷಿಸು, ರಕ್ಷಿಸು.

॥ ಶಿವಂ ಭೂಯಾತ್ ॥

ಓಂ

ವಿಶ್ವಾಧಿಕಂ ಶಂಕರಂ



ಆಂಧ್ರದ ಸಿಕಿಂದಿರಾಬಾದಿಗೆ ಸುಮಾರು 55 ಕಿ. ಮಿ. ದೂರದಲ್ಲಿರುವ, ಯುಗಗಳಿಂದ ವಿರಾಜಿಸುವ ಶಿವಕ್ಷೇತ್ರದಲ್ಲಿನ ಶ್ರೀ ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗ ಮುಖದಿಂದ, ಶಿವನಪ್ಪಣೆಯಂತೆ ತೇಜಃ ಪುಂಜವಾಗಿ ಆವಿರ್ಭಸಿದ, ಶ್ರೀ ಆದಿ ಜ॥ ರೇವಣಸಿದ್ಧ ಮಹಾ ಶಿವಯೋಗಿ ಶಿವಾಚಾರ್ಯರ ಮಂತ್ರಮಯ ದೇದೀಪ್ಯ ಜಗನ್ಮಂಗಳ ಚಿನ್ಮಯ ರೂಪದ ಮನಮೋಹಕ ದಿವ್ಯ ದೃಶ್ಯ.

॥ ಶ್ರೀ ಕೊಲ್ಲೀಪಾಖ್ಯಭಿದೇ ಪುರೇ । ಸು ವಿಮಲೇ ಸೋಮೇಶ ಲಿಂಗಾ ಚ್ಚುಭಾತ್ ।
ಆವಿರ್ಭೂಯ ತತೋಗತೋ ಗಗನತೋ । ಅಗಸ್ತ್ಯಾಶ್ರಮಂ ಪಾವರ್ಯ ॥
ಯಸ್ತಸ್ಮೈ ವಿನತಾಯ ವೇದ ವಿಹಿತಂ । ಸಿದ್ಧಾಂತ ಮಾ ಬೋಧಯತ್ ।
ಸ ಶ್ರೀ ರೇಣುಕ ಯೋಗಿರಾಟ್ ವಿತನುತಾಂ । ಸಾ ನಂದ ಮುರ್ವೀತಲಂ ॥

॥ ಭೋ! ಸೋಮೇಶ್ವರ ಲಿಂಗಸಂಭವ । ಸುಧಾರ್ಮ ಧನ್ಯ ಧನ್ಯ ಪ್ರಭೋ ।
ದಿವ್ಯ ಜ್ಞಾನ ನಿರಸ್ತ ಮೋಹ ಮಹಿರ್ಮ । ನಿತ್ಯೋದಿತಾತ್ಮನ್ ಮಹ ಯೋಗಿ ।
ಜಂಗಮ ಸಾರ್ವಭೌಮ ಸದಯಂ । ಮಾ ಮುದ್ಧರೇ ತ್ಯುಚ್ಚರ್ ।
ತಂ ವಂದೇ ಸತತಂ ಜಗದ್ಗುರು ಮಹಂ । ಶ್ರೀ ರೇಣುಕಂ ಸಿದ್ಧಯೇ ॥

॥ ಓಂ ತತ್ವಮಸಿ ॥